# ಕುವಲಯಾನಂದ

(ಅಪ್ಪಯ್ಯದೀಕ್ಷಿತನ ಸಂಸ್ಕೃತಗ್ರಂಥದ ಅನುವಾದ)



ಅನುವಾದಕ :

ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ, M.A., Ph.d.

ಸಂಸ್ಕೃತಾಧ್ಯಾಪಕ, ಮಾನಸಗಂಗೋತ್ರಿ

ನಂ. 606, ನೂರಡಿ ರಸ್ತೆ, ಶಂಕರಮಠದ ಬೀದಿ

ಚಾಮರಾಜ ಮೊಹಲ್ಲ, ಮೈಸೂರು-4





ಮುದ್ರಕರು :

ಶ್ರೀ ಭಾಸ್ಕರ ಪ್ರಿಂಟರ್ಸ್,

9/2, ಗೀತಾ ಮಂದಿರಂ ರಸ್ತೆ, ಮೈಸೂರು-1

# ಕುವಲಯಾನಂದ

(ಅಪ್ಪಯ್ಯದೀಕ್ಷಿತನ ಸಂಸ್ಕೃತಗ್ರಂಥದ ಅನುವಾದ)



ಅನುವಾದಕ :

ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ, M.A. Ph.d.

ಸಂಸ್ಕೃತಾಧ್ಯಾಪಕ, ಮಾನಸಗಂಗೋತ್ರಿ

ನಂ. 606, ನೂರಡಿ ರಸ್ತೆ, ಶಂಕರಮಠದ ಬೀದಿ

ಚಾಮರಾಜ ಮೊಹಲ್ಲ, ಮೈಸೂರು-4



ಮುದ್ರಕರು :

ಶ್ರೀ ಭಾಸ್ಕರ ಪ್ರಿಂಟರ್ಸ್,

9/2, ಗೀತಾ ಮಂದಿರ ರಸ್ತೆ . ಮೈಸೂರು-1

# ಭೂಮಿಕೆ

ಕುವಲಯಾನಂದವು ಜಯದೇವನ ಚಂದ್ರಾಲೋಕವೆಂಬ ಅಲಂಕಾರಶಾಸ್ತ್ರದ ಲಕ್ಷಣಗ್ರಂಥಕ್ಕೆ ವ್ಯಾಖ್ಯಾನವೆನಿಸಿದೆ. ಚಂದ್ರಾಲೋಕದಲ್ಲಿ ಒಂದುನೂರು ಅಲಂಕಾರಗಳಿಗೆ ಲಕ್ಷಣಗಳನ್ನು ಕೊಟ್ಟು ಸಮುಚಿತವಾದ ಲಕ್ಷ್ಯಗಳಲ್ಲಿ ಅವನ್ನು ಸಮನ್ವಯಿಸಲಾಗಿದೆ.

ಇತ್ಥಂ ಶತಮಲಂಕಾರಾ ಲಕ್ಷಯಿತ್ವಾ ನಿದರ್ಶಿತಾಃ ।
ಪ್ರಾಚಾಮಾಧುನಿಕಾನಾಂ ಚ ಮತಾನ್ಯಾಲೋಚ್ಯ ಸರ್ವಶಃ ॥

ಎಂಬ ಶ್ಲೋಕದಿಂದ ಚಂದ್ರಾಲೋಕವು ಕೊನೆಯಾಗುತ್ತದೆ. ಪ್ರಾಚೀನ ಮತ್ತು ಆಧುನಿಕ ವಿಮರ್ಶಕರ ಅಭಿಪ್ರಾಯಗಳಿಗೆ ಒಪ್ಪಿಗೆಯಾಗುವಂತೆ ನೂರು ಅಲಂಕಾರಗಳಿಗೆ ಲಕ್ಷ್ಯಲಕ್ಷಣಗಳ ಸಮನ್ವಯವನ್ನು ಚಂದ್ರಾಲೋಕವು ನಮಗೆ ದೊರಕಿಸಿದೆ. ಆದರೆ ಇಲ್ಲಿ ತಿಳಿಸಿರುವ ಅಲಂಕಾರಗಳೆಲ್ಲವೂ ಅರ್ಥವೈಚಿತ್ರ್ಯವನು ತಿಳಿಸುವುದರಿಂದ ಅರ್ಥಾಲಂಕಾರಗಳೆನಿಸಿವೆ. ಶಬ್ದವೈಚಿತ್ರ್ಯವನ್ನು ತಿಳಿಸುವ ಶಬ್ದಾಲಂಕಾರಗಳನ್ನು ಇದು ನಮಗೆ ತಿಳಿಸಿಲ್ಲ. ಇದಕ್ಕೆ ವ್ಯಾಖ್ಯಾನವೆನಿಸಿರುವ ಕುವಲಯಾನಂದವೂ ಸಹ ಅವೇ ನೂರು ಅಲಂಕಾರಗಳಿಗೆ ಸಂಬಂಧಪಟ್ಟ ಲಕ್ಷ್ಯ ಲಕ್ಷಣಶ್ಲೋಕಗಳನ್ನೇ ಅನುವಾದ ಮಾಡಿದೆ. ಅವೇ ಅಲಂಕಾರಗಳ ಲಕ್ಷಣಗಳನ್ನು ಅಲ್ಲಿ ಕೊಟ್ಟಿರುವ ಉದಾಹರಣೆಗಳಲ್ಲಿ ಸಮನ್ವಯಮಾಡಿದೆ. ಅವುಗಳ ಜೊತೆಗೆ ಇನ್ನೂ ಇಪ್ಪತ್ತು ಅಲಂಕಾರಗಳನ್ನು ಅದು ಕೊನೆಯಲ್ಲಿ ಸೇರಿಸಿದೆ. ಒಟ್ಟು 120 ಅಲಂಕಾರಗಳಿಗೂ ಇಲ್ಲಿ ಸ್ವಂತವಾಗಿ ಹಲವು ಉದಾಹರಣಗಳನ್ನು ಅದು ರಚಿಸಿದೆ ಮತ್ತು ಕೆಲವನ್ನು ಬೇರೆ ಗ್ರಂಥಗಳಿಂದ ಆರಿಸಿಕೊಂಡಿದೆ.

ಯೇಷಾಂ ಚಂದ್ರಾಲೋಕೇ ದೃಶ್ಯಂತೇ ಲಕ್ಷ್ಯಲಕ್ಷಣಶ್ಲೋಕಾಃ
ಪ್ರಾಯಸ್ತ ಏವ ತೇಷಾಮಿತರೇಷಾಂ ತ್ವಭಿನವಾ ವಿರಚ್ಯಂತೇ ॥

ಹೀಗೆ ಕುವಲಯಾನಂದವು ತನ್ನ ನಿಲುವನ್ನು ಸ್ಪಷ್ಟವಾಗಿ ತಿಳಿಸಿದೆ. ಚಂದ್ರಾಲೋಕದಲ್ಲಿ ಹೇಳಿರುವ ಅಲಂಕಾರಗಳನ್ನೇ ತಿಳಿಸಿ ಅವುಗಳ ಜೊತೆಗೆ ಬೇರೆ ಕೆಲವು ಅಲಂಕಾರಗಳನ್ನೂ ತಿಳಿಸಿ ಇವೆಲ್ಲಕ್ಕೂ ಕೆಲವು ಹೊಸದಾಗಿ ಉದಾಹರಣಗಳನ್ನು ಕೊಟ್ಟು ಕುವಲಯಾನಂದವು ಸಮನ್ವಯ ಮಾಡಿದೆ. ಅಲಂಕಾರಗಳ ಪರಿಚಯವನ್ನು ಸಾಮಾನ್ಯಜನರಿಗೆ ಮಾಡಿಸಿಕೊಡಲಿಕ್ಕಾಗಿ ಅವುಗಳ ಲಕ್ಷಣಗಳನ್ನು ಲಕ್ಷ್ಯಗಳೊಡನೆ ಲಳಿತವಾಗಿ ಸಂಗ್ರಹಿಸಲಿಕ್ಕಾಗಿ ಕುವಲಯಾನಂದವು ಹೊರಟಿದೆ ಎಂದು ಅಲ್ಲಿಯೇ ಸ್ಪಷ್ಟಪಡಿಸಲಾಗಿದೆ.

**ಅಲಂಕಾರೇಷು ಬಾಲಾನಾಮವಗಾಹನಸಿದ್ಧಯೇ ।**
**ಲಲಿತಃ ಕ್ರಿಯತೇ ತೇಷಾಂ ಲಕ್ಷ್ಯಲಕ್ಷಣ ಸಂಗ್ರಹಃ ॥**

ಇದರಿಂದ ಕುವಲಯಾನಂದವು ಉಪಮೆ ಮೊದಲಾದ ಅರ್ಥಾಲಂಕಾರಗಳಲ್ಲಿ ಅವ್ಯುತ್ಪನ್ನರಿಗೂ ಪರಿಚಯವನ್ನುಂಟುಮಾಡಲಿಕ್ಕಾಗಿ ಲಲಿತವಾಗಿ ಅವುಗಳ ಲಕ್ಷಣವನ್ನು ತಿಳಿಸಿ ಸೂಕ್ಷ್ಮವಾದ ಉದಾಹರಣಗಳೊಡನೆ ಸಮನ್ವಯಮಾಡಿದೆ ಎಂಬ ಅಂಶವು ಸ್ಪಷ್ಟಪಡುವುದು. ಅಲ್ಲಿಗೆ ಚಂದ್ರಾಲೋಕ ಮತ್ತು ಕುವಲಯಾನಂದ ಇವೆರಡು ಗ್ರಂಥಗಳಲ್ಲಿ ಪ್ರಾಚೀನರೂ ಮತ್ತು ನವೀನರೂ ಆದ ಆಲಂಕಾರಿಕರ ಅಭಿಪ್ರಾಯಗನುಗುಣವಾಗಿ ನೂರು ಬಗೆಯ ಅರ್ಥಾಲಂಕಾರಗಳನ್ನು ಒಮ್ಮತ ದಿಂದ ತಿಳಿಸಲಾಗಿದೆ ಎಂಬ ಅಂಶವು ಸ್ಪಷ್ಟಪಡುತ್ತದೆ. ಈ ನೂರು ಅಲಂಕಾರ ಗಳು ಉಪಮೆಯಿಂದ ಆರಂಭವಾಗಿ ಹೇತುವಿನಿಂದ ಕೊನೆಯಾಗುತ್ತವೆ. ಇವುಗಳ ಜೊತೆಗೆ ಕುವಲಯಾನಂದವು ಇಪ್ಪತ್ತು ಅಲಂಕಾರಗಳನ್ನು ಸೇರಿಸಿದೆ. ರಸವದ ಲಂಕಾರ, ಪ್ರೇಯೋಽಲಂಕಾರ (ಭಾವಾಲಂಕಾರ) ಊರ್ಜಸ್ವಿದಲಂಕಾರ, ಸಮಾಹಿತಾ ಲಂಕಾರ, ಭಾವೋದಯಾಲಂಕಾರ, ಭಾವಸಂಧ್ಯಲಂಕಾರ, ಭಾವಶಬಲಾಲಂಕಾರ, ಪ್ರತ್ಯಕ್ಷಾಲಂಕಾರ, ಅನುಮಾನಾಲಂಕಾರ, ಉಪಮಾಲಂಕಾರ, ಶಬ ಪ್ರಮಾಣಾ ಲಂಕಾರ, ಸ್ಮೃತ್ಯಲಂಕಾರ, ಶ್ರುತ್ಯಲಂಕಾರ, ಅರ್ಥಾಪತ್ತ್ಯಲಂಕಾರ. ಅನುಪಲಬ್ಧ್ಯ ಲಂಕಾರ, ಸಂಭವಾಲಂಕಾರ, ಐತಿಹ್ಯಲಂಕಾರ, ಸಂಸೃಷ್ಟ್ಯಲಂಕಾರ, ಸಂಕರಾಲಂಕಾರ ಹೀಗೆ ಇವೇ ಆ ಇಪ್ಪತ್ತು ಅಲಂಕಾರಗಳು. ಇವಿಷ್ಟು ಸೇರಿದ್ದರಿಂದ ಅರ್ಥದ ಸೊಬಗು ಯಾವ ಬಗೆಯ ನ್ಯೂನ್ಯತೆಯೂ ಇಲ್ಲದೆ ಸಹೃದಯರ ಮನಸ್ಸನ್ನು ಆನಂದ ಗೊಳಿಸಬಲ್ಲದೆಂಬುದು ಸ್ಪಷ್ಟವಾಗುತ್ತದೆ "ಅರ್ಥದಲ್ಲಿ ಹೀಗೆ ಸೌಂದರ್ಯವು ಅಡಗಿದೆ ? ಅದನ್ನು ಹೇಗೆ ತಿಳಿಸಿದರೆ ಸಹೃದಯರಿಗೆ ಆನಂದವಾಗುತ್ತದೆ ?" ಎಂಬುದೇ ಇಲ್ಲಿ ಕವಿಗೆ ಮುಖ್ಯವಾಗಿ ಗಮನಾರ್ಹವಾದ ಅಂಶ. ಅರ್ಥದಲ್ಲಿರುವ ಗಾಂಭೀರ್ಯ, ಮಹತ್ವ, ಪರಿಪೂರ್ಣತೆ, ವಿಕಾಸ ಮತ್ತು ವಿಲಾಸಗಳು ಹೊರ ಬೀಳಬೇಕಾದರೆ ಅದು ಅಲಂಕಾರವಿಶಿಷ್ಟವಾಗಿಯೇ ಇರಬೇಕು. ಅಲಂಕಾರವಿಲ್ಲದ ಅರ್ಥವು ಶೋಭಿಸುವುದಿಲ್ಲ. ಅಂತಹ ಅಲಂಕಾರವಿಲ್ಲದ ಶಬ್ದವೂ ಮನೋಹರ ವಾಗಿರುವುದಿಲ್ಲ. ಹೀಗೆ ಅರ್ಥಾಲಂಕಾರಗಳು ಕಾವ್ಯಕ್ಕೆ ಸೌಂದರ್ಯವನ್ನು ಉಂಟುಮಾಡುವ ವೈಚಿತ್ರ್ಯವೆನಿಸಿವೆ. ಈ ಬಗೆಯ ವೈಚಿತ್ರ್ಯವಿರುವುದರಿಂದಲೇ ಕಾವ್ಯವು ಸಹೃದಯರಿಗೆ ರುಚಿಸುತ್ತದೆ, 'ಕಾವ್ಯಂ ಗ್ರಾಹ್ಯಂ ಅಲಂಕಾರಾತ್' ಎಂದು ವಾಮನನು ಸ್ಪಷ್ಟವಾಗಿ ತಿಳಿಸಿಯೇ ಇದ್ದಾನೆ. ಅಲ್ಲಿಗೆ ಇವು ಕಾವ್ಯದ ಸ್ವಾಭಾವಿಕವಾದ ಸೌಂದರ್ಯವನ್ನು ಹೆಚ್ಚಿಸುವ ಬಂಗಾರದ ಒಡವೆಗಳಂತೆ ಕಾವ್ಯ ದಲ್ಲಿ ಸೇರಿಕೊಂಡಿವೆ ಎಂದೂ ಹೇಳಿದಂತಾಯಿತು. ಸ್ತ್ರೀ ಮುಖವು ಎಷ್ಟೇ ಸುಂದರ ವಾಗಿದ್ದರೂ ಓಲೆಗಳಿಲ್ಲದಿದ್ದರೆ ಶೋಭಿಸಲಾರದು. ಸ್ವಾಭಾವಿಕವಾದ ಸೌಂದರ್ಯ

ವಿದ್ದರೂ ಸಹ ಒಡವೆಗಳಿಲ್ಲದಿದ್ದರೆ ಶರೀರದ ಯಾವ ಭಾಗಕ್ಕೂ ಕಳೆ ಬರುವುದಿಲ್ಲ. ಇದು ಎಲ್ಲರಿಗೂ ತಿಳಿದ ಅಂಶ. ಆದರಂತೆ ಕಾವ್ಯದಲ್ಲಿ ಮಾಧುರ್ಯ, ಸೌಕುಮಾರ್ಯ ಮೊದಲಾದ ಗುಣಗಳು ಹೇರಳವಾಗಿ ಇದ್ದರೂ ಸಹ ಉಪಮಾದ್ಯಲಂಕಾರಗಳನ್ನು ಕವಿಯು ಉಪಯೋಗಿಸದಿದ್ದರೆ ಅಂತಹ ಕಾವ್ಯವು ರಮಣೀಯವಾಗಲಾರದು. ಇಂತಹ ಕಾವ್ಯಸೌಂದರ್ಯವನ್ನು ಸಹೃದಯರು ಸುಗಮವಾಗಿ ಅನುಭವಿಸುವ ವಿಧಾನಗಳನ್ನು ತಿಳಿಸುವ ಶಾಸ್ತ್ರಕ್ಕೆ ಅಲಂಕಾರಶಾಸ್ತ್ರವೆಂದು ಅಭಿಜ್ಞರು ಕರೆದಿರುವುದು ಅನ್ವರ್ಥಕವೆನಿಸಿದೆ. ಇದನ್ನು ಶಬ್ದಾರ್ಥಗುಣಗಳ ಶಾಸ್ತ್ರವೆಂದಾಗಲೀ, ರೀತಿಶಾಸ್ತ್ರವೆಂದಾಗಲೀ, ಧ್ವನಿಶಾಸ್ತ್ರವೆಂದಾಗಲೀ ಕರೆಯದೆ ಅಲಂಕಾರಕಶಾಸ್ತ್ರವೆಂದೇ ಕರೆದಿರುವಲ್ಲಿ ಅಡಗಿರುವ ಮಹತ್ವವಿಷ್ಟೇ, ಅಲಂಕಾರವಿಲ್ಲದಿದ್ದರೆ ಇವು ಯಾವುದರಿಂದಲೂ ಕಾವ್ಯದಲ್ಲಿ ಸ್ವಾರಸ್ಯವಾಗಲೀ ಚಮತ್ಕಾರವಾಗಲೀ ಇರುವುದಿಲ್ಲ. ಆದ್ದರಿಂದಲೇ ಕಾವ್ಯದಲ್ಲಿ ಅರ್ಥಸೌಂದರ್ಯವನ್ನು ಹೆಚ್ಚಿಸುವ ಉಪಮಾದ್ಯಲಂಕಾರಗಳನ್ನು ಚಂದ್ರಾಲೋಕವೂ, ಕುವಲಯಾನಂದವೂ ಎಲ್ಲರಿಗೂ ಸುಖವಾಗಿ ತಿಳಿಯುವಂತೆ ವಿವರಿಸಿದ್ದು ಯುಕ್ತಿಯುಕ್ತವೆನಿಸಿದೆ.

ಕಾವ್ಯಕ್ಕೆ ರಸವು ಆತ್ಮದಂತೆಯೂ ರೀತಿಮಾರ್ಗಗಳು ಸಂಘಟನೆಗಳಂತೆಯೂ, ಗುಣಗಳು ಆತ್ಮನಿಗೆ ಶೋಭೆಯನ್ನುಂಟುಮಾಡುವ ಧರ್ಮಗಳಂತೆಯೂ, ಅಲಂಕಾರಗಳು ಶರೀರದ ಮೇಲೆ ಹಾಕಿಕೊಳ್ಳುವ ಒಡವೆಗಳಂತೆಯೂ ಇರುತ್ತವೆ. ಕಾವ್ಯಕ್ಕೆ ಶಬ್ದಾರ್ಥಗಳೇ ಶರೀರವೆನಿಸಿವೆ. ಇವೆರಡನ್ನೂ ಅಲಂಕರಿಸುವ ವಿಧಾನವನ್ನು ಅಲಂಕಾರಶಾಸ್ತ್ರವು ಕ್ರೋಢೀಕರಿಸಿದೆ ಅವುಗಳಲ್ಲಿ ಅರ್ಥಾಲಂಕಾರಗಳು ಕೊರಳಿಗೆ ಕೈಗೆ ಕಿವಿಗೆ ಸೊಂಟಕ್ಕೆ ಉಪಯೋಗಿಸುವ ಒಡವೆಗಳಂತೆ ಕಾವ್ಯದಲ್ಲಿ ಸಮರಸವಾಗಿ ಹೊಂದಿಕೊಳ್ಳುತ್ತವೆ. ಶಬ್ದಾಲಂಕಾರಗಳು ಕಾಲಿಗೆ ಕಟ್ಟಿಕೊಂಡಿರುವ ಗೆಜ್ಜೆಯು ಕಡಗಗಳಂತೆ ಇರುವುವು. ಇವುಗಳಲ್ಲಿ ಅನುಪ್ರಾಸ, ಯಮಕ, ಚಿತ್ರಕವಿತೆ ಎಂದು ಮುಖ್ಯವಾಗಿ ಮೂರು ಬಗೆಗಳಿವೆ. ಅಕ್ಷರಗಳ ವೃತ್ತಿಯೇ ಅನುಪ್ರಾಸ, ಇದರಲ್ಲಿ ಎರಡೋ, ಮೂರೋ ಅಕ್ಷರಗಳು ಮತ್ತೆ ಬಂದರೆ ಅದು ವೃತ್ತ್ಯನುಪ್ರಾಸವೆನಿಸುವುದು ಎರಡೆರಡು ಅಕ್ಷರಗಳು ಜೊತೆ ಜೊತೆಯಾಗಿ ಅನೇಕವೇಳೆ ಬಂದರೆ ಅದಕ್ಕೆ ಛೈಕಾನುಪ್ರಾಸವೆಂದು ಹೆಸರು. ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳಿರುವ ಪದವೋ ಪದಭಾಗವೋ ಒಂದು ಪದದ ಆದಿಯಲ್ಲೋ ಮಧ್ಯದಲ್ಲೋ ಕೊನೆಯಲ್ಲೋ ನಿಯತವಾಗಿ ಮತ್ತೆ ಮತ್ತೆ ಬರುವುದೇ ಯಮಕವೆನಿಸುವುದು. ಚಿತ್ರಕವಿತೆ ಎಂಬ ಮೂರನೆಯ ಬಗೆಯಲ್ಲಿ ಅಕ್ಷರಗಳನ್ನೂ ಪದಗಳನ್ನೂ ನೈಪುಣ್ಯದಿಂದ ಜೋಡಿಸಬೇಕಾಗುವುದು. ಇದನ್ನು ಕವಿಯು ತನ್ನ ಬುದ್ಧಿಸಾಮರ್ಥ್ಯಕ್ಕೆ ಅನುಗುಣವಾಗಿ ರಚಿಸಬಹುದು. ಇವುಗಳಲ್ಲಿ ಏಕಾಕ್ಷರ, ದ್ವ್ಯಕ್ಷರ, ಹಾರಬಂಧ, ಮುರಜಬಂಧ ಮೊದಲಾದ ಅನೇಕ ಬಗೆಗಳಿವೆ. ಒಟ್ಟಿನಲ್ಲಿ ಈ ಮೂರು ಬಗೆಗಳಿಂದಲೂ

ಒಂದು ಶಬ್ದವನ್ನು ಅಲಂಕರಿಸಲಿಕ್ಕೆ ಅವಕಾಶವಿದೆ ಎಂದು ಅಲಂಕಾರಶಾಸ್ತ್ರವು ತಿಳಿಸಿದೆ. ಆದರೆ ಈ ಬಗೆಯ ಅಲಂಕಾರಗಳೆಲ್ಲವೂ ಶಬ್ದ ವೈಚಿತ್ರ್ಯವನ್ನು ಮಾತ್ರವೇ ತಿಳಿಸುತ್ತವೆಯಾದ್ದರಿಂದ ಇದಕ್ಕೆ ಸಹೃದಯರು ಅಷ್ಟು ಮಾನ್ಯತೆಯನ್ನು ಕೊಡುವು ದಿಲ್ಲ. ಸಹೃದಯರಿಗೆ ನಿಜವಾಗಿಯೂ ಕಾವ್ಯದಿಂದ ಸಂತೋಷವಾಗಬೇಕಾದರೆ ಅರ್ಥವೈಚಿತ್ರ್ಯಗಳಿಂದಲೇ ಆಗಬೇಕಾಗಿದೆ. ಆದ್ದರಿಂದಲೇ ಅರ್ಥದಲ್ಲಿ ಅಡಗಿರುವ ಚಮತ್ಕಾರವನ್ನು ಸಹೃದಯರು ಅನುಭವಿಸಿ ಆನಂದಪಡಲೆಂಬ ಉದ್ದೇಶದಿಂದ ಚಂದ್ರಾಲೋಕ ಮತ್ತು ಕುವಲಯಾನಂದಗಳು ಅರ್ಥಾಲಂಕಾರಗಳನ್ನು ಎತ್ತಿ ಹಿಡಿದು ಅವುಗಳನ್ನು ವಿವೇಚನೆಮಾಡಿರುವುದು ಯುಕ್ತವೆನಿಸಿದೆ.

ಈ ಅಲಂಕಾರಗಳು ಕಾವ್ಯದ ಜೊತೆಯಲ್ಲಿಯೇ ಹುಟ್ಟಿಬಂದವಲ್ಲವಾದ್ದ ರಿಂದಲೂ, ಅವು ಅದಕ್ಕೆ ಬಹುಮಟ್ಟಿಗೆ ಹೊರಗಿನವಾದ್ದರಿಂದಲೂ ಅವನ್ನು ಹೆಚ್ಚು ಕಡಮೆ ಮಾಡಿಕೊಳ್ಳಲಿಕ್ಕೂ ಸಾಧ್ಯವಾಗಿದೆ. ಶರೀರದ ಮೇಲೆ ಹಾಕಿಕೊಳ್ಳುವ ಒಡವೆಗಳನ್ನು ಜನರು ತಮ್ಮ ಯೋಗ್ಯತೆಗೆ ತಕ್ಕಹಾಗೆ ಹೆಚ್ಚು ಕಡಮೆ ಮಾಡಿಕೊಳ್ಳು ವರು. ಹಾಗೆ ಶಬ್ದಾರ್ಥಗಳನ್ನು ಅಲಂಕರಿಸುವಾಗಲೂ ಆ ಅಲಂಕಾರಗಳು ಇಷ್ಟೇ ಇರಬೇಕು ಎಂದು ಹಿಂದಿನಿಂದಲೂ ನಿಷ್ಕರ್ಷವಾಗಿಲ್ಲ. ಭರತನು ಉಪಮೆ, ದೀಪಕ, ರೂಪಕ, ಯಮಕ ಎಂದು ನಾಲ್ಕೇ ಅಲಂಕಾರಗಳನ್ನು ಹೇಳಿದ್ದಾನೆ. ಅಲ್ಲಿಂದ ಮುಂದೆ ದಂಡಿ, ಭಾಮಹ, ಉದ್ಭಟ, ವಾಮನ ಇವರ ಕಾಲಕ್ಕೆ ಅಲಂಕಾರಗಳ ಸಂಖ್ಯೆ ಮೂವತ್ತೈದಕ್ಕೆ ಏರಿದೆ. ಕ್ರಿ. ಶ. ಒಂದನೆಯ ಶತಮಾನದಲ್ಲಿದ್ದ ಭರತನು ನಾಟ್ಯಶಾಸ್ತ್ರದಲ್ಲಿ ನಾಲ್ಕೇ ಅಲಂಕಾರಗಳನ್ನು ತಿಳಿಸಿದರೆ ಏಳು ಎಂಟನೆಯ ಶತ ಮಾನದ ಹೊತ್ತಿಗೆ ಆ ಸಂಖ್ಯೆ ಮೂವತ್ತೈದಕ್ಕೆ ಏರಿತು. ಅಲ್ಲಿಂದ ಒಂಭತ್ತನೇ ಶತಮಾನದ ರುದ್ರಟನ ಕಾಲಕ್ಕೂ, ಹನ್ನೊಂದನೆಯ ಶತಮಾನದ ಮಮ್ಮಟನ ಕಾಲಕ್ಕೂ ಆ ಸಂಖ್ಯೆ ಅರವತ್ತಕ್ಕೆ ಏರಿತು. ಅಲ್ಲಿಂದ ಅದು ಹದಿನಾರನೆಯ ಶತಮಾನದಲ್ಲಿದ್ದ ಜಯದೇವನ ಕಾಲಕ್ಕೆ ನೂರಕ್ಕೇರಿ, ಅಲ್ಲಿಂದ ಕೆಲವು ವರ್ಷಗಳ ಮುಂದೆ ಇದ್ದು ಅವನ ಸಮಕಾಲನೆನಸಿದ ಅಪ್ಪಯ್ಯದೀಕ್ಷಿತನ ಕಾಲಕ್ಕೆ ನೂರ ಇಪ್ಪತ್ತಕ್ಕೆ ಆ ಸಂಖ್ಯೆಯು ಏರಿತು. ಹೀಗೆ ಶಬ್ದಾರ್ಥಗಳ ವೈಚಿತ್ರ್ಯವೆನಿಸಿದ ಅಲಂಕಾರಗಳು ನಾಲ್ಕರಿಂದ ನೂರು ಇಪ್ಪತ್ತರವರೆಗೆ ಏರಿರುವುದು ಕಾವ್ಯಪ್ರಪಂಚ ದಲ್ಲಿ ಅಲಂಕಾರಗಳ ಪ್ರಾಶಸ್ತ್ಯವನ್ನೂ ಅನಿವಾರ್ಯತೆಯನ್ನೂ ತಿಳಿಯಪಡಿಸುತ್ತದೆ.

ನಾಟ್ಯಲಕ್ಷಣವನ್ನು ಹೇಳುವುದೇ ಭರತನ ಉದ್ದೇಶವಾದ್ದರಿಂದ ಅವನು ಅಲಂಕಾರಗಳಿಗೆ ಪ್ರಾಶಸ್ತ್ಯವನ್ನು ಕೊಟ್ಟಂತೆ ಕಾಣುವುದಿಲ್ಲ. ಅವನು ಕಾವ್ಯ ಲ್ಲಿ ನಾಲ್ಕೇ ಅಲಂಕಾರಗಳೆಂದು ಹೇಳಿರು ವು ನ್ನು ನೋಡಿದರೆ ಅವನ ಕಾಲಕ್ಕೆ ಅಲಂಕಾರಗಳೇ ಹೆಚ್ಚಾಗಿರಲಿಲ್ಲವೆಂದು ಊಹಿಸಬೇಕಾಗುವುದು. ಅವನಿಂದ ಮುಂದೆ ಬಂದ ಅಲಂಕಾರಿಕರಲ್ಲಿ ಪ್ರಾಚೀನರೆನಿಸಿದ ಭಾಮಹ ಮೊದಲಾದವರ ಹೊರತು

ಬೇರೆ ಯಾವುದೂ ಅಲಂಕಾರಗಳಿಗೆ ಕಾವ್ಯದಲ್ಲಿ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟಿಲ್ಲ. ದಂಡಿ ವಾಮನರು ಕಾವ್ಯಸೌಂದರ್ಯಕ್ಕೆ ಗುಣಗಳು ಪ್ರಧಾನವಾದ ಕಾರಣಗಳೆಂದೂ ಅಲಂಕಾರಗಳು ಅದರ ಅತಿಶಯಕ್ಕೆ ಸಾಧಕಗಳೆಂದೂ ತಿಳಿಸಿದ್ದಾರೆ. ಶರೀರದಲ್ಲಿ ಆತ್ಮನಿದ್ದು ಸೌಂದರ್ಯವೂ ಇದ್ದರೆ ಅಲಂಕಾರಗಳು ಅದನ್ನು ಹೆಚ್ಚಿಸುತ್ತವೆ ಎಂಬುದು ಅವರ ಅಭಿಪ್ರಾಯ. ಜೀವವಿಲ್ಲದ ಶರೀರದಲ್ಲಿ ಸೌಂದರ್ಯವೇ ಇಲ್ಲದ್ದರಿಂದ ಅದಕ್ಕೆ ಬರಿಯ ಅಲಂಕಾರದಿಂದ ಪ್ರಯೋಜನವೇನಾದೀತು ? ಇವು ಶರೀರವೆನಿಸಿದ ಶಬ್ದಾರ್ಥಗಳ ಮೂಲಕ ಆತ್ಮವೆನಿಸಿದ ರಸ, ಧ್ವನಿ ಇವಕ್ಕೆ ಪೋಷಕ ವಾಗಬಹುದು. ಬದುಕಿರುವವನು ಮುತ್ತಿನ ಹಾರವನ್ನು ಹಾಕಿಕೊಂಡರೆ ಶೋಭಿಸುವನೇ ಹೊರತು ಹೆಣವು ಆ ಹಾರದಿಂದ ಶೋಭಿಸಲಾರದು. ಆದ್ದರಿಂದ ರಸವೇ ಕಾವ್ಯದ ಜೀವಾಳ; ನೈಸರ್ಗಿಕಸೌಂದರ್ಯ ಹಾಗೂ ಅಸದೃಶವಾದ ಅಲಂಕಾರ. ಅದಿದ್ದರೆ ಬೇರೆ ಅಲಂಕಾರವೇ ಅನಾವಶ್ಯಕ. ಅಲಂಕಾರವು ಆ ಸೌಂದರ್ಯವನ್ನು ಹೆಚ್ಚಿಸುವಂತಿದ್ದರೆ ಮಾತ್ರವೇ ಅದು ಗ್ರಾಹ್ಯವಾದೀತು, ನೈಸರ್ಗಿಕಸೌಂದರ್ಯವಿಲ್ಲದಿದ್ದರೆ ಅಲಂಕಾರವು ಒಂದು ಹೊರೆ ಎನಿಸುವುದು. ಇದು ಅನೇಕ ಅಲಂಕಾರಿಕರ ಅಭಿಪ್ರಾಯವಾಗಿದೆ. ಆದ್ದರಿಂದಲೇ ಮಮ್ಮಟನು ಸ್ಫುಟವಾದ ಅಲಂಕಾರವಿಲ್ಲದಿದ್ದರೂ ಒಂದು ಉತ್ತಮಕಾವ್ಯವಾಗಬಹುದೆಂದು ಕಾವ್ಯ ಲಕ್ಷಣದಲ್ಲಿ ಅಲಂಕಾರಕ್ಕೆ ಸ್ಥಾನವನ್ನು ಕೊಟ್ಟಿಲ್ಲ. ಶಬ್ದಾಲಂಕಾರವಿರುವ ಕಾವ್ಯ ವನ್ನಂತೂ ಅಧಮಕಾವ್ಯವೆಂದು ನಿರ್ಣಯಿಸಿಯಾಗಿದೆ.

ಹೀಗೆ ಅಧಮಕಾವ್ಯದ ವೈಚಿತ್ರ್ಯಗಳೆನಿಸಿರುವ ಶಬ್ದಾಲಂಕಾರಗಳ ಗೋಜಿಗೆ ಹೋಗದೆ ಜಯದೇವನು ಅರ್ಥಾಲಂಕಾರಗಳ ವಿವೇಚನೆಯನ್ನು ಸಾಕಷ್ಟು ಮಾಡಿ ಅವುಗಳ ಸ್ವರೂಪವೈಲಕ್ಷಣ್ಯವನ್ನು ನಮಗೆ ಮಾಡಿಕೊಟ್ಟು ಒಂದು ವಿಷಯವನ್ನು ಅರ್ಥಗರ್ಭಿತವಾಗಿಯೂ ಅಲಂಕಾರವಾಗಿಯೂ ಹೇಳಲಿಕ್ಕೆ ಎಷ್ಟರ ಮಟ್ಟಿಗೆ ಸಾಧ್ಯವಿದೆ ಎಂಬುದನ್ನು ಚಂದ್ರಾಲೋಕವೆಂಬ ತನ್ನ ಅಲಂಕಾರಿಕಗ್ರಂಥದಲ್ಲಿ ತಿಳಿಸಿ ಕೊಟ್ಟಿರುವನು. ಆದರೆ ಅವನು ಕೇವಲ ನೂರಕ್ಕೆ ನಿಲ್ಲಿಸಿ ಅಲ್ಲಿಂದ ಮುಂದೆ ಹೋಗದೆ ರಸಭಾವಗಳು ಕಾವ್ಯವನ್ನು ಹೇಗೆ ಅಲಂಕರಿಸಬಲ್ಲದೆಂಬುದನ್ನು ತಿಳಿಸಲಿಲ್ಲ ಹಾಗೆಯೇ ಲೋಕದಲ್ಲಿ ರೂಢಿಯಲ್ಲಿರುವ ಪ್ರತ್ಯಕ್ಷ ಅನುಮಾನ ಉಪಮಾನ ಶಬ್ದ ಪ್ರಮಾಣಗಳು ಹೇಗೆ ಕಾವ್ಯವನ್ನು ಅಲಂಕರಿಸಬಲ್ಲವೆಂಬುದನ್ನೂ ಸಹ ಅವನು ಹೇಳಲಿಲ್ಲ. ಅದರಂತೆಯೇ ಲೋಕದಲ್ಲಿ ಶ್ರುತಿ, ಸ್ಮೃತಿ, ಆತ್ಮತುಷ್ಟಿ, ಅರ್ಥಾಪತ್ತಿ, ಅನುಪಲಬ್ಧಿ, ಸಂಭವ, ಐತಿಹ್ಯ, ಸಂಸೃಷ್ಟಿ, ಸಂಕರ ಇವೆಲ್ಲವೂ ಕಾವ್ಯವನ್ನು ಅಲಂಕರಿಸಬಲ್ಲವೆಂಬ ವಾಸ್ತವಾಂಶವನ್ನೂ ಅವನು ತಿಳಿಸಲಿಲ್ಲ. ರಸಭಾವಗಳಂತೆ ಪ್ರತ್ಯಕ್ಷಾದಿಪ್ರಮಾಣಗಳೂ ಸಹ ಕಾವ್ಯದಲ್ಲಿ ಸೌಂದರ್ಯವನ್ನು ಹೆಚ್ಚಿಸಬಲ್ಲವೆಂಬ ಅಂಶವನ್ನು ಅವನು ನಮ್ಮ ಗಮನಕ್ಕೆ ತರಲಿಲ್ಲ. ಈ ಬಗೆಯ ನ್ಯೂನತೆಯನ್ನು

ಪರಿಹರಿಸಲಿಕ್ಕಾಗಿ ಕುವಲಯಾನಂದವೆಂಬ ವ್ಯಾಖ್ಯಾನವನ್ನು ಜಯದೇವನ ಸಮಕಾಲೀನನಾದ ಅಪ್ಪಯ್ಯದೀಕ್ಷಿತನು ಬರೆಯಬೇಕಾಯಿತು. ಲೋಕದಲ್ಲಿ ವ್ಯವಹರಿಸುವವನಿಗೆ ತನ್ನ ಮಾತಿನ ಅರ್ಥವನ್ನು ಅಲಂಕರಿಸಬೇಕಾದರೆ ರಸವದಾದ್ಯಲಂಕಾರಗಳೂ ಪ್ರತ್ಯಕ್ಷಾದಿಪ್ರಮಾಣಾಲಂಕಾರಗಳೂ ಉಳಿದ ಹದಿನೈದು ಬಗೆಯ ಅಲಂಕಾರಗಳೂ ಅನಿವಾರ್ಯವೆನಿಸಿವೆ. ಇವೆಲ್ಲವನ್ನೂ ದೊರಕಿಸುವುದರಿಂದ ಕುವಲಯಾನಂದವು ಸ್ವಯಂ ಪರಿಪೂರ್ಣವಾದ ಅಲಂಕಾರಪ್ರಕ್ರಿಯೆಯನ್ನು ನಮ್ಮ ಎದುರಿಗೆ ಇಟ್ಟಿದೆ ಎಂದು ಭಾವಿಸಬಹುದು.

ಇದೂ ಅಲ್ಲದೆ, ನವೀನರು ಕಾವ್ಯದಲ್ಲಿ ಪ್ರಧಾನವೆಂದು ಭಾವಿಸಿದ ಧ್ವನಿ ಮೊದಲಾದವುಗಳನ್ನು ಪ್ರಾಚೀನರು ಅಲಂಕಾಗಳಲ್ಲಿ ಸೇರಿಸುತ್ತಿದ್ದರು. ಆದರೆ ಈ ಬಗೆಯ ರಸಭಾವಗಳ ಧ್ವನಿಗಳನ್ನು ಅಲಂಕಾರದಲ್ಲಿ ಅವರು ಹೇಗೆ ಸೇರಿಸುತ್ತಿದ್ದರೆಂಬುದನ್ನು ಅವರು ವಿವೇಚನೆಮಾಡಿಯೇ ತಿಳಿಸಿಲ್ಲ, ಅದನ್ನು ತಿಳಿಸುವ ನವೀನಾಲಂಕಾರಿಕಗ್ರಂಥ ಒಂದು ಅವಶ್ಯಕದನಿಸಿತ್ತು. ಈ ಬಗೆಯ ಅವಶ್ಯಕತೆಯನ್ನು ಕುವಲಯಾನಂದವು ನೆರವೇರಿಸಿಕೊಟ್ಟಿದೆ, ಪರ್ಯಾಯೋಕ್ತ, ಸಮಾಸೋಕ್ತಿ ಅಪ್ರಸ್ತುತಪ್ರಶಂಸೆ ಮೊದಲಾದ ಅಲಂಕಾರಗಳಲ್ಲಿ ರಸಭಾವ ಧ್ವನಿಗಳು ಹೇಗೆ ಸೇರಿಕೊಂಡಿವೆ ಎಂಬುವನ್ನು ಕುವಲಯಾನಂದವು ಉದಾಹರಣಗಳೊಡನೆ ಸ್ಪಷ್ಟಪಡಿಸಿದೆ.

ಚಂದ್ರಾಲೋಕವು ಚಂದ್ರನ ಪ್ರಕಾಶವಂತೆ ಸರ್ವರಿಗೂ ಆದರಣೀಯವಾದ ಅಲಂಕಾರಿಕಗ್ರಂಥ. ಅದರ ವ್ಯಾಖ್ಯಾನವೆನಿಸಿದ ಕುವಲಯಾನಂದವು ಚಂದ್ರನ ಪ್ರಕಾಶದಿಂದ ಕನ್ನೈದಿಲೆಗಳಿಗೆ ಆನಂದವುಂಟಾಗುವಂತೆ ಭೂಮಂಡಲದ ಸಹೃದಯರೆಲ್ಲರಿಗೂ ಹಾಗೆಯೇ ವಿಮರ್ಶಕರೆಲ್ಲರಿಗೂ; ಕವಿಗಳೆಲ್ಲರಿಗೂ ಆನಂದವನ್ನುಂಟುಮಾಡುತ್ತಲಿದೆ, ಕುವಲಯಾನಂದವು ಚಂದ್ರಾಲೋಕವನ್ನು ಬೆಳಕಿಗೆ ತಂದು ಅದಕ್ಕಿಂತಲೂ ಹೆಚ್ಚಿನ ಅಂಶಗಳನ್ನು ವಿವೇಚನೆಯಿಂದ ತಿಳಿಸಿ ಅದರಲ್ಲಿ ಇಲ್ಲದ ಅಂಶಗಳನ್ನು ಸೇರಿಸಿ ಅಲಂಕಾರನಿರೂಪಣೆಯಲ್ಲಿ ಆದರ್ಶವಾದ ಪ್ರಮಾಣಗ್ರಂಥವೆನಿಸುವ ಮಟ್ಟಿಗೆ ಕೀರ್ತಿಯನ್ನು ಗಳಿಸಿದೆ. ಒಂದು ನೀರಸವಾದ ವಸ್ತುವು ಅಲಂಕಾರಿಕನ ಕೈಗೆ ಸಿಕ್ಕಿದರೆ ರಸವತ್ತರವಾಗಬಹುದು. ಹಾಗೆಯೇ ವಿಕೃತವಾದ ವಸ್ತು ಒಂದು ಅವನ ಕೈಗೆ ಸಿಕ್ಕಿದರೂ ಸುಂದರವಾಗಬಲ್ಲದು. ಇಂತವನು ಹೊಸದಾಗಿ ಅಲಂಕಾರಗಳನ್ನು ಕಲ್ಪಿಸಬಲ್ಲನು, ಇದರಿಂದಲೇ ಅಲಂಕಾರಗಳು ನಾಲ್ಕರಿಂದ ನೂರ ಇಪ್ಪತ್ತರವರೆಗೆ ಬೆಳೆಯಲು ಸಾಧ್ಯವಾಗಿರಬೇಕು, ಹಾಗೆ ಬೆಳೆದು ಅವು ಕಾವ್ಯಸೌಧದ ಕೊನೆಯ ಹಂತವನ್ನು ಮುಟ್ಟಿವೆ ಎಂಬ ಅಂಶವನ್ನು ಕುವಲಯಾನಂದವು ನಮ್ಮ ಗಮನಕ್ಕೆ ತರುತ್ತಲಿರುವುದು. ಇವುಗಳ ವಿವೇಚನೆಯನ್ನು ಅಪ್ಪಯ್ಯದೀಕ್ಷಿತನು ಸ್ಪಷ್ಟವಾಗಿ ಸಂದೇಹಕ್ಕೆ ಎಡೆಯಿಲ್ಲದಂತೆ ಮಾಡಿಕೊಟ್ಟಿರುವನು. ಪರ್ಯಾಯೋಕ್ತ ಆಕ್ಷೇಪ, ಕಾವ್ಯಲಿಂಗ ಮೊದಲಾದ ಅನೇಕ ಅಲಂಕಾರಗಳ ವಿವರಣದಲ್ಲಿ ಈ ಬಗೆಯ

ವಿವೇಚನೆಯನ್ನು ನಾವು ಕಾಣಬಹುದು. ಹೀಗೆ ಅಲಂಕಾರಶಾಸ್ತ್ರವನ್ನು ಪರಿಷ್ಕಾರ ಮಾಡುತ್ತ ಅಪ್ಪಯ್ಯದೀಕ್ಷಿತನು ತನ್ನ ಪ್ರಜ್ಞೆ ವಿದ್ವತ್ತ್ವಗಳನ್ನು ತೋರಿಸಿಕೊಡುವ ಸಲುವಾಗಿ ಅಲಂಕಾರಗಳ ಪರಸ್ಪರ ವೈಲಕ್ಷಣ್ಯ ವ್ಯತ್ಯಾಸಗಳನ್ನು ಚರ್ಚಿಸಿರುವುದು ಅಭಿನಂದನೀಯವೆನಿಸಿದೆ.

ಕೇವಲ ನಾಲ್ಕರಿಂದ ನೂರ ಇಪ್ಪತ್ತಕ್ಕೆ ಅಲಂಕಾರಗಳು ಹೆಚ್ಚಿದ ಮೇಲೆ ಅವುಗಳನ್ನು ಯಾವುದಾದರೊಂದು ಕ್ರಮವರಿತು ವಿಭಾಗಮಾಡಬೇಕಾಯಿತು. ಆದರಿಂದಲೇ ದಂಡಿ ಭಾಮಹ ಉದ್ಭಟ ಇವರು ಶಬ್ದಾಲಂಕಾರ ಅರ್ಥಾಲಂಕಾರ ಎಂಬ ಭೇದವನ್ನು ಮನಸ್ಸಿನಲ್ಲಿಟ್ಟುಕೊಂಡು ಅಲಂಕಾರಗಳನ್ನು ವಿಮರ್ಶಿಸಿದ್ದಾರೆ. ಈ ಭೇದವನ್ನು ವಾಮನನು ಸ್ಪಷ್ಟಪಡಿಸಿರುವನು. ಅವನಿಂದ ಮುಂದೆ ರುದ್ರಟ ಮಮ್ಮಟ ಮೊದಲಾದವರೆಲ್ಲರೂ ಇದನ್ನು ಅನುಸರಿಸಿದ್ದಾರೆ. ಅಗ್ನಿಪುರಾಣ ಸರಸ್ವತೀಕಂಠಾಭರಣಗಳು ಶಬ್ದಾರ್ಥಾಲಂಕಾರಗಳೆರಡೂ ಉಂಟೆಂದು ತಿಳಿಸಿವೆ. ಇಂತವುಗಳಲ್ಲಿ ಶಬ್ದಕ್ಕೆ ಪ್ರಾಧಾನ್ಯವಿರುವ ಕಡೆ ಶಬ್ದಾಲಂಕಾರ ಉಂಟೆಂದೂ, ಅರ್ಥಕ್ಕೆ ಪ್ರಾಧಾನ್ಯವಿರುವ ಕಡೆ ಅರ್ಥಾಲಂಕಾರವುಂಟೆಂದೂ ಹೇಳುವ ಪದ್ಧತಿ ರೂಢಿಗೆ ಬಂದಿದೆ. ಈ ಮಾರ್ಗವನ್ನು ಅನುಸರಿಸಿ ಶಬ್ದ ಅರ್ಥಗಳೆರಡಕ್ಕೂ ಪ್ರಾಶಸ್ತ್ಯ ವಿರುವ ಕಡೆ ಎರಡು ಬಗೆಯ ಅಲಂಕಾರಗಳನ್ನು ಅಲಂಕಾರಿಕರು ಒಪ್ಪಿರುವರು. ಮಮ್ಮಟನ ದೃಷ್ಟಿಯಲ್ಲಿ ಒಂದೆಡೆಯಲ್ಲಿ ಅಲಂಕಾರವಿರಲಿಕ್ಕೆ "ಶಬ್ದವು ಬದಲಾವಣೆ ಯನ್ನು ಸಹಿಸಬಲ್ಲದೆ ? ಇಲ್ಲವೆ ?" ಎಂಬುದೇ ನಿರ್ಣಯವೆನಿಸಿದೆ. ಒಂದು ಕಡೆ ಇರುವ ಪದವನ್ನು ಬದಲಾಯಿಸಿ ಅದೇ ಅರ್ಥವನ್ನು ಕೊಡುವ ಬೇರೆ ಪದವನ್ನು ಹಾಕಿದಾಗ ಅಲ್ಲಿದ್ದ ಅಲಂಕಾರವು ತೊಲಗುವುದಾದರೆ ಅದು ಶಬ್ದಾಲಂಕಾರದ ಗುರುತು. ಒಂದು ಪದವನ್ನು ತೆಗೆದು ಬೇರೆ ಪದವನ್ನು ಹಾಕಿದಾಗಲೂ ಅಲ್ಲಿದ್ದ ಅಲಂಕಾರವು ಹಾಗೆಯೇ ಉಳಿದರೆ ಅದು ಅರ್ಥಾಲಂಕಾರದ ಗುರುತು. ಹೀಗೆ ಮಮ್ಮಟನು ಅಲಂಕಾರವನ್ನು ನಿರ್ಣಯಿಸಲು ಶಬ್ದಪರಿವೃತ್ತಿಯನ್ನು ಸಾಧನ ವೆಂದು ಭಾವಿಸಿರುವನು. ಈಗ ಸಿಕ್ಕಿರುವ ಅಲಂಕಾರಿಕಗ್ರಂಥಗಳಲ್ಲಿ ಸರಸ್ವತೀ ಕಂಠಾಭರಣದಲ್ಲಿ ಮಾತ್ರವೇ ೨೪ ಶಬ್ದಾಲಂಕಾರಗಳು ಉಕ್ತವಾಗಿವೆ. ಇದಕ್ಕಿಂತ ಹೆಚ್ಚಾಗಿ ಇನ್ನೆಲ್ಲಿಯೂ ಹೇಳಿಲ್ಲ. ಇವು ಶಬ್ದವೈಚಿತ್ರ್ಯವನ್ನು ತೋರಿಸಿದರೂ ಸಹ ಇವುಗಳಿಂದ ರಸಾಸ್ವಾದಕ್ಕೆ ಅಡಚಣೆಯುಂಟಾಗಿ ಕಾವ್ಯದ ಉದ್ದೇಶವೇ ನೆರವೇರದೇ ಹೋಗುವುದೆಂಬ ಭಯದಿಂದ ನವೀನಾಲಂಕಾರಿಕರು ಇವನ್ನು ಹೆಚ್ಚಾಗಿ ಗಮನಿಸಿಲ್ಲ. ವಾಮನನು ಅರ್ಥಾಲಂಕಾರಗಳೆಲ್ಲಕ್ಕೂ ಉಪಮೆಯೇ ಮೂಲವೆಂದು ಹೇಳಿ ಅವನ್ನು ಉಪಮಾ ಮತ್ತು ಉಪಮಾಪ್ರಪಂಚ ಎಂದು ಎರಡು ಭಾಗ ಮಾಡಿದ್ದಾನೆ. ಮಿಕ್ಕ ಅಲಂಕಾರಗಳಲ್ಲಿ ಪೂರ್ಣಾಲಂಕಾರವಾಗುವಷ್ಟು ಚಮತ್ಕಾರವೈಭವವು ನೆಲಸಿಲ್ಲವೆಂದು ಅವನು ಭಾವಿಸಿರುವಂತೆ ಕಾಣುತ್ತದೆ. ಇದರಿಂದ ಬೇರೆಯವರು

ಹೇಳುವ ಪರ್ಯಾಯೋಕ್ತಿ, ಸೂಕ್ಷ್ಮ ಮೊದಲಾದ ಕೆಲವು ಅಲಂಕಾರಗಳು ವಾಮನನಲ್ಲಿ ಗಣನೆಗೆ ಬರುವುದಿಲ್ಲ. ವಕ್ರೋಕ್ತಿ, ವಿಶೇಷೋಕ್ತಿ ಮೊದಲಾದ ಕೆಲವು ಅಲಂಕಾರಗಳಿಗೆ ಅವನು ತಿಳಿಸಿರುವ ಲಕ್ಷಣಗಳು ಬೇರೆಯವರು ಹೇಳಿರುವ ಲಕ್ಷಣಗಳಿಗೆ ಹೊಂದುವುದೇ ಇಲ್ಲ. ಹಾಗೆಯೇ ಅಲಂಕಾರಗಳಿಗೆ ಹೆಸರು ಕೊಡುವುದರಲ್ಲಿಯೂ, ಲಕ್ಷಣವನ್ನು ಹೇಳುವುದರಲ್ಲಿಯೂ ಬೇರೆ ಅಲಂಕಾರಿಕರಲ್ಲೂ ಅನೇಕ ಕಡೆಗಳಲ್ಲಿ ಹೆಚ್ಚು ವ್ಯತ್ಯಾಸವನ್ನು ಕಾಣಬಹುದಾಗಿದೆ. ವಾಮನನು ಹೇಳುವ ಆಕ್ಷೇಪವು ನವೀನಾಲಂಕಾರಿಕರ ಪ್ರತೀಪಕ್ಕೆ ಸರಿಹೋಗುತ್ತದೆ. ಹೀಗೆ ವಾಮನನು ಎಲ್ಲಾ ಅಲಂಕಾರಗಳಿಗೂ ಉಪಮೆಯೇ ಮೂಲವೆಂದು ಭಾವಿಸಿ ಅದನ್ನೇ ವಿಚಾರಿಸಿದ್ದಾನೆ.

ಹೀಗೆ ಉಪಮಾಮೂಲವಲ್ಲದೇ ಇರುವ ಇತರ ಅರ್ಥಾಲಂಕಾರಗಳೂ ಎಷ್ಟೋ ಇರುವುದರಿಂದ ವಾಮನನ ಮತವನ್ನು ಒಪ್ಪದೆ ರುದ್ರಟನು ವಾಸ್ತವ ಔಪಮ್ಯ, ಅತಿಶಯ, ಶ್ಲೇಷಗಳ ಆಧಾರದಮೇಲೆ ಅಲಂಕಾರಗಳನ್ನು ವಿಂಗಡಿಸಿದ್ದಾನೆ. ಆದರೆ ಕುವಲಯಾನಂದದಲ್ಲಿ ಈ ಬಗೆಯ ಕ್ರಮವು ಕಂಡುಬರುವುದಿಲ್ಲ. ಆದರೂ ಸಾದೃಶ್ಯವು ಉಪಮೆಯಿಂದ ಆರಂಭಿಸಿ ವ್ಯತಿರೇಕವನ್ನು ಮುಟ್ಟಿ ತುಲ್ಯಯೋಗಿತೆಯ ಮೂಲಕ ರೂಪಕೋತ್ಪ್ರೇಕ್ಷೆಗಳನ್ನು ಅಂಟಿಸಿಕೊಂಡು ಅತಿಶಯೋಕ್ತ್ಯಾಕ್ಷೇಪಗಳಲ್ಲಿ ಕೊನೆಗಾಣುವುದರಿಂದ ಕುವಲಯಾನಂದದಲ್ಲಿಯೂ ಅಲಂಕಾರಗಳ ವಿವೇಚನೆಯಲ್ಲಿ ಒಂದು ಬಗೆಯ ವಿಭಾಗವನ್ನು ಅನುಸರಿಸದೆ ಬಿಟ್ಟಿಲ್ಲ. ಅಲಂಕಾರಸರ್ವಸ್ವವನ್ನು ರಚಿಸಿರುವ ರುಯ್ಯಕನು ಸಾದೃಶ್ಯ, ವಿರೋಧ, ಶೃಂಖಲೆ, ನ್ಯಾಯ, ಗೂಢಾರ್ಥ ಪ್ರತೀತಿ ಈ ಅಂಶಗಳ ಆಧಾರದ ಮೇಲೆ ಅರ್ಥಾಲಂಕಾರಗಳನ್ನು ವಿಂಗಡಿಸಿದ್ದಾನೆ. ಸಾಹಿತ್ಯದರ್ಪಣಕಾರನು ಈ ವಿಭಾಗಕ್ರಮವನ್ನೇ ಇಟ್ಟುಕೊಂಡು ನ್ಯಾಯದಲ್ಲಿ ವಾಕ್ಯ ನ್ಯಾಯ, ತರ್ಕನ್ಯಾಯ, ಲೋಕನ್ಯಾಯ ಎಂದು ಮೂರು ಒಳಭೇದಗಳನ್ನು ಕಲ್ಪಿಸಿ ಕೊಂಡಿದ್ದಾನೆ, ಪ್ರತಾಪರುದ್ರೀಯದಲ್ಲಿ ಇವುಗಳ ಜೊತೆಗೆ ಅಧ್ಯವಸಾಯಮೂಲ, ವಿಶೇಷಣಗಳ ವೈಚಿತ್ರ್ಯಮೂಲ ಎಂದು ಬೇರೆ ಎರಡು ಬಗೆಗಳು ಏರ್ಪಟ್ಟಿವೆ. ಇಷ್ಟಾದರೂ ಅನೇಕ ಅಲಂಕಾರಗಳು ಈ ಬಗೆಗಳಲ್ಲಿ ಸೇರದೆ ಹಾಗೆಯೇ ಉಳಿದು ಸಂಕೀರ್ಣವೆನಿಸುತ್ತವೆ. ಒಂದೇ ಅಲಂಕಾರವು ಎರಡು ಮೂರು ಕಡೆ ಬರಬೇಕಾಗುತ್ತದೆ. ಹೀಗೆ ಅಲಂಕಾರಗಳನ್ನು ವಿಭಾಗಿಸುವಾಗ ಸ್ಥೂಲವಾಗಿ ನಾಲ್ಕು ಬಗೆಗಳನ್ನು ಕಾಣಬಹುದು. ಸಾದೃಶ್ಯಮೂಲವಾದವು, ವಿರೋಧಮೂಲವಾದವು, ಶೃಂಖಲಾ ಮೂಲವಾದವು. ನ್ಯಾಯಮೂಲವಾದವು. ಗೂಢಾರ್ಥಪ್ರತೀತಿಮೂಲವಾದವು, ಮಿಶ್ರಾಲಂಕಾರಗಳು ಹೀಗೆ ಆರು ಬಗೆಯಾಗಿ ಅವನ್ನು ವಿಂಗಡಿಸಬಹುದು. ನ್ಯಾಯ ಮೂಲವಾದ ಅಲಂಕಾರಗಳಲ್ಲಿ ತರ್ಕನ್ಯಾಯಮೂಲವಾದವು, ಲೋಕನ್ಯಾಯಮೂಲ ವಾದವು ಎಂದು ಎರಡು ಬಗೆಗಳನ್ನು ಕಾಣಬಹುದು.

ಕುವಲಯಾನಂದವನ್ನು ರಚಿಸಿರುವ ಅಪ್ಪಯ್ಯದೀಕ್ಷಿತನೂ ಸಹ ಸಾಮಾನ್ಯವಾಗಿ ಇದೇ ಕ್ರಮದಿಂದ ಅಲಂಕಾರಗಳನ್ನು ನಿರೂಪಿಸಿರುವನು. ಅವನು ವಿಭಾಗ ಮಾಡುವ ಗೋಜಿಗೆ ಹೋಗದೆ ಔಪಮ್ಯಮೂಲವಾದ ಅಲಂಕಾರಗಳಿಂದಲೇ ತನ್ನ ವಿವೇಚನೆಯನ್ನು ಆರಂಭಿಸಿರುವನು. ಎರಡು ವಸ್ತುಗಳಿಗೆ ಪರಸ್ಪರವಾಗಿರುವ ಸಾದೃಶ್ಯಸಂಪತ್ತನ್ನು ಉಪಮಾಲಂಕಾರವೆಂದು ತಿಳಿಸಿ ಆ ಸಂಪತ್ತನ್ನು ಸುಂದರವಾದ ಸಾದೃಶ್ಯವೆಂದು ದೀಕ್ಷಿತನು ವ್ಯಾಖ್ಯಾನಮಾಡಿರುವುದರಿಂದ ಸೌಂದರ್ಯದ ಉಪಾಸನೆಯಲ್ಲಿ ಸಹೃದಯರಿಗೆ ದಿವ್ಯಸ್ಫೂರ್ತಿಯನ್ನು ನೀಡಿರುವನು. ಉಪಮಾನೋಪಮೇಯಗಳೆರಡಕ್ಕೆ ಒಂದೇ ಧರ್ಮವು ಕೆಲವೆಡೆ ಇರಬಹುದು; ಮತ್ತೆ ಕೆಲವೆಡೆ ಒಂದೇ ಆಗಿರದೆ ಬಿಂಬಪ್ರತಿಬಿಂಬಭಾವದಿಂದ ಕಾಣುತ್ತಿರಬಹುದು. ಪರಸ್ಪರ ಸಾದೃಶ್ಯದಿಂದ ಅಭಿನ್ನವೆಂದು ಹೇಳಬಹುದಾದ ಧರ್ಮಗಳನ್ನು ಉಪಮಾನೋಪಮೇಯಗಳಲ್ಲಿ ಬೇರೆ ಬೇರೆಯಾಗಿ ಗ್ರಹಿಸುವುದೇ ಬಿಂಬಪ್ರತಿಬಿಂಬಭಾವವೆನಿಸುವುದು. ಈ ಮೂಲಕ ಸಾಧಾರಣಧರ್ಮವು ತೋರಿದರೂ ಸುಂದರವಾದ ಸಾದೃಶ್ಯವು ತೋರಬಹುದು. ಉಪಮಾನ, ಉಪಮೇಯ, ಸಾಧಾರಣಧರ್ಮವಾಚಕ ಇವುಗಳಲ್ಲಿ ಯಾವುದಾದರೊಂದು ಇಲ್ಲದಿದ್ದರೆ ಲುಪ್ತೋಪಮೆಯು ಎಂಟು ಬಗೆಗಳು ಸಂಭವಿಸುತ್ತವೆ. ಹೀಗೆ ಒಂದಿಲ್ಲೊಂದು ರೀತಿಯಲ್ಲಿ ಔಪಮ್ಯವನ್ನು ಅವಲಂಬಿಸಿಕೊಂಡೇ ಅನನ್ವಯ, ಉಪಮೇಯೋಪಮೆ, ಪ್ರತೀಪ (ವ್ಯತ್ಯಸ್ತೋಪಮೆ) ಪ್ರತಿವಸ್ತೂಪಮೆ, ವ್ಯತಿರೇಕ, ತುಲ್ಯಯೋಗಿತೆ, ದೀಪಕ ಮೊದಲಾದ ಅಲಂಕಾರಗಳು ವಿಕಾಸಗೊಂಡಿವೆ. ಹೀಗೆಯೇ ಉಪಮಾನ ಉಪಮೇಯ ವಸ್ತುಗಳಲ್ಲಿ ಒಂದರಂತೆ ಮತ್ತೊಂದು ಇದೆ ಎಂದು ಅವುಗಳ ಹೋಲಿಕೆಯನ್ನು ವರ್ಣಿಸದೆ ಒಂದು ಮತ್ತೊಂದೇ ಆಗಿದೆ ಎಂದು ವರ್ಣಿಸುವುದು ರೂಪಕವೆನಿಸುತ್ತದೆ. ಇದರಲ್ಲಿ ಕೆಲವು ಕಡೆ ಅಭೇದವೂ, ಕೆಲವುಕಡೆ ತಾದ್ರೂಪ್ಯವೂ ಇರುತ್ತವೆ. ಇವೆರಡು ಬಗೆಗಳಲ್ಲೂ ಆಧಿಕ್ಯ, ನ್ಯೂನತೆ, ಇವೆರಡೂ ಇಲ್ಲದ ಸ್ಥಿತಿ ಈ ಮೂಲಕವಾಗಿ ಆರು ಬಗೆಗಳಾಗುತ್ತವೆ. ಇವಿಷ್ಟನ್ನೂ ಕುವಲಯಾನಂದವು ಸೂಕ್ತವಾದ ಉದಾಹರಣಗಳೊಡನೆ ಹೃದಯಂಗಮವಾಗಿ ವಿವರಿಸಿದೆ. ಹಾಗೆಯೇ ಸಾದೃಶ್ಯವನ್ನು ಅವಲಂಬಿಸಿದ ಉಲ್ಲೇಖ, ಸ್ಮೃತಿ, ಸಂದೇಹ, ಭ್ರಾಂತ್ಯಲಂಕಾರಗಳನ್ನು ವಿವೇಚನೆಮಾಡಿ ಉಪಮೇಯವನ್ನು ಉಪಮೇಯವಲ್ಲವೆಂದು ನಿಷೇಧಿಸಿ ಬೇರೊಂದನ್ನಾಗಿ ತಿಳಿಸುವ ಅಪಹ್ನುತ್ಯಲಂಕಾರದ ವೈಚಿತ್ರ್ಯಗಳನ್ನು ಅದು ಯುಕ್ತರೀತಿಯಲ್ಲಿ ವಿವೇಚನೆಮಾಡಿದೆ. ಒಂದು ಅಲಂಕಾರಕ್ಕೆ ಒಂದು ಸಾಮಾನ್ಯ ಲಕ್ಷಣವನ್ನು ತಿಳಿಸಿದ್ದರೂ ಅದರ ಎಲ್ಲಾ ಬಗೆಗಳಲ್ಲಿ ಒಂದೊಂದಕ್ಕೂ ವೈಲಕ್ಷಣ್ಯವನ್ನು ಸಂಶಯಕ್ಕೆಡೆಯಿಲ್ಲದಂತೆ ತಿಳಿಸುವುದು ಕುವಲಯಾನಂದದ ವೈಶಿಷ್ಟ್ಯವೆನಿಸಿದೆ. ಸಾಮಾನ್ಯಲಕ್ಷಣವು ಎಲ್ಲಾ ಬಗೆಗಳಲ್ಲೂ ಇದ್ದು ಒಂದು ಬಗೆಯು ಮತ್ತೊಂದು ಬಗೆಯಿಂದ ಬೇರೆ ಎನಿಸಲಿಕ್ಕೆ ಇರತಕ್ಕ ವೈಲಕ್ಷಣ್ಯವನ್ನು ಕುವಲಯಾನಂದವು ತಿಳಿಸಿರುವ ಮಾರ್ಗವು ಆದರಣೀಯವಾಗಿದೆ. ಇದನ್ನು

ಆಯಾಯ ಭಾಗದ ಅನುವಾದದಲ್ಲಿ ಸಾಧ್ಯವಾದಮಟ್ಟಿಗೆ ವಿಶದಪಡಿಸಲಾಗಿದೆ. ಪ್ರತೀಪಾಲಂಕಾರದ ಬಗೆಗಳನ್ನು ತಿಳಿಸುವಾಗ ಅಪ್ಪಯ್ಯದೀಕ್ಷಿತನು ಹೀಗೆ ಹೇಳಿದ್ದಾನೆ: "ಅತ್ಯುತ್ಕೃಷ್ಟಗುಣತಯಾ ವರ್ಣ್ಯಮಾನಸ್ಯ ಅನ್ಯತ್ರ ಸ್ವಸಾದೃಶ್ಯಮಸಹಮಾನಸ್ಯ ಉಪಮೇಯಂ ಕಿಂಚಿತ್ಪ್ರದರ್ಶ್ಯ ತಾವತಾ ತಸ್ಯ ತಿರಸ್ಕಾರೋ ದ್ವಿತೀಯಂ ಪ್ರತೀಪಂ ಪೂರ್ವಸ್ಮಾದಪಿ ವಿಚ್ಛಿತ್ತಿವಿಶೇಷಶಾಲಿ" ಎಂದು ಪ್ರತೀಪದ ಮೊದಲನೆಯ ಬಗೆಗೂ ಎರಡನೆಯ ಬಗೆಗೂ ವಿಶೇಷವನ್ನು ಬಹಳ ಸೊಗಸಾಗಿ ತಿಳಿಸಿರುವನು. ಉಪಮಾನವನ್ನು ಉಪಮೇಯದ ಅಂತಸ್ತಿಗೆ ಇಳಿಸುವುದೇ ಮೊದಲನೆಯ ಪ್ರತೀಪವೆನಿಸಿದರೆ ಪ್ರಕೃತೋಪಮೇಯಕ್ಕೆ ಬೇರೊಂದು ಉಪಮಾನವನ್ನು ತೋರಿಸಿ ಅಷ್ಟರಿಂದಲೇ ಪ್ರಕೃತೋಪಮೇಯವನ್ನು ತಿರಸ್ಕರಿಸುವುದು ಎರಡನೆಯ ಬಗೆಯಾಗಿದೆ. ಆದ್ದರಿಂದ ಇವೆರಡರಲ್ಲೂ ಒಂದೊಂದು ಬಗೆಯ ಚಮತ್ಕಾರವಿದೆ. ಅದರಂತೆ ಪ್ರತೀಪದ ಮೂರನೆಯ ಬಗೆಯನ್ನು ತಿಳಿಸುವಾಗ "ಪೂರ್ವಪ್ರತೀಪವೈಪರಿತ್ಯೇನ ತೃತೀಯಂ ಪ್ರತೀಪಂ" ಎಂದು ವೈಲಕ್ಷಣ್ಯವನ್ನು ಸ್ಪಷ್ಟಪಡಿಸಿರುವನು ಎರಡನೆಯ ಬಗೆಯಲ್ಲಿ ಲೋಕಪ್ರಸಿದ್ಧವಾದ ಉಪಮೇಯಕ್ಕೆ ಬೇರೊಂದು ಉಪಮೇಯದಿಂದ ತಿರಸ್ಕಾರವನ್ನು ಹೇಳಿದ್ದರೆ ಇಲ್ಲಿ ಅಪ್ರಕೃತವಾದ ಉಪಮೇಯಕ್ಕೆ ಪ್ರಕೃತೋಪಮೇಯದಿಂದ ಆಗುವ ತಿರಸ್ಕಾರವನ್ನು ತಿಳಿಸಲಾಗಿದೆ. ಹಾಗೆಯೇ ನಿದರ್ಶನ ಮೊದಲಾದ ಇತರ ಎಲ್ಲಾ ಅಲಂಕಾರಗಳಲ್ಲೂ ಆಯಾ ಅಲಂಕಾರಗಳ ಅವಾಂತರಭೇದಗಳಲ್ಲಿ ಒಂದೊಂದಕ್ಕೂ ವೈಲಕ್ಷಣ್ಯವನ್ನು ತಿಳಿಸುತ್ತ ಒಂದೊಂದರ ವೈಯಕ್ತಿಕ ಆವಶ್ಯಕತೆಯನ್ನು ನಿರ್ವಿವಾದವಾಗಿ ಪ್ರತಿಪಾದಿಸುವುದು ಕುವಲಯಾನಂದದ ವೈಶಿಷ್ಟ್ಯವೆನಿಸಿದೆ. ಉತ್ಪ್ರೇಕ್ಷಾಲಂಕಾರಗಳಲ್ಲಿ ಧರ್ಮ್ಯುತ್ಪ್ರೇಕ್ಷೆ, ಧರ್ಮೋತ್ಪ್ರೇಕ್ಷೆಗಳ ವಿವೇಚನೆಯನ್ನು ವಿಶದಪಡಿಸಿ ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿಯೂ, ಒಂದು ರೀತಿಯಲ್ಲಿ ಇರುವ ವಸ್ತುವನ್ನು ಕಲ್ಪಿತಕಾರಣದಿಂದಲೋ, ಕಲಿತ ಫಲಕ್ಕಾಗಿಯೋ ಬೇರೊಂದು ರೀತಿಯಿಂದ ಇರುವುದನ್ನಾಗಿಯೂ ಹೇಳುವ ಮೂರು ಬಗೆಗಳನ್ನು ಸುಗಮವಾಗಿ ತಿಳಿಸಲಾಗಿದೆ. ಇವೆಲ್ಲವರಲ್ಲೂ ಒಂದು ವಸ್ತುವನ್ನು ಮತ್ತೊಂದು ವಸ್ತುವನ್ನಾಗಿ ಸಂಭಾವಿಸಬೇಕೆಂಬ ಉತ್ಪ್ರೇಕ್ಷೆಯ ಸಾಮಾನ್ಯಲಕ್ಷಣವು ಅನ್ವಯಿಸುವಂತೆ ನೋಡಿಕೊಳ್ಳುತ್ತಲೇ ಒಂದೊಂದರ ವೈಯಕ್ತಿಕಸ್ವರೂಪವನ್ನು ಬಿಡಿಸಿ ತಿಳಿಸುತ್ತ ಕುವಲಯಾನಂದವು ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿದೆ.

ಇದಿಷ್ಟೇ ಅಲ್ಲದೆ, ಅತಿಶಯೋಕ್ತಿಯ ಹಲವು ಬಗೆಗಳಲ್ಲಿ ಒಂದೊಂದರಲ್ಲೂ ಇರುವ ವಿಶೇಷವನ್ನು ಉದಾಹರಣೆಗಳೊಡನೆ ವಿವೇಚನೆಮಾಡಿ ತಿಳಿಸಿರುವುದು ಅಭಿನಂದನೀಯವೆನಿಸಿದೆ. ಒಂದೇ ಅಲಂಕಾರದ ಬೇರೆ ಬೇರೆ ವಿಭಾಗಗಳ ವೈಲಕ್ಷಣ್ಯವನ್ನು ತಿಳಿಸುವುದಷ್ಟೇ ಅಲ್ಲದೆ ಎರಡು ಅಲಂಕಾರಗಳಿಗೆ ಪರಸ್ಪರ ಸಾಮ್ಯವೈಷಮ್ಯಗಳನ್ನು ಕುವಲಯಾನಂದವು ಸಂಶಯಕ್ಕೆಡೆಯಿಲ್ಲದಂತೆ ಚಿತ್ರಿಸಿರುವುದು.

ದೀಪಕಕ್ಕೂ ಮತ್ತು ತುಲ್ಯಯೋಗಿತೆಗೂ, ಅರ್ಥಾವೃತ್ತಿ ದೀಪಕಕ್ಕೂ ಮತ್ತು ಪ್ರತಿ ವಸ್ತೂಪಮೆಗೂ ಸಾಮ್ಯವೈಷಮ್ಯಗಳನ್ನು ಕುವಲಯಾನಂದವು ವಿಶದಪಡಿಸಿದೆ. ಹಾಗೆಯೇ ಪದಾವೃತ್ತಿದೀಪಕಕ್ಕೂ ದೃಷ್ಟಾಂತಾಲಂಕಾರಕ್ಕೂ, ರೂಪಕನಿದರ್ಶನೆಗಳಿಗೂ ಸಾಮ್ಯವೈಷಮ್ಯವನ್ನೂ ಕಾವ್ಯಲಿಂಗ ಅರ್ಥಾಂತರನ್ಯಾಸಗಳಿಗೂ ಇರುವ ಸೂಕ್ಷ್ಮ ವ್ಯತ್ಯಾಸಗಳನ್ನು ವಿವೇಚನೆಯೊಡನೆ ಆದರ್ಶರೀತಿಯಲ್ಲಿ ಕುವಲಯಾನಂದವು ತಿಳಿಸಿ ನಮ್ಮ ಸಂಶಯವನ್ನು ಬಗೆಹರಿಸಿದೆ. ಸಮಾಸೋಕ್ತಿ, ಪರಿಕರ, ಅಪ್ರಸ್ತುತ ಪ್ರಶಂಸೆ, ಪ್ರಸ್ತುತಾಂಕುರ, ಪರ್ಯಾಯೋಕ್ತ ಇವುಗಳಲ್ಲಿ ವ್ಯಂಗ್ಯಾರ್ಥವು ತೋರಿ ಸಹೃದಯರಿಗೆ ಅನುಭವಗೋಚರವಾಗುವ ಬಗೆಯನ್ನೂ, ಅದು ವಾಚ್ಯಾರ್ಥವನ್ನು ಅಲಂಕರಿಸುವ ಬಗೆಯನ್ನೂ ಬಹಳ ವಿಷದವಾಗಿ ತಿಳಿಸುತ್ತ ಕುವಲಯಾನಂದವು ಪ್ರಶಂಸಾರ್ಹವೆನಿಸಿದೆ. ಹೀಗೆ ಆಕ್ಷೇಪಾಲಂಕಾರದವರೆಗೂ ಇರುವ ಮೂವತ್ತೆರಡು ಅಲಂಕಾರಗಳು ಸಾದೃಶ್ಯಮೂಲವೆನಿಸಿದ್ದರಿಂದ ಅವನ್ನು ನಿರೂಪಿಸಿ ಮುಂದೆ ವಿರೋಧ ಮೂಲವಾದ ಅಲಂಕಾರಗಳನ್ನು ವಿವೇಚಿಸಲಾಗಿದೆ.

ವಿರೋಧಮೂಲಕವಾದ ಅಲಂಕಾರಗಳಲ್ಲಿ ವಿರೋಧಾಭಾಸ, ವಿಭಾವನೆ, ವಿಶೇಷೋಕ್ತಿ, ಅಸಂಭವ, ಅಸಂಗತಿ, ವಿಷಮ, ಸಮ, ವಿಚಿತ್ರ, ಅಧಿಕ, ಅಲ್ಪ, ಅನ್ಯೋನ್ಯ, ವ್ಯಾಘಾತ ಇವುಗಳ ಸ್ವರೂಪ ವಿವೇಚನೆಯನ್ನು ಒಂದೊಂದರ ವೈಲಕ್ಷಣ್ಯ ದೊಡನೆ ಕುವಲಯಾನಂದವು ನಮಗೆ ರೂಪಿಸಿದೆ. ಒಂದೇ ಅಲಂಕಾರಕ್ಕೆ ಚಂದ್ರಾ ಲೋಕವು ಮೂಲದಲ್ಲಿ ಕೊಟ್ಟಿರುವ ಉದಾಹರಣಕ್ಕೂ ಕುವಲಯಾನಂದವು ಕೊಟ್ಟಿರುವ ಬೇರೆ ಉದಾಹರಣಕ್ಕೂ ಇರುವ ಅತಿ ಸೂಕ್ಷ್ಮವಾದ ಭೇದವನ್ನು ವಿಶದ ಪಡಿಸುವುದು ಕುವಲಯಾನಂದದ ವೈಶಿಷ್ಟ್ಯವೆನಿಸಿದೆ. ಇದನ್ನು ಎಲ್ಲಾ ಕಡೆಯಲ್ಲೂ ಅನುವಾದದಲ್ಲಿ ತಿಳಿಯಾದ ಭಾಷೆಯಲ್ಲಿ ಸ್ಪಷ್ಟಪಡಿಸಲಾಗಿದೆ. ಆದ್ದರಿಂದ ಆ ಅಂಶ ವನ್ನು ಇಲ್ಲಿ ಮತ್ತೆ ತಿಳಿಸುವುದು ಅನಾವಶ್ಯಕವೆಂದು ಕೈ ಬಿಡಲಾಗಿದೆ.

ಕಾರಣಮಾಲೆ, ಏಕಾವಳೀ ಮೊದಲಾದ ಶೃಂಖಲಾಮೂಲವಾದ ಅಲಂಕಾರ ಗಳನ್ನೂ ಗೂಢೋಕ್ತಿ, ವ್ಯಾಜೋಕ್ತಿ, ವಿವೃತೋಕ್ತಿ ಮೊದಲಾದ ಗೂಢಾರ್ಥಪ್ರತೀತಿ ಮೂಲವಾದ ಅಲಂಕಾರಗಳನ್ನು ನಿರೂಪಿಸುವಾಗಲೂ, ನ್ಯಾಯಮೂಲವಾದ ಅನುಮಾನ, ಸಮುಚ್ಚಯ, ಪರಿಸಂಖ್ಯೆ, ಮೀಲಿತ, ಉನ್ಮೀಲಿತ, ತದ್ಗುಣ, ಅತದ್ಗುಣ, ಪ್ರತ್ಯನೀಕ ಮೊದಲಾದ ಅಲಂಕಾರಗಳನ್ನು ಚಿತ್ರಿಸುವಾಗಲೂ ವ್ಯಂಗ್ಯಾರ್ಥವು ಕಾವ್ಯ ವನ್ನು ಹೇಗೆ ಅಲಂಕರಿಸಬಲ್ಲದೆಂಬುದನ್ನು ಅಪ್ಪಯ್ಯದೀಕ್ಷಿತರು ತನ್ನ ಗ್ರಂಥದಲ್ಲಿ ವಿಶದಪಡಿಸಿರುವುದು ಓದುಗರ ಮೆಚ್ಚುಗೆಗೆ ಪಾತ್ರವೆನಿಸಿದೆ. ಹೀಗೆ ಉಪಮೆಯಿಂದಾ ರಂಭಿಸಿ ಹೇತ್ವಲಂಕಾರದಿಂದ ಚಂದ್ರಾಲೋಕವು ಕೊನೆಯಾಗಿದ್ದರೂ ರಸಭಾವಗಳು ವಾಚ್ಯಾರ್ಥಕ್ಕೆ ಪೋಷಕವಾಗಿರುವ ಕಡೆ ತೋರುವ ರಸವದಲಂಕಾರವನ್ನೂ, ಹಾಗೆಯೇ ಪ್ರತ್ಯಕ್ಷಪ್ರಮಾಣವೇ ಮೊದಲಾದ ಅಲಂಕಾರಗಳನ್ನೂ ಸೂಕ್ತ ಉದಾಹರಣಗಳಲ್ಲಿ

ಸಮನ್ವಯಮಾಡಿ, ಅವು ಲೋಕದ ವ್ಯಾವಹಾರಿಕಜನರಿಗೆ ವ್ಯವಹಾರವನ್ನು ಹೇಗೆ ಅಲಂಕರಿಸಬಲ್ಲವೆಂಬುದನ್ನು ಕುವಲಯಾನಂದವು ವಿಶದಗೊಳಿಸಿರುವುದು ಅದರ ವೈಶಿಷ್ಟ್ಯವನ್ನು ತಿಳಿಯಪಡಿಸುತ್ತದೆ. ಕೊನೆಯಲ್ಲಿ ಅನೇಕ ಅಲಂಕಾರಗಳು ಒಂದೆಡೆ ಯಲ್ಲಿ ಸೇರುವಾಗ ಸಂಭವಿಸುವ ಸಂಸೃಷ್ಟಿಸಂಕರಗಳನ್ನು ತಿಳಿಸಲಾಗಿದೆ. ಸಂಸೃಷ್ಟಿ ಯಲ್ಲಿರುವ ಅಲಂಕಾರಗಳು ಒಂದರಲ್ಲಿ ಮತ್ತೊಂದು ಕಲೆಯದೆ ತಿಲತಂಡುಲಗಳಂತೆ ಇರುತ್ತವೆ. ಆದರೆ ಸಂಕರವೆಂಬುದು ಹಾಲುನೀರುಗಳಂತೆ ಸೇರಿಹೋಗಿ ಅಲಂಕಾರ ಗಳಲ್ಲಿ ಒಂದಕ್ಕೆ ಮತ್ತೊಂದು ಆಶ್ರಯವಾಗಿರುವುದನ್ನು ತಿಳಿಸುತ್ತದೆ. ಈ ಸಂಕರ ದಲ್ಲಿ ಇರುವ ಅಂಗಾಂಗಿಭಾವಸಂಕರ, ಸಮಪ್ರಾಧಾನ್ಯಸಂಕರ, ಸಂದೇಹಸಂಕರ. ಏಕವಚನಾನುಪ್ರವೇಶಸಂಕರ ಎಂದು ನಾಲ್ಕು ಬಗೆಗಳನ್ನು ಯಥೋಚಿತವಾಗಿ ಉದಾಹರಣಗಳೊಡನೆ ಸಮನ್ವಯಮಾಡಿ ಒಂದೆಡೆಗೆ ಸೇರಿದ ಅಲಂಕಾರಗಳ ಗುಂಪಿ ನೊಳಗೆ ಒಂದರಿಂದ ಮತ್ತೊಂದಕ್ಕೆ ಒದಗುವ ಸಾಂಕರ್ಯವನ್ನು ಸಂಕರಸಂಕರಾ ಲಂಕಾರವೆಂದು ಕರೆದು ಸಂಕರಗಳೊಳಗೆ ಸಂಕರವು ಹೇಗೆ ಶೋಭಿಸುವುದೆಂಬುದನ್ನು ಕುವಲಯಾನಂದವು ವಿಶದಪಡಿಸಿದೆ.

ಅರ್ಥಾಲಂಕಾರಗಳನ್ನು ಇಷ್ಟು ಲಲಿತವಾಗಿ ವಿವೇಚನೆಯಿಂದ ತಿಳಿಸಿ ಯಥೋ ಚಿತವಾದ ಉದಾಹರಣಗಳೊಡನೆ ಸಮನ್ವಯಮಾಡಿರುವುದರಿಂದಲೇ ಕುವಲಯಾ ನಂದವು ಸಂಸ್ಕೃತಾಭ್ಯಾಸಿಗಳಿಗೆ ಪರಮಾದರಣೀಯವಾಗಿದೆ. ಇಂತಹ ಆದರ್ಶ ಅಲಂಕಾರಗ್ರಂಥವನ್ನು ಶ್ರೀ ಶಾರದಾಂಬೆಯು ತನ್ನ ಮಗನ ಕಡೆಯಿಂದ ಮಾಡಿಸಿ ಕೊಂಡು ಸಹೃದಯಪ್ರಪಂಚಕ್ಕೆ ದೊರಕಿಸಿರುವಳು. ದೇಹಶೋಧನೆಯ ಹವ್ಯಾಸ ದಲ್ಲಿ ತೊಡಗಿರುವ ಈ ಸೇವಕನು ಅದಷ್ಟು ಅವಕಾಶವನ್ನು ಕಲ್ಪಿಸಿಕೊಂಡು ಪಂಡಿತೋತ್ತಮರು ಮಾಡಬೇಕಾಗಿರುವ ಈ ಅನುವಾದಕಾರ್ಯವನ್ನು ಶಾರದಾ ಪ್ರಸಾದದಿಂ ಯಥಾಮತಿ ನೆರವೇರಿಸಿರುವನು. ಇದರಲ್ಲಿ ಏನಾದರೂ ಲೋಪ ದೋಷಗಳಿದ್ದಲ್ಲಿ ಅವನ್ನು ಸಹೃದಯರು ಸಂತೋಷದಿಂದ ತಮ್ಮ ಸೋದರನ ಗಮನಕ್ಕೆ ತರಬಹುದು. ಅವನ್ನು ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುವುದು. ಪರಿಪೂರ್ಣತೆ ಎಂಬುದು ಮಹಾದೇವನೊಬ್ಬನಿಗೇ ಮೀಸಲಾಗಿದೆ. ಮಾನವರೆಲ್ಲರ ಜ್ಞಾನಶಕ್ತಿಗಳೂ ಸಂಕುಚಿತವೇ ಆಗಿರುವಾಗ ಜ್ಞಾನವಾಹಿನಿಯನ್ನು ನಿರರ್ಗಳವಾಗಿ ಹರಿಸಬೇಕಾದ್ದು ವಿಶ್ವವಿದ್ಯಾನಿಲಯದ ಕರ್ತವ್ಯವೆಂದು ಭಾವಿಸಿ ಇರುವ ನಾಲ್ಕಾರು ಪ್ರೌಢ ಆಲಂಕಾರಿಕಗ್ರಂಥಗಳನ್ನು ಕರ್ಣಾಟಕದ ನನ್ನ ಸೋದರಸೋದರಿಯರಿಗೆ, ದೊರಕಿಸಬೇಕೆಂಬ ಸದಾಶಯದಿಂದ ಸಾಹಿತ್ಯಸಾಗರದೊಳಕ್ಕೆ ಧುಮುಕಿದ್ದಾಯಿತು. ಇದರಿಂದ ರತ್ನಗಳು ಹೊರಬಿದ್ದು ನಿರ್ಮಲಹೃದಯರಿಗೆ ಕೊಂಚ ಸಂತೋಷವಾದರೆ ಈ ಸೇವಕನಿಗೆ ಜನ್ಮವನ್ನಿತ್ತ ಪೂಜ್ಯ ಮಾತಾಪಿತೃಗಳು ಧನ್ಯರೆನಿಸುವರು.

ಇತಿ ಸಹೃದಯಬಂಧು,

**ಟಿ. ಜಿ. ಸಿದ್ಧಪ್ಪಾರಾಧ್ಯ**

# ಕೃತಜ್ಞತಾ ನಿವೇದನೆ

ಕುಪ್ಪೂರು ಗದ್ದಿಗೆ ಮಠಾಧ್ಯಕ್ಷರಾದ ಷ॥ ಬ್ರ॥ ಚಂದ್ರಶೇಖರಶಿವಾಚಾರ್ಯ ಸ್ವಾಮಿಗಳ ಕೃಪಾಪ್ರಸಾದದಿಂದ ನಡೆಯುತ್ತಿರುವ ನನ್ನ ಅಲ್ಪ ಸಾಹಿತ್ಯಸೇವೆಗೆ ಮೆಚ್ಚಿ ಯಥಾಶಕ್ತಿ ಸಹಾಯಮಾಡಿರುವ ಮಹಾನುಭಾವರನ್ನು ಇಲ್ಲಿ ಸ್ಮರಿಸಬೇಕಾಗಿದೆ. ಅವರ ಸಹಾಯ ಪ್ರೋತ್ಸಾಹಗಳಿಲ್ಲದಿದ್ದರೆ ಈ ಸಾಹಿತ್ಯ ಸೇವೆಯನ್ನೇ ನಿಲ್ಲಿಸಬೇಕಾಗಿತ್ತು. ಆದ್ದರಿಂದ ಸ್ವಾನುಭವಿಗಳೂ ಮತ್ತು ಸಹೃದಯರೂ ಆತ್ಮೀಯತೆಯಿಂದ ನನಗೆ ಉದಾರವಾಗಿ ಧನಸಹಾಯ ಮಾಡಿದ್ದಕ್ಕಾಗಿ ಪ್ರೇಮಾದರಗಳಿಂದ ಅವರ ಶ್ರೇಯಸ್ಸನ್ನು ಬಯಸುತ್ತೇನೆ.

ಶ್ರೀ ಹೊನ್ನಾಳಿ ಹಿರೇಕಲ್ ಮಠದ ಸ್ಥಿರಪಟ್ಟಾಧ್ಯಕ್ಷರಾದ ಶ್ರೀ ಚನ್ನರಾಜ ದೇಶಿಕೇಂದ್ರ ಷ॥ ಬ್ರ॥ ಒಡೆಯರ್ ಚಂದ್ರಶೇಖರ ಶಿವಾಚಾರ್ಯಸ್ವಾಮಿಗಳು ಗುರು ಪ್ರಸಾದರೂಪವಾದ ನನ್ನ ಗ್ರಂಥಗಳನ್ನು ನೋಡಿ ಸಂತೋಷದಿಂದ ಇನ್ನೂರೈವತ್ತೊಂದು ರೂಪಾಯಿಗಳನ್ನು ಆಶೀರ್ವದಿಸಿ ಅನುಗ್ರಹಿಸಿದ್ದಾರೆ. ಅವರು ಶ್ರೀಮಠದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸದಿಂದ ಹಿಡಿದು ವಿಶ್ವವಿದ್ಯಾನಿಲಯದ ಪರೀಕ್ಷೆಗಳವರೆಗೂ, ಅಕ್ಷರಜ್ಞಾನದಿಂದ ಸಂಸ್ಕೃತಸಾಹಿತ್ಯ ವೇದಾಗಮ ಪರೀಕ್ಷೆಗಳವರೆಗೂ ಏರ್ಪಡಿಸಿ ವಿದ್ಯಾರ್ಥಿಗಳ ಸುಖಜೀವನವನ್ನು ತ್ಯಾಗಸೇವೆಗಳ ದಿವ್ಯ ಆದರ್ಶದ ಪಾಲನೆಗೆ ಸಜ್ಜುಗೊಳಿಸುತ್ತಲಿರುವರು. ವಿದ್ಯಾರ್ಥಿಗಳ ಮನಸ್ಸು ಆಲಸ್ಯ, ನಿರಾಸೆ, ಜುಗುಪ್ಸೆಗಳಿಗೆ ಎಡೆಕೊಡದಂತೆ ಉತ್ಸಾಹ, ಸ್ಫೂರ್ತಿ, ವಿವೇಕಗಳನ್ನು ದೊರಕಿಸುತ್ತ ಅವರ ಭಾವೀ ಜೀವನವನ್ನು ಉಜ್ವಲಗೊಳಿಸುತ್ತಲಿರುವರು. ತಮ್ಮ ದಿವ್ಯದೃಷ್ಟಿಯಲ್ಲಿ ಅವರು ನನ್ನ ಅಲ್ಪಸೇವೆಯನ್ನು ಪುರಸ್ಕರಿಸಿ ಅನುಗ್ರಹಿಸಿದ್ದು ನನ್ನ ಪುಣ್ಯ ವಿಶೇಷವೆಂದು ಭಾವಿಸಿ ಅವರಿಗೆ ಹೃತ್ಪೂರ್ವಕವಾದ ಕೃತಜ್ಞತಾ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಚಿತ್ರದುರ್ಗ ಜಿಲ್ಲೆಯ ಮುಷ್ಪೂರು ಹುಚ್ಚನಾಗಲಿಂಗಸ್ವಾಮಿ ಮಠದ ಪಟ್ಟಾಧ್ಯಕ್ಷರು ತಮ್ಮ ಮಠದಲ್ಲಿ ಬಡ ಮಕ್ಕಳಿಗೆ ಜಾತಿ ಕುಲಗೋತ್ರಗಳನ್ನು ಗಮನಿಸದೆ ಪ್ರಾಥಮಿಕ ವಿದ್ಯಾಭ್ಯಾಸದಿಂದ ಪ್ರೌಢಶಾಲಾ ಅಭ್ಯಾಸದವರೆಗೂ ಅಶನವಸತಿಗಳನ್ನು ಏರ್ಪಡಿಸಿರುವರಲ್ಲದೆ ಅವರನ್ನು ನೀತಿವಂತರೂ ಧರ್ಮಪ್ರೇಮಿಗಳೂ ಆಗುವಂತೆ ಉತ್ತಮ ಶಿಕ್ಷಣವನ್ನು ದೊರಕಿಸುತ್ತಾ ಸಮಾಜದಲ್ಲಿ ಆದರ್ಶ ಸೇವೆಯ ಪರಮಗುರಿಯನ್ನು ಸಾಧಿಸುತ್ತಲಿರುವರು. ಅವರು ನನ್ನ ಅಲ್ಪಸೇವೆಯನ್ನು ಮಹೋನ್ನತವಾಗಿ ಗೌರವಿಸುತ್ತ ನನಗೆ 251 ರೂಗಳ ಧನಸಹಾಯವನ್ನು ಅನುಗ್ರಹಿಸಿರುವರು. ಅವರಿಗೆ ನನ್ನ ಕೃತಜ್ಞತಾಪೂರ್ವಕವಾದ ಸಾಷ್ಟಾಂಗ ಪ್ರಣಾಮವನ್ನು ನಿರಭಿಮಾನದಿಂದ ಅರ್ಪಿಸುತ್ತೇನೆ.

ಬೆಲಗೂರು ಆಂಜನೇಯಸ್ವಾಮಿ ದೇವಸ್ಥಾನದ ಆಗಮಿಕರಾದ ಶ್ರೀ ಬೀಜು ಮಾಧವ ಶರ್ಮರವರು ವಿಶ್ವಪ್ರೇಮಿಗಳೂ ವಿಶ್ವಕುಟುಂಬಿಗಳೂ ಆಗಿ ಪ್ರತಿ ಅಮಾವಾಸ್ಯೆ ಪೂರ್ಣಿಮೆಗಳಲ್ಲಿ ಶ್ರೀ ಸ್ವಾಮಿಗೆ ಪಂಚಾಮೃತಾಭಿಷೇಕ ಸೇವೆ ಸಲ್ಲಿಸುತ್ತ ವಿಶ್ವಕಲ್ಯಾಣವನ್ನು ಸಾಧಿಸುತ್ತಲಿರುವರು. ಆಂಜನೇಯಸ್ವಾಮಿಯ ಪೂರ್ಣಕೃಪೆಗೆ ಪಾತ್ರರಾದ ಅವರು ಈ ನನ್ನ ಸಾಹಿತ್ಯ ಸೇವೆಗೆ ಮೆಚ್ಚಿ ಸಂತೋಷದಿಂದ 108 ರೂಗಳ ಧನಸಹಾಯ ಮಾಡಿರುವುದಕ್ಕಾಗಿ ಅವರಿಗೆ ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇನೆ.

ಬೆಂಗಳೂರು ಮಾಧವ ನಗರದಲ್ಲಿ ಎಂಜಿನಿಯರ್ ಕಂಟ್ರಾಕ್ಟರಾಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಆರ್. ಎಂ. ಬಿ ಆರಾಧ್ಯರವರು ಗುರುವಿರಕ್ತ ಮಹಾಸ್ವಾಮಿಗಳಲ್ಲಿ ಸಮನ್ವಯ ದೃಷ್ಟಿಯನ್ನು ಹುಟ್ಟಿಸುತ್ತ ಜನರಲ್ಲಿ ಪ್ರೇಮ ಸೌಹಾರ್ದ ಸಹಕಾರ ಮನೋಭಾವವನ್ನು ಕೆರಳಿಸುತ್ತ ಅಮೋಘ ಸೇವೆಯನ್ನು ಸಲ್ಲಿಸುತ್ತಿರುವರು. ಅವರು ತಮ್ಮ ಸಹಜ ಪ್ರೇಮದಿಂದ ನನ್ನ ಸಾಹಿತ್ಯಸೇವೆಗಾಗಿ 501 ರೂಗಳನ್ನು ನೀಡಿ ಪ್ರೋತ್ಸಾಹಿಸಿರುವುದಕ್ಕಾಗಿ ಅವರನ್ನು ಸಂತೋಷದಿಂದ ಅಭಿನಂದಿಸುತ್ತೇನೆ.

ಚಳ್ಳಕೆರೆ ಗಾಂಧಿನಗರದಲ್ಲಿ ಸರ್ವೆಯರ್ ಆಗಿ ಕೆಲಸ ಮಾಡುತ್ತಿರುವ ಶ್ರೀ ಬಿ ಎಂ. ಬಸವರಾಜಯ್ಯನವರು ಶ್ರೀ ರೇಣುಕ ಪ್ರಸಾದ ಮಹಿಮೆಯಿಂದ ತಮ್ಮ ಕಷ್ಟನಷ್ಟಗಳನ್ನು ಮರೆತು ಈ ನನ್ನ ಜ್ಞಾನದಾಸೋಹವನ್ನು ಮಹತ್ತರವಾಗಿ ಭಾವಿಸುತ್ತ 151ರೂಗಳ ಉದಾರ ಸಹಾಯ ನೀಡಿ ಪ್ರೋತ್ಸಾಹಿಸಿರುವರು. ಅವರನ್ನೂ ಅಹರ ಕುಟುಂಬ ವರ್ಗದವರನ್ನೂ ದಯಾಮಯನಾದ ಶ್ರೀ ಭಗವತ್ಪಾದರು ಕಾಪಾಡಲೆಂದು ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಅರಸೀಕೆರೆ ತಾಲ್ಲೂಕು ಜಯಚಾಮರಾಜಪುರ ನಿವಾಸಿ ಶ್ರೀ ಎಚ್.ಸಿ. ಶಿವಶಂಕರಪ್ಪನವರು ತಮ್ಮ ಪೂಜ್ಯ ಮಾತಾಪಿತೃಗಳ ಆತ್ಮಶಾಂತಿಗಾಗಿ ಸದುದ್ದೇಶದಿಂದಲೂ ನಿರಭಿಮಾನದಿಂದಲೂ ಸೋದರನ ಜ್ಞಾನದಾಸೋಹಕ್ಕೆ ಮೆಚ್ಚಿ 125 ರೂಗಳ ಉದಾರ ಸಹಾಯ ಮಾಡಿ ಪ್ರೋತ್ಸಾಹಿಸಿದ್ದಾರೆ. ಅವರಿಗೆ ಮಹಾದೇವಿಯು ಕರುಣಿಸಲೆಂದು ಪ್ರಾರ್ಥಿಸುತ್ತೆನೆ.

ಸಾಗರ ತಾಲ್ಲೋಕು ವೀರಾಪುರ ಮಠದ ಶ್ರೀ ಚಿದಾನಂದಸ್ವಾಮಿಗಳು ತಮ್ಮ ಮಂತ್ರ ಶಕ್ತಿಯ ಪ್ರಭಾವದಿಂದಲೂ ಜ್ಯೋತಿಷ್ಯದ ಅನುಭವದಿಂದಲೂ ಪ್ರತಿ ಅಮಾವಾಸ್ಯೆ ಪೂರ್ಣಿಮೆಗಳಲ್ಲಿ ಸಾವಿರಾರು ಗೃಹಸ್ಥರ ತಾಪತ್ರಯಗಳನ್ನು ಪರಿಹರಿಸುತ್ತ ಅವರಿಗೆ ಬಾಳಿನಲ್ಲಿ ಹೊಸ ಚೈತನ್ಯ ಶಕ್ತಿಗಳನ್ನು ಹುಟ್ಟಿಸುತ್ತ ತಮ್ಮ ಅಮೋಘ ಸೇವೆಯನ್ನು ಸಲ್ಲಿಸುತ್ತ ಜೀವನವನ್ನು ಪಾವನಗೊಳಿಸಿಕೊಂಡಿರುವರು. ಅವರು ಈ ಸೋದರನ ವಾಙ್ಮಯ ಸೇವೆಯನ್ನು ಮೆಚ್ಚಿ 108 ರೂಗಳನ್ನು ಉದಾರವಾಗಿ ದಾನ ಮಾಡಿರುವುದಕ್ಕಾಗಿ ಅವರಿಗೆ ಕೃತಜ್ಞನಾಗಿರುವೆನು.

ನರಸಿಂಹರಾಜಪುರದ ಕಾಫಿ ಪ್ಲಾಂಟರ್ ಆದ ದತ್ತಾತ್ರಿ (ದತ್ತಪ್ಪ) ಅವರು ಅಪರಿಚಿತರಾದರೂ ಬೆಲಗೂರು ಶ್ರೀ ಶಂಕರಪ್ಪನವರಿಂದ ನನ್ನ ಸಾಹಿತ್ಯ ಸೇವೆಯನ್ನು ತಿಳಿದು 100ರೂಗಳ ಉದಾರ ಸಹಾಯ ನೀಡಿರುವರು. ಇವರ ಧರ್ಮಬುದ್ಧಿ ಮತ್ತು ಸಾಹಿತ್ಯ ಪ್ರೇಮಿಗಳಿಗಾಗಿ ಇವರನ್ನು ಸಂತೋಷದಿಂದ ಅಭಿನಂದಿಸುತ್ತೇನೆ.

ಕಲ್ಯಾಣ ದುರ್ಗದ ಗಂಗವರಮ್ ನಿವಾಸಿ ಜಮೀನ್ದಾರ್ ಶ್ರೀ ಹೊನ್ನೇಲಿಂಗಣ್ಣನವರು ನನ್ನ ಧರ್ಮಗ್ರಂಥಗಳನ್ನು ಓದಿ ನನಗೆ 100 ರೂಗಳ ಉದಾರ ಸಹಾಯ ಮಾಡಿ ಅನೇಕ ವೇಳೆ ನನ್ನ ಉಪನ್ಯಾಸಗಳನ್ನು ಏರ್ಪಡಿಸುತ್ತಿರುವುದಕ್ಕಾಗಿ ಅವರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುತ್ತೇನೆ.

ಕೆಂಕೆರೆ ನಿವಾಸಿ ಜಮೀನ್ದಾರ್ ಶ್ರೀ ಜಯಣ್ಣನವರು ಅವರ ಧರ್ಮಪತ್ನಿಯವರ ಸಾಹಿತ್ಯಪ್ರೇಮ ಮತ್ತು ಧರ್ಮಾಭಿಮಾನಗಳನ್ನು ಸಂತೋಷದಿಂದ ಸಹಕರಿಸುತ್ತ ನನಗೆ ಧರ್ಮಗ್ರಂಥಗಳ ಮುದ್ರಣಕ್ಕಾಗಿ 108ರೂಗಳ ಉದಾರ ಸಹಾಯ ಮಾಡಿ ಪ್ರೋತ್ಸಾಹಿಸಿರುವರು. ದಂಪತಿಗಳ ಧರ್ಮಬುದ್ಧಿ ಉದಾರ ಮನೋಭಾವಗಳಿಗೆ ಮೆಚ್ಚಿ ದಯಾಮಯನಾದ ಶಿವನು ಇವರಿಗೆ ಸದ್ಬುದ್ಧಿ ಸದ್ಭಾವನೆಗಳನ್ನು ಸ್ಥಿರವಾಗಿ ಅನುಗ್ರಹಿಸಿ ಕಾಪಾಡುತ್ತಿರಲೆಂದು ಸದಾ ಬೇಡುತ್ತಿರುವೆನು.

ಹೊಸದುರ್ಗ ತಾಲ್ಲೂಕು ತಂಡಗದ ನಿವಾಸಿ ಕಂಟ್ರ್ಯಾಕ್ಟರ್ ಶ್ರೀ ಕಲ್ಲಪ್ಪನವರು ಸತ್ಯಶುದ್ಧ ಕಾಯಕದಿಂದ ತನುಮನ ಬಳಲಿಸಿ ತಂದು ದಾಸೋಹ ಮಾಡುವ ಸದ್ಭಕ್ತರಾಗಿದ್ದಾರೆ. ಅವರು ಜ್ಞಾನಯಜ್ಞಕ್ಕೆ ಸಹಾಯಕವಾಗಿ 108 ರೂಗಳನ್ನು ಪ್ರೇಮದಿಂದ ನೀಡಿರುವರು. ಅವರ ಧರ್ಮಬುದ್ಧಿ ತ್ಯಾಗಮನೋಭಾವಗಳಿಗಾಗಿ ಅವರನ್ನು ಸಂತೋಷದಿಂದ ಅಭಿನಂದಿಸುತ್ತ ಅವರು ಚಿರಾಯುವಾಗಿ ಬಾಳಲೆಂದು ಶಿವನಲ್ಲಿ ಅನನ್ಯ ಭಕ್ತಿಯಿಂದ ಮೊರೆಯಿಡುತ್ತೇನೆ.

ಗುಬ್ಬಿ ಗ್ರಾಮ ನಿವಾಸಿ ಶ್ರೀ ಮಲ್ಲಿಕಾರ್ಜುನಯ್ಯನವರು ಅವರ ತಾಯಿತಂದೆಗಳ ಆತ್ಮಶಾಂತಿಗಾಗಿ ನನಗೆ ಧರ್ಮಗ್ರಂಥ ಮುದ್ರಣಕ್ಕಾಗಿ 108ರೂಗಳ ಉದಾರ ನೆರವು ನೀಡಿ ಪ್ರೋತ್ಸಾಹಿಸಿರುವರು. ಅವರಲ್ಲೂ ಅವರ ಕುಟುಂಬದವರಲ್ಲೂ ಧರ್ಮಬುದ್ಧಿ ಸ್ಥಿರವಾಗಿ ನೆಲಸಿ ಇಂತಹ ಉದಾತ್ತ ಕಾರ್ಯಗಳನ್ನು ಸಂತೋಷದಿಂದ ನೆರವೇರಿಸುತ್ತ ಅವರನ್ನು ಪೂರ್ಣ ಆಯುಷ್ಮಂತರಾಗಿ ಅನುಗ್ರಹಿಸಲೆಂದು ಶಿವನಲ್ಲಿ ಬೇಡುತ್ತೇನೆ. ಗುಬ್ಬಿ ಶ್ರೀ ಚನ್ನಬಸವೇಶ್ವರಸ್ವಾಮಿಯ ಅರ್ಚಕರಾದ ಶ್ರೀ ಗುರು ಚನ್ನಬಸವಾರ್ಯರು ತಮ್ಮ ಆದರ್ಶವಾದ ಪವಿತ್ರ ಜೀವನದಿಂದಲೂ ಸತ್ಯಶುದ್ಧ ಕಾಯಕದಿಂದಲೂ ಶ್ರೀ ಸ್ವಾಮಿಯ ಪೂರ್ಣ ಮೆಚ್ಚುಗೆಗೆ ಪಾತ್ರರಾಗಿರುವರು. ಅವರ ಮಗ ಚಿ. ಪ್ರಭುಸ್ವಾಮಿ ಗೃಹಸ್ಥಸಂನ್ಯಾಸಿಯೂ ಸಂಸಾರಯೋಗಿಯೂ ಆಗಿ ದಾಂಪತ್ಯ ಜೀವನವನ್ನು ನಿರ್ಲಿಪ್ತತೆಯಿಂದ ನಡೆಸುತ್ತಲೂ ಬಾಳಿನಲ್ಲಿ ಪವಿತ್ರತೆಯನ್ನು ಕಾಪಾಡಿಕೊಳ್ಳುತ್ತಲೂ ಆದರ್ಶ ಜೀವನವನ್ನು ನಡೆಸುತ್ತಿರುವರು. ಅವರು ಆಗಮಿಕ ವಿದ್ಯೆ

ಯಲ್ಲಿ ಪ್ರಾವೀಣ್ಯವನ್ನು ಸಂಪಾದಿಸಿ ಶ್ರೀ ಸ್ವಾಮಿಯ ಸೇವೆಯನ್ನು ವಿಧಿಪೂರ್ವಕವಾಗಿ ನಡೆಸುತ್ತ ಆದರ್ಶ ಆಗಮಿಕರಾಗಿ ಇತರರಿಗೆ ಮಾರ್ಗದರ್ಶಕರಾಗಿರುವರು. ಇವರ ತಂದೆಯವರು ಜ್ಞಾನಯಜ್ಞವನ್ನು ನಿರಾತಂಕವಾಗಿ ಮುಂದುವರೆಸಲು ಅನುಕೂಲ ವಾಗುವಂತೆ 151 ರೂಗಳ ಉದಾರ ಸಹಾಯವನ್ನು ನೀಡಿ ಪ್ರೋತ್ಸಾಹಿಸಿರುವರು. ಇವರನ್ನೂ ಕುಟುಂಬವರ್ಗದವರನ್ನೂ ಶ್ರೀ ಚೆನ್ನಬಸವೇಶ್ವರಸ್ವಾಮಿ ಸುಖವಾಗಿರಿಸ ಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಹರಪನಹಳ್ಳಿ ತಾಲ್ಲೂಕು ನೀಲಗುಂದಗ್ರಾಮದಲ್ಲಿ ತುಂಗಭದ್ರ ಗ್ರಾಮೀಣ ಬ್ಯಾಂಕಿನ ಮ್ಯಾನೇಜರಾದ ಶ್ರೀ ಎನ್. ಜಂಬನಗೌಡರು ಶಕ್ತರೂ ಭಕ್ತರೂ ಆಗಿ ಸತ್ಕಾರ್ಯಗಳಿಗೆ ಪ್ರೋತ್ಸಾಹವೀಯುತ್ತ ಉದಾರಜೀವನ ನಡೆಸುತ್ತಿರುವರು. ಅವರು ಈ ಜ್ಞಾನ ದಾಸೋಹಕ್ಕಾಗಿ 108 ರೂ. ಗಳನ್ನು ಉದಾರವಾಗಿ ನೀಡಿರುವರು. ಅವರಿಗೂ ಅವರ ಕುಟುಂಬ ವರ್ಗದವರಿಗೂ ಶಿವನು ಸನ್ಮಂಗಳ ಚಿರಾಯುಷ್ಯಗಳನ್ನು ಅನುಗ್ರಹಿಸಿ ಕಾಪಾಡಲೆಂದು ಪ್ರಾರ್ಥಿಸುತ್ತೇನೆ.

ತುಮಕೂರು ಜಿಲ್ಲೆ ಶಿರಾಗ್ರಾಮವಾಸಿ ವರ್ತಕರಾದ ಶ್ರೀ ಬಿ. ಎಸ್ ತಮ್ಮಯ್ಯನವರು ತಮ್ಮ ಧರ್ಮಪತ್ನಿಯ ಆತ್ಮಶಾಂತಿಗಾಗಿ ಧರ್ಮಪ್ರೇಮದಿಂದಲೂ ನಿಶ್ಚಲ ಮನಸ್ಸಿನಿಂದಲೂ ನನಗೆ ಧರ್ಮಗ್ರಂಥಗಳ ಮುದ್ರಣಕ್ಕಾಗಿ 108 ರೂ. ಗಳನ್ನು ಅನುಗ್ರಹಿಸಿರುವರು. ಸದ್ಧರ್ಮಾಸಕ್ತರಾದ ಇವರ ಇಷ್ಟಾರ್ಥ ಸಿದ್ಧಿಸಲೆಂದೂ, ಇಂಥ ಸತ್ಕಾರ್ಯಗಳನ್ನು ನಡೆಸುತ್ತಲೇ ಇವರು ನೂರುವರ್ಷ ನಿರಾತಂಕವಾಗಿ ಬಾಳಲೆಂದೂ ಶಿವನಲ್ಲಿ ಅನನ್ಯ ಭಕ್ತಿಯಿಂದ ಮೊರೆಯಿಡುತ್ತೇನೆ.

ಕೆಂಗೇರಿ ಉಪನಗರದಲ್ಲಿ ತಮ್ಮ ಪೂಜ್ಯ ಮಾತಾಪಿತೃಗಳ ಹೆಸರಿನಲ್ಲಿ ಕಟ್ಟಿಸಿರುವ 'ಶಿವಕಲ್ಯಾಣ' ಗೃಹದಲ್ಲಿ ವಾಸಿಸುತ್ತಿರುವ ಶ್ರೀಮತಿ ಮಂಜುಳ ಮತ್ತು ಡಾ॥ ಎಸ್. ವಿರೂಪಾಕ್ಷಯ್ಯ, ಸಮಾಜ ಕಾರ್ಯವಿಭಾಗ, ಬೆಂಗಳೂರು ವಿಶ್ವವಿದ್ಯಾ ನಿಲಯ, ಬೆಂಗಳೂರು, ಇವರು ಜಂಗಮರೂ ಜಂಗಮ ಪ್ರೇಮಿಗಳೂ ಯೋಗ್ಯತಾ ಪ್ರೋತ್ಸಾಹಕರೂ ಆಗಿದ್ದು ನನ್ನ ಅಲ್ಪ ಸೇವೆಗೆ 251 ರೂ. ಗಳ ಉದಾರ ಸಹಾಯ ಮಾಡಿ ಪ್ರೋತ್ಸಾಹಿಸಿರುವರು. ಇವರ ತಾಯಿ ಕಲ್ಯಾಣಮ್ಮನವರ ಸದ್ಭಕ್ತಿ ಸದ್ಬುದ್ಧಿ ಸದ್ಭಾವನೆಗಳಿಗೆ ತವರು ಮನೆಯಾಗಿರುವರಲ್ಲದೆ ಸತ್ಕಾರ್ಯಗಳಿಗೆ ಉದಾರವಾಗಿ ಧನ ಸಹಾಯ ಮಾಡುತ್ತ ತಮ್ಮ ಪತಿಯ ಆತ್ಮಕ್ಕೆ ಶಾಂತಿಯನ್ನು ಬಯಸುತ್ತಲಿರುವರು.

ಸದ್ಗೃಹಸ್ಥರ ಮತ್ತು ಶಿವಯೋಗಿಗಳ ಉದಾರ ಸಹಾಯದಿಂದ ಹೊರಬಂದಿ ರುವ ಈ ಪವಿತ್ರ ಆಲಂಕಾರಿಕ ಗ್ರಂಥವು ಸಹೃದಯರೆಲ್ಲರಿಗೂ ಮೆಚ್ಚಿಗೆಯಾದರೆ ಸೇವಕನ ಶ್ರಮವು ಸಾರ್ಥಕವಾದೀತೆಂದು ನಂಬಲಾಗಿದೆ.

18-4-87
ಮೈಸೂರು.

ಸಹೃದಯ ಹೃದಯೋಲ್ಲಾಸಿ
ಟಿ. ಜಿ. ಸಿದ್ಧಪ್ಪಾರಾಧ್ಯ

# ವಿಷಯಾನುಕ್ರಮಣಿಕೆ

# ಕುವಲಯಾನಂದ



ಅಮರೀಕಬರೀಭಾರಭ್ರಮರೀಮುಖರೀಕೃತಮ್ ।
ದೂರೀಕರೋತು ದುರಿತಂ ಗೌರೀಚರಣಪಂಕಜಂ ॥ ೧ ॥

ದೇವತಾಸ್ತ್ರೀಯರು ನಮಸ್ಕರಿಸಲು ಬರುತ್ತಿದ್ದುದರಿಂದ ಅವರ ಕೇಶಪಾಶಕ್ಕೆ ಸುಗಂಧದ ಮೇಲಿನ ಆಶೆಯಿಂದ ಅಂಟಿಕೊಂಡಿದ್ದ ಹೆಣ್ಣು ದುಂಬಿಗಳ ಝೇಂಕಾರ ಶಬ್ದದಿಂದ ತುಂಬಿಕೊಂಡಿರುವ ಪಾರ್ವತೀದೇವಿಯ ಪಾದಕಮಲವು ಭಕ್ತರ ಪಾಪ ವನ್ನು ಪರಿಹರಿಸಲಿ.

ಪರಸ್ಪರತಪಸ್ಸಂಪತ್ಫಲಾಯಿತಪರಸ್ಪರೌ ।
ಪ್ರಪಂಚಮಾತಾಪಿತರೌ ಪ್ರಾಂಚೌ ಜಾಯಾಪತೀ ಸ್ತುಮಃ ॥ ೨ ॥

ಇಬ್ಬರಲ್ಲಿ ಒಬ್ಬರು ಮಾಡಿದ ಮಹಾತಪಸ್ಸಿಗೆ ಮತ್ತೊಬ್ಬರೇ ಫಲವೆನಿಸಿ ಲೋಕದ ಜನರಿಗೆ ತಾಯಿತಂದೆಯರೆನಿಸಿ, ಇಡೀ ಮಾನವವರ್ಗಕ್ಕೇ ಪ್ರಾಚೀನರೆನಿಸಿದ ಪಾರ್ವತೀಪರಮೇಶ್ವರರೆಂಬ ದಂಪತಿಗಳನ್ನು ಸ್ತುತಿಸುತ್ತೇವೆ.

ಉದ್ಘಾಟ್ಯ ಯೋಗಕಲಯಾ ಹೃದಯಾಬ್ಜಕೋಶಂ
ಧನ್ಯೈಶ್ಚಿರಾದಪಿ ಯಥಾರುಚಿ ಗೃಹ್ಯಮಾಣಃ ।
ಯಃ ಪ್ರಸ್ಫುರತ್ಯವಿರತಂ ಪರಿಪೂರ್ಣರೂಪಃ
ಶ್ರೇಯಃ ಸ ಮೇ ದಿಶತು ಶಾಶ್ವತಿಕಂ ಮುಕುಂದಃ ॥ ೩ ॥

ಹೃದಯಕಮಲದ ಮೊಗ್ಗನ್ನು ಯೋಗಶಕ್ತಿಯಿಂದ ಅರಳಿಸಿಕೊಂಡ ಮಹಾತ್ಮ ರಿಗೆ ಬಹುಕಾಲದಿಂದಲೂ ಅಲ್ಲಿಯೇ ಅನುಭವಗೋಚರನಾಗಿ ಯಾವಾಗಲೂ ಪರಿಪಕ್ವಸ್ಥಿತಿಯಲ್ಲಿ ಶೋಭಿಸುತ್ತಿರುವ ವರದರಾಜನು ನನಗೆ ಶಾಶ್ವತಸುಖವನ್ನು ಅನುಗ್ರಹಿಸಲಿ.

ಅಲಂಕಾರೇಷು ಬಾಲಾನಾಮವಗಾಹನಸಿದ್ಧಯೇ ।
ಲಲಿತಃ ಕ್ರಿಯತೇ ತೇಷಾಂ ಲಕ್ಷ್ಯಲಕ್ಷಣಸಂಗ್ರಹಃ ॥ ೪ ॥

ಅಲಂಕಾರಗಳ ಸ್ವರೂಪವನ್ನು ಬಾಲಕರು ತಿಳಿಯಲನುಕೂಲವಾಗುವಂತೆ ಅವುಗಳ ಲಕ್ಷಣಗಳನ್ನು ಉದಾಹರಣಗಳೊಡನೆ ಲಲಿತವಾಗಿ ಸಂಗ್ರಹಿಸಲಾಗುವುದು.

ಯೇಷಾಂ ಚಂದ್ರಾಲೋಕೇ ದೃಶ್ಯಂತೇ ಲಕ್ಷ್ಯಲಕ್ಷಣಶ್ಲೋಕಾಃ ।
ಪ್ರಾಯಸ್ತ ಏವ ತೇಷಾಮಿತರೇಷಾಂ ತ್ವಭಿನವಾಃ ವಿರಚ್ಯಂತೇ ॥ ೫ ॥

ಚಂದ್ರಾಲೋಕದಲ್ಲಿ ಅಲಂಕಾರಗಳಿಗೆ ಉದಾಹರಣಗಳೊಡನೆ ಹೇಳಿರುವ ಲಕ್ಷಣಗಳನ್ನೇ ಸಾಮಾನ್ಯವಾಗಿ ಇಲ್ಲಿಯೂ ಕೊಡಲಾಗುವುದು. ಆದರೆ ಉಳಿದ ಕೆಲವು ಅಲಂಕಾರಗಳಿಗೆ ಲಕ್ಷಣಗಳನ್ನು ಉದಾಹರಣಗಳೊಡನೆ ಹೊಸದಾಗಿ ರಚಿಸಲಾಗುವುದು.

## ೧. ಉಪಮಾಲಂಕಾರ

ಉಪಮಾ ಯತ್ರ ಸಾದೃಶ್ಯಲಕ್ಷ್ಮೀರುಲ್ಲಸತಿ ದ್ವಯೋಃ ॥
ಹಂಸೀವ ಕೃಷ್ಣ ತೇ ಕೀರ್ತಿಃ ಸ್ವರ್ಗಂಗಾಮಧಿರೋಹತಿ ॥ ೬ ॥

ಯತ್ರೋಪಮಾನೋಪಮೇಯಯೋಃ ಸಹೃದಯಹೃದಯಾಹ್ಲಾದಕತ್ವೇನ ಚಾರುಸಾದೃಶ್ಯಂ ಉದ್ಭೂತತಯೋಲ್ಲಸತಿ ವ್ಯಂಗ್ಯಮರ್ಯಾದಾಂ ವಿನಾ ಸ್ಪಷ್ಟಂ ಪ್ರಕಾಶತೇ ತತ್ರೋಪಮಾಲಂಕಾರಃ, ಹಂಸೀವೇತ್ಯುದಾಹರಣಮ್. ಇಯಂ ಚ ಪೂರ್ಣೋಪಮೇತ್ಯುಚ್ಯತೇ. ಹಂಸೀ, ಕೀರ್ತಿಃ, ಸ್ವರ್ಗಂಗಾವಗಾಹನಂ, ಇವಶಬ್ದಶ್ಚೇತ್ಯೇತೇಷಾಮುಪಮಾನೋಪಮೇಯಸಾಧಾರಣಧರ್ಮೋಪಮಾವಾಚಕಾನಾಂ ಚತುರ್ಣಾಮಪ್ಯುಪಾದಾನಾತ್. ಯಥಾ ವಾ—

ಗುಣದೋಷೌ ಬುಧೋ ಗೃಹ್ಣನ್ನಿಂದುಕ್ಷ್ವೇಡಾವಿವೇಶ್ವರಃ ।
ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥ ೭ ॥

ಅತ್ರ ಯದ್ಯಪ್ಯುಪಮಾನೋಪಮೇಯಯೋರ್ನೈಕಃ ಸಾಧಾರಣೋ ಧರ್ಮಃ. ಉಪಮಾನೇ ಈಶ್ವರೇ ಚಂದ್ರಗರಳಯೋರ್ಗ್ರಹಣಂ ಉಪಾದಾನಂ ತಯೋರ್ಮಧ್ಯೇ ಪೂರ್ವಸ್ಯ ಚಂದ್ರಸ್ಯ ಶಿರಸಾ ಶ್ಲಾಘನಂ ವಹನಂ, ಉತ್ತರಸ್ಯ ಗರಳಸ್ಯ ಕಂಠೇ ನಿಯಮನಂ ಸಂಸ್ಥಾಪನಂ ; ಉಪಮೇಯೇ ಬುಧೇ ಗುಣದೋಷಯೋರ್ಗ್ರಹಣಂ ಜ್ಞಾನಂ ತಯೋರ್ಮಧ್ಯೇ ಪೂರ್ವಸ್ಯ ಗುಣಸ್ಯ ಶಿರಸಾ ಶ್ಲಾಘನಂ ಶಿರಃ ಕಂಪೇನಾಭಿನಂದನಂ, ಉತ್ತರಸ್ಯ ದೋಷಸ್ಯ ಕಂಠೇ ನಿಯಮನಂ ಕಂಠಾದುಪರಿ ವಾಚಾನುದ್ಘಾಟನಮಿತಿ ಭೇದಾತ್, ತಥಾಪಿ ಚಂದ್ರಗರಳಯೋರ್ಗುಣದೋಷಯೋಶ್ಚ ಬಿಂಬಪ್ರತಿಬಿಂಬಭಾವೇನ ಅಭೇದಾತ್, ಉಪಾದಾನಜ್ಞಾನಾದೀನಾಂ ಗೃಹ್ಣನ್ ಇತ್ಯೇಕಶಬ್ದೋಪಾದಾನೇನ ಅಭೇದಾಧ್ಯವಸಾಯಾಚ್ಚ ಸಾಧಾರಣಧರ್ಮತೇತಿ ಪೂರ್ವಸ್ಮಾದ್ವಿಶೇಷಃ. ವಸ್ತುತೋ ಭಿನ್ನಯೋರಪಿ ಉಪಮಾನೋಪಮೇಯಧರ್ಮಯೋಃ ಪರಸ್ಪರಸಾದೃಶ್ಯಾದಭಿನ್ನಯೋಃ ಪೃಥಗುಪಾದಾನಂ ಬಿಂಬಪ್ರತಿಬಿಂಬಭಾವ ಇತ್ಯಾಲಂಕಾರಿಕಸಮಯಃ

ಉಪಮಾನ ಉಪಮೇಯಗಳೆರಡಕ್ಕೂ ರಮಣೀಯವಾದ ಸಾದೃಶ್ಯವು ಎಲ್ಲಿ ಶೋಭಿಸುತ್ತಿರುವುದೋ ಅಲ್ಲಿ ಉಪಮಾಲಂಕಾರವಾಗುತ್ತದೆ. ಶ್ರೀ ಕೃಷ್ಣದೇವನೇ ! ನಿನ್ನ ಕೀರ್ತಿಯು ಹಂಸ ಪಕ್ಷಿಯಂತೆ ದೇವಗಂಗೆಯವರೆಗೂ ವ್ಯಾಪಿಸಿದೆ.

ಎಲ್ಲಿ ಉಪಮಾನ ಉಪಮೇಯಗಳೆರಡಕ್ಕೂ ಸಹೃದಯರ ಮನಸ್ಸಿಗೆ ಸಂತೋಷ ವುಂಟಾಗುವಷ್ಟು ಇಂಪಾಗಿ ಸಾದೃಶ್ಯವು ವ್ಯಂಗ್ಯವೆನಿಸದೆ ಸ್ಪಷ್ಟವಾಗಿ ಪ್ರಕಾಶಿಸುವುದೋ ಅಲ್ಲಿ ಉಪಮಾಲಂಕಾರವಿರುತ್ತದೆ. ಇದಿಷ್ಟು ಉಪಮಾಲಂಕಾರದ ಲಕ್ಷಣವೆನಿಸಿದರೆ 'ಹಂಸೀವ' ಎಂಬುದು ಉದಾಹರಣವಾಕ್ಯವೆನಿಸುತ್ತದೆ. ಹಂಸಪಕ್ಷಿಯೇ ಉಪಮಾನ, ಕೀರ್ತಿಯೇ ಉಪಮೇಯ, ದೇವಗಂಗಾಪ್ರವೇಶವೇ ಸಾಧಾರಣಧರ್ಮ. ಇವ ಎಂಬುದು ಸಾದೃಶ್ಯವನ್ನು ತಿಳಿಸುವ ಪದ. ಇವು ನಾಲ್ಕನ್ನು ಇಲ್ಲಿ ಸ್ಪಷ್ಟವಾಗಿ ಶಬ್ದದಿಂದಲೇ ತಿಳಿಸಿರುವುದರಿಂದ ಇದು ಪೂರ್ಣೋಪಮೆ ಎನಿಸಿದೆ. ಇದರಂತೆಯೇ

"ಈಶ್ವರನು ಚಂದ್ರ ಮತ್ತು ವಿಷಗಳನ್ನು ಸ್ವೀಕರಿಸಿದಂತೆ ವಿದ್ವಾಂಸನು ಜನರ ಗುಣದೋಷಗಳನ್ನು ತಿಳಿದುಕೊಂಡು ಒಂದನ್ನು ತಲೆ ಅಳ್ಳಾಡಿಸುವ ಮೂಲಕ ಪ್ರಶಂಸಿಸುವನು ಮತ್ತೊಂದನ್ನು ಕುತ್ತಿಗೆಯೊಳಗೆಯೇ ತಡೆದುಕೊಳ್ಳುವನು" ಇಲ್ಲಿಯೂ ಸಹ ಪೂರ್ಣೋಪಮೆಯೇ ಇದೆ. ಆದರೆ ಇಲ್ಲಿ ಉಪಮಾನ ಉಪಮೇಯಗಳೆರಡಕ್ಕೂ ಸಮಾನವಾಗಿ ಅನ್ವಯಿಸುವ ಒಂದು ಧರ್ಮವಿಲ್ಲ. ಉಪಮಾನವೆನಿಸಿದ ಈಶ್ವರನು ಚಂದ್ರ ವಿಷಗಳನ್ನು ಗ್ರಹಿಸುವನೆಂಬಲ್ಲಿ ಅವನು ಅವೆರಡರಲ್ಲಿ ಒಂದನ್ನು ಅಂದರೆ ಚಂದ್ರನನ್ನು ಶಿರಸ್ಸಿನಲ್ಲಿ ಧರಿಸುವನೆಂದೂ, ಮತ್ತೊಂದನ್ನು ಅಂದರೆ ವಿಷವನ್ನು ಕುತ್ತಿಗೆಯಲ್ಲಿ ನೆಲೆಗೊಳಿಸುವನೆಂದೂ ಅರ್ಥವಾಗುತ್ತದೆ. ಹಾಗೆಯೇ ಉಪಮೇಯ ವೆನಿಸಿದ ವಿದ್ವಾಂಸನು ಗುಣದೋಷಗಳನ್ನು ಗ್ರಹಿಸುವನೆಂಬಲ್ಲಿ ಅವೆರಡರಲ್ಲಿ ಒಂದನ್ನು ಅಂದರೆ ಗುಣವನ್ನು ಅವನು ತಲೆ ಅಳ್ಳಾಡಿಸುವ ಮೂಲಕ ಅಭಿನಂದಿಸುವನೆಂದೂ, ಮತ್ತೊಂದನ್ನು ಅಂದರೆ ದೋಷವನ್ನು ಮಾತಿನಿಂದ ಹೊರಪಡಿಸನೆಂದೂ ಅರ್ಥ ವಾಗುತ್ತದೆ. ಹೀಗೆ ಗೃಹ್ಣನ್ ಎಂಬ ಪದವು ಒಂದುಕಡೆ ಸ್ವೀಕಾರವೆಂಬ ಅರ್ಥವನ್ನೂ, ಮತ್ತೊಂದು ಕಡೆ ತಿಳಿಯುವಿಕೆ ಎಂಬ ಅರ್ಥವನ್ನೂ ಬೋಧಿಸುವುದರಿಂದ ಈಶ್ವರನಿಗೂ ವಿದ್ವಾಂಸನಿಗೂ ಅನ್ವಯಿಸುವ ಒಂದು ಸಾಧಾರಣಧರ್ಮವನ್ನು ಬೋಧಿಸಿದಂತಾಗು ವುದಿಲ್ಲ. ಆದರೂ ಚಂದ್ರಗುಣಗಳಿಗೂ ವಿಷದೋಷಗಳಿಗೂ ಬಿಂಬಪ್ರತಿಬಿಂಬಭಾವ ದಿಂದ ಅಭೇದವಿರುವುದರಿಂದಲೂ, ಚಂದ್ರವಿಷಗಳ ಸ್ವೀಕಾರವನ್ನೂ, ಗುಣದೋಷಗಳ ತಿಳಿವನ್ನೂ ಗೃಹ್ಣನ್ ಎಂಬ ಒಂದೇ ಪದವು ತಿಳಿಸುತ್ತಿರುವುದರಿಂದ ಸ್ವೀಕಾರ ಜ್ಞಾನ ಇವೆರಡು ಧರ್ಮಗಳಿಗೂ ಅಭೇದವನ್ನು ನಿಶ್ಚಯಿಸುವುದರಿಂದಲೂ ಇವನ್ನು ಸಾಧಾರಣ ಧರ್ಮವೆಂದು ಭಾವಿಸಲಾಗಿದೆ. ಹಿಂದಿನ ಉದಾಹರಣದಲ್ಲಿ ದೇವಗಂಗಾಪ್ರವೇಶವು ಹಂಸೀ, ಕೀರ್ತಿ ಇವೆರಡಕ್ಕೂ ಅನ್ವಯಿಸುವ ಒಂದು ಸಾಧಾರಣಧರ್ಮವೆನಿಸಿದರೆ ಇಲ್ಲಿ

ಉಪಮಾನವೆನಿಸಿದ ಈಶ್ವರನಲ್ಲಿರುವ ಚಂದ್ರವಿಷಗಳ ಸ್ವೀಕಾರವೂ, ಉಪಮೇಯ ವೆನಿಸಿದ ವಿದ್ವಾಂಸನಲ್ಲಿರುವ ಗುಣದೋಷಗಳ ಜ್ಞಾನವೂ ವಾಸ್ತವವಾಗಿ ಬೇರೆಯಾಗಿ ದ್ದರೂ ಪರಸ್ಪರಸಾದೃಶ್ಯದಿಂದ ಒಂದೇ ಬಗೆ ಎನಿಸಿವೆ. ಇದೇ ಇವೆರಡಕ್ಕೂ ಇರುವ ವಿಶೇಷ. ಸ್ವೀಕರಿಸುವುದೂ ಒಂದು ಬಗೆಯ ತಿಳಿವೇ ಆಗಿದೆ. ತಿಳಿಯುವುದೂ ಒಂದು ಬಗೆಯ ಸ್ವೀಕಾರವೇ ಆಗಿದೆ. ಹೀಗೆ ಇವೆರಡಕ್ಕೂ ಹೋಲಿಕೆಯನ್ನು ಕಾಣ ಬಹುದು. ಆದರೂ ಚಂದ್ರವಿಷಗಳ ಸ್ವೀಕಾರವು ಈಶ್ವರನಲ್ಲೂ, ಗುಣದೋಷಗಳ ಜ್ಞಾನವು ವಿದ್ವಾಂಸನಲ್ಲೂ ಇರುವುದಾಗಿ ಇಲ್ಲಿ ತಿಳಿಸಲಾಗಿದೆ. ಚಂದ್ರವಿಷಗಳ ಸ್ವೀಕಾರ ವೆಂಬ ಧರ್ಮವು ಬಿಂಬವೆನಿಸಿದ ಈಶ್ವರನಲ್ಲಿಯೂ, ಗುಣದೋಷಗಳ ಜ್ಞಾನವೆಂಬ ಧರ್ಮವು ಪ್ರತಿಬಿಂಬವೆನಿಸಿದ ವಿದ್ವಾಂಸನಲ್ಲಿಯೂ ಇರುವುದಾಗಿ ಬಿಂಬಪ್ರತಿಬಿಂಬ ಗಳನ್ನು ಬೇರೆಬೇರೆ ಪದಗಳಿಂದ ತಿಳಿಸಿರುವ ಪ್ರಯುಕ್ತ ಸ್ವೀಕಾರ, ಜ್ಞಾನವೆಂಬ ಉಪಮಾನೋಪಮೇಯಧರ್ಮಗಳು ಬಿಂಬಪ್ರತಿಬಿಂಬಭಾವದ ಮೂಲಕ ದೊರೆತ ಸಾಧಾರಣಧರ್ಮವೆನಿಸಿವೆ. ಈ ಧರ್ಮಗಳು ವಾಸ್ತವವಾಗಿ ಬೇರೆ ಎನಿಸಿದ್ದರೂ ಪರಸ್ಪರಸಾದೃಶ್ಯದಿಂದ ಬೇರೆಯಾಗದ ಪ್ರಯುಕ್ತ ಇವನ್ನು ಬಿಂಬವೆನಿಸಿದ ಉಪಮಾನ ದಲ್ಲೂ, ಪ್ರತಿಬಿಂಬವೆನಿಸಿದ ಉಪಮೇಯದಲ್ಲೂ ಇರುವುದಾಗಿ ಬೇರೆಬೇರೆಯಾಗಿ ತಿಳಿಸುವುದನ್ನು ಆಲಂಕಾರಿಕರು ಬಿಂಬಪ್ರತಿಬಿಂಬಭಾವವೆಂದು ಕರೆದಿದ್ದಾರೆ.

ವರ್ಣ್ಯೋಪಮಾನಧರ್ಮಾಣಾಂ ಉಪಮಾವಾಚಕಸ್ಯ ಚ ।
ಏಕದ್ವಿತ್ರ್ಯನುಪಾದಾನೈರ್ಭಿನ್ನಾ ಲುಪ್ತೋಪಮಾಷ್ಟಧಾ ॥ ೭ ॥

ತಡಿದ್ಗೌರೀಂದುತುಲ್ಯಾಸ್ಯಾ ಕರ್ಪೂರಂತೀ ದೃಶೋರ್ಮಮ ।
ಕಾಂತ್ಯಾ ಸ್ಮರವಧೂಯಂತೀ ದೃಷ್ಟಾ ತನ್ವೀ ರಹೋ ಮಯಾ ॥ ೮ ॥

ಯತ್ತಯಾ ಮೇಲನಂ ತತ್ರ ಲಾಭೋ ಮೇ ಯಶ್ಚ ತದ್ರತೇಃ ।
ತದೇತತ್ಕಾಕತಾಲೀಯಂ ಅವಿತರ್ಕಿತಸಂಭವಮ್ ॥ ೯ ॥

ಉಪಮೇಯಾದೀನಾಂ ಚತುರ್ಣಾಂ ಮಧ್ಯೇ ಏಕಸ್ಯ ದ್ವಯೋಸ್ತ್ರಯಾಣಾಂ ವಾ ಪ್ರತಿಪಾದಕಶಬ್ದಾಭಾವೇನ ಲುಪ್ತೋಪಮೇತ್ಯುಚ್ಯತೇ. ಸಾ ಚ ಅಷ್ಟಧಾ, ಯಥಾ ವಾಚಕಲುಪ್ತಾ, ಧರ್ಮಲುಪ್ತಾ, ಧರ್ಮವಾಚಕಲುಪ್ತಾ, ವಾಚಕೋಪಮೇಯ ಲುಪ್ತಾ, ಉಪಮಾನಲುಪ್ತಾ, ವಾಚಕೋಪಮಾನಲುಪ್ತಾ, ಧರ್ಮೋಪಮಾನಲುಪ್ತಾ, ಧರ್ಮೋಪಮಾನವಾಚಕಲುಪ್ತಾ ಇತಿ, ತತ್ರ ಉಪಮಾನಲೋಪರಹಿತಾಶ್ಚತ್ವಾರೋ ಭೇದಾಸ್ತಡಿದ್ಗೌರೀತ್ಯಾದಿ ಶ್ಲೋಕೇನ ಪ್ರದರ್ಶಿತಾಃ. ತದ್ವಂತೋ ಭೇದಾ ಉತ್ತರ ಶ್ಲೋಕೇನ ಪ್ರದರ್ಶಿತಾಃ ತತ್ರ ತಡಿದ್ಗೌರೀತ್ಯತ್ರ ವಾಚಕಲೋಪಸ್ತಡಿದಿವ ಗೌರೀ ತ್ಯರ್ಥೇ " ಉಪಮಾನಾನಿ ಸಾಮಾನ್ಯವಚನೈಃ " ಇತಿ ಸಮಾಸವಿಧಾಯಕಶಾಸ್ತ್ರ ಕೃತಃ, ಇಂದುತುಲ್ಯಾಸ್ಯೇತ್ಯತ್ರ ಧರ್ಮಲೋಪಃ, ಸ ತು ಐಚ್ಛಿಕಃ ; ನ ಶಾಸ್ತ್ರಕೃತಃ

ಕಾಂತ್ಯಾ ಇಂದುತುಲ್ಯಾಸ್ಯೇತ್ಯಪಿ ವಕ್ತುಂ ಶಕ್ಯತ್ವಾತ್. ಕರ್ಪೂರಂತೀತ್ಯತ್ರ ಧರ್ಮ ವಾಚಕಲೋಪಃ ಕರ್ಪೂರಮಿವಾಚರಂತೀತ್ಯರ್ಥೇ ವಿಹಿತಸ್ಯ ಕರ್ಪೂರವದಾನಂದಾತ್ಮಕಾ ಚಾರಾರ್ಥಸ್ಯ ಕ್ವಿಪಃ ಇವಶಬ್ದೇನ ಸಹ ಲೋಪಾತ್. ಅತ್ರ ಧರ್ಮಲೋಪ ಐಚ್ಛಿಕಃ ನಯನಯೋರಾನಂದಾತ್ಮಕತಯಾ ಕರ್ಪೂರಂತೀತಿ ತದುಪಾದಾನಸ್ಯಾಪಿ ಸಂಭವಾತ್, ಕಾಂತ್ಯಾ ಸ್ಮರವಧೂಯಂತೀತ್ಯತ್ರ ವಾಚಕೋಪಮೇಯಲೋಪಃ. ಅತ್ರ ಕಾಂತ್ಯೇತಿ ವಿಶೇಷಣಸಾಮರ್ಥ್ಯಾತ್ ಸ್ವಾತ್ಮಾನಂ ಕಾಮವಧೂಮಿವಾಚರಂತೀತ್ಯರ್ಥಸ್ಯ ಗಮ್ಯ ಮಾನತಯಾ ಸ್ವಾತ್ಮನ ಉಪಮೇಯಸ್ಯ ಸಹ ಉಪಮಾವಾಚಕೇನ ಅನುಪಾದಾ ನಾತ್ ಸ ತ್ವೈಚ್ಛಿಕಃ, ಸ್ವಾತ್ಮಾನಂ ಸ್ಮರವಧೂಯಂತೀತ್ಯುಪಮೇಯೋಪಾದಾನಸ್ಯಾಪಿ ಸಂಭವಾತ್.

ಉಪಮೇಯ, ಉಪಮಾನ, ಸಾಧಾರಣಧರ್ಮ, ಸಾದೃಶ್ಯ ಈ ನಾಲ್ಕರಲ್ಲಿ ಒಂದನ್ನಾಗಲೀ, ಎರಡನ್ನಾಗಲೀ, ಮೂರನ್ನಾಗಲಿ ಶಬ್ದದಿಂದ ತಿಳಿಸದೇ ಇದ್ದಲ್ಲಿ ಅಲ್ಲಿರುವ ಉಪಮೆಯು ಲುಪ್ತೋಪಮೆ ಎನಿಸುತ್ತದೆ. ಇದು ಎಂಟು ಬಗೆಯಾ ಗುತ್ತದೆ. ಸಾದೃಶ್ಯವನ್ನು ತಿಳಿಸುವ ಪದವು ಒಂದೆಡೆ ಲೋಪವಾಗಿರುತ್ತದೆ. ಎರಡನೆಯ ಬಗೆಯಲ್ಲಿ ಸಾಧಾರಣಧರ್ಮವೂ, ಮೂರನೆಯ ಬಗೆಯಲ್ಲಿ ಧರ್ಮ ವಾಚಕಗಳೆರಡೂ. ನಾಲ್ಕನೆಯ ಬಗೆಯಲ್ಲಿ ವಾಚಕ ಉಪಮೇಯಗಳೆರಡೂ ಲುಪ್ತ ವಾಗುತ್ತವೆ, ಐದನೆಯ ಬಗೆಯಲ್ಲಿ ಉಪಮಾನವೂ, ಆರನೆಯ ಬಗೆಯಲ್ಲಿ ವಾಚಕ ಮತ್ತು ಉಪಮಾನಗಳೆರಡೂ, ಏಳನೆಯ ಬಗೆಯಲ್ಲಿ ಸಾಧಾರಣಧರ್ಮ. ಮತ್ತು ಉಪಮಾನಗಳೆರಡೂ, ಎಂಟನೆಯ ಬಗೆಯಲ್ಲಿ ಧರ್ಮ, ಉಪಮಾನ, ವಾಚಕ ಈ ಮೂರೂ ಲುಪ್ತವಾಗಿರುತ್ತವೆ. ಇವೆಂಟರಲ್ಲಿ ಉಪಮಾನಲೋಪವಿಲ್ಲದ ನಾಲ್ಕು ಬಗೆಗಳನ್ನು ತಡಿದ್ಗೌರೀ, ಇಂದುತುಲ್ಯಾಸ್ಯಾ, ಕರ್ಪೂರಂತೀ, ಕಾಂತ್ಯಾ ಸ್ಮರ ವಧೂಯಂತೀ ಎಂಬಲ್ಲಿ ತಿಳಿಸಿದೆ. ಕಾಕತಾಲೀಯಂ ಎಂಬಲ್ಲಿ ಉಪಮಾನಲೋಪ ವುಳ್ಳ ನಾಲ್ಕು ಬಗೆಗಳನ್ನು ತಿಳಿಸಲಾಗಿದೆ, ತಡಿದ್ಗೌರೀ ಎಂಬ ಸಮಾಸದಲ್ಲಿ ಸಾದೃಶ್ಯವನ್ನು ತಿಳಿಸುವ ಇವ ಎಂಬ ಪದವು ಲೋಪವಾಗಿದೆ. ತಡಿದಿವ ಗೌರೀ (ಕೃಶಾಂಗಿಯು ಮಿಂಚಿನಂತೆ ಬೆಳ್ಳಗಿರುವಳು) ಎಂಬುದು ವಿಗ್ರಹವಾಕ್ಯ. ತಡಿತ್ ಪದಕ್ಕೆ ಗೌರೀಪದದೊಡನೆ ಸಮಾಸವಾಗಿ ಇವ ಎಂಬ ಪದವು ಲೋಪವಾಗಿದೆ, ಉಪಮಾನವನ್ನು ತಿಳಿಸುವ ಪದಗಳಿಗೆ ಸಾಧಾರಣಧರ್ಮವನ್ನೊಳಗೊಂಡ ಉಪ ಮೇಯ ಪದಗಳೊಡನೆ ಸಮಾಸವನ್ನು "ಉಪಮಾನಾನಿ ಸಾಮಾನ್ಯವಚನೈಃ" ಎಂಬ ಪಾಣಿನಿಸೂತ್ರವು ವಿಧಿಸಿದೆ. ಇಲ್ಲಿ ತಡಿತ್ ಎಂಬುದು ಉಪಮಾನವನ್ನು ತಿಳಿಸುವ ಪದ. ಗೌರೀ ಎಂಬುದು ಗೌರತ್ವ (ಬಿಳುಪು) ಎಂಬ ಸಾಧಾರಣಧರ್ಮ ವನ್ನೊಳಗೊಂಡ ಉಪಮೇಯವನ್ನು ತಿಳಿಸುವ ಪದ. ಇವೆರಡಕ್ಕೂ ಸಮಾಸವಾಗಿ ಸಮಾಸದಿಂದಲೇ ಮಿಂಚಿಗೂ ಕೃಶಾಂಗಿಗೂ ಬಿಳುಪೆಂಬ ಸಾಧಾರಣಧರ್ಮದ

ಮೂಲಕ ಸಾದೃಶ್ಯವು ತೋರುವಾಗ ಅದನ್ನು ತಿಳಿಸುವ ಪ್ರತ್ಯೇಕವಾದ ಪದವು ಬೇಕಾಗುವುದಿಲ್ಲ. ಆದ್ದರಿಂದ ಇಲ್ಲಿ ವಾಚಕಲೋಪವು ಪಾಣಿನಿಯ ಸೂತ್ರದಿಂದ ಸಂಭವಿಸಿದೆ. "ಇಂದುತುಲ್ಯಾಸ್ಯಾ ಇಂದುನಾ ತುಲ್ಯಂ ಆಸ್ಯಂ ಯಸ್ಯಾಃ ಸಾ" ಎಂಬಲ್ಲಿ ಚಂದ್ರನಿಗೂ ಮುಖಕ್ಕೂ ಸಮಾನವಾಗಿ ಅನ್ವಯಿಸುವ ಸಾಧಾರಣಧರ್ಮವಿಲ್ಲ. ಆದರೆ ಕಾಂತ್ಯಾ ಇಂದುತುಲ್ಯಾಸ್ಯಾ (ಕಾಂತಿಯಿಂದ ಚಂದ್ರನಿಗೆ ಸದೃಶ್ಯವಾದ ಮುಖವುಳ್ಳವಳು) ಎಂದು ಇಲ್ಲಿ ಹೇಳಲಿಚ್ಛಿಸಿದರೂ ಆಗಬಹುದು. ಆದ್ದರಿಂದ ಇಲ್ಲಿ ಧರ್ಮಲೋಪವು ಹೇಳುವವನ ಇಚ್ಛೆಯಂತೆ ಸಂಭವಿಸುತ್ತದೆ. ಇದಕ್ಕೆ ಶಾಸ್ತ್ರದ ಯಾವ ಆಧಾರವೂ ಇಲ್ಲ. ಕರ್ಪೂರಂತೀ—ಕರ್ಪೂರ ಇವ ಆಚರಂತೀ ಎಂಬಲ್ಲಿ ಉಪಮಾನ ಉಪಮೇಯಗಳೆರಡೂ ಇದ್ದು ಸಾಧಾರಣಧರ್ಮವೂ ವಾಚಕವೂ ಲೋಪವಾಗಿವೆ. ನನ್ನ ಕಣ್ಣುಗಳಿಗೆ ಕರ್ಪೂರದಂತೆ ಇಂಪಾಗಿರುವಳು ಎಂದು ಇಲ್ಲಿ ಹೇಳಿದ್ದರಿಂದ ಆನಂದಪಡಿಸುವಿಕೆ ಎಂಬ ಅರ್ಥದಲ್ಲಿ ಕ್ವಿಪ್ ಪ್ರತ್ಯಯವು ಬಂದು ಅದು ಇವಪದದೊಡನೆ ಲೋಪವಾಗಿದೆ. ಇಲ್ಲಿ ಧರ್ಮಲೋಪವು ವೈಯಕ್ತಿಕ ಇಚ್ಛೆಯಿಂದ ಸಂಭವಿಸುತ್ತದೆ. "ಕಣ್ಣುಗಳಿಗೆ ಸಂತೋಷಪಡಿಸವುದರಿಂದ ಈಕೆ ಕರ್ಪೂರದಂತಿರುವಳು" ಎಂದು ಇಲ್ಲಿ ಹೇಳಿದರೆ ಸಾಧಾರಣಧರ್ಮವನ್ನು ತಿಳಿಸಿದಂತಾಗುವುದು. "ಕಾಂತ್ಯಾ ಸ್ಮರವಧೂಯಂತೀ" ಕಾಂತಿಯಿಂದ ರತಿಯಂತೆ ಶೋಭಿಸುವಳು ಎಂಬಲ್ಲಿ ಕಾಂತಿ ಎಂಬ ಸಾಧಾರಣಧರ್ಮವೂ. ರತಿ ಎಂಬ ಉಪಮಾನವೂ ಇದ್ದು ಉಪಮೇಯವೂ ವಾಚಕವೂ ಲುಪ್ತವಾಗಿವೆ. ಇಲ್ಲಿ "ಕಾಂತ್ಯಾ" ಎಂಬ ವಿಶೇಷಣದ ಬಲದಿಂದ ತನ್ನನ್ನು ರತಿ ಎಂದು ಆಕೆ ತಿಳಿಯುವಳು ಎಂಬ ಅರ್ಥವು ತೋರುವ ಪ್ರಯುಕ್ತ ಉಪಮೇಯವೆನಿಸಿದ ತಾನು ಎಂಬುದನ್ನೂ. ಇವಪದವನ್ನೂ ಇಲ್ಲಿ ಹೇಳಿಲ್ಲವಾದ್ದರಿಂದ ವಾಚಕೋಪಮೇಯಲೋಪವು ವೈಯಕ್ತಿಕ ಇಚ್ಛೆಯಿಂದ ಸಂಭವಿಸುತ್ತದೆ; "ತನ್ನನ್ನು ರತಿಯಂತೆ ಭಾವಿಸುವಳು" ಎಂದು ಇಲ್ಲಿ ಹೇಳುವುದಾದರೆ ಉಪಮೇಯವನ್ನು ತಿಳಿಸಿದಂತಾಗುವುದು.

ಕಾಕತಾಲೀಯಮಿತ್ಯತ್ರ ಕಾಕತಾಶಬ್ದೌ ವೃತ್ತಿವಿಷಯೇ ಕಾಕತಾಲಸಮವೇತ ಕ್ರಿಯಾವರ್ತಿನೌ. ತೇನ ಕಾಕಾಗಮನಮಿವ ತಾಳಪತನಮಿವ ಕಾಕತಾಳಂ ಇತಿ ಇವಾರ್ಥೇ 'ಸಮಾಸಾಚ್ಚ ತದ್ವಿಷಯಾತ್' ಇತಿ ಜ್ಞಾಪಕಾತ್ಸಮಾಸಃ ಉಭಯತ್ರ ಉಪಮೇಯಂ ಸ್ವಸ್ಯ ಕ್ವಚಿದ್ಗಮನಂ ತತ್ರೈವ ರಹಸಿ ತನ್ವ್ಯಾಃ ಅವಸ್ಥಾನಂ ಚ ತೇನ ಸ್ವಸ್ಯ ತಸ್ಯಾಶ್ಚ ಸಮಾಗಮಃ ಕಾಕತಾಳಸಮಾಗಮಸದೃಶಃ ಇತಿ ಫಲತಿ. ತತಃ ಕಾಕ ತಾಳಮಿವ ಕಾಕತಾಲೀಯಂ ಇತಿ ದ್ವಿತೀಯಸ್ಮಿನ್ ಇವಾರ್ಥೇ 'ಸಮಾಸಾಚ್ಚ ತದ್ವಿಷಯಾತ್' ಇತಿ ಸೂತ್ರೇಣ "ಇವೇ ಪ್ರತಿಕೃತೌ" ಇತ್ಯಧಿಕಾರಸ್ಥೇನ ಛಪ್ರತ್ಯಯಃ. ತಥಾ ಚ ಪತನದಳಿತಂ ತಾಳಫಲಂ ಯಥಾ ಕಾಕೇನೋಪಭುಕ್ತಂ ಏವಂ ರಹೋದರ್ಶನ

ಕ್ಷುಭಿತ ಹೃದಯಾ ತನ್ವೀ ಸ್ವೇನೋಪಭುಕ್ತೇತಿ ತದರ್ಥಃ, ತತಶ್ಚಾತ್ರ ಕಾಕಾಗಮನ ತಾಳಪತನಸಮಾಗಮರೂಪಸ್ಯ ಕಾಕತಾಳಫಲೋಪಭೋಗರೂಪಸ್ಯ ಚೋಪಮಾನಸ್ಯ ಅನುಪಾದಾನಾತ್ ಪ್ರತ್ಯಯಾರ್ಥೋಪಮಾಯಾಂ ಉಪಮಾನಲೋಪಃ. ಸರ್ವೋಽ ಪ್ಯಯಂ ಲೋಪಃ ಛಪ್ರತ್ಯಯವಿಧಾಯಕಶಾಸ್ತ್ರಕೃತಃ, ಅವಿತರ್ಕತಸಂಭವಂ ಇತಿ ಸಾಧಾರಣಧರ್ಮಸ್ಯ ಅನುಪಾದಾನೇ ಪ್ರತ್ಯಯಾರ್ಥೋಪಮಾಯಾಂ ಧರ್ಮೋಪ ಮಾನವಾಚಕಲೋಪ ಇತಿ ಸೂಕ್ಷ್ಮಯಾ ದೃಷ್ಟ್ಯಾ ಅವಧಾರಿತವ್ಯಮ್. ಏತೇಷಾಂ ಉದಾಹರಣಾಂತರಾಣಿ ವಿಸ್ತರಭಯಾನ್ನ ವಿಲಿಖ್ಯಂತೇ.

ಕಾಕತಾಳೀಯ ಎಂಬಲ್ಲಿ ಕಾಕ, ತಾಳ ಎಂಬ ಪದಗಳು ಸಮಾಸದಲ್ಲಿ ಕೂಡಿ ಕೊಂಡು ಕಾಗೆ ಮತ್ತು ತಾಳಫಲ ಇವೆರಡಕ್ಕೂ ಸಂಬಂಧಿಸಿದ ಕಾಕಾಗಮನ ತಾಳಪತನ ಎಂಬ ಕ್ರಿಯೆಗಳನ್ನು ತಿಳಿಸುತ್ತವೆ. ಕಾಗೆಯು ಮರದ ಕೆಳಗೆ ಬರುವ ವೇಳೆಗೆ ಸರಿಯಾಗಿ ತಾಳಫಲವು ಮರದಿಂದ ಕೆಳಗೆ ಬಿದ್ದುದರಿಂದ ಕಾಕ, ತಾಳ ಈ ಪದಗಳಿಗೆ ಕಾಕಾಗಮನಮಿವ ತಾಳಪತನಮಿವ ಕಾಕತಾಳಂ ಎಂದು ಇವಪದದ ಅರ್ಥದಲ್ಲಿ ಸಮಾಸ ವಾಗಲು ಅನುಕೂಲವಾಗಿದೆ. ಇವಾರ್ಥದಲ್ಲಿ ಕಾಕತಾಳಪದಕ್ಕೆ ಸಮಾಸವು ಬಂದಿರು ವುದರಿಂದ ಇದರ ಮೇಲೆ ಮತ್ತೊಂದು ಇವಪದದ ವಿವಕ್ಷೆಯಿದ್ದಲ್ಲಿ ಛಪ್ರತ್ಯ ಯವು ಬರುವುದು. ಕಾಗೆ ಮರದ ಕಡೆ ಬರುವಿಕೆ, ಅದೇ ಕಾಲದಲ್ಲಿ ಮರದಿಂದ ಹಣ್ಣು ಕೆಳಗೆ ಬೀಳುವಿಕೆ ಈ ಎರಡು ಅಂಶಗಳಲ್ಲೂ ಉಪಮೇಯವು ಲುಪ್ತವಾಗಿದೆ. ತಾನು ಎಲ್ಲಿಯೋ ಒಂದುಕಡೆ ಹೋಗುವುದು, ಅಲ್ಲಿಯೇ ರಹಸ್ಯವಾಗಿ ಪ್ರೇಯಸಿ ನೆಲೆಸಿರುವುದು. ಈ ಅಂಶವೇ ಇಲ್ಲಿ ಉಪಮೇಯವೆನಿಸಿದೆ. ಇದರಿಂದ ತನಗೂ ಆಕೆಗೂ ಉಂಟಾದ ಸಮಾಗಮವು ಕಾಕತಾಳಸಮಾಗಮಕ್ಕೆ ಸದೃಶವಾಗಿದೆ ಎಂಬ ಅರ್ಥವು ತೋರುತ್ತದೆ. ಇಲ್ಲಿಂದ ಮುಂದೆ ಕಾಕತಾಳಮಿವ ಕಾಕತಾಳೀಯಂ ಎಂದು ಕಾಕತಾಳಪದದ ಮೇಲೆ "ಇವೇ ಪ್ರತಿಕೃತೌ" ಎಂಬ ಅಧಿಕಾರಸೂತ್ರಕ್ಕೆ ಸಂಬಂಧಿ ಸಿದ "ಸಮಾಸಾಚ್ಚ ತದ್ವಿಷಯಾತ್" ಎಂಬ ಸೂತ್ರದಿಂದ ಛಪ್ರತ್ಯಯವು ಬಂದು ಅದಕ್ಕೆ ಈಯ ಎಂಬ ಆದೇಶವು ಬಂದು ಕಾಕತಾಳೀಯಂ ಎಂದು ರೂಪವಾಗಿದೆ. ಕಾಕಾಗಮನಮಿವ ತಾಳಪತನಮಿವ ಎಂದು ಕಾಕತಾಳಪದಗಳಿಗೆ ಮತ್ತೊಂದು ಇವಾರ್ಥ ದೊಡನೆ ಸಮಾಸವು ಜ್ಞಾಪಕಬಲದಿಂದ ಸಿದ್ಧಿಸುತ್ತದೆ. ಆಕಸ್ಮಿಕವಾಗಿ ಕಳಗೆ ಬಿದ್ದ ಫಲವನ್ನು ಕಾಗೆಯು ಭೋಗಿಸಿದಂತೆ ಅನಿರೀಕ್ಷಿತವಾಗಿ ಕಂಡದ್ದರಿಂದ ಮನಸ್ಸಿನಲ್ಲಿ ಗಾಬರಿಗೊಂಡ ಪ್ರೇಯಸಿಯನ್ನು ನಾಯಕನು ಅನುಭವಿಸಿದನೆಂಬ ಅರ್ಥವು ಇಲ್ಲಿ ತೋರುತ್ತದೆ. ಕಾಗೆ ಬರುವ ವೇಳೆಗೆ ತಾಳಫಲವು ಕೆಳಗೆ ಬಿದ್ದು ಇವೆರಡಕ್ಕೂ ಉಂಟಾದ ಸಮಾಗಮವೇ ಇಲ್ಲಿ ಉಪಮಾನವೆನಿಸಿದೆ. ಹಾಗೆಯೇ ತಾಳಫಲವನ್ನು ಕಾಗೆಯು ಭೋಗಿಸಿತೆಂಬುದೂ ಉಪಮಾನವೆನಿಸಿದೆ. ಇವೆರಡನ್ನೂ ಇಲ್ಲಿ ತಿಳಿಸದೆ

ಕಾಕ ತಾಳ ಎಂಬ ಪದಗಳೆರಡನ್ನು ಮಾತ್ರವೇ ತಿಳಿಸಿರುವುದರಿಂದ ಛಪ್ರತ್ಯಯದ ಅರ್ಥ ದಲ್ಲಿ ತೋರುವ ಉಪಮಾಲಂಕಾರದ ಪ್ರಕಾರ ಇದು ಉಪಮಾನಲುಪ್ತವೆನಿಸುತ್ತದೆ. ಆದಕ್ಕೆ ಮೊದಲು ಕಾಕತಾಳ ಪದಗಳಿಗೆ ಸಾದೃಶ್ಯವೆಂಬ ಅರ್ಥವನ್ನು ತಿಳಿಸುವ ಇವ ಪದದ ಅರ್ಥದಲ್ಲಿ ಸಮಾಸವಾಗಿದ್ದುದರಿಂದ ಆ ಸಮಾಸದಿಂದ ತೋರುವ ಉಪ ಮಾಲಂಕಾರದಲ್ಲಿ ವಾಚಕ ಮತ್ತು ಉಪಮಾನ ಇವೆರಡೂ ಲುಪ್ತವಾಗುತ್ತವೆ. ಈ ಲೋಪಗಳೆರಡೂ ಛಪ್ರತ್ಯಯವನ್ನು ವಿಧಿಸುವ ಪಾಣಿನಿಯ ಸೂತ್ರದಿಂದಲೇ ಸಂಭವಿಸುತ್ತವೆ. ಅವಿತರ್ಕಿತಸಂಭವಂ (ಆಕಸ್ಮಿಕವಾಗಿ ಒದಗುವಿಕೆ) ಎಂಬ ಸಾಧಾರಣಧರ್ಮವನ್ನು ನಾಯಕ ಪ್ರೇಯಸಿ ಇವರ ಸಮಾಗಮಕ್ಕೂ, ಕಾಗೆ ಬರುವ ವೇಳೆಗೆ ಸರಿಯಾಗಿ ಕೆಳಗೆ ಬಿದ್ದ ತಾಳಫಲದ ಭೋಗಕ್ಕೂ ಅನ್ವಯಿಸುವಂತೆ ಹೇಳದೆ ಇದ್ದಾಗ ಛಪ್ರತ್ಯಯದ ಅರ್ಥದಿಂದ ತೋರುವ ಉಪಮಾಲಂಕಾರದಲ್ಲಿ ಸಾಧಾರಣ ಧರ್ಮ ಉಪಮಾನ ಮತ್ತು ವಾಚಕ ಇವು ಮೂರೂ ಲೋಪವಾಗುತ್ತವೆ. ಪ್ರತ್ಯ ಯಾರ್ಥೋಪಮೆ ಇರುವ ಕಾಕತಾಳೀಯಂ ಎಂಬಲ್ಲಿ ಛಪ್ರತ್ಯಯವಿರುವುದರಿಂದ ವಾಚಕಲೋಪಕ್ಕೆ ಪ್ರಸಕ್ತಿಯಿಲ್ಲ. ಆದರೆ ಕಾಕತಾಳಂ ಎಂಬ ಸಮಾಸಾರ್ಥೋಪಮೆ ಯಲ್ಲಿ ಇವಶಬ್ದವಿಲ್ಲದ್ದರಿಂದ ಧರ್ಮ, ಉಪಮಾನಗಳ ಜೊತೆಗೆ ವಾಚಕವೂ ಲುಪ್ತ ವಾಗಿದೆ. ಇದೆಲ್ಲವನ್ನೂ ಸೂಕ್ಷ್ಮವಿಚಾರದಿಂದ ತಿಳಿಯಬೇಕು. ವಿಸ್ತಾರವಾದೀ ತೆಂಬ ಅಂಜಿಕೆಯಿಂದ ಇವೆಲ್ಲಕ್ಕೂ ಉದಾಹರಣಗಳನ್ನು ಇಲ್ಲಿ ಕೊಟ್ಟಿಲ್ಲ.

## ೨. ಅನನ್ವಯಾಲಂಕಾರ

ಉಪಮಾನೋಪಮೇಯತ್ವಂ ಯದೇಕಸ್ಯೈವ ವಸ್ತುನಃ ।
ಇಂದುರಿಂದುರಿವ ಶ್ರೀಮಾನಿತ್ಯಾದೌ ತದನನ್ವಯಃ ॥ ೧೦ ॥

ಏಕಸ್ಯೈವ ವಸ್ತುನಃ ಉಪಮಾನೋಪಮೇಯತ್ವವರ್ಣನಮನನ್ವಯಃ ವರ್ಣ್ಯ ಮಾನಮಪಿ ಸ್ವಸ್ಯ ಸ್ವೇನ ಸಾಧರ್ಮ್ಯಂ ನಾನ್ವೇತೀತಿ ವ್ಯುತ್ಪತ್ತೇಃ. ಅನನ್ವಯಿನೋಽ ಪ್ಯರ್ಥಸ್ಯಾಭಿಧಾನಂ ಸದೃಶಾಂತರವ್ಯವಚ್ಛೇದೇನ ಅನುಪಮತ್ವದ್ಯೋತನಾಯ. ಇಂದುರಿಂದುರಿವ ಶ್ರೀಮಾನಿತ್ಯುಕ್ತೇ ಶ್ರೀಮತ್ತ್ವೇನ ಚಂದ್ರಸ್ಯ ನಾನ್ಯಃ ಸದೃಶೋಽ ಸ್ತೀತಿ ಸದೃಶಾಂತರವ್ಯವಚ್ಛೇದೋ ಲಕ್ಷ್ಯತೇ. ತತಶ್ಚ ಸ್ವೇನಾಪಿ ಸಾದೃಶ್ಯಾಸಂಭ ವಾತ್ ಅನುಪಮೇಯತ್ವೇ ಪರ್ಯವಸಾನಮ್. ಯಥಾ ವಾ—

ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ ।
ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ ॥

ಪೂರ್ವೋದಾಹರಣೇ ಶ್ರೀಮತ್ತ್ವಸ್ಯ ಧರ್ಮಸ್ಯೋಪಾದಾನಮಾಸ್ತಿ ಇಹ ತು ಗಗನಾ ದಿಷು ವೈಪುಲ್ಯಾದೇರ್ಧರ್ಮಸ್ಯ ತನ್ನಾಸ್ತೀತಿ ವಿಶೇಷಃ.

ಒಂದೇ ವಸ್ತುವನ್ನು ಉಪಮಾನವೆಂದೂ, ಉಪಮೇಯವೆಂದೂ ವರ್ಣಿಸುವುದೇ ಅನನ್ವಯಾಲಂಕಾರವೆನಿಸುವುದು. ಉಪಮೇಯವನ್ನು ಉಪಮಾನದೊಡನೆ ಹೋಲಿಸುವ ಬದಲು ಅದನ್ನೇ ಉಪಮಾನವೆಂದು ಭಾವಿಸುವುದೇ ಅನನ್ವಯವೆನಿಸುವುದು. ಚಂದ್ರನು ಚಂದ್ರನಂತೆಯೇ ಕಾಂತಿಯುಳ್ಳವನು ಎಂಬಲ್ಲಿ ಚಂದ್ರನೇ ಉಪಮೇಯವೂ ಉಪಮಾನವೂ ಆಗಿರುವುದರಿಂದ ಈ ಬಗೆಯ ವರ್ಣನವು ಅನ್ವಯವೆನಿಸುವುದು. ತನಗೆ ತನ್ನೊಡನೆ ಸಾದೃಶ್ಯವನ್ನು ಹೀಗೆ ತಿಳಿಸಿದ್ದರೂ ಇದು ಯಥೋಚಿತವಾಗಿ ಅನ್ವಯಿಸದೆ ಇರುವುದರಿಂದ ಇದನ್ನು ಅನನ್ವಯವೆಂದು ಕರೆಯಲಾಗಿದೆ. ಹೀಗೆ ಹೊಂದಿಕೆಯಾಗದಿರುವ ಸಾದೃಶ್ಯವನ್ನು ಹೇಳಿ ಆಗುವ ಫಲವೇನೆಂದರೆ ಇದರಿಂದ ಉಪಮೇಯಕ್ಕೆ ಬೇರೊಂದು ಸದೃಶವಾದ ವಸ್ತುವೇ ಇಲ್ಲವೆಂದೂ, ಆದ್ದರಿಂದಲೇ ಅದಕ್ಕೆ ಎಲ್ಲಿಯೂ ಹೋಲಿಕೆಯೇ ಸಂಭವಿಸುವುದಿಲ್ಲವೆಂದೂ ತಿಳಿದುಬರುತ್ತದೆ. ಹೀಗೆ ಇಲ್ಲಿ ತನಗೆ ತನ್ನೊಡನೆಯೂ ಸಾದೃಶ್ಯವು ಸಂಭವಿಸದೆ ಇರುವ ಪ್ರಯುಕ್ತ ಎಲ್ಲಿಯೂ ಹೋಲಿಕೆಯೇ ದೊರಕದೆಂಬುದು ಸ್ಪಷ್ಟಪಡುತ್ತದೆ. ಹೀಗೆಯೇ "ಆಕಾಶವು ಆಕಾಶದಂತೆಯೇ ಇದೆ. ಸಮುದ್ರವು ಸಮುದ್ರಕ್ಕೆ ಸದೃಶವಾಗಿದೆ, ರಾಮರಾವಣರ ಯುದ್ಧವು ರಾಮರಾವಣರ ಯುದ್ಧದಂತೆಯೇ ಇದೆ!". ಇಲ್ಲಿಯೂ ಅನನ್ವಯವನ್ನು ಕಾಣಬಹುದು. ಹಿಂದಿನ ಉದಾಹರಣದಲ್ಲಿ "ಕಾಂತಿಯಿಂದ ಶೋಭಿಸುವಿಕೆ" ಎಂದು ಸಾಧಾರಣಧರ್ಮವನ್ನು ತಿಳಿಸಲಾಗಿದೆ. ಇಲ್ಲಿಯಾದರೋ ಆಕಾಶ, ಸಾಗರ, ಯುದ್ಧ ಇವುಗಳಲ್ಲಿ ವೈಶಾಲ್ಯ ಮೊದಲಾದ ಸಾಧಾರಣಧರ್ಮಗಳನ್ನು ಬಾಯಿಂದ ಹೇಳಿಲ್ಲ. ಇಷ್ಟೇ ಇವೆರಡು ಉದಾಹರಣಗಳಲ್ಲೂ ಇರುವ ವಿಶೇಷ.

## ೩. ಉಪಮೇಯೋಪಮಾಲಂಕಾರ

> ಪರ್ಯಾಯೇಣ ದ್ವಯೋಸ್ತಚ್ಚೇದುಪಮೇಯೋಪಮಾ ಮತಾ ।
> ಧರ್ಮೋಽರ್ಥ ಇವ ಪೂರ್ಣಶ್ರೀರರ್ಥೋ ಧರ್ಮ ಇವ ತ್ವಯಿ ॥ ೧೧ ॥

ದ್ವಯೋಃ ಪರ್ಯಾಯೇಣ ಉಪಮಾನೋಪಮೇಯತ್ವಕಲ್ಪನಂ ತೃತೀಯ ಸದೃಶವ್ಯವಚ್ಛೇದಾರ್ಥಮ್. ಧರ್ಮಾರ್ಥಯೋಃ ಕಸ್ಯ ಚಿತ್ಕೇನಚಿತ್ಸಾದೃಶ್ಯೇವರ್ಣಿತೇ ತಸ್ಯಾಪ್ಯನ್ಯೇನ ಸಾದೃಶ್ಯಂ ಅರ್ಥಸಿದ್ಧಮಪಿ ಮುಖತೋ ವರ್ಣ್ಯಮಾನಂ ತೃತೀಯಃ ಸದೃಶವ್ಯವ್ಯಚ್ಛೇದೇ ಫಲತಿ. ಯಥಾ ವಾ—

> ಖಮಿವ ಜಲಂ ಜಲಮಿವ ಖಂ ಹಂಸ ಇವ ಚಂದ್ರಶ್ಚಂದ್ರ ಇವ ಹಂಸಃ ।
> ಕುಮುದಾಕಾರಾಸ್ತಾರಾಸ್ತಾರಾಕಾರಾಣಿ ಕುಮುದಾನಿ ॥

ಪೂರ್ವತ್ರಪೂರ್ಣಶ್ರೀರಿತಿ ಧರ್ಮ ಉಪಾತ್ತಃ; ಇಹ ನಿರ್ಮಲತ್ವಾದಿಧರ್ಮೋ ನೋಪಾತ್ತ ಇತಿ ಭೇದಃ. ಉದಾಹರಣದ್ವಯೇಽಪಿ ಪ್ರಕೃತಯೋರುಪಮಾನೋಪಮೇಯತ್ವಮ್, ರಾಜ್ಞಿ ಧರ್ಮಾರ್ಥಸಮೃದ್ಧೇಃ ಶರದಿ ಗಗನಸಲಿಲಾದಿನೈರ್ಮಲ್ಯಸ್ಯ ಚ ವರ್ಣನೀಯತ್ವಾತ್. ಪ್ರಕೃತಾಪ್ರಕೃತಯೋರಪ್ಯೇಷಾ ಸಂಭವತಿ. ಯಥಾ —

ಗಿರಿರಿವ ಗಜರಾಜೋಽಯಂ ಗಜರಾಜ ಇವೋಚ್ಚೈರ್ವಿಭಾತಿ ಗಿರಿಃ ।
ನಿರ್ಝರ ಇವ ಮದಧಾರಾ ಮದಧಾರೇವಾಸ್ಯ ನಿರ್ಝರಃ ಸ್ರವತಿ ॥

ಎರಡು ವಸ್ತುಗಳಲ್ಲಿ ಒಂದಕ್ಕೆ ಮತ್ತೊಂದನ್ನು ಕ್ರಮವಾಗಿ ಉಪಮಾನವೆಂದೂ, ಉಪಮೇಯವೆಂದೂ ಭಾವಿಸುವುದೇ ಉಪಮೇಯೋಪಮೆ ಎನಿಸುತ್ತದೆ. ಹೀಗೆ ಹೇಳಿದ್ದರಿಂದ ಇವೆರಡರಲ್ಲಿ ಒಂದಕ್ಕೊಂದು ಉಪಮಾನವೆನಿಸುವ ಪ್ರಯುಕ್ತ ಇವಕ್ಕೆ ಸದೃಶವಾದ ಮೂರನೆಯ ವಸ್ತುವೇ ಎಲ್ಲಿಯೂ ಇಲ್ಲವೆಂಬ ಅಂಶವು ಸ್ಪಷ್ಟಪಡುತ್ತದೆ. "ಧರ್ಮವು ಅರ್ಥದಂತೆಯೂ, ಅರ್ಥವು ಧರ್ಮದಂತೆಯೂ ನಿನ್ನಲ್ಲಿ ಸಮೃದ್ಧಿಯಿಂದ ನೆಲಸಿವೆ" ಎಂಬ ಉದಾಹರಣದಲ್ಲಿ ಧರ್ಮಕ್ಕೆ ಅರ್ಥದೊಡನೆ ಸಾದೃಶ್ಯವನ್ನು ಹೇಳಿದ್ದರಿಂದಲೇ ಅರ್ಥಕ್ಕೆ ಧರ್ಮದೊಡನೆ ಸಾದೃಶ್ಯವು ತಾನಾಗಿಯೇ ಸಿದ್ಧಿಸುತ್ತದೆ. ಅವೆರಡರಲ್ಲಿಯೇ ಒಂದರೊಡನೆ ಮತ್ತೊಂದಕ್ಕೆ ಸಾದೃಶ್ಯವನ್ನು ಹೇಳಿದ್ದರಿಂದ ಮೂರನೆಯ ಸದೃಶವಸ್ತುವೇ ಇಲ್ಲವೆಂಬ ಅಂಶವು ತಿಳಿದುಬರುತ್ತದೆ. "ಆಕಾಶದಂತೆ ನೀರು ನೀರಿನಂತೆ ಆಕಾಶವೂ; ಹಂಸದಂತೆ ಚಂದ್ರನೂ ಚಂದ್ರನಂತೆ ಹಂಸವೂ; ಕನ್ನೈದಿಲೆಯಂತೆ ನಕ್ಷತ್ರಗಳೂ ನಕ್ಷತ್ರಗಳಂತೆ ಕನ್ನೈದಿಲೆಗಳೂ ಶೋಭಿಸುತ್ತಿವೆ." ಇಲ್ಲಿಯೂ ಉಪಮಾನಕ್ಕೆ ಉಪಮೇಯದೊಡನೆಯೇ ಹೋಲಿಕೆಯನ್ನು ಹೇಳಲಾಗಿದೆ. "ಆಕಾಶದಂತೆ ನೀರು, ನೀರಿನಂತೆ ಆಕಾಶ" ಎಂಬಲ್ಲಿ ಮೊದಲು ಉಪಮೇಯವೆನಿಸಿದ ನೀರೇ ಮತ್ತೆ ಆಕಾಶಕ್ಕೆ ಉಪಮಾನವೆನಿಸಿದೆ. ಹಿಂದಿನ ಉದಾಹರಣದಲ್ಲಿ "ಪೂರ್ಣಶ್ರೀಃ" ಎಂದು ಸಾಧಾರಣಧರ್ಮವನ್ನು ಕೊಡಲಾಗಿದೆ. ಇಲ್ಲಿ ನೀರು ಆಕಾಶಗಳೆರಡಕ್ಕೂ ಅನ್ವಯಿಸುವ ನೈರ್ಮಲ್ಯವೆಂಬ ಸಾಧಾರಣಧರ್ಮವನ್ನು ತಿಳಿಸಿಲ್ಲ. ಇದೇ ಇವೆರಡಕ್ಕೂ ಇರುವ ಭೇದ. ಈಗ ತಿಳಿಸಿರುವ ಎರಡು ಉದಾಹರಣಗಳಲ್ಲೂ ಪ್ರಕೃತ ಸಂದರ್ಭಕ್ಕೆ ಸಂಬಂಧಿಸಿದ ವಿಷಯಗಳನ್ನೇ ಉಪಮಾನವೆಂದೂ, ಉಪಮೇಯವೆಂದೂ ಭಾವಿಸಿದೆ. ರಾಜನಲ್ಲಿ ಧರ್ಮಾರ್ಥಗಳ ಸಮೃದ್ಧಿಯನ್ನೂ, ಶರತ್ಕಾಲದಲ್ಲಿ ಆಕಾಶ, ನೀರು, ಹಂಸ, ಚಂದ್ರ, ಕನ್ನೈದಿಲೆ, ನಕ್ಷತ್ರ ಇವುಗಳ ನೈರ್ಮಲ್ಯವನ್ನೂ ಇಲ್ಲಿ ವರ್ಣಿಸಿರುವುದರಿಂದ ಇವೆರಡೂ ಪ್ರಕೃತವಿಷಯಗಳೇ ಆಗಿವೆ. ಹೀಗೆಯೇ ಒಂದು ಪ್ರಕೃತ ವಿಷಯಕ್ಕೂ ಮತ್ತೊಂದು ಅಪ್ರಕೃತವಾದ ವಿಷಯಕ್ಕೂ ಉಪಮಾನೋಪಮೇಯಭಾವವನ್ನು ಕಲ್ಪಿಸಿದರೆ ಅಲ್ಲಿಯೂ ಇದೇ ಅಲಂಕಾರವಿರುತ್ತದೆ.

"ಬೆಟ್ಟದಂತೆ ಆನೆಯೂ, ಆನೆಯಂತೆ ಬೆಟ್ಟವೂ ಶೋಭಿಸುತ್ತಲಿವೆ. ಆನೆಯ ಮದೋದಕವು ಪ್ರವಾಹದಂತೆಯೂ, ಮದೋದಕದಂತೆ ಪ್ರವಾಹವೂ ಹರಿಯುತ್ತಲಿವೆ." ಇಲ್ಲಿ ಬೆಟ್ಟಕ್ಕೂ ಆನೆಗೂ, ಆನೆಗೂ ಬೆಟ್ಟಕ್ಕೂ ಹಾಗೆಯೇ ಮದಧಾರೆಗೂ ಪ್ರವಾಹಕ್ಕೂ, ಪ್ರವಾಹಕ್ಕೂ ಮದಧಾರೆಗೂ ಪರಸ್ಪರವಾಗಿ ಉಪಮಾನೋಪಮೇಯಭಾವವನ್ನು ಕಲ್ಪಿಸಲಾಗಿದೆ. ಇಲ್ಲಿ ಆನೆ ಮತ್ತು ಮದೋದಕ ಇವು ಪ್ರಕೃತಸಂದರ್ಭಕ್ಕನುಗುಣವಾಗಿವೆ ; ಬೆಟ್ಟ ಮತ್ತು ಪ್ರವಾಹ ಇವೆರಡೂ ಅಪ್ರಕೃತವೆನಿಸಿವೆ.

## ೪. ಪ್ರತೀಪಾಲಂಕಾರ

ಪ್ರತೀಪಮುಪಮಾನಸ್ಯೋಪಮೇಯತ್ವಕಲ್ಪನಮ್ ।
ತ್ವಲ್ಲೋಚನಸಮಂ ಪದ್ಮಂ ತ್ವದ್ವಕ್ತ್ರಸದೃಶೋ ವಿಧುಃ ॥

ಪ್ರಸಿದ್ಧೋಪಮಾನೋಪಮೇಯಭಾವಪ್ರಾತಿಲೋಮ್ಯಾತ್ ಪ್ರತೀಪಮ್ಯಥಾ ವಾ—

ಯಾವತ್ತ್ವನ್ನೇತ್ರಸಮಾನಕಾಂತಿ ಸಲಿಲೇ ಮಗ್ನಂ ತದಿಂದೀವರಂ
ಮೇಘೈರಂತರಿತಃ ಪ್ರಿಯೇ ತವ ಮುಖಚ್ಛಾಯಾನುಕಾರೀ ಶಶೀ ।
ಯೇಽಪಿ ತ್ವದ್ಗಮನಾನುಸಾರಿಗತಯಸ್ತೇ ರಾಜಹಂಸಾ ಗತಾಃ ।
ತತ್ಸಾದೃಶ್ಯವಿನೋದಮಾತ್ರಮಪಿ ಮೇ ದೈವೇನ ನ ಕ್ಷಮ್ಯತೇ ॥

ಉಪಮಾನವನ್ನು ಉಪಮೇಯವೆಂದು ವಿಪರೀತವಾಗಿ ಭಾವಿಸುವುದೇ ಪ್ರತೀಪವೆನಿಸುವುದು. "ಕಮಲವು ನಿನ್ನ ಕಣ್ಣುಗಳಿಗೆ ಸಮವೆನಿಸಿದೆ. ಚಂದ್ರನು ನಿನ್ನ ಮುಖಕ್ಕೆ ಸದೃಶನಾಗಿರುವನು." ಈ ಉದಾಹರಣದಲ್ಲಿ ಉಪಮಾನವೆಂದು ಪ್ರಸಿದ್ಧವಾದ ಕಮಲ ಮತ್ತು ಚಂದ್ರಗಳನ್ನು ಕಣ್ಣು ಮತ್ತು ಮುಖಗಳಿಗೆ ಉಪಮೇಯಗಳೆಂದು ತಿಳಿಸಿದೆ. ಇದು ಸಹಜವಾದ ಉಪಮಾನೋಪಮೇಯಭಾವಕ್ಕೆ ವಿಪರೀತವಾಗಿದೆ. "ಕಮಲಕ್ಕೆ ಸದೃಶವಾದದ್ದು ನಿನ್ನ ಕಣ್ಣು" ಎಂದು ಹೇಳುವ ಬದಲು "ನಿನ್ನ ಕಣ್ಣಿಗೆ ಸದೃಶವಾದದ್ದು ಕಮಲ" ಎಂದು ಹೇಳಿದೆ. ಹಾಗೆಯೇ ಪ್ರೇಯಸಿ ! ನಿನ್ನ ಕಣ್ಣುಗಳನ್ನು ಹೋಲುವಷ್ಟು ಕಾಂತಿಯುಳ್ಳ ಆ ಕನ್ನೈದಿಲೆಯೂ ನೀರಿನಲ್ಲಿ ಮುಳುಗಿಹೋಯಿತು. ನಿನ್ನ ಮುಖದ ಕಾಂತಿಯನ್ನು ಹೋಲುವ ಆ ಚಂದ್ರನು ಮೇಘಗಳಿಂದ ಮುಚ್ಚಿಕೊಂಡಿರುವನು. ನಿನ್ನ ಕಾಲ್ನಡಗೆಯಂತೆ ನಡೆಯುವ ರಾಜಹಂಸಪಕ್ಷಿಗಳೂ ಬೇರೆ ಕಡೆಗೆ ಹೋಗಿವೆ. ಇವೆಲ್ಲವೂ ನನ್ನ ಕಣ್ಣಿಗೆ ಬಿದ್ದಿದ್ದರೆ ನಿನ್ನ ಹೋಲಿಕೆಯನ್ನಾದರೂ ಕಂಡು ಸಂತೋಷಗೊಳ್ಳುತ್ತಿದ್ದೆನು. ಆದರೆ ನನ್ನ ದುರದೃಷ್ಟವು ಇವೊಂದನ್ನೂ ನನ್ನ ಎದುರಿಗೆ ಇಡುವಷ್ಟು ಸಹನೆಯಿಲ್ಲದ್ದಾಗಿದೆ."

ಇಲ್ಲಿ ಉಪಮಾನಗಳೆಂದು ಪ್ರಸಿದ್ಧವಾದ ಕನ್ನೈದಿಲೆ, ಚಂದ್ರ, ರಾಜಹಂಸ ಇವನ್ನು ಉಪಮೇಯಗಳಾಗಿಯೂ, ನೇತ್ರ, ಮುಖ, ಪ್ರಿಯೆಯ ಗಮನ ಇವನ್ನು ಉಪಮಾನಗಳನ್ನಾಗಿಯೂ ತಿಳಿಸಿದೆ.

ಅನ್ಯೋಪಮೇಯಲಾಭೇನ ವರ್ಣ್ಯಸ್ಯಾನಾದರಶ್ಚ ತತ್ ।
ಅಲಂ ಗರ್ವೇಣ ತೇ ವಕ್ತ್ರ ಕಾಂತ್ಯಾ ಚಂದ್ರೋಽಪಿ ತಾದೃಶಃ ॥ ೧೩ ॥

ಅತ್ಯುತ್ಕೃಷ್ಟಗುಣತಯಾ ವರ್ಣ್ಯಮಾನಸ್ಯ ಅನ್ಯತ್ರ ಸ್ವಸಾದೃಶ್ಯಮಸಹಮಾನಸ್ಯ ಉಪಮೇಯಂ ಕಿಂಚಿತ್ಪ್ರದರ್ಶ್ಯ ತಾವತಾ ತಸ್ಯ ತಿರಸ್ಕಾರೋ ದ್ವಿತೀಯಂ ಪ್ರತೀಪಂ ಪೂರ್ವಸ್ಮಾದಪಿ ವಿಚ್ಛಿತ್ತಿವಿಶೇಷಶಾಲಿ. ಯಥಾ ವಾ —

ಗರ್ವಮಸಂವಾಹ್ಯಮಿಮಂ ಲೋಚನಯುಗಲೇನ ಕಿಂ ವಹಸಿ ಭದ್ರೇ ।
ಸಂತೀದೃಶಾನಿ ದಿಶಿ ದಿಶಿ ಸರಸ್ಸು ನನು ನೀಲನಲಿನಾನಿ ॥

ಪ್ರಕೃತ ವಿಷಯದಲ್ಲಿ ಹೆಚ್ಚು ಗುಣವಿರುವುದರಿಂದಲೂ, ಬೇರೊಂದು ಕಡೆ ಅದು ತನ್ನ ಸಾದೃಶ್ಯವನ್ನು ಸಹಿಸದೇ ಇರುವುದರಿಂದಲೂ, ಅದಕ್ಕೆ ಬೇರೊಂದು ಉಪಮೇಯವನ್ನು ತೋರಿಸಿ ಅಷ್ಟರಿಂದಲೇ ಅದನ್ನು ತಿರಸ್ಕರಿಸುವುದೇ ಪ್ರತೀಪದ ಎರಡನೆಯ ಬಗೆ ಎನಿಸಿದೆ. "ಎಲೈ ಮುಖವೇ ! ನಿನ್ನ ಗರ್ವವನ್ನು ಬಿಡು. ಕಾಂತಿಯಲ್ಲಿ ಚಂದ್ರನೂ ನಿನ್ನಂತಯೇ ಇರುವನು."

"ಎಲೈ ಮಂಗಳಾಗಿ ! ಹೊರಲಿಕ್ಕಾಗದಿರುವ ಈ ಗರ್ವವನ್ನು ಎರಡು ಕಣ್ಣುಗಳಿಂದಲೂ ಏಕೆ ಹೊತ್ತಿರುವೆ ? ಈ ಕಣ್ಣುಗಳಂತಹ ಕನ್ನೈದಿಲೆಗಳು ದಿಕ್ಕು ದಿಕ್ಕುಗಳಲ್ಲೂ ಸರೋವರದ ತುಂಬ ನೆಲಸಿವೆ." ಇಲ್ಲಿ ಕಣ್ಣುಗಳೆರಡೂ ತಾವೇ ಶ್ರೇಷ್ಠವಸ್ತುಗಳೆಂದು ಗರ್ವಪಡುತ್ತಿದ್ದುದರಿಂದ ಅದಕ್ಕೆ ಪ್ರಸಿದ್ಧೋಪಮಾನವೆನಿಸಿದ ಕನ್ನೈದಿಲೆಗಳನ್ನು ಉಪಮೇಯವೆಂದು ತೋರಿಸಿ ಅಷ್ಟರಿಂದಲೇ ಕಣ್ಣುಗಳನ್ನು ತಿರಸ್ಕರಿಸಲಾಗಿದೆ. ಹಿಂದಿನ ಬಗೆಯಲ್ಲಿ ಉಪಮಾನವನ್ನು ಉಪಮೇಯವೆಂದು ಕಲ್ಪಿಸಿದರೆ ಇಲ್ಲಿ ಉಪಮೇಯಕ್ಕೆ ಲೋಕಪ್ರಸಿದ್ಧವಾದ ಉಪಮಾನ ಒಂದನ್ನು ಉಪಮೇಯವನ್ನಾಗಿ ತೋರಿಸಿ ಅಷ್ಟರಿಂದಲೇ ಪ್ರಕೃತೋಪಮೇಯವನ್ನು ತಿರಸ್ಕರಿಸಲಾಗಿದೆ. ಉಪಮಾನವನ್ನು ಉಪಮೇಯದ ಅಂತಸ್ತಿಗೆ ಇಳಿಸುವುದೇ ಮೊದಲನೆಯ ಪ್ರತೀಪವೆನಿಸಿದರೆ ಪ್ರಕೃತೋಪಮೇಯಕ್ಕೆ ಬೇರೊಂದು ಉಪಮಾನವನ್ನು ಉಪಮೇಯವನ್ನಾಗಿ ತೋರಿಸಿ ಅಷ್ಟರಿಂದಲೇ ಪ್ರಕೃತೋಪಮೇಯವನ್ನು ತಿರಸ್ಕರಿಸುವುದೇ ಎರಡನೆಯ ಬಗೆಯಾಗುವುದು. ಆದ್ದರಿಂದ ಇವೆರಡರಲ್ಲೂ ಒಂದೊಂದು ಬಗೆಯ ಚಮತ್ಕಾರವಿದೆ.

ವರ್ಣ್ಯೋಪಮೇಯಲಾಭೇನ ತಥಾನ್ಯಸ್ಯಾಪ್ಯನಾದರಃ ।

ಕಃ ಶೌರ್ಯದರ್ಪಸ್ತೇ ಮೃತ್ಯೋ ತ್ವತ್ತುಲ್ಯಾಃ ಸಂತಿ ಹಿ ಸ್ತ್ರಿಯಃ ॥ ೧೪ ॥

ಅತ್ಯುತ್ಕೃಷ್ಟಗುಣತಯಾ ಕ್ವಚಿದಪ್ಯುಪಮಾನಭಾವಮಸಹಮಾನಸ್ಯ ಅವರ್ಣ್ಯಸ್ಯ ವರ್ಣ್ಯಮುಪಮೇಯಂ ಪರಿಕಲ್ಪ್ಯ ತಾವತಾ ತಸ್ಯ ತಿರಸ್ಕಾರಃ ಪೂರ್ವಪ್ರತೀಪವೈಪರೀತ್ಯೇನ ತೃತೀಯಂ ಪ್ರತೀಪಮ್. ಯಥಾ ವಾ—

ಅಹಮೇವ ಗುರುಃ ಸುದಾರುಣಾನಾಮಿತಿ ಹಾಲಾಹಲ ಮಾ ಸ್ಮ ತಾತ ದೃಪ್ಯಃ ।
ನನು ಸಂತಿ ಭವಾದೃಶಾನಿ ಭೂಯೋಭುವನೇಽಸ್ಮಿನ್ವಚನಾನಿ ದುರ್ಜನಾನಾಮ್ ॥

ಹೆಚ್ಚಿನ ಗುಣವಿರುವ ಪ್ರಯುಕ್ತ ಎಲ್ಲಿಯೂ ಹೋಲಿಕೆಯನ್ನೇ ಸಹಿಸದಿರುವ ಅಪ್ರಕೃತವಾದ ಉಪಮೇಯ ಒಂದಕ್ಕೆ ಪ್ರಕೃತಸಂದರ್ಭಕ್ಕನುಗುಣವಾದ ಉಪಮೇಯ ಒಂದನ್ನು ಕಲ್ಪಿಸಿ ಅಷ್ಟರಿಂದಲೇ ಅದನ್ನು ತಿರಸ್ಕರಿಸುವುದು ಪ್ರತೀಪದ ಮೂರನೆಯ ಬಗೆ ಎನಿಸಿದೆ. ಹಿಂದಿನದರಲ್ಲಿ ಲೋಕಪ್ರಸಿದ್ಧವಾದ ಉಪಮೇಯಕ್ಕೆ ಬೇರೊಂದು ಉಪಮೇಯದಿಂದ ತಿರಸ್ಕಾರವನ್ನು ಹೇಳಿದ್ದರೆ ಇಲ್ಲಿ ಅಪ್ರಕೃತವಾದ ಉಪಮೇಯಕ್ಕೆ ಪ್ರಕೃತೋಪಮೇಯದಿಂದ ಆಗುವ ತಿರಸ್ಕಾರವನ್ನು ತಿಳಿಸಲಾಗಿದೆ. "ಎಲೈ ಮೃತ್ಯುವೇ ! ನಿನ್ನ ಕ್ರೂರತನದಿಂದ ಹುಟ್ಟಿರುವ ಈ ಗರ್ವದಿಂದ ಆಗುವ ಫಲವೇನು ? ನಿನ್ನಂತೆಯೇ ಕ್ರೂರವಾಗಿರುವ ಸ್ತ್ರೀಯರು ಅನೇಕರಿರುವರು", ಇಲ್ಲಿ ವರ್ಣಿಸಬೇಕಾದ ಲೋಕಪ್ರಸಿದ್ಧವಾದ ಉಪಮೇಯವೇ ಕ್ರೂರಸ್ತ್ರೀಯರು. ಅಂತವರು ಹೇರಳವಾಗಿರುವರೆಂದು ತಿಳಿಸುವ ಮೂಲಕ ಅಪ್ರಕೃತವಾದ ಮೃತ್ಯುವಿನ ತಿರಸ್ಕಾರವನ್ನು ತಿಳಿಸಲಾಗಿದೆ. ಪ್ರಸಿದ್ಧೋಪಮಾನವೆನಿಸಿದ ಮೃತ್ಯುವನ್ನು ಉಪಮೇಯವನ್ನಾಗಿ ಭಾವಿಸಿ ಅದಕ್ಕೆ ಕ್ರೂರಸ್ತ್ರೀಯರ ಮೂಲಕ ತಿರಸ್ಕಾರವನ್ನು ಇಲ್ಲಿ ಕಲ್ಪಿಸಿದೆ. ಎಲೈ ವಿಷವೇ ! ತೀಕ್ಷ್ಣವಸ್ತುಗಳೆಲ್ಲಕ್ಕೂ ನೀನೇ ಶ್ರೇಷ್ಠನೆಂದು ಭಾವಿಸಿ ಗರ್ವಪಡಬೇಡ. ನಿನ್ನಂತೆಯೇ ತೀಕ್ಷ್ಣವೆನಿಸಿದ ದುರ್ಜನರ ಮಾತುಗಳು ಈ ಲೋಕದಲ್ಲಿ ಹೇರಳವಾಗಿ ಅಡಗಿವೆ." ಪ್ರಸಿದ್ಧೋಪಮಾನವೆನಿಸಿದ ವಿಷಕ್ಕೆ ದುರ್ಜನರ ಮಾತುಗಳನ್ನು ಉಪಮೇಯವೆಂದು ಪರಿಕಲ್ಪಿಸಿ ಅಷ್ಟರಿಂದಲೇ ವಿಷದ ಅಹಂಕಾರವನ್ನು ತಿರಸ್ಕರಿಸಲಾಗಿದೆ.

ವರ್ಣ್ಯೇನಾನ್ಯಸ್ಯೋಪಮಾಯಾ ಅನಿಷ್ಪತ್ತಿವಚಶ್ಚ ತತ್ ।
ಮುಧಾಪವಾದೋ ಮುಗ್ಧಾಕ್ಷಿ ತ್ವನ್ಮುಖಾಭಂ ಕಿಲಾಂಬುಜಮ್ ॥ ೧೫ ॥

ಅವರ್ಣ್ಯೇ ವರ್ಣ್ಯೋಪಮಿತ್ಯನಿಷ್ಪತ್ತಿವಚನಂ ಪೂರ್ವೇಭ್ಯ ಉತ್ಕರ್ಷ ಶಾಲಿ ಚತುರ್ಥಂ ಪ್ರತೀಪಮ್. ಉದಾಹರಣೇ ಮುಧಾಪವಾದತ್ವೋಕ್ತ್ಯಾ ಉಪಮಿತ್ಯನಿಷ್ಪತ್ತಿರುದ್ಘಾಟಿತಾ. ಯಥಾ ವಾ—

ಆಕರ್ಣಯ ಸರೋಜಾಕ್ಷಿ ವಚನೀಯಮಿದಂ ಭುವಿ ।
ಶಶಾಂಕಸ್ತವ ವಕ್ತ್ರೇಣ ಪಾಮರೈರುಪಮೀಯತೇ ॥

ಪ್ರಕೃತಸಂದರ್ಭಕ್ಕನುಗುಣವಾದ ವಸ್ತುವಿನೊಡನೆ ಬೇರೊಂದು ವಸ್ತುವಿಗೂ ಸಾದೃಶ್ಯವೇ ಬರುವುದಿಲ್ಲವೆಂದು ತಿಳಿಸುವುದೇ ಪ್ರತೀಪದ ನಾಲ್ಕನೆಯ ಬಗೆ ಎನಿಸುತ್ತದೆ. "ಎಲೈ ಸುಂದರಿ! ಕಮಲವು ನಿನ್ನ ಮುಖಕ್ಕೆ ಸದೃಶವಾಗಿದೆ" ಎಂದು ಜನರಾಡುವ ಮಾತು ನಿರರ್ಥಕವೇ ಸರಿ. ಇಲ್ಲಿ ನಿರರ್ಥಕವೆಂದು ತಿಳಿಸಿದ್ದರಿಂದ ಮುಖಕ್ಕೆ ಎಲ್ಲಿಯೂ ಸಾದೃಶ್ಯವೇ ಇಲ್ಲವೆಂಬುದು ಸ್ಪಷ್ಟಪಡುತ್ತದೆ. ಪ್ರಕೃತವಾದ ಮುಖದೊಡನೆ ಅಪ್ರಕೃತವಾದ ಕಮಲಕ್ಕೆ ಸಾದೃಶ್ಯವು ಬರುವುದಿಲ್ಲವೆಂದು ತಿಳಿಸುವುದೇ ಇಲ್ಲಿ ಮುಖ್ಯವಾದ ಅಂಶ. ಕಮಲವು ನಿನ್ನ ಮುಖಕ್ಕೆ ಸದೃಶವೆಂದು ಲೋಕದಲ್ಲಿ ಹರಡಿರುವ ಪ್ರತೀತಿಯನ್ನು ವೃಥಾಪವಾದವೆಂದು ತಿಳಿಸಿದ್ದರಿಂದ ಮುಖಕ್ಕೆ ಸಾದೃಶ್ಯವೇ ಇಲ್ಲವೆಂಬುದು ಖಚಿತವಾಗುತ್ತದೆ.

"ಕಮಲದಂತೆ ಕಣ್ಣುಗಳಿರುವ ಸುಂದರಿಯೇ! ಲೋಕದಲ್ಲಿ ಒಂದು ನಿಂದೆಯ ಮಾತು ಹರಡಿದೆ. ಅದನ್ನು ನೀನು ಕೇಳು. ಚಂದ್ರನು ನಿನ್ನ ಮುಖದಂತೆ ಇರುವನೆಂದು ನೀಚರು ಹೋಲಿಸುವುದೇ ಈ ನಿಂದೆಯ ಮಾತು.'' ಇದರಿಂದ ಚಂದ್ರನಲ್ಲಿ ಮುಖದ ಹೋಲಿಕೆ ಬರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಚಂದ್ರನಲ್ಲಿ ಮುಖದ ಹೋಲಿಕೆ ಇದೆ ಎಂಬ ಮಾತು ಸುಳ್ಳೆಂದು ಹೇಳುವ ಮೂಲಕ ಅವನಲ್ಲಿ ಹೋಲಿಕೆ ಹೊಂದುವುದಿಲ್ಲವೆಂದು ಇಲ್ಲಿ ತಿಳಿಸಲಾಗಿದೆ.

ಪ್ರತೀಪಮುಪಮಾನಸ್ಯ ಕೈಮರ್ಥ್ಯಮಪಿ ಮನ್ವತೇ ।
ದೃಷ್ಟಂ ಚೇದ್ವದನಂ ತಸ್ಯಾಃ ಕಿಂ ಪದ್ಮೇನ ಕಿಮಿಂದುನಾ ॥ ೧೬ ॥

ಉಪಮೇಯಸ್ಯೈವ ಉಪಮಾನಪ್ರಯೋಜನಧೂರ್ವಹತ್ವೇನ ಉಪಮಾನಕೈಮರ್ಥ್ಯಂ ಉಪಮಾನಪ್ರಾತಿಲೋಮ್ಯಾತ್ ಪಂಚಮಂ ಪ್ರತೀಪಮ್. ಯಥಾ ವಾ—

ತದೋಜಸಸ್ತದ್ಯಶಸಃ ಸ್ಥಿತಾವಿಮೌ ವೃಥೇತಿ ಚಿತ್ತೇ ಕುರುತೇ ಯದಾ ಯದಾ ।
ತನೋತಿ ಭಾನೋಃ ಪರಿವೇಷಕೈತವಾತ್ತದಾ ವಿಧಿಃ ಕುಡಲನಾಂ ವಿಧೋರಪಿ ॥

ಕೇಚಿದನನ್ವಯೋಪಮೇಯೋಪಮಾಪ್ರತಿಪಾನಾಂ ಉಪಮಾವಿಶೇಷತ್ವೇನ ತದಂತರ್ಭಾವಂ ಮನ್ಯಂತೇ. ಅನ್ಯೇ ತು ಪಂಚಮಂ ಪ್ರತೀಪಪ್ರಕಾರಂ ಉಪಮಾನಾಕ್ಷೇಪರೂಪತ್ವಾದಾಕ್ಷೇಪಾಲಂಕಾರಮಾಹುಃ.

ಉಪಮೇಯವೇ ಉಪಮಾನದ ಕೆಲಸವನ್ನು ನಿರ್ವಹಿಸುವ ಪ್ರಯುಕ್ತ

ಉಪಮಾನವನ್ನೇ ವ್ಯರ್ಥವೆಂದು ತಿಳಿಸುವುದು ಪ್ರತೀಪದ ಐದನೆಯ ಬಗೆ ಎನಿಸಿದೆ. "ಆಕೆಯ ಮುಖವನ್ನು ನೋಡಿದ ಮೇಲೆ ಕಮಲದಿಂದಾಗಲೀ ಚಂದ್ರನಿಂದಾಗಲೀ ಫಲವೇನು ?" ಎಲ್ಲಿ ಚಂದ್ರಕಮಲಗಳಿಂದಾಗುವ ಆಹ್ಲಾದ ಕತ್ವ (ಸತೋಷಪಡಿಸುವಿಕೆ) ಎಂಬ ಫಲವು ಮುಖದಿಂದಲೇ ಆಗುತ್ತಿರುವಾಗ ಚಂದ್ರಕಮಲಗಳಿಂದ ಆಗಬೇಕಾದ ಫಲವಾದರೂ ಏನಿದ್ದೀತು ಎಂಬ ಅರ್ಥವು ಸ್ಪಷ್ಟಪಡುತ್ತದೆ.

"ನಳನ ಪ್ರಕಾಶ ಮತ್ತು ಕೀರ್ತಿ ಇವೆರಡೂ ಇರುವಾಗ ಈ ಸೂರ್ಯಚಂದ್ರರಿಬ್ಬರಿಂದಲೂ ಆಗಬೇಕಾದ ಕಾರ್ಯವೇನಿದ್ದೀತೆಂದು ಬ್ರಹ್ಮನು ಯಾವಾಗ ಮನದಲ್ಲಿ ಭಾವಿಸುವನೋ ಆವಾಗ ಅವರಿಬ್ಬರಿಗೂ ಗುಂಡಾಕಾರದ ಗೆರೆಯನ್ನೆಳೆಯುವ ನೆಪದಿಂದ ದೊಡ್ಡದೊಂದು ಸೊನ್ನೆಯನ್ನು ಹಾಕಿ ಅವರಿಬ್ಬರೂ ವ್ಯರ್ಥವೆಂಬುದನ್ನು ತಿಳಿಸುವನು." ಇಲ್ಲಿ ಉಪಮೇಯವೆನಿಸಿದ ನಳನ ಪ್ರಕಾಶ ಮತ್ತು ಕೀರ್ತಿಗಳಿರುವಾಗ ಅವುಗಳ ಉಪಮಾನವೆನಿಸಿದ ಸೂರ್ಯಚಂದ್ರರು ಅಪ್ರಯೋಜಕರೆಂಬುದನ್ನು ಕೈಮುತಿಕನ್ಯಾಯದಿಂದ ತಿಳಿಸಲಾಗಿದೆ. ಕೆಲವರು ಅನನ್ವಯ, ಉಪಮೇಯೋಪಮ ಪ್ರತೀಪ ಈ ಮೂರನ್ನೂ ಉಪಮಾಲಂಕಾರದ ಪ್ರಭೇಧಗಳೆಂದು ಭಾವಿಸಿ ಇದನ್ನು ಅದರಲ್ಲಿಯೇ ಸೇರಿಸುವರು. ಬೇರೆಯವರಾದರೋ ಪ್ರತೀಪದ ಐದನೆಯ ಬಗೆಯಲ್ಲಿ ಉಪಮಾನವನ್ನೇ ವ್ಯರ್ಥವೆಂದು ತಿಳಿಸಿದ್ದರಿಂದ ಅದನ್ನು ಆಕ್ಷೇಪಾಲಂಕಾರವೆಂದು ಹೇಳುವರು.

## ೫. ರೂಪಕಾಲಂಕಾರ

ವಿಷಯ್ಯಭೇದತಾದ್ರೂಪ್ಯರಂಜನಂ ವಿಷಯಸ್ಯ ಯತ್ ।
ರೂಪಕಂ ತತ್ತ್ರಿಧಾಧಿಕ್ಯನ್ಯೂನತ್ವಾನುಭಯೋಕ್ತಿಭಿಃ ॥

ಅಯಂ ಹಿ ಧೂರ್ಜಟಿಃಸಾಕ್ಷಾದ್ಯೇನ ದಗ್ಧಾಃ ಪುರಃ ಕ್ಷಣಾತ್ ।
ಅಯಮಾಸ್ತೇ ವಿನಾ ಶಂಭುಃ ತಾರ್ತೀಯೀಕಂ ವಿಲೋಚನಮ್ ॥

ಶಂಭುರ್ವಿಶ್ವಮವತ್ಯದ್ಯ ಸ್ವೀಕೃತ್ಯ ಸಮದೃಷ್ಟಿತಾಮ್ ।
ಅಸ್ಯಾ ಮುಖೇಂದುನಾ ಲಬ್ಧೇ ನೇತ್ರಾನಂದೇ ಕಿಮಿಂದುನಾ ॥

ಸಾಧ್ವೀಯಮಪರಾ ಲಕ್ಷ್ಮೀರಸುಧಾಸಾಗರೋದಿತಾ ।
ಅಯಂ ಕಳಂಕಿನಶ್ಚಂದ್ರಾನ್ಮುಖಚಂದ್ರೋಽತಿರಿಚ್ಯತೇ ॥

ವಿಷಯ್ಯುಪಮಾನಭೂತಂ ಪದ್ಮಾದಿ, ವಿಷಯಸ್ತದುಪಮೇಯಂ ವರ್ಣನೀಯಂ ಮುಖಾದಿ. ವಿಷಯಿಣೋ ರೂಪೇಣ ವಿಷಯಸ್ಯ ರಂಜನಂ ರೂಪಕಮ್ 'ಅನ್ಯರೂಪೇಣ ರೂಪವತಃ ಕರಣಾತ್', ತಚ್ಚ ಕ್ವಚಿತ್ ಪ್ರಸಿದ್ಧ ವಿಷಯ್ಯಭೇದಪರ್ಯವಸಿತಂ ;

ಕ್ವಚಿದ್ಭೇದೇ ಪ್ರತೀಯಮಾನ ಏವ ತದೀಯಧರ್ಮಾರೋಪಮಾತ್ರಪರ್ಯವಸಿತಮ್. ತತಶ್ಚ ರೂಪಕಂ ತಾವದ್ದ್ವಿವಿಧಂ ಅಭೇಧರೂಪಕಂ ತಾದ್ರೂಪ್ಯರೂಪಕಂ ಚೇತಿ. ದ್ವಿವಿಧಮಪಿ ಪ್ರತ್ಯೇಕಂ ತ್ರಿವಿಧಮ್. ಪ್ರಸಿದ್ಧವಿಷಯಾಧಿಕ್ಯವರ್ಣನೇನ ನ್ಯೂನತ್ವ ವರ್ಣನೇನ ಅನುಭಯೋಕ್ತ್ಯಾ ಚೈವಂ ರೂಪಕಂ ಷಡ್ವಿಧಮ್. "ಅಯಂ ಹಿ" ಇತ್ಯಾದಿಸಾರ್ಧಶ್ಲೋಕೇನ ಅಭೇದರೂಪಕಾಣಿ "ಅಸ್ಯಾ ಮುಖೇಂದುನಾ" ಇತ್ಯಾದಿಸಾರ್ಧಶ್ಲೋಕೇನ ತಾದ್ರೂಪ್ಯರೂಪಕಾಣಿ ಆಧಿಕ್ಯನ್ಯೂನತ್ವಾನುಭಯೋಕ್ತ್ಯುದ್ದೇಶಕ್ರಮಪ್ರಾತಿಲೋಮ್ಯೇನ ಉದಾಹೃತಾನಿ. "ಯೇನ ದಗ್ಧಾಃ" ಇತಿ ವಿಶೇಷಣೇನ ವರ್ಣನೀಯೇ ರಾಜ್ಞಿ ಪ್ರಸಿದ್ಧಶಿವಾಭೇದಾನುರಂಜನಾತ್ ಶಿವಸ್ಯ ಪೂರ್ವಾವಸ್ಥಾತೋ ವರ್ಣನೀಯರಾಜಭಾವಾವಸ್ಥಾಯಾಂ ನ್ಯೂನತ್ವಾಧಿಕ್ಯಯೋರವರ್ಣನಾಚ್ಚ ಅನುಭಯಾಭೇದರೂಪಕಮಾದ್ಯಮ್. ತೃತೀಯಲೋಚನಪ್ರಹಾಣೋಕ್ತ್ಯಾ ಪೂರ್ವಾವಸ್ಥಾತೋ ನ್ಯೂನತಾಪ್ರದರ್ಶನಾತ್ ನ್ಯೂನಾಭೇದರೂಪಕಂ ದ್ವಿತೀಯಮ್. ನ್ಯೂನತ್ವವರ್ಣನಮಪಿ ಅಭೇದದಾರ್ಢ್ಯಾಪಾದಕತ್ವಾತ್ ಚಮತ್ಕಾರಿ. ವಿಷಮದೃಷ್ಟಿತ್ವಪರಿತ್ಯಾಗೇನ ಜಗದ್ರಕ್ಷಕತ್ವೋಕ್ತ್ಯಾ ಶಿವಸ್ಯ ಪೂರ್ವಾವಸ್ಥತೋ ವರ್ಣನೀಯರಾಜಭಾವಾವಸ್ಥಾಯಾಂ ಉತ್ಕರ್ಷವಿಭಾವನಾತ್ ಆಧಿಕಾಭೇದ ರೂಪಕಂ ತೃತೀಯಮ್. ಏವಮುತ್ತರೇಷು ತಾದ್ರೂಪ್ಯರೂಪಕೋದಾಹರಣೇಷ್ವಪಿ ಕ್ರಮೇಣ ಅನುಭಯನ್ಯೂನಾಧಿಕಭಾವಾ ಉನ್ನೇಯಾಃ.

ಪ್ರಕೃತವಿಷಯವೆನಿಸಿದ ಉಪಮೇಯದಲ್ಲಿ ಉಪಮಾನದ ಅಭೇದವನ್ನಾಗಲೀ ಅದರ ಧರ್ಮವನ್ನಾಗಲೀ ನಿರೂಪಿಸುವುದೇ ರೂಪಕವೆನಿಸುತ್ತದೆ. "ಇವನು ಹಿಂದೆ ತ್ರಿಪುರಾಸುರರ ಮೂರು ಪಟ್ಟಣಗಳನ್ನು ಕ್ಷಣಕಾಲದಲ್ಲಿ ಸುಟ್ಟುಹಾಕಿದ ಪರಮೇಶ್ವರನೇ ಆಗಿರುವನು. ಇವನು ಮೂರನೆಯ ಕಣ್ಣಿಲ್ಲದ ಶಿವನೇ ಆಗಿರುವನು. ಇವನು ಸಮದೃಷ್ಟಿಯನ್ನು ಪಡೆದು ಲೋಕವನ್ನು ರಕ್ಷಿಸುತ್ತಿರುವ ಶಂಭುವೇ ಆಗಿರುವನು. ಈಕೆಯ ಮುಖಚಂದ್ರನಿಂದಲೇ ಕಣ್ಣುಗಳಿಗೆ ಸಂತೋಷವುಂಟಾದ ಮೇಲೆ ಚಂದ್ರನಿಂದೇನು ಫಲ ? ಈ ಪತಿವ್ರತೆಯು ಕ್ಷೀರಸಾಗರದಿಂದ ಹೊರಹೊಮ್ಮದ ಬೇರೊಬ್ಬ ಲಕ್ಷ್ಮಿಯೇ ಆಗಿರುವಳು. ಕಳಂಕವುಳ್ಳ ಚಂದ್ರನಿಗಿಂತಲೂ ಮುಖಚಂದ್ರನೇ ಮೇಲು." ಇವು ಆರು ರೂಪಕಗಳ ಉದಾಹರಣಗಳೆನಿಸಿವೆ.

ವಿಷಯಿ ಎಂದರೆ ಉಪಮಾನವೆನಿಸಿದ ಕಮಲ ಮೊದಲಾದವು. ವಿಷಯವೆಂದರೆ ಅವುಗಳೊಡನೆ ಹೋಲಿಸಲು ಅರ್ಹವೆನಿಸಿದ ಮುಖ ಮೊದಲಾದ ಉಪಮೇಯಗಳು. ಈ ಉಪಮೇಯವನ್ನು ಉಪಮಾನವೆಂದೇ ಪರಿಗಣಿಸುವುದು ರೂಪಕವೆನಿಸುತ್ತದೆ. ಬಿಳಿಯ ನೂಲನ್ನು ಕೆಂಪು ಬಣ್ಣದಲ್ಲಿ ಅದ್ದಿದರೆ ಬಿಳುಪು ಕಾಣದೆ ಕೆಂಪು ಬಣ್ಣವೇ ಕಾಣುತ್ತದೆ. ಹಾಗೆಯೇ ಉಪಮೇಯಕ್ಕೆ ಉಪಮಾನದ

ರೂಪವನ್ನು ಕೊಟ್ಟು ಅದನ್ನು ಉಪಮಾನವೆನಿಸುವುದೇ ರೂಪಕವೆನಿಸುತ್ತದೆ. ಇದಾದರೋ ಕೆಲವೆಡೆಗಳಲ್ಲಿ ಉಪಮೇಯಕ್ಕೆ ಲೋಕಪ್ರಸಿದ್ಧವಾದ ಉಪಮಾನದ ಅಭೇದವನ್ನು ತಿಳಿಸುವುದರಲ್ಲೂ, ಬೇರೆ ಕಡೆಗಳಲ್ಲಿ ಉಪಮಾನೋಪಮೇಯಗಳಿಗೆ ಭೇದವಿರುವಾಗಲೇ ಉಪಮೇಯದಲ್ಲಿ ಉಪಮಾನದ ಧರ್ಮವನ್ನು ಆರೋಪಿಸುವುದರಲ್ಲೂ ಕೊನೆಗಾಣುವುದು. ಆದ್ದರಿಂದಲೇ ರೂಪಕವು ಅಭೇದರೂಪಕ, ತಾದ್ರೂಪ್ಯ ರೂಪಕ ಎಂದು ಎರಡು ಬಗೆಯಾಗಿದೆ. ಉಪಮೇಯಕ್ಕಿಂತ ಉಪಮಾನವನ್ನೇ ಅಧಿಕವೆಂದು ತಿಳಿಸುವುದರಿಂದಲೂ, ಹಾಗೆಯೇ ನ್ಯೂನವೆಂದು ತಿಳಿಸುವುದರಿಂದಲೂ, ನ್ಯೂನ ಅಧಿಕ ಎರಡೂ ಅಲ್ಲವೆಂದು ತಿಳಿಸುವುದರಿಂದಲೂ ರೂಪಕದ ಈ ಎರಡು ಬಗೆಗಳೂ ಮತ್ತೆ ಆರು ಬಗೆಯಾಗುತ್ತವೆ. ಮೂಲದ ಮೂರು ಪಾದಗಳಲ್ಲಿ ಅಭೇದ ರೂಪಕಗಳನ್ನೂ, ಉಳಿದ ಮೂರು ಪಾದಗಳಲ್ಲಿ ತಾದ್ರೂಪ್ಯ ರೂಪಕಗಳನ್ನೂ ಆಧಿಕ್ಯ, ನ್ಯೂನತ್ವ, ಅನುಭಯೋಕ್ತಿ(ಇವೆರಡೂ ಇಲ್ಲದಿರುವಿಕೆ)ಈ ಉದ್ದೇಶಕ್ರಮಕ್ಕೆ ವ್ಯತ್ಯಾಸವಾಗಿ ಅಂದರೆ ಹಿಂದುಮುಂದಾಗಿ ಉದಾಹರಣಗಳನ್ನು ಕೊಡಲಾಗಿದೆ. "ಯೇನ ದಗ್ಧಾಃ ಪುರಃ ಕ್ಷಣಾತ್" ಎಂಬ ವಿಶೇಷಣದಿಂದ ಪ್ರಕೃತ ರಾಜನಲ್ಲಿ ತ್ರಿಪುರ ಸಂಹಾರಿ ಶಿವನ ಅಭೇದವನ್ನು ಇವನು ಸಾಕ್ಷಾತ್ ಶಿವನೇ ಎಂದು ತಿಳಿಸಿದ್ದರಿಂದ ಶಿವನಿಗೆ ಹಿಂದಿನ ಅವಸ್ಥೆಗಿಂತಲೂ ಈಗಿನ ರಾಜಭಾವದ ಅವಸ್ಥೆಯಲ್ಲಿ ನ್ಯೂನತೆಯನ್ನಾಗಲೀ, ಆಧಿಕ್ಯವನ್ನಾಗಲೀ ಹೇಳಿಲ್ಲದ ಪ್ರಯುಕ್ತ ಇದು ಅನುಭಯಾಭೇದ ರೂಪಕವೆನಿಸುತ್ತದೆ. ಶಿವನು ತ್ರಿಪುರರ ಮೂರು ಪುರಗಳನ್ನು ಸುಟ್ಟಿರುವಂತೆಯೇ ರಾಜನೂ ಮೂರು ಪುರಗಳನ್ನು ಸುಟ್ಟವನಾದ್ದರಿಂದ ಇಲ್ಲಿ ನ್ಯೂನತೆಯೂ ಇಲ್ಲ; ಆಧಿಕ್ಯವೂ ಇಲ್ಲ. "ಇವನು ಶಿವನೇ; ಆದರೆ ಇವನಿಗೆ ಮೂರನೆಯ ಕಣ್ಣು ಮಾತ್ರ ಇಲ್ಲ" ವೆಂದು ಹೇಳಿದ್ದರಿಂದ ಹಿಂದಿನ ಶಿವನ ಅವಸ್ಥೆಗಿಂತಲೂ ಈಗಿನ ರಾಜಾವಸ್ಥೆಯಲ್ಲಿ ರಾಜನಿಗೆ ನ್ಯೂನತೆಯನ್ನು ತಿಳಿಸಿದ್ದರಿಂದ ಇದು ನ್ಯೂನಾಭೇದರೂಪಕವೆನಿಸುತ್ತದೆ. ಇಲ್ಲಿ ನ್ಯೂನತೆಯನ್ನು ಹೇಳಿದ್ದರೂ ರಾಜನಲ್ಲಿ ಶಿವನ ಅಭೇದವನ್ನು ಇದು ದೃಢಪಡಿಸುವುದರಿಂದ ಚಮತ್ಕಾರವನ್ನುಂಟುಮಾಡುತ್ತದೆ. ರಾಜನು ಶಿವನೇ ಆದರೂ ವಿಷಮದೃಷ್ಟಿಯನ್ನು ತೊರೆದು ಸಮದೃಷ್ಟಿಯಿಂದ ಜಗತ್ತನ್ನು ರಕ್ಷಿಸುತ್ತಿರುವನೆಂದು ತಿಳಿಸಿದ್ದರಿಂದ ಶಿವನಿಗೆ ಹಿಂದಿನ ಅವಸ್ಥೆಗಿಂತಲೂ ಈಗಿನ ರಾಜಾವಸ್ಥೆಯಲ್ಲಿ ಉತ್ಕರ್ಷವು ತೋರುತ್ತದೆ. ಆದ್ದರಿಂದ ಇದು ಅಧಿಕಾಭೇದ ರೂಪಕವೆನಿಸುತ್ತದೆ. ಹಾಗೆಯೇ ಮುಂದಿನ ಮೂರು ತಾದ್ರೂಪ್ಯರೂಪಕೋದಾಹರಣಗಳಲ್ಲೂ ಕ್ರಮವಾಗಿ ನ್ಯೂನತ್ವ-ಆಧಿಕ್ಯಗಳನ್ನು ತಿಳಿಯಬೇಕು. ಈ ಮುಖ ಚಂದ್ರನಿಂದಲೇ ಕಣ್ಣುಗಳಿಗೆ ಆನಂದವು ದೊರೆಯುವಾಗ ಚಂದ್ರನಿಂದೇನು ಫಲವೆಂಬಲ್ಲಿ ಮುಖಕ್ಕೂ ಚಂದ್ರನಿಗೂ ಭೇದವಿದ್ದರೂ ಚಂದ್ರನ ಧರ್ಮವನ್ನಾರೋಪಿಸಿದೆ. ಮುಖದಲ್ಲಿ ಚಂದ್ರನಿಗಿಂತಲೂ ನ್ಯೂನತೆಯನ್ನಾಗಲೀ ಆಧಿಕ್ಯವನ್ನಾಗಲೀ ಇಲ್ಲಿ ತಿಳಿ

ಸದೇ ಇರುವುದರಿಂದ ಇದು ಅನುಭಯತಾದ್ರೂಪ್ಯದ ಉದಾರಣವೆನಿಸಿದೆ. ನಾಯಿಕೆ ಯನ್ನು ಬೇರೊಬ್ಬ ಲಕ್ಷ್ಮಿ ಎಂದು ಹೇಳಿದ್ದರಿಂದ ಇಬ್ಬರಿಗೂ ಭೇದವು ತೋರುತ್ತದೆ. ಆದರೂ ಇವಳು ಅವಳಂತೆ ಕ್ಷೀರಸಾಗರದಿಂದ ಹುಟ್ಟಿಲ್ಲವೆಂದು ಹೇಳಿದ್ದರಿಂದ ಉಪಮೇಯವೆನಿಸಿದ ಈ ನಾಯಿಕೆಯಲ್ಲಿ ನ್ಯೂನತೆಯನ್ನು ತಿಳಿಸಲಾಗಿದೆ. ಕಳಂಕಿ ಯಾದ ಚಂದ್ರನಿಗಿಂತಲೂ ಮುಖಚಂದ್ರನು ನಿಷ್ಕಳಂಕನೆನಿಸಿದ್ದರಿಂದ ಮೇಲೇದು ಹೇಳಿದ್ದರಿಂದ ಮುಖಚಂದ್ರರಿಗೆ ಭೇದವಿದ್ದರೂ ಉಪಮಾನವೆನಿಸಿದ ಚಂದ್ರನ ಆಹ್ಲಾದಕತ್ವಧರ್ಮವನ್ನು ಮುಖದಲ್ಲಿ ಆರೋಪಿಸಿ ಆ ಚಂದ್ರನು ದೋಷಿ ಎನಿಸಿದ್ದ ರಿಂದ ಮುಖವನ್ನು ನಿರ್ದೋಷಿ ಎಂದು ಭಾವಿಸುವ ಮೂಲಕ ಇದರಲ್ಲಿ ಆಧಿಕ್ಯವನ್ನು ತಿಳಿಸಲಾಗಿದೆ. ಇದೇ ಕ್ರಮದಿಂದಲೇ ಬೇರೆ ಉದಾಹರಣೆಗಳನ್ನು ಕೆಳಗೆ ಕೊಡ ಲಾಗುವುದು

ಚಂದ್ರಜ್ಯೋತ್ಸ್ನಾ ವಿಶದಪುಲಿನೇ ಸೈಕತೇಽಸ್ಮಿನ್ ಶರವ್ಯಾಃ
ವಾದದ್ಯೂತಂ ಚಿರತರಮಭೂತ್ಸಿದ್ಧಯೂನೋಃ ಕಯೋಶ್ಚಿತ್ ।
ಏಕೋ ವಕ್ತಿ ಪ್ರಥಮನಿಹತಂ ಕೈಟಭಂ ಕಂಸಮನ್ಯಃ
ತತ್ತ್ವಂ ಸತ್ವಂ ಕಥಯ ಭಗವನ್ ಕೋ ಹತಸ್ತತ್ರ ಪೂರ್ವಮ್' ॥

ಅತ್ರ 'ಸ ತ್ವಂ' ಇತ್ಯನೇವ ಯಃ ಕಂಸಕೈಟಭಯೋರ್ಹಂತಾ ಗರುಡಧ್ವಜಸ್ತತ್ತಾ-ದಾತ್ಮ್ಯಂ ವರ್ಣನೀಯಸ್ಯ ರಾಜ್ಞಃ ಪ್ರತಿಪಾದ್ಯ ತಂ ಪ್ರತಿ ಕಂಸಕೈಟಭವಧಯೋಃ ಪೌರ್ವಾಪರ್ಯಪ್ರಶ್ನವ್ಯಾಜೇನ ತತ್ತಾದಾತ್ಮ್ಯ ದಾರ್ಢ್ಯಕರಣಾತ್ ಪೂರ್ವಾವಸ್ಥಾತಃ ಉತ್ಕರ್ಷಾಪಕರ್ಷಯೋರವಿಭಾವನಾಚ್ಚ ಅನುಭಯಾಭೇದರೂಪಕಮ್.

"ಚಂದ್ರನ ಬೆಳದಿಂಗಳಿನಂತೆ ನಿರ್ಮಲವಾದ ಮರಳಿನ ರಾಶಿಯಿರುವ ಶರಯೂ ನದಿಯ ದಡದಲ್ಲಿ ಇಬ್ಬರು ಸಿದ್ಧಯುವಕರಿಗೆ ಬಹುಕಾಲದವರೆಗೂ ವಾಗ್ವಾದ ಪಂದ್ಯವು ನಡೆಯಿತು. ಮೊದಲು ಕೈಟಭನೇ ಕೊಲೆಯಾದವನೆಂದು ಒಬ್ಬನು ಹೇಳಿದರೆ ಕಂಸನ ಕೊಲೆಯೇ ಮೊದಲಾಯಿತೆಂದು ಮತ್ತೊಬ್ಬನು ಹೇಳಿದನು. ಸ್ವಾಮಿ! ಇವರಲ್ಲಿ ಯಾವನ ಕೊಲೆ ಮೊದಲಾಯಿತೆಂಬ ಬಗ್ಗೆ ನಿಜಾಂಶವನ್ನು ಆ ನೀನು ತಿಳಿಸಿ ಕೊಡು," ಇಲ್ಲಿ "ಆ ನೀನು" ಎಂದು ಹೇಳಿದ್ದರಿಂದ ಕಂಸಕೈಟಭರನ್ನು ಕೊಂದ ವಿಷ್ಣುವೇ ಇವನೆಂದು ವಿಷ್ಣುವಿನೊಡನೆ ರಾಜನಿಗೆ ಅಭೇದವನ್ನು ತಿಳಿಸಿ ಕಂಸ ಕೈಟಭ ರಿಬ್ಬರಲ್ಲಿ ಯಾರ ಕೊಲೆ ಮೊದಲು ಆಯಿತೆಂದು ಪ್ರಶ್ನೆಮಾಡುವ ನೆಪದಿಂದ ರಾಜನಲ್ಲಿ ವಿಷ್ಣುವಿನ ಅಭೇದವನ್ನು ದೃಢಪಡಿಸಿರುವುದರಿಂದ ಹಿಂದಿನ ಅವಸ್ಥೆ ಗಿಂತಲೂ ಈಗಿನ ರಾಜಾವಸ್ಥೆಯಲ್ಲಿ ನ್ಯೂನತೆ ಆಧಿಕ್ಯ ಇವೆರಡನ್ನೂ ತಿಳಿಸದಿರುವ ಪ್ರಯುಕ್ತ ಇದು ಅನುಭಯಾಭೇದರೂಪಕವೆನಿಸಿದೆ.

ವೇಧಾ ದ್ವೇಧಾ ಭ್ರಮಂ ಚಕ್ರೇ ಕಾಂತಾಸು ಕನಕೇಷು ಚ ।
ತಾಸು ತೇಷ್ವಪ್ಯನಾಸಕ್ತಃ ಸಾಕ್ಷಾದ್ಭರ್ಗೋ ನರಾಕೃತಿಃ ॥

ಅತ್ರ ಸಾಕ್ಷಾದಿತಿ ವಿಶೇಷಣೇನ ವಿರಕ್ತಸ್ಯ ಶಿವತಾದಾತ್ಮ್ಯಂ ಉಪದಿಶ್ಯ ನರಾಕೃತಿರಿತಿ ದಿವ್ಯಮೂರ್ತಿವೈಕಲ್ಯಪ್ರತಿಪಾದನಾತ್ ನ್ಯೂನಾಭೇದರೂಪಕಮ್ ॥

"ಬ್ರಹ್ಮನು ಕಾಂತೆಯರಲ್ಲೂ ಸುವರ್ಣದಲ್ಲೂ ಇಬ್ಬಗೆಯಾಗಿ ಭ್ರಾಂತಿಗೊಂಡನು. ಅವರಲ್ಲೂ ಅವುಗಳಲ್ಲೂ ಆಸಕ್ತಿಯನ್ನು ವಹಿಸದಿರುವವನು ಮನುಷ್ಯನ ಆಕಾರದಲ್ಲಿದ್ದರೂ ಸಾಕ್ಷಾತ್ ಶಿವನೇ ಆಗಿರುವನು." ಇಲ್ಲಿ ಸಾಕ್ಷಾತ್ ಎಂಬ ವಿಶೇಷಣದಿಂದ ವೈರಾಗ್ಯಶೀಲನಾದ ರಾಜನಿಗೆ ಪ್ರಸಿದ್ಧ ಶಿವನೊಡನೆ ಅಭೇದವನ್ನು ತಿಳಿಸಿ, ದಿವ್ಯಮಂಗಳವಿಗ್ರಹಧಾರಿ ಎನಿಸಿದ ಶಿವನಲ್ಲಿ ಮನುಷ್ಯಾಕಾರದಲ್ಲಿರುವವನೆಂಬ ವೈಕಲ್ಯವನ್ನು ತಿಳಿಸಿದ್ದರಿಂದ ಇದು ನ್ಯೂನಾಭೇದರೂಪಕವೆನಿಸುತ್ತದೆ.

ತ್ವಯ್ಯಾಗತೇ ಕಿಮಿತಿ ವೇಪತ ಏಷ ಸಿಂಧುಸ್ತ್ವಂ
ಸೇತುಮಂಥಕೃದತಃ ಕಿಮಸೌ ಬಿಭೇತಿ ।
ದ್ವೀಪಾಂತರೇಽಪಿ ನ ಹಿ ತೇಽಸ್ತ್ಯವಶಂವದೋಽದ್ಯ ತ್ವಾಂ
ರಾಜಪುಂಗವ ನಿಷೇವತ ಏವ ಲಕ್ಷ್ಮೀಃ ॥

ಅತ್ರ ತ್ವಂ ಸೇತುಮಂಥಕೃದಿತಿ ಸೇತೋರ್ಮಂಥನಸ್ಯ ಚ ಕರ್ತ್ರಾ ಪುರುಷೋತ್ತಮೇನ ಸಹ ವರ್ಣನೀಯಸ್ಯ ತಾದಾತ್ಮ್ಯಮುಕ್ತ್ವಾ ತಥಾಪಿ ತ್ವದಾಗಮನಂ ಸೇತೋರ್ಬಂಧನಾಯ ಮಂಥನಾಯ ವೇತಿ ಸಮುದ್ರೇಣ ನ ಭೇತವ್ಯಮ್. ದ್ವಿಪಾಂತರಾಣಾಮಪಿ ತ್ವದ್ವಶಂವದತ್ವೇನ ಪೂರ್ವವದ್ದ್ವೀಪಾಂತರೇ ಜೇತವ್ಯಾಭಾವಾತ್, ಪ್ರಾಪ್ತಲಕ್ಷ್ಮೀಕತ್ವೇನ ಮಂಥನಪ್ರಸಕ್ತ್ಯಭಾವಾಚ್ಚ ಇತಿ ಪೂರ್ವಾವಸ್ಥಾತಃ ಉತ್ಕರ್ಷವಿಭಾವನಾತ್ ಅಧಿಕಾಭೇದರೂಪಕಮ್.

"ಮಹಾರಾಜನೇ, ನೀನು ಬಂದರೆ ಈ ಸಮುದ್ರವು ಏಕೆ ನಡುಗುವುದು ? ನೀನು ಸೇತುವೆಯನ್ನು ಕಟ್ಟಿದವನೆಂದೂ, ಸಮುದ್ರವನ್ನು ಕಡೆದವನೆಂದೂ ತಿಳಿದು ಇದು ಹೆದರುತ್ತಿರುವುದೆ? ಇದು ನಿನ್ನ ಬಗ್ಗೆ ಹೀಗೆ ಹೆದರಲಿಕ್ಕೆ ಈಗ ಅವಕಾಶವಿಲ್ಲ; ಯಾಕೆಂದರೆ ನಿನಗೆ ಈಗ ಬೇರೊಂದು ದ್ವೀಪದಲ್ಲಿ ಶತ್ರುವೇ ನೆಲಸಿಲ್ಲ. ನಿನ್ನನ್ನು ಲಕ್ಷ್ಮಿಯು ಆಶ್ರಯಿಸಿ ಸೇವಿಸುತ್ತಲೇ ಇರುವಳು" ಇಲ್ಲಿ ಸಮುದ್ರಕ್ಕೆ ಸೇತುವೆಯನ್ನು ಕಟ್ಟಿಸಿದ ಮತ್ತು ಅದನ್ನು ಮಂಥನಮಾಡಿಸಿದ ವಿಷ್ಣುವಿನೊಡನೆ ಮಹಾರಾಜನಿಗೆ ಅಭೇದವನ್ನು ತಿಳಿಸಿದ್ದರೂ ನೀನು ಇಲ್ಲಿಗೆ ಸಮುದ್ರಮಂಥನಕ್ಕಾಗಲೀ ಸೇತುಬಂಧಕ್ಕಾಗಲೀ ಇಲ್ಲಿಗೆ ಬಂದಿಲ್ಲವಾದ್ದರಿಂದ ಸಮುದ್ರವು ಹೆದರಬೇಕಾಗಿಲ್ಲ ; ದ್ವೀಪಾಂತರ

ಗಳೆಲ್ಲವೂ ನಿನಗಧೀನವಾಗಿರುವುದರಿಂದಲೂ, ಹಿಂದಿನಂತೆ ಬೇರೆ ದ್ವೀಪದಲ್ಲಿ ಕೊಲೆಯಾಗತಕ್ಕವನೇ ಇಲ್ಲದ್ದರಿಂದಲೂ ಈಗ ಸೇತುವೆಯನ್ನು ಕಟ್ಟಿಸುವ ಆವಶ್ಯಕತೆಯಿಲ್ಲ. ನಿನ್ನಲ್ಲಿ ಲಕ್ಷ್ಮಿ ತಾನಾಗಿಯೇ ನೆಲಸಿರುವುದರಿಂದ ಲಕ್ಷ್ಮಿಯನ್ನು ಪಡೆಯಲಿಕ್ಕಾಗಿ ಸಮುದ್ರವನ್ನು ಮಥನಮಾಡಬೇಕಾಗಿಯೂ ಇಲ್ಲ. ಹೀಗೆ ವಿಷ್ಣುವಿಗೆ ಹಿಂದಿನ ಅವಸ್ಥೆಗಿಂತಲೂ ಈಗಿನ ರಾಜಾವಸ್ಥೆಯಲ್ಲಿ ಆಧಿಕ್ಯವನ್ನು ತಿಳಿಸಿದ್ದರಿಂದ ಇದು ಅಧಿಕಾಭೇದರೂಪಕವೆನಿಸಿದೆ.

ಕಿಂ ಪದ್ಮಸ್ಯ ರುಚಿಂ ನ ಹಂತಿ ನಯನಾನಂದಂ ವಿಧತ್ತೇ ನ ಕಿಂ
ವೃದ್ಧಿಂ ವಾ ಝಷಕೇತನಸ್ಯ ಕುರುತೇ ನಾಲೋಕಮಾತ್ರೇಣ ಕಿಮ್ ।
ವಕ್ತ್ರೇಂದೌ ತವ ಸತ್ಯಯಂ ಯದಪರಃ ಶೀತಾಂಶುರುಜ್ಜೃಂಭತೇ
ದರ್ಪಃ ಸ್ಯಾದಮೃತೇನ ಚೇದಿಹ ತದಪ್ಯಸ್ತ್ಯೇವ ಬಿಂಬಾಧರೇ ॥

ಅತ್ರ ಅಪರಃ ಶೀತಾಂಶುರಿತ್ಯನೇನ ವಕ್ತ್ರೇಂದೋಃ ಪ್ರಸಿದ್ಧಚಂದ್ರಾದ್ಭೇದಮಾವಿಷ್ಕೃತ್ಯ ತಸ್ಯ ಚ ಪ್ರಸಿದ್ಧಚಂದ್ರಕಾರ್ಯಕಾರಿತ್ವಮಾತ್ರಪ್ರತಿಪಾದನೇನ ಉತ್ಕರ್ಷಾಪಕರ್ಷಯೋರಪ್ರದರ್ಶನಾತ್ ಅನುಭಯತಾದ್ರೂಪ್ಯರೂಪಕಮ್.

ಪ್ರೇಯಸಿಗೆ ನಾಯಕನು ಹೇಳುವ ಮಾತಿದು..."ನಿನ್ನ ಮುಖಚಂದ್ರನೇ ಚಂದ್ರನ ಕೆಲಸವನ್ನು ಮಾಡುತ್ತಿರುವುದರಿಂದ ಶೀತಕಿರಣನೆನಿಸಿದ ಬೇರೊಬ್ಬ ಚಂದ್ರನು ಏಕೆ ಉದಯಿಸುತ್ತಿರುವನು ? ಹಾಗಾದರೆ ನಿನ್ನ ಮುಖಚಂದ್ರನು ಆ ಚಂದ್ರನಂತೆ ಕಮಲದ ಕಾಂತಿಯನ್ನು ನಾಶಮಾಡುವುದಿಲ್ಲವೆ ? ನೋಡುವವರ ಕಣ್ಣುಗಳಿಗೆ ಸಂತೋಷವನ್ನುಂಟುಮಾಡುವುದಿಲ್ಲವೆ ? ನೋಡಿದ ಮಾತ್ರಕ್ಕೆ ಕಮಲಕ್ಕೂ ಸಮುದ್ರಕ್ಕೂ ವಿಕಾರವನ್ನು ಹುಟ್ಟಿಸುವುದಿಲ್ಲವೇ ? ಇದೇ ಇವೆಲ್ಲವನ್ನು ಮಾಡುತ್ತಿದ್ದರೂ ಸಹ ಆ ಪ್ರಸಿದ್ಧಚಂದ್ರನು ತನ್ನಲ್ಲಿ ಅಮೃತವಿದೆ ಎಂದು ಗರ್ವಪಡುವುದಾದರೆ ಅದಕ್ಕೂ ಅವಕಾಶವಿಲ್ಲ ; ಯಾಕೆಂದರೆ ಆ ಅಮೃತವೂ ಸಹ ನಿನ್ನ ತೊಂಡೆಹಣ್ಣಿನಂತಿರುವ ಕೆಳತುಟಿಯಲ್ಲಿ ಇದ್ದೇ ಇದೆ.'' ಇಲ್ಲಿ ಅಪರಃ ಶೀತಾಂಶುಃ ಎಂದು ಹೇಳಿದ್ದರಿಂದ ಮುಖಚಂದ್ರನಿಗೆ ಪ್ರಸಿದ್ಧಚಂದ್ರನಿಂದ ಭೇದವನ್ನು ತಿಳಿಸಿ ಪ್ರಸಿದ್ಧಚಂದ್ರನಂತೆಯೇ ಮುಖಚಂದ್ರನಿಂದಲೂ ಸಂತೋಷವುಂಟಾಗುವುದೆಂಬ ಮಾತ್ರವೇ ಚಂದ್ರನ ಧರ್ಮವನ್ನು ಮುಖದಲ್ಲಿ ಆರೋಪಿಸಿದ್ದರಿಂದಲೂ, ಉತ್ಕರ್ಷ ಅಪಕರ್ಷ ಎರಡನ್ನೂ ಹೇಳದಿರುವುದರಿಂದಲೂ ಇದು ಅನುಭಯತಾದ್ರೂಪ್ಯರೂಪಕದ ಉದಾಹರಣವೆನಿಸುತ್ತದೆ.

ಅಚತುರ್ವದನೋ ಬ್ರಹ್ಮಾ ದ್ವಿಬಾಹುರಪರೋ ಹರಿಃ ।
ಅಭಾಲಲೋಚನಃ ಶಂಭುಃ ಭಗವಾನ್ಬಾದರಾಯಣಃ ॥

ಅತ್ರ 'ಹರಾವಸರ' ಇತಿ ವಿಶೇಷಣಾತ್ ತ್ರಿಷ್ವಪಿ ತಾದ್ರೂಪ್ಯಮಾತ್ರವಿವಕ್ಷಾ ವಿಭಾವಿತಾ ಚತುರ್ವದನತ್ವಾದಿವೈಕಲ್ಯಂ ಚೋಕ್ತಮಿತಿ ನ್ಯೂನತಾದ್ರೂಪ್ಯ-ರೂಪಕಮ್. ಇದಂ ವಿಶೇಷೋಕ್ತ್ಯುದಾಹರಣಮಿತಿ ವಾಮನಮತಮ್. ಯದಾಹ ವಾಮನಃ—"ಏಕಗುಣಹಾನೌ ಗುಣಸಾಮ್ಯದಾರ್ಢ್ಯಂ ವಿಶೇಷೋಕ್ತಿಃ ||" ಇತಿ.

"ವ್ಯಾಸಮಹರ್ಷಿಯು ನಾಲ್ಕು ಮುಖಗಳಿಲ್ಲದ ಬ್ರಹ್ಮನೇ ; ಎರಡು ತೋಳುಗಳಿರುವ ಬೇರೊಬ್ಬ ವಿಷ್ಣುವೇ ; ಹಣೆಯಲ್ಲಿ ಕಣ್ಣಿಲ್ಲದ ರುದ್ರನೇ." ವ್ಯಾಸನನ್ನು ಬೇರೊಬ್ಬ ವಿಷ್ಣುವೆಂದು ತಿಳಿಸಿದ್ದರಿಂದ ಅವನಲ್ಲಿ ತ್ರಿಮೂರ್ತಿಗಳ ತಾದ್ರೂಪ್ಯವನ್ನು ಮಾತ್ರವೇ ತಿಳಿಸಲಾಗಿದೆ. ಆದರೂ ಇವನಲ್ಲಿ ಬ್ರಹ್ಮನ ನಾಲ್ಕು ಮುಖಗಳು, ವಿಷ್ಣುವಿನ ನಾಲ್ಕು ತೋಳುಗಳು, ರುದ್ರನ ಮೂರನೆಯ ಕಣ್ಣು ಇಷ್ಟು ಇಲ್ಲವೆಂದು ತಿಳಿಸಿದ್ದರಿಂದ ನ್ಯೂನತೆಯನ್ನು ತಿಳಿಸಿದೆ. ಇದು ವಿಶೇಷೋಕ್ತಿಗೆ ಉದಾಹರಣವೆಂದು ವಾಮನನು ಅಭಿಪ್ರಾಯಪಟ್ಟಿದ್ದಾನೆ. ಒಂದು ವಸ್ತುವಿನಲ್ಲಿ ಒಂದು ಗುಣವು ಕಡಿಮೆಯಾಗಿದ್ದು ಇತರ ಗುಣಗಳೆಲ್ಲವೂ ಇವೆ ಎಂಬುದನ್ನು ತಿಳಿಸುವ ಮೂಲಕ ಅದಕ್ಕೆ ಇತರ ವಸ್ತುವಿನೊಡನೆ ಸಾಮ್ಯವನ್ನು ದೃಢಪಡಿಸುವುದೇ ವಿಶೇಷೋಕ್ತಿಯ ಲಕ್ಷಣವೆಂದು ಅವನು ತಿಳಿಸಿದ್ದಾನೆ.

> ಕಿಮಸುಭಿರ್ಗ್ಲಪಿತೈರ್ಜಡ ಮನ್ಯಸೇ ಮಯಿ ನಿಮಜ್ಜತು ಭೀಮಸುತಾಮನಃ |
> ಮಮ ಕಿಲ ಶ್ರುತಿಮಾಹ ತದರ್ಥಿಕಾಂ ನಲಮುಖೇಂದುಪರಾಂ
> ವಿಬುಧಃ ಸ್ಮರಃ ||

ಅತ್ರ ದಮಯಂತೀಕೃತಚಂದ್ರೋಪಾಲಂಭೇ ಪ್ರಸಿದ್ಧಚಂದ್ರೋ ನ ನಿರ್ಯಾಣಕಾಲಿಕ ಮನಃ ಪ್ರವೇಶಶ್ರುತಿತಾತ್ಪರ್ಯವಿಷಯಃ ; ಕಿಂತು ನಳಮುಖ ಚಂದ್ರ ಏವೇತಿ ತತೋಽಸ್ಯಾಧಿಕ್ಯಪ್ರತಿಪಾದನಾತ್ ಅಧಿಕತಾದ್ರೂಪ್ಯರೂಪಕಮ್. ರೂಪಕಸ್ಯ ಸಾವಯವತ್ವನಿರವಯವತ್ವಾದಿ ವಿಸ್ತಾರ ವೈಚಿತ್ರ್ಯಂ ತು ಚಿತ್ರಮೀಮಾಂಸಾಯಾಂ ದ್ರಷ್ಟವ್ಯಮ್.

"ಜಲಮಯನಾದ್ದರಿಂದ ಜಡಪ್ರಕೃತಿಯ ಚಂದ್ರನೇ ! ದಮಯಂತಿಯು ಪ್ರಾಣವನ್ನು ತೊರೆಯುವಾಗ ಅವಳ ಮನಸ್ಸು ನಿನ್ನಲ್ಲಿ ಅಡಗುವುದೆಂದು ನೀನು ತಿಳಿದಿರುವೆಯಾ ? ಹಾಗೆ ತಿಳಿಯಬೇಡ. ಇದಕ್ಕೆ ಕಾರಣವೇನೆಂಬುದನ್ನು ಕೇಳು. ಪ್ರಾಣವು ಈ ದೇಹದಿಂದ ಹೊರಡುವ ಕಾಲದಲ್ಲಿ ನನ್ನ ಮನಸ್ಸು ಎಲ್ಲಿ ಪ್ರವೇಶಿಸಬೇಕೆಂಬುದನ್ನು ತಿಳಿಸುವ ಶ್ರುತಿಗೆ ನಳಮುಖಚಂದ್ರನಲ್ಲಿಯೇ ಪ್ರವೇಶಿಸಬೇಕೆಂಬುದೇ ಅರ್ಥವೆಂದು ಪಂಡಿತನಾದ ಮನ್ಮಥನೇ ನನಗೆ ಬೋಧಿಸಿರುವನು." ದಮಯಂತಿಯು ಚಂದ್ರನನ್ನು ನಿಂದಿಸುವಾಗ ಹೇಳುವ ಮಾತಿದು. ಜೀವವು ದೇಹವನ್ನು ತೊರೆಯು

ವಾಗ ಮನಸ್ಸು ಎಲ್ಲಿಗೆ ಹೋಗಬೇಕೆಂಬುದನ್ನು ತಿಳಿಸುವ ಶ್ರುತಿಗೆ ಪ್ರಸಿದ್ಧಚಂದ್ರನಲ್ಲಿ ಪ್ರವೇಶಿಸಬೇಕೆಂಬುದು ಅರ್ಥವಲ್ಲ; ಆದರೆ ನಳಮುಖಚಂದ್ರನಲ್ಲಿಯೇ ಅದು ಪ್ರವೇಶಿಸಬೇಕೆಂಬುದು ಅದರ ಅರ್ಥವೆಂದು ಮನ್ಮಥನು ತನಗೆ ತಿಳಿಸಿರುವನೆಂದು ಆಕೆ ಹೇಳುತ್ತಾಳೆ. ಇದರಿಂದ ನಳಮುಖಚಂದ್ರನಲ್ಲಿ ಪ್ರಸಿದ್ಧಚಂದ್ರನಿಗಿಂತ ಆಧಿಕ್ಯವನ್ನು ತಿಳಿಸಿದ್ದರಿಂದ ಇದು ಅಧಿಕತಾದ್ರೂಪ್ಯರೂಪಕವೆನಿಸುತ್ತದೆ. ರೂಪಕದಲ್ಲಿ ಸಾವಯವ, ನಿರವಯವ ಎಂದು ಮುಂತಾದ ಭೇದಗಳ ವಿಸ್ತಾರವನ್ನು ಚಿತ್ರಮೀಮಾಂಸೆಯಲ್ಲಿ ನೋಡಬಹುದು.

## ೬. ಪರಿಣಾಮಾಲಂಕಾರ

ಪರಿಣಾಮಃ ಕ್ರಿಯಾರ್ಥಶ್ಚೇದ್ವಿಷಯೀ ವಿಷಯಾತ್ಮನಾ ।
ಪ್ರಸನ್ನೇನ ದೃಗಬ್ಜೇನ ವೀಕ್ಷತೇ ಮದಿರೇಕ್ಷಣಾ ॥ ೨೧ ॥

ಯತ್ರಾರೋಪ್ಯಮಾಣೋ ವಿಷಯೀ, ಕಿಂಚಿತ್ಕಾರ್ಯೋಪಯೋಗಿತ್ವೇನ ನಿಬಧ್ಯಮಾನಃ ಸ್ವತಸ್ತಸ್ಯ ತದುಪಯೋಗಿತ್ವಾಸಂಭವಾತ್ ಪ್ರಕೃತಾತ್ಮನಾ ಪರಿಣತಿಮಪೇಕ್ಷತೇ ತತ್ರ ಪರಿಣಾಮಾಲಂಕಾರಃ. ಅತ್ರೋದಾಹರಣಂ ಪ್ರಸನ್ನೇನೇತಿ. ಅತ್ರ ಹಿ ಅಬ್ಜಸ್ಯ ವೀಕ್ಷಣೋಪಯೋಗಿತ್ವಂ ನಿಬಧ್ಯತೇ ನ ತು ದೃಶಃ ಮಯೂರವ್ಯಂಸಕಾದಿಸಮಾಸೇನ ಉತ್ತರಪದಾರ್ಥಪ್ರಾಧಾನ್ಯಾತ್. ನ ಚೋಪಮಿತಸಮಾಸಾಶ್ರಯಣೇನ ದೃಗಬ್ಜಮಿವೇತಿ ಪೂರ್ವಪದಪ್ರಾಧಾನ್ಯಮಸ್ತೀತಿ ವಾಚ್ಯಮ್, ಪ್ರಸನ್ನೇನೇತಿ ಸಾಮಾನ್ಯಧರ್ಮಪ್ರಯೋಗಾತ್. "ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಾಪ್ರಯೋಗೇ" ಇತಿ ತದಪ್ರಯೋಗ ಏವ ಉಪಮಿತಸಮಾಸಾನುಶಾಸನಾತ್. ಅಬ್ಜಸ್ಯ ವೀಕ್ಷಣೋಪಯೋಗಿತ್ವಂ ನ ಸ್ವಾತ್ಮನಾ ಸಂಭವತಿ. ಅತಸ್ತಸ್ಯ ಪ್ರಕೃತದೃಗಾತ್ಮನಾ ಪರಿಣತ್ಯಪೇಕ್ಷಣಾತ್ ಪರಿಣಾಮಾಲಂಕಾರಃ ಯಥಾ ವಾ—

ತೀರ್ತ್ವಾ ಭೂತೇಶಮೌಲಿಸ್ರಜಮಮರಧುನೀಮಾತ್ಮನಾಸೌ ತೃತೀಯಃ
ತಸ್ಮೈ ಸೌಮಿತ್ರಿಮೈತ್ರೀಮಯಮುಪಕೃತವಾನಾತರಂ ನಾವಿಕಾಯ ।
ವ್ಯಾಮಗ್ರಾಹ್ಯಸ್ತನೀಭಿಃ ಶಬರಯುವತಿಭಿಃ ಕೌತುಕೋದಂಚದಕ್ಷಂ
ಕೃಚ್ಛ್ರಾದನ್ವೀಯಮಾನಃ ಕ್ಷಣಮಚಲಮಥೋ ಚಿತ್ರಕೂಟಂ ಪ್ರತಸ್ಥೇ ॥

ಅತ್ರಾರೋಪ್ಯಮಾಣಃ ಆತರಃ ಸೌಮಿತ್ರಿಮೈತ್ರೀರೂಪತಾಪತ್ತ್ಯಾ ಗುಹೋಪಕಾರಕಲಕ್ಷಣಕಾರ್ಯೋಪಯೋಗೀ ನ ಸ್ವಾತ್ಮನಾ. ಗುಹಸ್ಯ ರಘುನಾಥಪ್ರಸಾದೈಕಾರ್ಥಿತ್ವೇನ ವೇತನಾರ್ಥಿತ್ವಾಭಾವಾತ್ ॥

ಉಪಮಾನವು ಉಪಮೇಯವಾಗಿ ಪರಿಣಮಿಸಿ ಕ್ರಿಯೆಯೊಡನೆ ಅನ್ವಯಿಸುವುದೇ ಪರಿಣಾಮಾಲಂಕಾರವೆನಿಸುತ್ತದೆ. ಪ್ರಸನ್ನವಾದ ನೇತ್ರಕಮಲದಿಂದ ನಾಯಿಕೆಯು ನೋಡುತ್ತಾಳೆ. ಇಲ್ಲಿ ನೇತ್ರಕಮಲದಿಂದ ನೋಡುವುದು ಹೊಂದಿಕೆಯಾಗುವುದಿಲ್ಲ. ಕಣ್ಣಿನಿಂದ ನೋಡಬೇಕೇ ಹೊರತು ಕಮಲದಿಂದ ನೋಡಲು ಸಾಧ್ಯವಾಗುವುದಿಲ್ಲ. ಆದ್ದರಿಂದ "ವೀಕ್ಷತೇ'' ಎಂಬ ಕ್ರಿಯೆಗೆ ಅನುಕೂಲವಾಗುವಂತೆ ಕಮಲವು ನೇತ್ರರೂಪವಾಗಿ ಪರಿಣಮಿಸುತ್ತದೆ.

ಆರೋಪಿಸಬೇಕಾದ ಉಪಮಾನವನ್ನು ಯಾವುದೋ ಒಂದು ಕಾರ್ಯಕ್ಕೆ ಉಪಯೋಗವಾಗಲೆಂದು ತಿಳಿಸಿದ್ದರೂ ಸಹ, ಆ ಕಾರ್ಯಕ್ಕೆ ಅದು ಉಪಯೋಗವಾಗುವ ಸಂಭವವಿಲ್ಲದ್ದರಿಂದ ಉಪಮೇಯವಾಗಿ ಅದು ಎಲ್ಲಿ ಪರಿಣಮಿಸುತ್ತದೆಯೋ ಅಲ್ಲಿ ಪರಿಣಾಮಾಲಂಕಾರವಿದೆ ಎಂದು ತಿಳಿಯಬೇಕು. ಕಮಲವು ವೀಕ್ಷಣಕ್ರಿಯೆಗೆ ಉಪಯೋಗವಾಗಲೆಂದು "ದೃಗಬ್ಜೇನ ವೀಕ್ಷತೇ'' ಎಂಬಲ್ಲಿ ತಿಳಿಸಲಾಗಿದೆ ; ಆದರೆ ಕಣ್ಣಿಗೂ ವೀಕ್ಷಣಕ್ರಿಯೆಗೂ ಇಲ್ಲಿ ಸಂಬಂಧವಿಲ್ಲ. ಮಯೂರಶ್ಚಾಸೌ ವ್ಯಂಸಕಶ್ಚ ಮಯೂರವ್ಯಂಸಕಃ ಎಂಬಂತೆ ಇಲ್ಲಿಯೂ ದೃಗೇವ ಅಬ್ಜಂ ದೃಗಬ್ಜಂ ಎಂದು ಸಮಾಸವನ್ನು ಹೇಳಿರುವುದರಿಂದ ಅಬ್ಜವೆಂಬ ಉತ್ತರಪದಾರ್ಥವೇ ಪ್ರಧಾನವೆನಿಸುತ್ತದೆ. ಆದರೆ ಉಪಮಿತಸಮಾಸವನ್ನಾಶ್ರಯಿಸಿ 'ದೃಕ್ ಅಬ್ಜಮಿವ=ದೃಗಬ್ಜಂ' ಎಂದು ಹೇಳಿದರೆ ಕಣ್ಣೆಂಬ ಪೂರ್ವಪದಾರ್ಥವೇ ಪ್ರಧಾನವಾಗಲಿ ಎಂದು ಏಕೆ ಹೇಳಬಾರದೆಂದು ಆಕ್ಷೇಪಿಸಬಹುದು. ಆದರೆ ಇದು ಸಮಂಜಸವೆನಿಸುವುದಿಲ್ಲ. ಇಲ್ಲಿ 'ಪ್ರಸನ್ನೇನ' ಎಂದು ಸಾಧಾರಣಧರ್ಮವನ್ನು ತಿಳಿಸುವ ಪದ ಒಂದು ಕುಳಿತಿದೆ. ಇಂತಹ ಪದವಿದ್ದರೆ ಇಲ್ಲಿ ಉಪಮಿತಸಮಾಸವನ್ನು ಮಾಡಲಿಕ್ಕಾಗುವುದಿಲ್ಲ. "ಉಪಮಿತಂ ವ್ಯಾಘ್ರಾದಿಭಿಃ ಸಾಮಾನ್ಯಾಪ್ರಯೋಗೇ'' ಎಂದು ಉಪಮಿತಸಮಾಸವನ್ನು ವಿಧಿಸುವ ಪಾಣಿನಿಯ ಸೂತ್ರವು ಈ ಅಂಶವನ್ನು ಸ್ಪಷ್ಟಪಡಿಸಿದೆ. "ಎಲ್ಲಿ ಸಾಮಾನ್ಯ ಧರ್ಮವನ್ನು ತಿಳಿಸುವ ಪದವನ್ನು ಪ್ರಯೋಗಿಸಿಲ್ಲವೋ ಅಲ್ಲಿ ಉಪಮೇಯವನ್ನು ತಿಳಿಸುವ ಪದವು ಉಪಮಾನವನ್ನು ತಿಳಿಸುವ ವ್ಯಾಘ್ರಾದಿಗಣದ ಶಬ್ದದೊಡನೆ ಸಮಾಸವಾಗುತ್ತದೆ'' ಎಂದು ಸೂತ್ರದ ಅಭಿಪ್ರಾಯ. ಇಲ್ಲಿ 'ಪ್ರಸನ್ನೇನ' ಎಂದು ಸಾಧಾರಣ ಧರ್ಮವನ್ನು ತಿಳಿಸುವ ಪದವಿರುವ ಪ್ರಯುಕ್ತ ದೃಕ್ ಅಬ್ಜಮಿವ ಎಂದು ಉಪಮಿತಸಮಾಸವಾಗುವುದಿಲ್ಲ. ಆದ್ದರಿಂದ ಕಮಲಕ್ಕೆ ಇಲ್ಲಿ ಪ್ರಾಧಾನ್ಯವಿರಬೇಕು. ಆದರೆ ಕಮಲಕ್ಕೆ ನೇರವಾಗಿ ವೀಕ್ಷಣಕ್ರಿಯೆಯಲ್ಲಿ ಅನ್ವಯ ಬರುವಂತಿಲ್ಲ. ಆದ್ದರಿಂದ ಅದು ನೇತ್ರರೂಪದಲ್ಲಿ ಪರಿಣಮಿಸಲೇಬೇಕಾಗಿದೆ. ಹಾಗೆ ಪರಿಣಮಿಸಿದರೆ ಮಾತ್ರವೇ ಅದಕ್ಕೆ ವೀಕ್ಷಣಕ್ರಿಯೆಯಲ್ಲಿ ಉಪಯೋಗವಾಗಲಿರುವುದು. ನೇತ್ರರೂಪವಾದ ಕಮಲದಿಂದ ಆಕೆ ನೋಡಿದಳು ಎಂದು ತಿಳಿಸಿದರೆ ಮಾತ್ರವೇ ಅರ್ಥವು ಹೊಂದಿಕೆ

ಯಾಗುವುದು. ಹೀಗೆಯೇ ಮುಂದಿನ ಉದಾಹರಣದಲ್ಲೂ ಪರಿಣಾಮವನ್ನು ತಿಳಿಯ ಬಹುದು.

"ತಾನೇ ಪೌರನೆಯವನೆನಿಸಿ ಸೀತೆ ಮತ್ತು ಲಕ್ಷ್ಮಣರೊಡಗೂಡಿದ ರಾಮನು ಶಿವನ ಶಿರೋಮಾಲೆ ಎನಿಸಿದ ಗಂಗೆಯನ್ನು ದಾಟಿ ಆ ಕಾರ್ಯದಲ್ಲಿ ತನಗೆ ನೆರವಾಗಿದ್ದ ಗುಹನೆಂಬ ನಾವಿಕನಿಗೆ ಲಕ್ಷ್ಮಣನ ಸ್ನೇಹವೆಂಬ ಸುಂಕವನ್ನು ಉಪಕಾರರೂಪವಾಗಿ ದೊರಕಿಸಿದನು. ಆಗ ಅಡ್ಡಲಾಗಿ ನೀಡಿದ ತೋಳುಗಳೆರಡರೊಳಗಿನ ಪ್ರದೇಶದೊಳಗೆ ಅಡಗುವಷ್ಟು ವಿಶಾಲವಾದ ಸ್ತನಗಳುಳ್ಳ ಶಬರಯುವತಿಯರು ಕುತೂಹಲದಿಂದ ಅರಳಿದ ಕಣ್ಣುಗಳಿಂದ ರಾಮನನ್ನು ನೋಡಲು ದಾರಿಯಲ್ಲಿ ಒಂದು ಕ್ಷಣಕಾಲ ಬಹು ಕಷ್ಟದಿಂದ ಹಿಂಬಾಲಿಸುತ್ತಿರಲು ರಾಮನು ಚಿತ್ರಕೂಟಕ್ಕೆ ಹೊರಟನು." ನದಿಯನ್ನು ದಾಟಿಸಿದ್ದಕ್ಕೆ ಕೊಡಬೇಕಾದ ಸುಂಕವು ಲಕ್ಷ್ಮಣನ ಸ್ನೇಹರೂಪವಾಗಿತ್ತೆಂದೂ, ಆ ಮೂಲಕ ರಾಮನು ಗುಹನಿಗೆ ಉಪಕಾರವನ್ನೆಸಗಿದನೆಂದೂ ಇಲ್ಲಿ ತಿಳಿಸಿದೆ. ಸುಂಕವನ್ನು ಹಣದ ರೂಪದಲ್ಲಿ ಕೊಟ್ಟಿದ್ದರೆ ಗುಹನಿಗೆ ಯಾವ ಉಪಕಾರವನ್ನೂ ರಾಮನು ಮಾಡಿದಂತಾಗುತ್ತಿರಲಿಲ್ಲ. ಗುಹನು ಸದ್ಭಕ್ತನೆನಿಸಿ ರಾಮನ ವಾತ್ಸಲ್ಯವನ್ನೇ ಪ್ರಸಾದವೆಂದು ಭಾವಿಸಿ ಅದಷ್ಟನ್ನು ಮಾತ್ರ ಭಕ್ತಿಯಿಂದ ಬಯಸಿದನೇ ಹೊರತು ಸುಂಕವನ್ನು ಬಯಸುವಂತಿರಲಿಲ್ಲ. ರಾಮನು ಗುಹನ ನೆರವನ್ನು ಪಡೆದದ್ದರಿಂದ ಅವನಿಗೆ ಒಂದು ಉಪಕಾರದನ್ನು ಮಾಡಲೇಬೇಕಾಗಿತ್ತು. ಸುಂಕವನ್ನು ತೆತ್ತಿದ್ದರೆ ಆ ಉಪಕಾರವು ನೆರವೇರುತ್ತಿರಲಿಲ್ಲ. ಈ ಉಪಕಾರವೆಂಬ ಕಾರ್ಯಕ್ಕೆ ಉಪಯೋಗವಾಗುವಂತೆ ಸುಂಕವು ಲಕ್ಷ್ಮಣನ ಸ್ನೇಹರೂಪವಾಗಿ ಪರಿಣಮಿಸಬೇಕಾಯಿತು. ಲಕ್ಷ್ಮಣನ ಸ್ನೇಹವನ್ನು ರಾಮನು ಗುಹನಿಗೆ ದೊರಕಿಸಿದ್ದರಿಂದ ರಾಮ ಗುಹ ಇಬ್ಬರಿಗೂ ಸಂತೋಷವಾಯಿತು. ಹೀಗೆ ಪ್ರಕೃತಕಾರ್ಯದಲ್ಲಿ ಅನ್ವಯಿಸುವ ಉದ್ದೇಶದಿಂದ ಉಪಮಾನವು ಉಪಮೇಯ ರೂಪದಲ್ಲಿ ಪರಿಣಮಿಸುವುದರಲ್ಲಿ ವೈಚಿತ್ರ್ಯವಿದೆ. ಇದರ ಆಧಾರದ ಮೇಲೆಯೇ ಇದು ಪರಿಣಾಮಾಲಂಕಾರವೆನಿಸಿದೆ.

## 7. ಉಲ್ಲೇಖಾಲಂಕಾರ

ಬಹುಭಿರ್ಬಹುಧೋಲ್ಲೇಖಾದೇಕಸ್ಯೋಲ್ಲೇಖ ಇಷ್ಯತೇ ।
ಸ್ತ್ರೀಭಿಃ ಕಾಮೋಽರ್ಥಿಭಿಃ ಸ್ವರ್ದ್ರುಃ ಕಾಲಃ ಶತ್ರುಭಿರೈಕ್ಷಿ ಸಃ ॥ ೨೨ ॥

ಯತ್ರ ನಾನಾವಿಧಧರ್ಮಯೋಗ್ಯಂ ವಸ್ತು ತತ್ತದ್ಧರ್ಮಯೋಗರೂಪನಿಮಿತ್ತ ಭೇದೇನ ಅನೇಕೇನ ಗ್ರಹೀತ್ರಾ ಅನೇಕಧಾ ಉಲ್ಲಿಖ್ಯತೇ ತತ್ರ ಉಲ್ಲೇಖಃ ಅನೇಕಧೋಲ್ಲೇಖನೇ ರುಚ್ಯರ್ಥಿತ್ವಭಯಾದಿಕಂ ಯಥಾರ್ಹಂ ಪ್ರಯೋಜಕಮ್. ರುಚಿರ

ಭಿರತಿಃ. ಅರ್ಥಿತ್ವಂ ಲಿಪ್ಸಾ. ಸ್ತ್ರೀಭಿರಿತ್ಯಾದ್ಯುದಾಹರಣವತ್. ಅತ್ರೈಕ ಏವ ರಾಜಾ ಸೌಂದರ್ಯವಿತರಣಪರಾಕ್ರಮಶಾಲೀತಿ ಕೃತ್ವಾ ಸ್ತ್ರೀಭಿರರ್ಥಿಭಿಃ ಪ್ರತ್ಯರ್ಥಿಭಿಶ್ಚ ರುಚ್ಯರ್ಥಿತ್ವಭಯೈಃ ಕಾಮಕಲ್ಪತರುರೂಪೋ ದೃಷ್ಟಃ. ಯಥಾ ವಾ—

ಗಜತ್ರಾತೇತಿ ವೃದ್ಧಾಭಿಃ ಶ್ರೀಕಾಂತ ಇತಿ ಯೌವತೈಃ ।
ಯಥಾಸ್ಥಿತಶ್ಚ ಬಾಲಾಭಿರ್ದೃಷ್ಟಃ ಶೌರಿಃ ಸಕೌತುಕಮ್ ॥

ಅತ್ರ ಯಸ್ತಥಾಭೂತಂ ಭಕ್ತಂ ಗಜಂ ತ್ವರಯಾ ತ್ರಾಯತೇ ಸ್ಮ ಸೋಽಯಮಾದಿಪುರುಷೋತ್ತಮಃ ಇತಿ ವೃದ್ಧಾಭಿಃ ಸಂಸಾರಭೀತ್ಯಾ ತದಭಯಾರ್ಥಿನೀಭಿಃ ಕೃಷ್ಣೋಽಯಂ ಮಥುರಾಪುರಂ ಪ್ರವಿಶನ್ ದೃಷ್ಟಃ. ಯಸ್ತಥಾ ಚಂಚಲತ್ವೇನ ಪ್ರಸಿದ್ಧಾಯಾಃ ಶ್ರಿಯೋಽಪಿ ಕಾಮೋಪಚಾರವೈದಗ್ಧ್ಯೇನ ನಿತ್ಯಂ ವಲ್ಲಭಃ ಸೋಽಯಂ ದಿವ್ಯಯುವೇತಿ ಯುವತಿಸಮೂಹೈಃ ಸೋತ್ಕಂಠೈರ್ದೃಷ್ಟಃ. ಬಾಲಾಭಿಸ್ತದ್ಬಾಹ್ಯಗತರೂಪವೇಷಾಲಂಕಾರದರ್ಶನಮಾತ್ರಲಾಲಸಾಭಿಃ ಯಥಾಸ್ಥಿತವೇಷಾದಿಯುಕ್ತೋ ದೃಷ್ಟ ಇತಿ ಬಹುಧೋಲ್ಲೇಖಃ. ಪೂರ್ವಃ ಕಾಮತ್ವಾದ್ಯಾರೋಪರೂಪಕಸಂಕೀರ್ಣಃ; ಅಯಂ ತ ಶುದ್ಧ ಇತಿ ತಯೋರ್ಭೇದಃ.

ಒಂದೇ ವಸ್ತುವನ್ನು ಅನೇಕರು ಅನೇಕ ಬಗೆಯಾಗಿ ಚಿತ್ರಿಸುವುದೇ ಉಲ್ಲೇಖಾಲಂಕಾರವೆನಿಸುತ್ತದೆ. ರಾಜನನ್ನು ಮನ್ಮಥನೆಂದು ಸ್ತ್ರೀಯರೂ, ಕಲ್ಪವೃಕ್ಷವೆಂದು ಯಾಚಕರೂ, ಯಮನೆಂದು ಶತ್ರುಗಳೂ ಕಂಡರು.

ಅನೇಕ ಬಗೆಯ ಧರ್ಮಗಳಿಂದ ಕೂಡಿದ ಒಂದೇ ವಸ್ತುವನ್ನೇ ಆಯಾ ಧರ್ಮಕ್ಕನುಗುಣವಾಗಿ ಗ್ರಹಿಸಿದ ಅನೇಕ ಜನರು ಅನೇಕ ಬಗೆಯಾಗಿ ಎಲ್ಲಿ ವರ್ಣಿಸಿರುವರೋ ಅಲ್ಲಿ ಕಂಡುಬರುವ ಈ ಬಗೆಯ ವೈಚಿತ್ರ್ಯವು ಉಲ್ಲೇಖಾಲಂಕಾರವೆನಿಸುತ್ತದೆ. ಅನೇಕರು ಒಂದೇ ವಸ್ತು ಅಥವಾ ವ್ಯಕ್ತಿಯನ್ನು ಕಂಡು ಅನೇಕ ಬಗೆಯಾಗಿ ಚಿತ್ರಿಸಬೇಕಾದರೆ ನೋಡುವವರ ಯೋಗ್ಯತೆಗನುಗುಣವಾಗಿ ಅವರವರ ಅಭಿರುಚಿ, ಅಪೇಕ್ಷೆ, ಭೀತಿ ಮೊದಲಾದವು ಪ್ರೇರಕವಾಗುತ್ತವೆ. ಇಲ್ಲಿ ಒಬ್ಬ ರಾಜನನ್ನೇ ಸೌಂಧರ್ಯ, ಔದಾರ್ಯ ಮತ್ತು ಪರಾಕ್ರಮಗಳುಳ್ಳವನೆಂದು ಭಾವಿಸಿ ಸ್ತ್ರೀಯರು, ಯಾಚಕರು ಮತ್ತು ಶತ್ರುಗಳು ಕ್ರಮವಾಗಿ ಪ್ರೇಮದಿಂದಲೂ, ಯಾಚನೆಗಾಗಿಯೂ, ಭಯದಿಂದಲೂ ಅವನನ್ನು ರಾಮನೆಂದೂ, ಕಲ್ಪವೃಕ್ಷವೆಂದೂ, ಯಮನೆಂದೂ ಕಂಡರು. ಹೀಗೆಯೇ " ಗಜೇಂದ್ರನ ಸಂರಕ್ಷಕನೆಂದು ವೃದ್ಧಸ್ತ್ರೀಯರೂ, ಲಕ್ಷ್ಮೀರಮಣನೆಂದು ಯುವತಿಯರೆಲ್ಲರೂ, ಹೊರಗಿನ ವೇಷಭೂಷಣಗಳಿಗೆ ತಕ್ಕಂತೆ ಅದೇ ರೀತಿಯಲ್ಲಿ ಬಾಲಕಿಯರೂ ಶ್ರೀಕೃಷ್ಣನನ್ನು ಕಂಡರು ". ಇಲ್ಲಿ ಮೊಸಳೆಗೆ ಹೆದರಿದ್ದ ಭಕ್ತ ಗಜೇಂದ್ರನ ಬಳಿಗೆ ಬೇಗನೆ ಹೋಗಿ ರಕ್ಷಿಸಿದ ಆದಿಪುರುಷೋತ್ತಮನೇ ಮಥುರಾನಗರವನ್ನು ಪ್ರವೇಶಿಸಿದ ಈ ಕೃಷ್ಣನೆಂದು ಸಂಸಾರದ ಕೋಟಲೆಗೆ ಹೆದರಿ ಅಭಯಪ್ರದಾನ

ಕ್ಕಾಗಿ ಹಾತೊರೆಯುತ್ತಿದ್ದ ವೃದ್ಧಸ್ತ್ರೀಯರು ಗ್ರಹಿಸಿದರು. ಚಂಚಲೆ ಎಂದು ಪ್ರಸಿದ್ಧಳಾದ್ದ ಲಕ್ಷ್ಮಿಗೂ ಸಹ ಕಾಮಭೋಗವಿಲಾಸದಿಂದ ಯಾವಾಗಲೂ ಪ್ರಿಯನೆನಿಸಿದ ನಾರಾಯಣನೇ ದೇವಭಾವದಿಂದ ಕೂಡಿರುವ ಈ ಯುವಕನೆಂದು ಯುವತಿಯರು ಕೃಷ್ಣನನ್ನು ಕುತೂಹಲದಿಂದ ಕಂಡರು. ಅವನ ಹೊರಗಿನ ಆಕಾರ, ವೇಷ, ಅಲಂಕಾರಗಳನ್ನು ನೋಡುವುದರಲ್ಲಿಯೇ ಹಾತುವರೆಯುತ್ತಿದ್ದ ಬಾಲಕಿಯರು ಅವನನ್ನು ಹಾಗೆಯೇ ಕಂಡರು. ಹಿಂದಿನ ಉದಾಹರಣದಲ್ಲಿ ಪ್ರಕೃತಸಂದರ್ಭಕ್ಕೆ ಸಂಬಂಧಿಸಿದ ರಾಜನಲ್ಲಿ ಮನ್ಮಥ, ಕಲ್ಪವೃಕ್ಷ, ಯಮ ಇವರ ತಾದಾತ್ಮ್ಯವನ್ನು ಆರೋಪಿಸುವ ರೂಪಕಾಲಂಕಾರದೊಡನೆ ಉಲ್ಲೇಖಾಲಂಕಾರವು ಕೂಡಿಕೊಂಡಿದೆ. ಇಲ್ಲಿಯಾದರೋ ಬೇರೆ ಯಾವ ಅಲಂಕಾರದೊಡನೆಯೂ ಬೆರೆಯದೆ ಉಲ್ಲೇಖವು ಶುದ್ಧವೆನಿಸಿದೆ.

> ಏಕೇನ ಬಹುಧೋಲ್ಲೇಖೋಽಪ್ಯಸೌ ವಿಷಯಭೇದತಃ ।
> ಗುರುರ್ವಚಸ್ಯರ್ಜುನೋಽಯಂ ಕೀರ್ತೌ ಭೀಷ್ಮಃ ಶರಾಸನೇ ॥ ೨೩ ॥

ಗ್ರಹೀತೃಭೇದಾಭಾವೇಽಪಿ ವಿಷಯಭೇದಾದ್ಬಹುಧೋಲ್ಲೇಖನಾದಸೌ ಉಲ್ಲೇಖಃ. ಉದಾಹರಣಂ ಶ್ಲೇಷಸಂಕೀರ್ಣಮ್. ವಚೋವಿಷಯೇ ಮಹಾನ್ಪಟುಃ ಇತ್ಯಾದಿವತ್ ಬೃಹಸ್ಪತಿರಿತ್ಯಾದ್ಯರ್ಥಾಂತರಸ್ಯಾಪಿ ಕ್ರೋಡೀಕರಣಾತ್. ಶುದ್ಧೋ ಯಥಾ—

> ಆಕೃಶಂ ಕುಚಯೋಃ ಕೃಶಂ ವಿಲಗ್ನೇ ವಿಪುಲಂ ಚಕ್ಷುಷಿ ವಿಸ್ತೃತಂ ನಿತಂಬೇ ।
> ಅಧರೇಽರುಣಮಾವಿರಸ್ತು ಚಿತ್ತೇ ಕರುಣಾಶಾಲಿ ಕಪಾಲಿಭಾಗಧೇಯಮ್ ॥

ಒಬ್ಬನೇ ಒಂದು ವಸ್ತುವಿನ ಅಥವಾ ಒಂದು ವ್ಯಕ್ತಿಯ ಬೇರೆಬೇರೆ ಅಂಶಗಳನ್ನು ಉದ್ದೇಶಿಸಿ ಅದನ್ನು ಅನೇಕ ಬಗೆಯಾಗಿ ನಿರೂಪಿಸಿದರ ಅದೂ ಉಲ್ಲೇಖವೇ ಆಗುತ್ತದೆ. " ಇವನು ಮಾತನಾಡುವುದರಲ್ಲಿ ಬೃಹಸ್ಪತಿಯೂ, ಯಶಸ್ಸನ್ನು ಗಳಿಸುವುದರಲ್ಲಿ ಅರ್ಜುನನೂ, ಧನುಸ್ಸಿನ ಪ್ರಯೋಗದಲ್ಲಿ ಭೀಷ್ಮನೂ ಆಗಿರುವನು."

ಗ್ರಹಿಸುವವರಲ್ಲಿ ಭೇದವಿಲ್ಲದೆ ಇದ್ದರೂ ಅಂದರೆ ಆ ಒಬ್ಬ ವ್ಯಕ್ತಿಯಲ್ಲೇ ಬೇರೆ ವಸ್ತುವಿನ ಅಥವಾ ವ್ಯಕ್ತಿಯ ಅನೇಕ ಅಂಶಗಳನ್ನು ಬೇರೆಬೇರೆಯಾಗಿ ಬಿಡಿಸಿ ತಿಳಿಸಿದರೆ ಇದೂ ಸಹ ಉಲ್ಲೇಖವೆನಿಸುತ್ತದೆ. ಹಿಂದಿನ ಪ್ರಭೇದದಲ್ಲಿ ಒಬ್ಬನನ್ನೇ ಅನೇಕರು ಅನೇಕ ಬಗೆಯಾಗಿ ಗ್ರಹಿಸಿದರೆಂದು ತಿಳಿಸಿದೆ. ಇಲ್ಲಿ ಒಬ್ಬನೇ ಮತ್ತೊಬ್ಬನಲ್ಲಿರುವ ಅನೇಕ ವಿಷಯಗಳನ್ನು ಅನೇಕ ರೀತಿಗಳಲ್ಲಿ ಚಿತ್ರಿಸುವನೆಂಬುದೇ ವಿಶೇಷ. ಇಲ್ಲಿಯಾದರೋ ಉಲ್ಲೇಖದೊಡನೆ ಶ್ಲೇಷವೂ ಸೇರಿಕೊಂಡಿದೆ. ಮಾತನಾಡುವ ಅಂಶದಲ್ಲಿ ಇವನು ಬಹಳ ಚುರುಕಾಗಿರುವವನು. ಯಶಸ್ಸನ್ನು ಗಳಿಸುವುದರಲ್ಲಿ ಶುದ್ಧನೂ, ಬಾಣ ಪ್ರಯೋಗದಲ್ಲಿ ಭಯಂಕರನೂ ಆಗಿರುವನೆಂಬ ಅರ್ಥವೂ ಇಲ್ಲಿ ಸೇರಿಕೊಂಡಿದೆ.

ಇವರ ಜೊತೆಗೆ ಇವನು ಮಾತನಾಡುವುದರಲ್ಲಿ ಬೃಹಸ್ಪತಿ ಎಂದು ಮುಂತಾದ ಅರ್ಥವು ಶ್ಲೇಷದಿಂದ ತೋರುವುದು. ಬೇರೆ ಯಾವ ಅಲಂಕಾರವೂ ಇಲ್ಲದೆ ಶುದ್ಧವಾದುದು ಹೀಗಿರುತ್ತದೆ.

"ಪರಮೇಶ್ವರನ ಭಾಗ್ಯವೆನಿಸಿ ದಯಾಮಯವೆನಿಸಿದ ಪಾರ್ವತಿಯ ಸ್ವರೂಪವು ನನ್ನ ಮನಸ್ಸಿನಲ್ಲಿ ಆವಿರ್ಭವಿಸಲಿ." ಅದು ಹೇಗಿದೆ ಎಂಬುದನ್ನು ಇಲ್ಲಿ ತಿಳಿಸುತ್ತಾನೆ. "ಅದು ಕುಚಗಳಲ್ಲಿ ಸ್ಥೂಲವೂ, ಮಧ್ಯಪ್ರದೇಶದಲ್ಲಿ ಕೃಶವೂ, ಕಣ್ಣುಗಳಲ್ಲಿ ಅಗಲವೂ, ಕಟಿಯ ಹಿಂಭಾಗದಲ್ಲಿ ವಿಸ್ತಾರವೂ, ಕೆಳ ತುಟಿಯಲ್ಲಿ ಕೆಂಬಣ್ಣವೂ ಆಗಿರುವಷ್ಟು ದಿವ್ಯವೆನಿಸಿದೆ.'' ಪಾರ್ವತಿಯೊಬ್ಬಳನ್ನೇ ಭಕ್ತನೊಬ್ಬನು ಅನೇಕ ಬಗೆಯಾಗಿ ಗ್ರಹಿಸುತ್ತಾನೆ. ಆಶ್ರಯಭೇದದಿಂದ ಒಬ್ಬ ವ್ಯಕ್ತಿಯೇ ಸ್ಥೂಲಳೂ, ಕೃಶಳೂ ವಿಸ್ತಾರವೂ, ಕೆಂಬಣ್ಣದವಳೂ ಆಗಿದ್ದಳೆಂದು ಇಲ್ಲಿ ಒಬ್ಬನೇ ತಿಳಿಯುತ್ತಾನೆ.

## ೮–೧೦. ಸ್ಮೃತಿಭ್ರಾಂತಿಸಂದೇಹಾಲಂಕಾರಗಳು

ಸ್ಯಾತ್ಸ್ಮೃತಿಭ್ರಾಂತಿಸಂದೇಹೈಸ್ತದಂಕಾಲಂಕೃತಿತ್ರಯಮ್ ।
ಪಂಕಜಂ ಪಶ್ಯತಃ ಕಾಂತಾಮುಖಂ ಮೇ ಗಾಹತೇ ಮನಃ ॥ ೨೪ ॥
ಅಯಂ ಪ್ರಮತ್ತಮಧುಪಸ್ತ್ವನ್ಮುಖಂ ವೇತ್ತಿ ಪಂಕಜಮ್ ।
ಪಂಕಜಂ ವಾ ಸುಧಾಂಶುರ್ವೇತ್ಯಸ್ಮಾಕಂ ತು ನ ನಿರ್ಣಯಃ ॥ ೨೫ ॥

ಸ್ಮೃತಿಭ್ರಾಂತಿಸಂದೇಹೈಃ ಸಾದೃಶ್ಯಾನ್ನಿಬಧ್ಯಮಾನೈಃ ಸ್ಮೃತಿಮಾನ್, ಭ್ರಾಂತಿಮಾನ್, ಸಂದೇಹಃ ಇತಿ ಸ್ಮೃತ್ಯಾದಿಪದಾಂಕಿತಂ ಅಲಂಕಾರತ್ರಯಂ ಭವತಿ. ತಚ್ಚ ಕ್ರಮೇಣ ಉದಾಹೃತಮ್. ಯಥಾ ವಾ—

ದಿವ್ಯಾನಾಮಪಿ ಕೃತವಿಸ್ಮಯಾಂ ಪುರಸ್ತಾದಂಭಸ್ತಃ ಸ್ಫುರದರ-
ವಿಂದಚಾರುಹಸ್ತಾಮ್ ।
ಉದ್ವೀಕ್ಷ್ಯ ಶ್ರಿಯಮಿವ ಕಾಂಚಿದುತ್ತರಂತೀಮಸ್ಮಾರ್ಷೀಜ್ಜಲನಿಧಿ-
ಮಂಥನಸ್ಯ ಶೌರಿಃ ॥

ಪೂರ್ವತ್ರ ಸ್ಮೃತಿಮದುದಾಹರಣೇ ಸದೃಶಸ್ಯೈವ ಸ್ಮೃತಿಃ; ಅತ್ರ ತು ಸದೃಶಲಕ್ಷ್ಮೀಸ್ಮೃತಿಪೂರ್ವಕಂ ತತ್ಸಂಬಂಧಿನೋ ಜಲನಿಧಿಮಂಥನಸ್ಯಾಪಿ ಸ್ಮೃತಿರಿತಿ ಭೇಧಃ.

ಪಲಾಶಮುಕುಲಭ್ರಾಂತ್ಯಾ ಶುಕತುಂಡೇ ಪತತ್ಯಲಿಃ ।
ಸೋಽಪಿ ಜಂಬೂಫಲಭ್ರಾಂತ್ಯಾ ತಮಾಲಿಂ ಧರ್ತುಮಿಚ್ಛತಿ ॥

ಅತ್ರ ಅನ್ಯೋನ್ಯವಿಷಯಭ್ರಾಂತಿನಿಬಂಧನಃ ಪೂರ್ವೋದಾಹರಣಾದ್ವಿಶೇಷಃ—

ಜೀವನಗ್ರಹಣೇ ನಮ್ರಾಃ ಗೃಹೀತ್ವಾ ಪುನರುನ್ನತಾಃ ।
ಕಿಂ ಕನಿಷ್ಠಾಃ ಕಿಮು ಜ್ಯೇಷ್ಠಾ ಘಟೀಯಂತ್ರಸ್ಯ ದುರ್ಜನಾಃ ।

ಪೂರ್ವೋದಾಹೃತಸಂದೇಹೋಽಪ್ರಸಿದ್ಧಕೋಟಿಕಃ, ಅಯಂ ತು ಕಲ್ಪಿತಕೋಟಿಕ ಇತಿ ಭೇದಃ.

ಒಂದು ವಸ್ತುವಿನ ಸಾದೃಶ್ಯದಿಂದ ಬೇರೊಂದು ವಸ್ತುವಿನ ಸ್ಮೃತಿಯು ಎಲ್ಲಿ ತೋರುವುದೋ ಅಲ್ಲಿ ಸ್ಮೃತಿಮದಲಂಕಾರವೂ, ಹಾಗೆಯೇ ಭ್ರಾಂತಿಯು ಎಲ್ಲಿ ತೋರುವುದೋ ಅಲ್ಲಿ ಭ್ರಾಂತಿಮದಲಂಕಾರವೂ, ಎಲ್ಲಿ ಸಂದೇಹವು ತೋರುವುದೋ ಅಲ್ಲಿ ಸಂದೇಹಾಲಂಕಾರವೂ ಕಂಗೊಳಿಸುತ್ತವೆ. ಕಮಲವನ್ನು ನೋಡಿದೊಡನೆ ನನ್ನ ಮನಸ್ಸಿಗೆ ಕಾಂತೆಯ ಮುಖದ ಸ್ಮರಣವಾಗುತ್ತದೆ. ಈ ಮದಿಸಿದ ದುಂಬಿಗೆ ನಿನ್ನ ಮುಖದಲ್ಲಿ ಕಮಲವೆಂಬ ಭ್ರಾಂತಿಯುಂಟಾಗುತ್ತದೆ. ಈ ಮುಖವು ಕಮಲವೋ ಚಂದ್ರನೋ ನಮಗೆ ನಿರ್ಣಯವಾಗುವುದಿಲ್ಲ. ಹೀಗೆ ಮೂರು ಅಲಂಕಾರಗಳನ್ನು ಕ್ರಮವಾಗಿ ಉದಾಹರಿಸಲಾಗಿದೆ. ಇವಕ್ಕೆ ಬೇರೆ ಉದಾಹರಣೆಗಳು ಹೀಗಿವೆ: "ದೇವತೆಗಳಿಗೂ ಸಹ ಆಶ್ಚರ್ಯವನ್ನುಂಟುಮಾಡುತ್ತ, ಅರಳಿದ ಕಮಲವನ್ನು ಕೈಯಲ್ಲಿ ಹಿಡಿದುಕೊಂಡು ನೀರಿನಿಂದ ಹೊರಗೆ ಬಂದ ಸ್ತ್ರೀಯೊಬ್ಬಳನ್ನು ನೋಡಿ ಕೃಷ್ಣನು ಸಮುದ್ರಮಥನವನ್ನು ನೆನೆಸಿಕೊಂಡನು.''

ಮೂಲದಲ್ಲಿ ಸ್ಮೃತಿಮದಲಂಕಾರಕ್ಕೆ ಕೊಟ್ಟಿರುವ ಉದಾಹರಣದಲ್ಲಿ ಸದೃಶ ವಸ್ತುವಿನ ಸ್ಮರಣವೇ ಇದೆ. ಇಲ್ಲಿಯಾದರೋ ಸ್ತ್ರೀಯನ್ನು ನೋಡಿದೊಡನೆ ಅವಳಿಗೆ ಸದೃಶಳಾದ ಲಕ್ಷ್ಮಿಯ ಸ್ಮರಣ ಉಂಟಾಗಿ ಅನಂತರ ಆಕೆಯ ಉತ್ಪತ್ತಿಗೆ ಮೂಲವೆನಿಸಿದ ಸಮುದ್ರಮಥನದ ಸ್ಮರಣವನ್ನು ತಿಳಿಸಲಾಗಿದೆ.

"ಗಿಳಿಯ ಮೂಗಿನಲ್ಲಿ ಮುತ್ತುಗದ ಮೊಗ್ಗೆಂಬ ಭ್ರಾಂತಿಯಿಂದ ದುಂಬಿಯು ಬೀಳುತ್ತದೆ. ಗಿಳಿಯೂ ಸಹ ಆ ದುಂಬಿಯನ್ನು ನೇರಳೆಹಣ್ಣೆಂದು ಭ್ರಮಿಸಿ ಅದನ್ನು ಹಿಡಿಯಲಿಚ್ಛಿಸುತ್ತದೆ". ಇಲ್ಲಿ ಗಿಳಿಯ ಕೊಕ್ಕನ್ನು ಮುತ್ತುಗದ ಮೊಗ್ಗೆಂದು ದುಂಬಿಯೂ, ದುಂಬಿಯನ್ನು ನೇರಳೆಹಣ್ಣೆಂದು ಗಿಳಿಯೂ ಭ್ರಾಂತವಾಗಿವೆ.

ಮೂಲದ ಉದಾಹರಣದಲ್ಲಿ ಒಂದು ವಸ್ತುವನ್ನು ನೋಡಿ ಮತ್ತೊಂದೆಂಬ ಭ್ರಾಂತಿಯುಂಟಾಗುತ್ತದೆ. ಇಲ್ಲಿಯಾದರೋ ಎರಡು ವಸ್ತುಗಳಲ್ಲಿ ಒಂದೊಂದಕ್ಕೂ ಬೇರೆ ಬೇರೆ ಭ್ರಾಂತಿಯುಂಟಾಗುವುದಾಗಿ ತಿಳಿಸಲಾಗಿದೆ.

"ಹಣವನ್ನು ಶೇಖರಿಸುವಾಗ ನಮ್ರತೆಯಿಂದಲೂ, ಶೇಖರಿಸಿದ ಮೇಲೆ ಗರ್ವಿಷ್ಠರೂ ಆಗುವ ದುರ್ಜನರು ನೀರನ್ನು ತುಂಬುವಾಗ ಕೆಳಮುಖವೂ, ತುಂಬಿ ಕೊಂಡ ಮೇಲೆ ಮೇಲ್ಮುಖವೂ ಆಗುವ ನೀರುಗಡಿಗೆಗಳನ್ನೆಳೆಯುವ ಯಂತ್ರಕ್ಕಿಂತ

ಮೇಲೋ ಕೀಳೋ ತಿಳಿಯುವಾಗಿದೆ.'' ಹಿಂದೆ ಹೇಳಿದ ಸಂದೇಹದ ಉದಾಹರಣದಲ್ಲಿ ಸಂದೇಹಕ್ಕೆ ವಿಷಯುವಾಗಿರುವ ಅಂಶವು ಲೋಕಪ್ರಸಿದ್ಧವಾಗಿದೆ. ಇಲ್ಲಿಯಾದರೋ ದುರ್ಜನರು ಘಟೀಯಂತ್ರಕ್ಕೆ ಅಣ್ಣಂದಿರೋ ತಮ್ಮಂದಿರೋ ಎಂಬ ಅಂಶವು ಕವಿಕಲ್ಪಿತವಾಗಿದೆ.

## ೧೧. ಅಪಹ್ನುತ್ಯಲಂಕಾರ

ಶುದ್ಧಾಪಹ್ನುತಿಸರ್ಯಸ್ಯಾರೋಪಾರ್ಥೋ ಧರ್ಮನಿಹ್ನವಃ ।
ನಾಯಂ ಸುಧಾಂಶುಃ ಕಿಂ ತರ್ಹಿ ವ್ಯೋಮಗಂಗಾಸರೋರುಹಮ್ ॥

ಒಂದು ವಸ್ತುವಿನಲ್ಲಿ ಅದಕ್ಕೆ ಸದೃಶವಾದ ಬೇರೊಂದು ವಸ್ತುವಿನ ಧರ್ಮವನ್ನು ಆರೋಪಿಸಲಿಕ್ಕಾಗಿ ಪ್ರಕೃತವಸ್ತುವಿನಲ್ಲಿರುವ ಧರ್ಮವನ್ನು ನಿಷೇಧಿಸುವುದೇ ಶುದ್ಧಾಪಹ್ನುತ್ಯಲಂಕಾರವೆನಿಸುತ್ತದೆ. ಚಂದ್ರನನ್ನು ನೋಡಿ ಇವನು ಚಂದ್ರನಲ್ಲವೆಂದು ತಿಳಿಸಿ, ''ಹಾಗಾದರೆ ಇವನು ಯಾರು?'' ಎಂಬ ಪ್ರಶ್ನೆಗೆ "ಇವನು ಆಕಾಶಗಂಗೆಯಲ್ಲಿ ಬೆಳೆದಿರುವ ಕಮಲ'' ವೆಂದು ತಿಳಿಸಲಾಗಿದೆ. ಹೀಗೆ ಚಂದ್ರನಲ್ಲಿ ಆಕಾಶಗಂಗೆಯ ಕಮಲದ ಧರ್ಮವನ್ನು ಆರೋಪಿಸಲಿಕ್ಕಾಗಿ ಚಂದ್ರನಲ್ಲಿರುವ ಚಂದ್ರತ್ವವನ್ನು ನಿಷೇಧಿಸಲಾಗಿದೆ.

ವರ್ಣನೀಯೇ ವಸ್ತುನಿ ತತ್ಸದೃಶಧರ್ಮಾರೋಪಫಲಕಸ್ತದೀಯ ಧರ್ಮನಿಹ್ನವಃ ಕವಿಮತಿವಿಕಾಸೋತ್ಪ್ರೇಕ್ಷಿತಧರ್ಮಾಂತರಸ್ಯಾಪಿ ನಿಹ್ನವಃ ಶುದ್ಧಾಪಹ್ನುತಿಃ. ಯಥಾ ಚಂದ್ರೇ ವಿಯನ್ನದೀಪುಂಡರೀಕತ್ವಾರೋಪಫಲಕಸ್ತದೀಯಧರ್ಮಸ್ಯ ಚಂದ್ರತ್ವಸ್ಯ ಅಪಹ್ನವಃ. ಯಥಾ ವಾ—

ಅಂಕಂ ಕೇಽಪಿ ಶಶಂಕಿರೇ ಜಲನಿಧೇಃ ಪಂಕಂ ಪರೇ ಮೇನಿರೇ
ಸಾರಂಗಂ ಕತಿಚಿಚ್ಚ ಸಂಜಗದಿರೇ ಭೂಚ್ಛಾಯಮನ್ಯೇ ಜಗ್ಮಿರೇ ।
ಇಂದೌ ಯದ್ದಲಿತೇಂದ್ರನೀಲಶಕಲಶ್ಯಾಮಂ ದರೀದೃಶ್ಯತೇ
ತತ್ಸಾಂದ್ರಂ ನಿಶಿ ಪೀತಮಂಧತಮಸಂ ಕುಕ್ಷಿಸ್ಥಮಾಚಕ್ಷ್ಮಹೇ ॥

ಅತ್ರೌತ್ಪ್ರೇಕ್ಷಿಕಧರ್ಮಾಣಾಮಪ್ಯಪಹ್ನವಃ ಪರಪಕ್ಷತ್ವೋಪನ್ಯಾಸಾದರ್ಥಸಿದ್ಧಃ

ವರ್ಣಿಸಬೇಕಾದ ವಸ್ತುವಿನಲ್ಲಿ ಅದಕ್ಕೆ ಸದೃಶವಾದ ಬೇರೊಂದು ವಸ್ತುವಿನ ಧರ್ಮವನ್ನು ಆರೋಪಿಸಲಿಕ್ಕಾಗಿ ಪ್ರಕೃತ ವಸ್ತುವಿನಲ್ಲಿರುವ ಧರ್ಮವನ್ನಾಗಲೀ ಅಥವಾ ಕವಿಯ ಬುದ್ಧಿಶಕ್ತಿಯಿಂದ ಕಲ್ಪಿಸಿದ ಬೇರೊಂದು ಧರ್ಮವನ್ನಾಗಲೀ ನಿಷೇಧಿಸುವುದೇ ಶುದ್ಧಾಪಹ್ನುತಿ ಎನಿಸುತ್ತದೆ, ಚಂದ್ರನನ್ನು ದೇವಗಂಗೆಯಲ್ಲಿರುವ

ಕಮಲವೆಂದು ಭಾವಿಸಲಿಕ್ಕಾಗಿ ಅವನಲ್ಲಿರುವ ಚಂದ್ರಭಾವವನ್ನು 'ಅವನು ಚಂದ್ರನಲ್ಲ' ವೆಂದು ಹೇಳಿ ಮರೆಸಲಾಗಿದೆ.

"ಒಡೆದು ಹೋಗಿರುವ ನೀಲಮಣಿಯ ಒಂದು ಚೂರಿನಂತೆ ಚಂದ್ರನಲ್ಲಿ ಕಾಣುತ್ತಿರುವ ಕಪ್ಪು ಬಣ್ಣವನ್ನು ಕೆಲವರು ಕಳಂಕವೆಂದು ಶಂಕಿಸಿದರು ; ಕೆಲವರು ಸಮುದ್ರದ ಕೆಸರೆಂದು ತಿಳಿದರು ; ಮತ್ತೆ ಕೆಲವರು ಜಿಂಕೆ ಎಂದು ಹೇಳಿದರು ; ಬೇರೆಯವರು ಭೂಮಿಯ ನೆರಳೆಂದು ಭಾವಿಸಿದರು. ನಾವಾದರೋ ಅದನ್ನು ಚಂದ್ರನು ರಾತ್ರಿಯಲ್ಲಿ ನುಂಗಿದ್ದು ಹೊಟ್ಟೆಯಲ್ಲಿ ತುಂಬಿಕೊಂಡಿದ್ದ ಕಗ್ಗತ್ತಲೇ ಎಂದು ತಿಳಿಯುತ್ತೇವೆ." ಇಲ್ಲಿ ಕವಿಪ್ರತಿಭೆಯಿಂದ ಕಲ್ಪಿತವಾಗಿರುವ ಕಳಂಕ, ಕೆಸರು, ಜಿಂಕೆ, ಭೂಮಿಯ ನೆರಳು ಮೊದಲಾದವು ಚಂದ್ರನಲ್ಲಿ ನೆಲಸಿರುವವೆಂಬುವನ್ನು ನಿಷೇಧಿಸಿದೆ. ರಾತ್ರಿಯಲ್ಲಿ ಚಂದ್ರನು ಕುಡಿದಿದ್ದು ಗಟ್ಟಿಗೊಂಡಿದ್ದ ಕಗ್ಗತ್ತಲೆಯು ಅವನ ಹೊಟ್ಟೆಯಲ್ಲಿ ಸೇರಿಕೊಂಡಿದೆ ಎಂಬ ಅಂಶವನ್ನು ಅವನಲ್ಲಿ ಆರೋಪಿಸಲಿಕ್ಕಾಗಿ ಹಿಂದೆ ಹೇಳಿದ ಅಂಶಗಳ ನಿಷೇಧವನ್ನು ಬೇರೆಯವರ ಅಭಿಪ್ರಾಯವನ್ನು ಉದಾಹರಿಸುವ ಮೂಲಕ ತಿಳಿಸಲಾಗಿದೆ.

ಸ ಏವ ಯುಕ್ತಿಪೂರ್ವಶ್ಚೇದುಚ್ಯತೇ ಹೇತ್ವಪಹ್ನುತಿಃ ।
ನೇಂದುಸ್ತೀವ್ರೋ ನ ನಿಶ್ಯರ್ಕಃ ಸಿಂಧೋರೌರ್ವೋಽಯಮುತ್ಥಿತಃ ॥

ಅತ್ರ ಚಂದ್ರ ಏವ ತೀವ್ರತ್ವನೈಶತ್ವಯುಕ್ತಿಭ್ಯಾಂ ಚಂದ್ರತ್ವಸೂರ್ಯತ್ವಾಪಹ್ನವಃ ಬಡಬಾನಲತ್ವಾರೋಪಾರ್ಥಃ ಯಥಾ ವಾ—

ಮಂಥಾನಭೂಮಿಧರಮೂಲಶಿಲಾಸಹಸ್ರಸಂಘಟ್ಟನವ್ರಣಕಿಣಃ ಸ್ಫುರತೀಂದುಮಧ್ಯೇ ।
ಛಾಯಾಮೃಗಃ ಶಶಕ ಇತ್ಯತಿಪಾಮರೋಕ್ತಿಸ್ತೇಷಾಂ ಕಥಂಚಿದಪಿ ತತ್ರ ಹಿ ನ ಪ್ರಸಕ್ತಿಃ ॥

ಅತ್ರ ಚಂದ್ರಮಧ್ಯೇ ಮಂಥನಕಾಲಿಕಮಂದರಶಿಲಾಸಂಘಟ್ಟನವ್ರಣಕಿಣಸ್ಯೇವ ಛಾಯಾದೀನಾಂ ಸಂಭವೋ ನಾಸ್ತೀತಿ ಛಾಯಾತ್ವಾದ್ಯಪಹ್ನವ ಪಾಮರವಚನತ್ವೋಪನ್ಯಾಸೇನಾವಿಷ್ಕೃತಃ.

ಇದೇ ಅಪಹ್ನುತಿಗೆ ಒಂದು ಯುಕ್ತಿಯನ್ನು ತಿಳಿಸಿದರೆ ಆಗ ಅದು ಹೇತ್ವಪಹ್ನುತಿ ಎನಿಸುತ್ತದೆ. "ಇವನು ಚಂದ್ರನಲ್ಲ ; ಏಕೆಂದರೆ ಇವನು ಭೀಕರನಾಗಿರುವನು. ಇದು ರಾತ್ರಿ ವೇಳೆಯಾದ್ದರಿಂದ ಇವನು ಸೂರ್ಯನಲ್ಲ. ಹಾಗಾದರೆ ಇವನು ಯಾರು ? ಇವನು ಸಮುದ್ರದಿಂದ ಹೊರಹೊಮ್ಮಿದ ಬಡಬಾಗ್ನಿ". ಇಲ್ಲಿ ಭೀಕರನಾದ್ದರಿಂದ ಚಂದ್ರನಲ್ಲವೆಂದೂ, ರಾತ್ರಿವೇಳೆಯಾದ್ದರಿಂದ ಸೂರ್ಯನಲ್ಲವೆಂದೂ ಯುಕ್ತಿಯಿಂದ ಮರೆಮಾಚಿಸಿ ಚಂದ್ರನನ್ನು ಬಡಬಾಗ್ನಿ ಎಂದು ತಿಳಿಸಲಾಗಿದೆ.

"ಸಮುದ್ರವನ್ನು ಕಡೆಯುವಾಗ ಮಂತಿನ ಕೋಲಾಗಿ ಉಪಯೋಗಿಸಿದ ಮಂದರ ಪರ್ವತದ ಬುಡದಲ್ಲಿ ಇದ್ದ ಸಾವಿರಾರು ಕಲ್ಲುಗಳ ಒತ್ತಡದಿಂದ ಉಂಟಾದ ಗಾಯದ ಗುರುತು ಚಂದ್ರಬಿಂಬದಲ್ಲಿ ಪ್ರಕಾಶಿಸುತ್ತಿದೆ. ಅದನ್ನು ಕೆಲವರು ಭೂಮಿಯ ನೆರಳೆಂದೂ, ಕೆಲವರು ಜಿಂಕೆ ಎಂದೂ, ಕೆಲವರು ಮೊಲವೆಂದೂ ಹೇಳುವರು. ಇದು ಮೂರ್ಖರಾಡುವ ಮಾತು. ಅವಕ್ಕೆ ಅಲ್ಲಿ ಹೋಗಿ ಸೇರಲಿಕ್ಕೆ ಯಾವರೀತಿಯಲ್ಲೂ ಪ್ರಸಕ್ತಿಯಿಲ್ಲ." ಇಲ್ಲಿ ಚಂದ್ರಬಿಂಬದೊಳಗೆ ಸಮುದ್ರವನ್ನು ಕಡೆಯುವಾಗ ಮಂದರ ಪರ್ವತದ ಬುಡದಲ್ಲಿದ್ದ ಕಲ್ಲಿನ ಚೂರುಗಳ ಹೊಡೆತದಿಂದುಂಟಾದ ಗಾಯದ ಗುರುತೇ ಭೂಮಿಯ ನೆರಳು ಮೊದಲಾದ ರೂಪದಿಂದ ಕಾಣಿಸಿಕೊಳ್ಳಲಿಕ್ಕೆ ಅಲ್ಲಿ ಎಂದಿಗೂ ಸಂಭವವಿಲ್ಲ. ಇದೆಲ್ಲವೂ ಮೂರ್ಖರಾಡುವ ಮಾತೆಂದು ತಿಳಿಸುವ ಮೂಲಕ ಚಂದ್ರನಲ್ಲಿ ಭೂಮಿಯ ನೆರಳು ಮುಂತಾದವಿರುವವೆಂಬುದನ್ನು ಇಲ್ಲಿ ನಿಷೇಧಿಸಲಾಗಿದೆ.

ಅನ್ಯತ್ರ ತಸ್ಯಾರೋಪಾರ್ಥಃ ಪರ್ಯಸ್ತಾಪಹ್ನುತಿಸ್ತು ಸಃ ।
ನಾಯಂ ಸುಧಾಂಶುಃ ಕಿಂ ತರ್ಹಿ ಸುಧಾಂಶುಃ ಪ್ರೇಯಸೀಮುಖಮ್ ॥

ಯತ್ರ ಕ್ವಚಿದ್ವಸ್ತುನಿ ತದೀಯಧರ್ಮನಿಹ್ನವಃ, ಅನ್ಯತ್ರ ವರ್ಣನೀಯೇ ವಸ್ತುನಿ ತಸ್ಯಧರ್ಮಸ್ಯಾರೋಪಾರ್ಥಃ ಪರ್ಯಸ್ತಾಪಹ್ನುತಿಃ ಯಥಾಚಂದ್ರೇ ಚಂದ್ರತ್ವ ನಿಹ್ನವಃ ವರ್ಣನೀಯೇ ಮುಖೇ ತದಾರೋಪಾರ್ಥಃ ಯಥಾ ವಾ—

ಹಾಲಾಹಲೋ ನೈವ ವಿಷಂ ವಿಷಂ ರಮಾ ಜನಾಃ ಪರಂ ವ್ಯತ್ಯಯಮತ್ರ ಮನ್ವತೇ ।
ನಿಪೀಯ ಜಾಗರ್ತಿ ಸುಖೇನ ತಂ ಶಿವಃ ಸ್ಪೃಶನ್ನಿಮಾಂ ಮುಹ್ಯತಿ ನಿದ್ರಯಾ ಹರಿಃ ॥

ಪೂರ್ವೋದಾಹರಣೇ ಹೇತೂಕ್ತಿರ್ನಾಸ್ತಿ; ಅತ್ರ ತು ಸಾಸ್ತೀತಿ ವಿಶೇಷಃ ತತಶ್ಚ ಪೂರ್ವಾಪಹ್ನುತಿವದತ್ರಾಪಿ ದ್ವೈವಿಧ್ಯಮಪಿ ದ್ರಷ್ಟವ್ಯಮ್.

ಯಾವುದೇ ಒಂದು ವಸ್ತುವಿನಲ್ಲಿ ಅದರ ಧರ್ಮವನ್ನು ತೊರೆಸಿ ಅದನ್ನು ಬೇರೆ ಕಡೆ ವರ್ಣಿಸಬೇಕಾದ ವಸ್ತುವಿನಲ್ಲಿ ಆರೋಪಿಸುವುದೇ ಪರ್ಯಸ್ತಾಪಹ್ನುತಿ ಎನಿಸುವುದು. "ಇವನು ಚಂದ್ರನಲ್ಲ, ಹಾಗಾದರೆ ಚಂದ್ರನಾರು ? ಪ್ರೇಯಸೀ ಮುಖವೇ ಚಂದ್ರನು" ಹೀಗೆ ಚಂದ್ರನಲ್ಲಿ ಚಂದ್ರನೆಂಬುದನ್ನು ತಪ್ಪಿಸಿ ಪ್ರಕೃತ ಸಂದರ್ಭಕ್ಕೆ ಸಂಬಂಧಿಸಿದ ಸುಂದರಿಯ ಮುಖದಲ್ಲಿ ಚಂದ್ರನೆಂಬುದನ್ನು ಆರೋಪಿಸಲಾಗಿದೆ. ಹಾಗೆಯೇ—

"ಹಾಲಾಹಲವೆಂಬುದು ವಿಷವಲ್ಲ, ಹಾಗಾದರೆ ವಿಷವ್ಯಾವುದು ? ಲಕ್ಷ್ಮಿಯೇ ವಿಷ, ಜನರು ಈ ಬಗ್ಗೆ ವ್ಯತ್ಯಾಸವಾಗಿ ತಿಳಿದಿರುವರು ; ಯಾಕೆಂದರೆ ವಿಷವನ್ನು

ಕುಡಿದು ಶಿವನು ಸುಖವಾಗಿ ಎಚ್ಚರಗೊಂಡಿರುವನು. ಲಕ್ಷ್ಮಿಯನ್ನು ಮುಟ್ಟುತ್ತಿರುವಾಗಲೇ ವಿಷ್ಣು ನಿದ್ರೆಯಿಂದ ಮೋಹಗೊಂಡನು." ಹಿಂದಿನ ಉದಾಹರಣದಲ್ಲಿ ಹೇತುವನ್ನು ತಿಳಿಸಿಲ್ಲ. ಇಲ್ಲಿ ಅದನ್ನು ತಿಳಿಸಿದೆ. ಇಷ್ಟೇ ಇವೆರಡಕ್ಕೂ ಇರುವ ವಿಶೇಷ. ಆದ್ದರಿಂದ ಶುದ್ಧಾಪಹ್ನುತಿಯಂತೆ ಇಲ್ಲಿಯೂ ಶುದ್ಧಪರ್ಯಸ್ತಾಪಹ್ನುತಿ, ಹೇತುಪರ್ಯಸ್ತಾಪಹ್ನುತಿ ಎಂದು ಎರಡು ಬಗೆಯನ್ನು ಕಾಣಬಹುದು.

ಭ್ರಾಂತಾಪಹ್ನುತಿರನ್ಯಸ್ಯ ಶಂಕಾಯಾಂ ಭ್ರಾಂತಿವಾರಣೇ ।
ತಾಪಂ ಕರೋತಿ ಸೋತ್ಕಂಪಂ ಜ್ವರಃ ಕಿಂ ನ ಸಖಿ ಸ್ಮರಃ ॥ ೨೯ ॥

ಅತ್ರ ತಾಪಂ ಕರೋತೀತಿ ಸ್ಮರವೃತ್ತಾಂತೇ ಕಥಿತೇ ತಸ್ಯ ಜ್ವರಸಾಧಾರಣ್ಯಾದೃಜುಬುದ್ಧ್ಯಾ ಸಖ್ಯಾ "ಜ್ವರಃ ಕಿಮಿ"ತಿ ಪೃಷ್ಟೇ "ನ ಸಖಿ ಸ್ಮರಃ" ಇತಿ ತತ್ತ್ವೋಕ್ತ್ಯಾ ಭ್ರಾಂತಿವಾರಣಂ ಕೃತಮ್. ಯಥಾ ವಾ—

ನಾಗರಿಕ ಸಮುಧಿಕೋನ್ನತಿರಿಹ ಮಹಿಷಃ ಕೋಽಯಮುಭಯತಃ ಪುಚ್ಛಃ ।
ನ ಹಿ ನ ಹಿ ಕರಿಕಲಭೋಽಯಂ ಶುಂಡಾದಂಡೋಽಯಮಸ್ಯ ನ ತು ಪುಚ್ಛಮ್ ॥ ೩೦ ॥

ಇದಂ ಸಂಭವದ್ಭ್ರಾಂತಿಪೂರ್ವಿಕಾಯಾಂ ಭ್ರಾಂತಾಪಹ್ನುತಾವುದಾಹರಣಮ್. ಕಲ್ಪಿತಭ್ರಾಂತಿಪೂರ್ವಾ ಯಥಾ—

ಜಟಾ ನೇಯಂ ವೇಣೀಕೃತಕಚಕಲಾಪೋ ನ ಗರಲಂ
ಗಲೇ ಕಸ್ತೂರೀಯಂ ಶಿರಸಿ ಶಶಿರೇಖಾ ನ ಕುಸುಮಮ್ ।
ಇಯಂ ಭೂತಿರ್ನಾಂಗೇ ಪ್ರಿಯವಿರಹಜನ್ಮಾ ಧವಲಿಮಾ
ಪುರಾರಾತಿಭ್ರಾಂತ್ಯಾ ಕುಸುಮಶರ ಕಿಂ ಮಾಂ ಪ್ರಹರಸಿ ॥

ಅತ್ರ ಕಲ್ಪಿತಭ್ರಾಂತಿರ್ಜಟಾ ನೇಯಮಿತ್ಯಾದಿನಿಷೇಧಮಾತ್ರೋನ್ನೇಯಾ ಪೂರ್ವಪ್ರಶ್ನಾಭಾವಾತ್. ದಂಡೀ ತ್ವತ್ರ ತತ್ತ್ವಾಖ್ಯಾನೋಪಮೇತಿ ಉಪಮಾಭೇದಂ ಮೇನೇ. ಯದಾಹ ಸಃ—

ನ ಪದ್ಮಂ ಮುಖಮೇವೇದಂ ನ ಭೃಂಗೌ ಚಕ್ಷುಷೀ ಇಮೇ ।
ಇತಿ ವಿಸ್ಪಷ್ಟಸಾದೃಶ್ಯಾತ್ತತ್ತ್ವಾಖ್ಯಾನೋಪಮಾ ಮತಾ ॥ ಇತಿ

ಒಬ್ಬನು ಹೇಳುವ ಮಾತನ್ನು ಕೇಳಿ ಮತ್ತೊಬ್ಬನಿಗೆ ಭ್ರಾಂತಿಯುಂಟಾದಾಗ ಅದನ್ನು ಪರಿಹರಿಸಲು ನಿಜವಾದ ಅಂಶವನ್ನು ಅವನುತಿ ಳಿಸುವುದೇ ಭ್ರಾಂತಾಪಹ್ನುತಿ ಎನಿಸುವುದು. "ಸಂತಾಪವನ್ನುಂಟುಮಾಡುತ್ತದೆ" ಎಂದು ಸಾಮಾನ್ಯವಾಗಿ ನಾಯಿಕೆ ತಿಳಿಸಲು ಜ್ವರವಿದ್ದಾಗಲೂ ಈ ಬಗೆಯ ತಾಪ ಉಂಟಾಗುವುದು ಸಹಜವಾದ್ದರಿಂದ ಸರಳಮನೋಭಾವದ ಸಖಿಯು "ಅದೇನು ಜ್ವರವೇ" ಎಂದು ಕೇಳಲು "ಸಖಿ

ಇದು ಜ್ವರದ ತಾಪವಲ್ಲ; ಆದರೆ ಮನ್ಮಥನ ಬಾಧೆ'' ಎಂದು ನಿಜಾಂಶದಿಂದ ಆಕೆಯ ಭ್ರಾಂತಿಯನ್ನು ನಾಯಿಕೆಯೇ ಪರಿಹರಿಸುತ್ತಾಳೆ.

ಪಟ್ಟಣಿಗನನ್ನು ಹಳ್ಳಿಯವನೊಬ್ಬನು ಕೇಳುವ ಪ್ರಶ್ನೆ ಇದು; "ಅಯ್ಯಾ! ಇಷ್ಟು ದೊಡ್ಡದಾಗಿಯೂ ವಿಸ್ತಾರವಾಗಿಯೂ ಇದ್ದು ಎರಡು ಕಡೆಯಲ್ಲೂ ಬಾಲಗಳಿರುವ ಈ ಎಮ್ಮೆ ಯಾವುದು?" ಎಂದು ಅವನು ಕೇಳಲು ಆದಕ್ಕೆ ಪಟ್ಟಣಿಗನು "ಇದು ಎಮ್ಮೆಯಲ್ಲ; ಆನೆಯ ಮರಿ. ಇದು ಬಾಲವಲ್ಲ! ಆದರ ಕೋಲಿನಂತಿರುವ ಸೊಂಡಿಲು" ಎಂದು ಉತ್ತರಿಸಿದನು. ಇಲ್ಲಿ ಸೊಂಡಿಲನ್ನು ಬಾಲವೆಂದೂ, ಆನೆಯನ್ನು ಎಮ್ಮೆ ಎಂದೂ ಭ್ರಮಿಸಿರುವುದು ಲೋಕದಲ್ಲಿ ಸಹಜವೆನಿಸಿದೆ. ಹಾಗೆ ಒಬ್ಬನು ಭ್ರಮಿಸಿದಾಗ "ಇದು ಬಾಲವಲ್ಲ; ಸೊಂಡಿಲು, ಇದು ಎಮ್ಮೆಯಲ್ಲ; ಆನೆಯ ಮರಿ" ಎಂದು ಹೇಳಿ ಭ್ರಾಂತಿಯನ್ನು ಇಲ್ಲಿ ತೊಲಗಿಸಲಾಗಿದೆ. ಹೀಗೆ ಲೋಕದಲ್ಲಿ ಸಂಭವಿಸುವ ಭ್ರಾಂತಿಯನ್ನು ಮತ್ತೆ ಪರಿಹರಿಸುವುದರಲ್ಲಿ ಔಚಿತ್ಯವಿರುವುದರಿಂದ ಇದು ಭ್ರಾಂತಾಪಹ್ನುತ್ಯಲಂಕಾರವೆನಿಸಿದೆ.

ಕಲ್ಪಿತವಾದ ಭ್ರಾಂತಿಯನ್ನು ಪರಿಹರಿಸುವುದಕ್ಕೆ ಉದಾಹರಣವು ಹೀಗಿದೆ—

ವಿರಹಿಣಿಯೊಬ್ಬಳು ಹೇಳುವ ಮಾತಿದು. "ಅಯ್ಯಾ ಮನ್ಮಥನೇ, ನನ್ನನ್ನು ಈಶ್ವರನೆಂದು ತಪ್ಪಾಗಿ ತಿಳಿದು ಏಕೆ ಬಾಣಗಳಿಂದ ಹೊಡೆಯುತ್ತಿರುವೆ? ನಾನು ಧರಿಸಿರುವುದು ಜಡೆಯಲ್ಲ; ಆದರೆ ಕೂದಲುಗಳ ಗುಂಪನ್ನು ಹಾಗೆ ಹೆಣೆದುಕೊಂಡಿರುವೆನು. ಕುತ್ತಿಗೆಯಲ್ಲಿ ನಾನು ಹಾಕಿರುವುದು ವಿಷವಲ್ಲ; ಆದರೆ ಕಸ್ತೂರಿ. ತಲೆಯಲ್ಲಿ ಧರಿಸಿರುವುದು ಚಂದ್ರಕಲೆಯಲ್ಲ; ಆದರೆ ಪುಷ್ಪ. ಮೈಯಲ್ಲಿ ಬಳಿದಿರುವುದು ಭಸ್ಮವಲ್ಲ; ಆದರೆ ಪ್ರಿಯನ ವಿರಹದಿಂದ ಹುಟ್ಟಿರುವ ಬಿಳುಪು. ಆದ್ದರಿಂದ ನೀನು ಶಿವನೆಂಬ ಭ್ರಾಂತಿಯಿಂದ ನನ್ನನ್ನು ಹಿಂಸಿಸುವ ಅಗತ್ಯವಿಲ್ಲ" ಇಲ್ಲಿ ಇದು ಜಡೆಯಲ್ಲ ಎಂದು ಮುಂತಾಗಿ ನಿಷೇಧವಿರುವುದರಿಂದಲೂ, ಇದೇ ಜಡೆಯೇ ಅಲ್ಲವೇ ಎಂದು ಮುಂತಾಗಿ ಹಿಂದೆ ಯಾವ ಪ್ರಶ್ನೆಯನ್ನೂ ಕೇಳಿಲ್ಲವಾದ್ದರಿಂದಲೂ, ಇದೇ ಜಡೆಯಿರಬಹುದೆಂದು ಮನ್ಮಥನಿಗೆ ತೋರುವ ಭ್ರಾಂತಿಯು ಕಲ್ಪಿತವೆನಿಸಿದೆ. ದಂಡಿಯಾದರೋ ಇದನ್ನು ನಿಜಾಂಶವನ್ನು ತಿಳಿಸುವ ಉಪಮೆ ಎಂದು ಕರೆದು ಇದನ್ನು ಉಪಮಾಲಂಕಾರದ ಪ್ರಭೇದವೆಂದು ಭಾವಿಸಿರುವನು. "ಇದು ಕಮಲವಲ್ಲ; ಆದರೆ ಮುಖವೇ? ಇವು ದುಂಬಿಗಳಲ್ಲ; ಆದರೆ ಕಣ್ಣುಗಳೇ" ಹೀಗೆ ಸ್ಪಷ್ಟವಾದ ಸಾದೃಶ್ಯದಿಂದ ನಿಜಸ್ಥಿತಿಯನ್ನು ಇಲ್ಲಿ ತಿಳಿಸಿರುವುದರಿಂದ ಇದು ತತ್ತ್ವಾಖ್ಯಾನೋಪಮೆ ಎನಿಸುತ್ತದೆ ಎಂದು ಅವನು ಆದಕ್ಕೆ ಲಕ್ಷಣವನ್ನು ಹೇಳಿರುವನು.

ಛೇಕಾಪಹ್ನುತಿರನ್ಯಸ್ಯ ಶಂಕಾತಸ್ತಥ್ಯನಿಹ್ನವೇ ।
ಪ್ರಜಲ್ಪನ್ಮತ್ಪದೇ ಲಗ್ನಃ ಕಾಂತಃ ಕಿಂ ನ ಹಿ ನೂಪುರಃ ॥ ೨೯ ॥

ಕಸ್ಯಚಿತ್ಕಂಚಿತ್ಪ್ರತಿ ರಹಸ್ಯೋಕ್ತೌ ಅನ್ಯೇನ ಶ್ರುತಾಯಾಂ ಉಕ್ತೇಸ್ತಾತ್ಪರ್ಯಾಂತರವರ್ಣನೇನ ತಥ್ಯನಿಹ್ನವೇ ಛೇಕಾಪಹ್ನುತಿಃ. ಯಥಾ ನಾಯಿಕಯಾ ನರ್ಮಸಖೀಂ ಪ್ರತಿ "ಪ್ರಜಲ್ಪನ್ಮತ್ಪದೇ ಲಗ್ನಃ'' ಇತಿ ಸ್ವನಾಯಕ ವೃತ್ತಾಂತೇ ನಿಗದ್ಯಮಾನೇ ತದಾಕರ್ಣ್ಯ ಕಾಂತಃ ಕಿಮಿತಿ ಶಂಕಿತವತೀಂ ಅನ್ಯಾಂ ಪ್ರತಿ ನೂಪುರ ಇತಿ ನಿಹ್ನವಃ.

ಸೀತ್ಕಾರಂ ಶಿಕ್ಷಯತಿ ವ್ರಣಯತ್ಯಧರಂ ತನೋತಿ ರೋಮಾಂಚಮ್ ।
ನಾಗರಿಕಃ ಕಿಂ ಮಿಲಿತೋ ನಹಿ ನಹಿ ಸಖಿ ಹೈಮನಃ ಪವನಃ ॥

ಇದಮರ್ಥಯೋಜನಯಾ ತಥ್ಯನಿಹ್ನವೇ ಉದಾಹರಣಮ್.

ಶಬ್ದಯೋಜನಯಾ ಯಥಾ—

ಪದ್ಮೇತ್ವನ್ನಯನೇ ಸ್ಮರಾಮಿ ಸತತಂ ಭಾವೋ ಭವತ್ಕುಂತಲೇ ನೀಲೇ ಮುಹ್ಯತಿ
ಕಿಂ ಕರೋಮಿ ಮಹಿತೈಃ ಕ್ರೀತೋಽಸ್ಮಿ ತೇ ವಿಭ್ರಮೈಃ ।
ಇತ್ಯುತ್ಸ್ವಪ್ನವಚೋ ನಿಶಮ್ಯ ಸರುಷಾ ನಿರ್ಭರ್ತ್ಸಿತೋ ರಾಧಯಾ ಕೃಷ್ಣ-
ಸ್ತತ್ಪರಮೇವ ತದ್ವ್ಯಪದಿಶನ್ ಕ್ರೀಡಾವಿಟಃ ಪಾತು ವಃ ॥

ಸರ್ವಮಿದಂ ವಿಷಯಾಂತರಯೋಜನೇ ಉದಾಹರಣಮ್.

ವಿಷಯೈಕ್ಯೇಽಪಿ ಅವಸ್ಥಾಭೇದೇನ ಯೋಜನೇ ಯಥಾ —

ವದಂತೀ ಜಾರವೃತ್ತಾಂತಂ ಪತ್ಯೌ ಧೂರ್ತಾ ಸಖೀಧಿಯಾ
ಪತಿಂ ಬುದ್ಧ್ವಾ ಸಖಿ ತತಃ ಪ್ರಬುದ್ಧಾಸ್ಮೀತ್ಯಪೂರಯತ್ ॥

ಒಬ್ಬನಿಂ ಮತ್ತೊಬ್ಬನಿಗೆ ಗೋಪ್ಯವಾಗಿ ಏನನ್ನಾದರೂ ಹೇಳಿದರೆ ಅದನ್ನು ಮೂರನೆಯವನು ಕೇಳಿಸಿಕೊಳ್ಳಲು, ಆಗ ಆ ಮಾತಿನ ತಾತ್ಪರ್ಯವಿಷ್ಟೇ ಎಂದು ಬೇರೆ ರೀತಿಯಲ್ಲಿ ತಿಳಿಸುತ್ತ, ಅದರ ನಿಜಾಂಶವನ್ನು ಮರೆಮಾಡುವುದೇ ಛೇಕಾಪಹ್ನುತಿ ಎನಿಸುವುದು. ನಾಯಿಕೆಯು ನರ್ಮಸಖಿಯೊಡನೆ ಮಾತನಾಡುತ್ತ "ನನ್ನ ಕಾಲಿಗೆ ಅಂಟಿಕೊಳ್ಳುವಂತಾಯಿತು" ಎಂದು ತನ್ನ ನಾಯಕನ ಸಮಾಚಾರವನ್ನು ತಿಳಿಸುತ್ತಿರಲು ಅದನ್ನು ಕೇಳಿದ ಮತ್ತೊಬ್ಬ ಸಖಿಯು "ನಿನ್ನ ಪತಿಯು ಹಾಗೆ ಕಾಲಿಗೆ ಅಂಟಿ ಕೊಂಡನೋ?'' ಎಂದು ಶಂಕಿಸಲು "ಪತಿಯಲ್ಲ; ಕಾಲ್ಕಡಗವು ಹಾಗೆ ಅಂಟಿ ಕೊಂಡಿತು" ಎಂದು ನಾಯಕಿಯು ತಿಳಿಸಿ ನಿಜಸ್ಥಿತಿಯನ್ನು ಮರೆಮಾಚುವಳು.

"ಬಾಯಿಂದ ಸೀತ್ಕಾರಶಬ್ದವನ್ನು (ಸು, ಸೀರ ಎಂದು) ಉಚ್ಚರಿಸುವಂತೆ ಮಾಡುತ್ತಿದೆ; ತುಟಿಗೆ ಗಾಯಪಡಿಸುತ್ತಿದೆ: ಮೈಯಲ್ಲೆಲ್ಲಾ ರೋಮಾಂಚವನ್ನು ಹುಟ್ಟಿಸುತ್ತಲಿದೆ" ಎಂದು ಪ್ರಿಯಸಖಿಗೆ ನಾಯಕಿಯು ತಿಳಿಸಲು ಅದನ್ನು ಕೇಳಿ "ಪಟ್ಟಣಿಗನು ಬಂದು ಸೇರಿಕೊಂಡನೋ ಏನೋ" ಎಂದು ಶಂಕಿಸಿದ ಬೇರೊಬ್ಬ

ಸಖಿಗೆ ಆಕೆಯ ಶಂಕೆಯನ್ನು ಪರಿಹರಿಸಲಿಕ್ಕಾಗಿ ನಾಯಿಕೆಯೇ " ನಾಗರಿಕನಲ್ಲ ; ಆದರೆ ಛಳಿಗಾಲದ ಗಾಳಿ ಬಂದು ಅಡರಿತು " ಎಂದು ಹೇಳಿ ತನ್ನೊಡನೆ ನಿಜವಾಗಿ ಬಂದು ಸೇರಿಕೊಂಡಿದ್ದ ಪಟ್ಟಣಿಗನ ಸಮಾಚಾರವನ್ನು ಇಲ್ಲಿ ಮರೆಮಾಚುವಳು. ಇಲ್ಲಿ ಪ್ರಕೃತ ವಿಷಯವೆನಿಸಿದ ಪಟ್ಟಣಿಗನಿಗೂ, ಅಪ್ರಕೃತವಾದ ಶೀತಕಾಲದ ಗಾಳಿಗೂ ಹೊಂದಿಕೆಯಾಗುವಂತೆ ಸೀತ್ಕಾರಶಿಕ್ಷಣ ಮೊದಲಾದವನ್ನು ಸಾಧಾರಣವಾಗಿ ತಿಳಿಸಿದ್ದರೂ ಅಪ್ರಕೃತವಾದ ಶೀತಕಾಲದ ಗಾಳಿಗೆ ಸಂಬಂಧಪಟ್ಟಂತೆ ಹೇಳುವ ಮೂಲಕ ನಿಜವಾದ ಪಟ್ಟಣಿಗನ ಸಮಾಚಾರವನ್ನು ನಿಷೇಧಿಸಲಾಗಿದೆ. ಸಾಧಾರಣವಾಗಿ ಎರಡು ಕಡೆಗಳಲ್ಲೂ ಅನ್ವಯಿಸುವ ಅರ್ಥವನ್ನು ಅಪ್ರಕೃತವಾದ ಶೀತಕಾಲದ ಗಾಳಿಗೆ ಮಾತ್ರವೇ ಸಂಬಂಧಿಸುವಂತೆ ತಿಳಿಸುವುದೇ ಅರ್ಥಯೋಜನವೆನಿಸಿದೆ. ಇದರ ಮೂಲಕ ಪ್ರಕೃತ ನಾಗರಿಕನಲ್ಲಿ ಅನ್ವಯವನ್ನು ನಿಷೇಧಿಸುವುದಕ್ಕೆ ಇದು ಉದಾಹರಣವೆನಿಸಿದೆ.

ಪ್ರಕೃತ ಮತ್ತು ಅಪ್ರಕೃತ ವಸ್ತುಗಳೆರಡಕ್ಕೂ ಅನ್ವಯಿಸುವ ಅರ್ಥದಲ್ಲಿ ಭೇಧವಿದ್ದರೂ ಶಬ್ದಶ್ಲೇಷವಷ್ಟರಿಂದಲೇ ನಿಜಾಂಶವನ್ನು ನಿಷೇಧಿಸುವುದಕ್ಕೆ ಇಲ್ಲಿ ಉದಾಹರಣವನ್ನು ಕೊಡಲಾಗಿದೆ.

" ಎಲೈ ಲಕ್ಷ್ಮಿಯೇ ! ನಿನ್ನ ಕಣ್ಣುಗಳನ್ನು ನಾನು ಯಾವಾಗಲೂ ಸ್ಮರಿಸುತ್ತಿರುವೆನು. ಕಪ್ಪಾದ ನಿನ್ನ ಕೂದಲಿನಲ್ಲಿ ನನ್ನ ಅಂತಃಕರಣವು ಮೋಹಗೊಂಡಿದೆ. ಏನು ಮಾಡಲಿ ? ಮನೋಹರವಾದ ನಿನ್ನ ವಿಲಾಸಗಳಿಗೆ ನಾನು ಮಾರುಹೋಗಿರುವೆನು " ಎಂದು ಸ್ವಪ್ನದಲ್ಲಿ ಕನವರಿಸುತ್ತಿದ್ದ ಕೃಷ್ಣನ ಮಾತನ್ನು ಕೇಳಿ ರಾಧೆಯು ಕೋಪದಿಂದ ಆರ್ಭಟಿಸಲು ಆಗ ಕೃಷ್ಣನು ಆ ಮಾತನ್ನು ರಾಧೆಗೇ ಅನ್ವಯಿಸುವಂತೆ ತಿಳಿಯಹೇಳಿದನು. ಹೀಗೆ ವಿನೋದಪಡುತ್ತಿದ್ದ ಕೃಷ್ಣನು ನಿಮ್ಮನ್ನು ಕಾಪಾಡಲಿ" ಇಲ್ಲಿ ಶ್ಲೇಷದಿಂದ " ಕಮಲರೂಪದಲ್ಲಿರುವ ನಿನ್ನ ಕಣ್ಣುಗಳನ್ನು ನಾನು ಸ್ಮರಿಸುವೆನು" ಎಂಬ ಬೇರೊಂದು ಅರ್ಥವೂ ತೋರುತ್ತದೆ. " ನಾನಿರುವಾಗ ಇವನು ಲಕ್ಷ್ಮಿಯನ್ನು ಏಕೆ ಕನವರಿಸಿದನು ?" ಎಂದು ರಾಧೆಗೆ ಸಿಟ್ಟು ಬಂದಿತ್ತು. ಆಗ ಕೃಷ್ಣನು ಎರಡನೆಯ ಅರ್ಥದಿಂದ ರಾಧೆಯನ್ನೇ ಅವನು ಸ್ಮರಿಸಿದ್ದಾಗಿ ತಿಳಿಸಿ ಸಮಾಧಾನಪಡಿಸಿದನು. ಅಪ್ರಕೃತವಾದ ರಾಧೆಯ ಸ್ಮರಣಕ್ಕೂ ಅನ್ವಯಿಸುವಂತೆ ' ಪದ್ಮೇ ' ಎಂಬ ಶಬ್ದವನ್ನು ಇಲ್ಲಿ ಸೇರಿಸಿದ್ದರಿಂದ ಇದು ಶಬ್ದಯೋಜನೆ ಎನಿಸಿತು. ಇದರಿಂದ ಪ್ರಕೃತವಾದ ಲಕ್ಷ್ಮೀ ಸ್ಮರಣವನ್ನು ಇಲ್ಲಿ ನಿಷೇಧಿಸಲಾಗಿದೆ.

ಒಂದು ವಿಷಯಕ್ಕೆ ಸಂಬಂಧಿಸಿದ್ದನ್ನು ಮತ್ತೊಂದು ವಿಷಯಕ್ಕೆ ಸಂಬಂಧಿಸಿದಂತೆ ತಿಳಿಸಿರುವುದಕ್ಕೆ ಹಿಂದೆ ಹೇಳಿದ್ದೆಲ್ಲವೂ ಉದಾಹರಣವಾಗುತ್ತವೆ.

ವಿಷಯಗಳು ಒಂದೇ ಬಗೆಯಾಗಿದ್ದರೂ ಅವನ್ನು ಅವಸ್ಥೆಗನುಗುಣವಾಗಿ ಸೇರಿಸುವುದಕ್ಕೆ ಈಗ ಉದಾಹರಣವನ್ನು ಕೊಡಲಾಗಿದೆ.

ಪತಿಯನ್ನು " ಸಖಿ " ಎಂದು ಭ್ರಮಿಸಿ ಕಾಮುಕನೊಬ್ಬನ ಸಮಾಚಾರವನ್ನು ಧೂರ್ತ ನಾಯಿಕೆಯೊಬ್ಬಳು ತಿಳಿಸುತ್ತ ಆಮೇಲೆ ಅವನನ್ನು ತನ್ನ ಪತಿ ಎಂದು ತಿಳಿದು " ಎಲೈ ಸಖಿಯೇ, ಇಷ್ಟುಹೊತ್ತು ಸ್ವಪ್ನವನ್ನು ಕಾಣುತ್ತಲಿದ್ದೆ, ಈಗ ಎಚ್ಚರ ಗೊಂಡೆನು " ಎಂದು ತನ್ನ ಮಾತನ್ನು ಮುಗಿಸಿದಳು. ಇಲ್ಲಿ ಜಾಗ್ರದವಸ್ಥೆಗೂ ಸ್ವಪ್ನಾವಸ್ಥೆಗೂ ಅನ್ವಯಿಸುವಂತೆ ಜಾರವೃತ್ತಾಂತವನ್ನು ತಿಳಿಸಿರುವುದರಿಂದ ವಿಷಯದಲ್ಲಿ ಭೇದವಿಲ್ಲ. ಆದರೆ ಜಾಗ್ರದವಸ್ಥೆಗೆ ಅನ್ವಯಿಸುವಂತೆ ಹೇಳಿದ್ದನ್ನೇ ಸ್ವಪ್ನಾವಸ್ಥೆಗೂ ಸಂಬಂಧಿಸಿದಂತೆ ಹೇಳುವ ಮೂಲಕ ಜಾಗ್ರದವಸ್ಥೆಗೆ ಸಂಬಂಧಿಸಿದ್ದನ್ನು ನಿಷೇಧಿ ಲಾಗಿದೆ.

> ಕೈತವಾಪಹ್ನುತಿರ್ವ್ಯಕ್ತೌ ವ್ಯಾಜಾದ್ಯೈರ್ನಿಹ್ನುತೈಃ ಪದೈಃ |
> ನಿರ್ಯಾಂತಿ ಸ್ಮರನಾರಾಚಾಃ ಕಾಂತಾದೃಕ್ಪಾತಕೈತವಾತ್ ॥ 30 ॥

ಅತ್ರ ಅಸತ್ಯತ್ವಾಭಿಧಾಯಿನಾ ಕೈತವಪದೇನ ನೇಮೇ ಕಾಂತಾಕಟಾಕ್ಷಾಃ ಕಿಂತು ಸ್ಮರಾನಾರಾಚಾಃ ಇತ್ಯಪಹ್ನುತಿಃ ಪ್ರತೀಯತೇ.

ಸುಳ್ಳು ಎಂಬ ಅರ್ಥವನ್ನು ತಿಳಿಸುವ " ವ್ಯಾಜ, ಕೈತವ " ಮೊದಲಾದ ಪದ ಗಳಿಂದ ಎಲ್ಲಿ ನಿಷೇಧವನ್ನು ಸೂಚಿಸಲಾಗಿದೆಯೋ ಅಲ್ಲಿ ಕೈತವಾಪಹ್ನುತಿ ಎಂಬ ಅಲಂಕಾರವಿರುವುದು. " ಕಾಂತೆಯು ಓರೆನೋಟಗಳ ವ್ಯಾಜದಿಂದ ಮನ್ಮಥನ ಬಾಣಗಳು ಹೊರಗೆ ಬರುತ್ತಿವೆ " ಇಲ್ಲಿ ಕೈತವಪದದಿಂದ " ಇವು ಕಾಂತೆಯು ಓರೆ ನೋಟಗಳಲ್ಲ; ಆದರೆ ಮನ್ಮಥನ ಬಾಣಗಳು " ಎಂದು ಕಾಂತೆಯರ ಓರೆನೋಟ ಗಳನ್ನು ನಿಷೇಧಿಸಲಾಗಿದೆ.

> ರಿಕ್ತೇಷು ವಾರಿಕಥಾಯಾ ವಿಪಿನೋದರೇಷು
> ಮಧ್ಯಾಹ್ನಜೃಂಭಿತಮಹಾ ತಪತಾಪತಪ್ತಾಃ |
> ಸ್ಕಂಧಾಂತರೋತ್ಥಿತದವಾಗ್ನಿ ಶಿಖಾಚ್ಛಲೇನ
> ಜಿಹ್ವಾಂ ಪ್ರಸಾರ್ಯ ತರವೋ ಜಲಮರ್ಥಯಂತೇ ||

ಇದು ಗ್ರೀಷ್ಮ ಋತುವಿನ ವರ್ಣನೆ ಎನಿಸಿದೆ. "ನೀರಿನ ಹೆಸರೇ ಇಲ್ಲದ ನಡು ಗಳಲ್ಲಿ ಮಧ್ಯಾಹ್ನದ ವೇಳೆಗೆ ಎಲ್ಲೆಲ್ಲೂ ಹರಡಿರುವ ಬಿಸಿಲಿನ ತಾಪದಿಂದ ಒಣಗಿಹೋಗಿದ್ದ ಮರಗಳು ಕವಲೊಡೆಯುವ ಜಾಗದಿಂದ ಹೊರಟ ಉರಿಯ ನೆಪ ದಿಂದ ನಾಲಿಗೆಯನ್ನು ಚಾಚಿ ನೀರಿಗಾಗಿ ಬೇಡಿಕೊಳ್ಳುತ್ತಿವೆ". ಇಲ್ಲಿ "ಇದು ಬೆಂಕಿಯ ಜ್ವಾಲೆಯಲ್ಲ; ಆದರೆ ಮರದ ನಾಲಿಗೆ" ಎಂಬ ಅರ್ಥವು ಛಲ ಎಂಬ ಪದದಿಂದ ತೋರುತ್ತದೆ.

## ಉತ್ಪ್ರೇಕ್ಷಾಲಂಕಾರ

ಸಂಭಾವನಾ ಸ್ಯಾದುತ್ಪ್ರೇಕ್ಷಾ ವಸ್ತುಹೇತುಫಲಾತ್ಮನಾ ।
ಉಕ್ತಾನುಕ್ತಾಸ್ಪದಾದ್ಯತ್ರ ಸಿದ್ಧಾಽಸಿದ್ಧಾಸ್ಪದೇ ಪರೇ ॥ ೩೧ ॥
ಧೂಮಸ್ತೋಮಂ ತಮಃ ಶಂಕೇ ಕೋಕೀವಿರಹಶುಷ್ಮಣಾಮ್ ।
ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ॥
ರಕ್ತೌ ತವಾಂಘ್ರೀ ಮೃದುಲೌ ಭುವಿ ವಿಕ್ಷೇಪಣಾದ್ಧ್ರುವಮ್ ।
ತ್ವನ್ಮುಖಾಭೇಚ್ಛಯಾ ನೂನಂ ಪದ್ಮೈರ್ವೈರಾಯತೇ ಶಶೀ ॥
ಮಧ್ಯಃ ಕಿಂ ಕುಚಯೋರ್ಧೃತ್ಯೈ ಬದ್ಧಃ ಕನಕದಾಮಭಿಃ ।
ಪ್ರಾಯೋಽಬ್ಜಂ ತ್ವತ್ಪದೇನೈಕ್ಯಂ ಪ್ರಾಪ್ತುಂ ತೋಯೇ ತಪಸ್ಯತಿ ॥

ಒಂದು ವಸ್ತುವನ್ನು ಪ್ರಾಯಶಃ ಇದು ಮತ್ತೊಂದು ವಸ್ತುವಾಗಿರಬಹುದೆಂದು ಊಹಿಸುವುದೇ ಸಂಭಾವನೆ. ಇದೇ ಉತ್ಪ್ರೇಕ್ಷೆ ಎನಿಸಿದೆ. ಒಂದು ವಸ್ತುವನ್ನು ಮತ್ತೊಂದು ವಸ್ತುವೆಂದೂ, ಒಂದು ಕಾರ್ಯಕ್ಕೆ ಕಾರಣವಲ್ಲದ್ದನ್ನು ಕಾರಣವಾಗಿರಬಹುದೆಂದೂ, ಒಂದು ಕಾರ್ಯದಿಂದ ಸಂಭವಿಸಲಾಗದ ಫಲವನ್ನು ಅದರಿಂದಲೇ ಸಂಭವಿಸಿತೆಂದೂ ಉತ್ಪ್ರೇಕ್ಷಿಸಲಿಕ್ಕೆ ಅವಕಾಶವಿರುವುದರಿಂದ ಇದು ಮೂರು ಬಗೆಯಾಗಿದೆ. ಇವುಗಳಲ್ಲಿ ಮೊದಲನೆಯದಾದ ವಸ್ತೂತ್ಪ್ರೇಕ್ಷೆಯಲ್ಲಿ ಧರ್ಮವೆನಿಸಿದ ವಿಷಯವು ಕೆಲವುವೇಳೆ ಉಕ್ತವೂ, ಕೆಲವುವೇಳೆ ಅನುಕ್ತವೂ ಆಗಿರುತ್ತದೆ. ಉಳಿದ ಎರಡು ಅಂದರೆ ಹೇತೂತ್ಪ್ರೇಕ್ಷೆ ಫಲೋತ್ಪ್ರೇಕ್ಷೆಗಳಲ್ಲಿ ವಿಷಯ ಕೆಲವುವೇಳೆ ಲೋಕಾನುಭವಸಿದ್ಧವೂ, ಕೆಲವುವೇಳೆ ಅಸಿದ್ಧವೂ ಅಂದರೆ ಕವಿಕಲ್ಪಿತವೂ ಆಗಿರುವುದು. ತಮಸ್ಸನ್ನು ಹೆಣ್ಣು ಚಕ್ರವಾಕಪಕ್ಷಿಗಳ ವಿರಹಾಗ್ನಿಯಿಂದ ಹೊರಹೊಮ್ಮಿದ ಹೊಗೆಯ ರಾಶಿ ಎಂದು ಊಹಿಸುತ್ತೇನೆ. ಕತ್ತಲೆಯು ಶರೀರದ ಅವಯವಗಳನ್ನು ಲೇಪಿಸುತ್ತಿದೆಯೋ ಏನೋ ಎಂಬಂತಿದೆ. ಆಕಾಶವು ಕಾಡಿಗೆಯನ್ನು ಸುರಿಸುತ್ತಿದೆಯೋ ಏನೋ ಎಂಬಂತಿದೆ; ಕೆಂಪಾದ ನಿನ್ನ ಪಾದಗಳನ್ನು ನೆಲದಮೇಲೆ ಇಡುವುದರಿಂದಲೋ ಏನೋ ಎಂಬಂತೆ ಅವು ಮೃದುವಾಗಿವೆ. ನಿನ್ನ ಮುಖದ ಕಾಂತಿಯನ್ನು ಹೊಂದುವ ಇಚ್ಛೆಯಿಂದಲೋ ಏನೋ ಎಂಬಂತೆ ಚಂದ್ರನು ಕಮಲಗಳೊಡನೆ ದ್ವೇಷವನ್ನು ಬೆಳೆಸುತ್ತಿದ್ದಾನೆ. ಮಧ್ಯಪ್ರದೇಶವು ಕುಚಗಳನ್ನು ಧರಿಸಲಿಕ್ಕಾಗಿಯೋ ಏನೋ ಎಂಬಂತೆ ಬಂಗಾರದ ಡಾಬಿನಿಂದ ಬದ್ಧವಾಗಿದೆ. ಕಮಲವು ನಿನ್ನ ಪಾದದೊಡನೆ ಐಕ್ಯವನ್ನು ಹೊಂದಲಿಕ್ಕೋ ಏನೋ ಎಂಬಂತೆ ನೀರಿನಲ್ಲಿ ತಪಸ್ಸನ್ನೆಸಗುತ್ತಿದೆ.

ಅನ್ಯಧರ್ಮಸಂಬಂಧನಿಮಿತ್ತೇನ ಅನ್ಯಸ್ಯ ಅನ್ಯತಾದಾತ್ಮ್ಯಸಂಭಾವನಂ ಉತ್ಪ್ರೇಕ್ಷಾ— ಸಾ ವಸ್ತುಹೇತುಫಲಾತ್ಮತಾಗೋಚರತ್ವೇನ ತ್ರಿವಿಧಾ. ಅತ್ರ ವಸ್ತುನಃ

ಪತಿಯನ್ನು "ಸಖಿ" ಎಂದು ಭ್ರಮಿಸಿ ಕಾಮುಕನೊಬ್ಬನ ಸಮಾಚಾರವನ್ನು ಧೂರ್ತ ನಾಯಿಕೆಯೊಬ್ಬಳು ತಿಳಿಸುತ್ತ, ಆಮೇಲೆ ಅವನನ್ನು ತನ್ನ ಪತಿ ಎಂದು ತಿಳಿದು "ಎಲೈ ಸಖಿಯೇ, ಇಷ್ಟುಹೊತ್ತು ಸ್ವಪ್ನವನ್ನು ಕಾಣುತ್ತಲಿದ್ದೆ, ಈಗ ಎಚ್ಚರಗೊಂಡೆನು" ಎಂದು ತನ್ನ ಮಾತನ್ನು ಮುಗಿಸಿದಳು. ಇಲ್ಲಿ ಜಾಗ್ರದವಸ್ಥೆಗೂ ಸ್ವಪ್ನಾವಸ್ಥೆಗೂ ಅನ್ವಯಿಸುವಂತೆ ಜಾರವೃತ್ತಾಂತವನ್ನು ತಿಳಿಸಿರುವುದರಿಂದ ವಿಷಯದಲ್ಲಿ ಭೇದವಿಲ್ಲ. ಆದರೆ ಜಾಗ್ರದವಸ್ಥೆಗೆ ಅನ್ವಯಿಸುವಂತೆ ಹೇಳಿದ್ದನ್ನೇ ಸ್ವಪ್ನಾವಸ್ಥೆಗೆ ಸಂಬಂಧಿಸಿದಂತೆ ಹೇಳುವ ಮೂಲಕ ಜಾಗ್ರದವಸ್ಥೆಗೆ ಸಂಬಂಧಿಸಿದ್ದನ್ನು ನಿಷೇಧಿಸಲಾಗಿದೆ.

ಕೈತವಾಪಹ್ನುತಿರ್ವ್ಯಕ್ತೌ ವ್ಯಾಜಾದ್ಯೈರ್ನಿಹ್ನುತೈಃ ಪದೈಃ ।
ನಿರ್ಯಾಂತಿ ಸ್ಮರನಾರಾಚಾಃ ಕಾಂತಾದೃಕ್ಪಾತಕೈತವಾತ್ ॥ 30 ॥

ಅತ್ರ ಅಸತ್ಯತ್ವಾಭಿಧಾಯಿನಾ ಕೈತವಪದೇನ ನೇಮೇ ಕಾಂತಾಕಟಾಕ್ಷಾಃ ಕಿಂತು ಸ್ಮರಾನಾರಾಚಾಃ ಇತ್ಯಪಹ್ನುತಿಃ ಪ್ರತೀಯತೇ.

ಸುಳ್ಳು ಎಂಬ ಅರ್ಥವನ್ನು ತಿಳಿಸುವ "ವ್ಯಾಜ, ಕೈತವ" ಮೊದಲಾದ ಪದಗಳಿಂದ ಎಲ್ಲಿ ನಿಷೇಧವನ್ನು ಸೂಚಿಸಲಾಗಿದೆಯೋ ಅಲ್ಲಿ ಕೈತವಾಪಹ್ನುತಿ ಎಂಬ ಅಲಂಕಾರವಿರುವುದು. "ಕಾಂತೆಯ ಓರೆನೋಟಗಳ ವ್ಯಾಜದಿಂದ ಮನ್ಮಥ ಬಾಣಗಳು ಹೊರಗೆ ಬರುತ್ತಿವೆ" ಇಲ್ಲಿ ಕೈತವಪದದಿಂದ "ಇವು ಕಾಂತೆಯ ಓರೆನೋಟಗಳಲ್ಲ; ಆದರೆ ಮನ್ಮಥನ ಬಾಣಗಳು" ಎಂದು ಕಾಂತೆಯರ ಓರೆನೋಟಗಳನ್ನು ನಿಷೇಧಿಸಲಾಗಿದೆ.

ರಿಕ್ತೇಷು ವಾರಿಕಥಯಾ ವಿಪಿನೋದರೇಷು
ಮಧ್ಯಾಹ್ನಜೃಂಭಿತಮಹಾ ತಪತಾಪತಪ್ತಾಃ ।
ಸ್ಕಂಧಾಂತರೋತ್ಥಿತದವಾಗ್ನಿ ಶಿಖಾಚ್ಛಲೇನ
ಜಿಹ್ವಾಂ ಪ್ರಸಾರ್ಯ ತರವೋ ಜಲಮರ್ಥಯಂತೇ ॥

ಇದು ಗ್ರೀಷ್ಮ ಋತುವಿನ ವರ್ಣನೆ ಎನಿಸಿದೆ. "ನೀರಿನ ಹೆಸರೇ ಇಲ್ಲದ ನಡುಗಳಲ್ಲಿ ಮಧ್ಯಾಹ್ನದ ವೇಳೆಗೆ ಎಲ್ಲೆಲ್ಲೂ ಹರಡಿರುವ ಬಿಸಿಲಿನ ತಾಪದಿಂದ ಒಣಗಿಹೋಗಿದ್ದ ಮರಗಳು ಕವಲೊಡೆಯುವ ಜಾಗದಿಂದ ಹೊರಟ ಉರಿಯ ನೆಪದಿಂದ ನಾಲಿಗೆಯನ್ನು ಚಾಚಿ ನೀರಿಗಾಗಿ ಬೇಡಿಕೊಳ್ಳುತ್ತಿವೆ". ಇಲ್ಲಿ "ಇದು ಬೆಂಕಿಯ ಜ್ವಾಲೆಯಲ್ಲ; ಆದರೆ ಮರದ ನಾಲಿಗೆ" ಎಂಬ ಅರ್ಥವು ಛಲ ಎಂಬ ಪದದಿಂದ ತೋರುತ್ತದೆ.

# ಉತ್ಪ್ರೇಕ್ಷಾಲಂಕಾರ

ಸಂಭಾವನಾ ಸ್ಯಾದುತ್ಪ್ರೇಕ್ಷಾ ವಸ್ತುಹೇತುಫಲಾತ್ಮನಾ ।
ಉಕ್ತಾನುಕ್ತಾಸ್ಪದಾದ್ಯತ್ರ ಸಿದ್ಧಾಽಸಿದ್ಧಾಸ್ಪದೇ ಪರೇ ॥ ೩೧ ॥
ಧೂಮಸ್ತೋಮಂ ತಮಃ ಶಂಕೇ ಕೋಕೀವಿರಹಶುಷ್ಮಣಾಮ್ ।
ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ॥
ರಕ್ತೌ ತವಾಂಘ್ರೀ ಮೃದುಲೌ ಭುವಿ ವಿಕ್ಷೇಪಣಾದ್ಧ್ರುವಮ್ ।
ತ್ವನ್ಮುಖಾಭೇಚ್ಛಯಾ ನೂನಂ ಪದ್ಮೈರ್ವೈರಾಯತೇ ಶಶೀ ॥
ಮಧ್ಯಃ ಕಿಂ ಕುಚಯೋರ್ಧೃತ್ಯೈ ಬದ್ಧಃ ಕನಕದಾಮಭಿಃ ।
ಪ್ರಾಯೋಽಬ್ಜಂ ತ್ವತ್ಪದೇನೈಕ್ಯಂ ಪ್ರಾಪ್ತುಂ ತೋಯೇ ತಪಸ್ಯತಿ ॥

ಒಂದು ವಸ್ತುವನ್ನು ಪ್ರಾಯಶಃ ಇದು ಮತ್ತೊಂದು ವಸ್ತುವಾಗಿರಬಹುದೆಂದು ಊಹಿಸುವುದೇ ಸಂಭಾವನೆ. ಇದೇ ಉತ್ಪ್ರೇಕ್ಷೆ ಎನಿಸಿದೆ. ಒಂದು ವಸ್ತುವನ್ನು ಮತ್ತೊಂದು ವಸ್ತುವೆಂದೂ, ಒಂದು ಕಾರ್ಯಕ್ಕೆ ಕಾರಣವಲ್ಲದ್ದನ್ನು ಕಾರಣವಾಗಿರಬಹುದೆಂದೂ, ಒಂದು ಕಾರ್ಯದಿಂದ ಸಂಭವಿಸಲಾಗದ ಫಲವನ್ನು ಅದರಿಂದಲೇ ಸಂಭವಿಸಿತೆಂದೂ ಉತ್ಪ್ರೇಕ್ಷಿಸಲಿಕ್ಕೆ ಅವಕಾಶವಿರುವುದರಿಂದ ಇದು ಮೂರು ಬಗೆಯಾಗಿದೆ. ಇವುಗಳಲ್ಲಿ ಮೊದಲನೆಯದಾದ ವಸ್ತೂತ್ಪ್ರೇಕ್ಷೆಯಲ್ಲಿ ಧರ್ಮವೆನಿಸಿದ ವಿಷಯವು ಕೆಲವುವೇಳೆ ಉಕ್ತವೂ, ಕೆಲವುವೇಳೆ ಅನುಕ್ತವೂ ಆಗಿರುತ್ತದೆ. ಉಳಿದ ಎರಡು ಅಂದರೆ ಹೇತೂತ್ಪ್ರೇಕ್ಷೆ ಫಲೋತ್ಪ್ರೇಕ್ಷೆಗಳಲ್ಲಿ ವಿಷಯ ಕೆಲವುವೇಳೆ ಲೋಕಾನುಭವಸಿದ್ಧವೂ, ಕೆಲವುವೇಳೆ ಅಸಿದ್ಧವೂ ಅಂದರೆ ಕವಿಕಲ್ಪಿತವೂ ಆಗಿರುವುದು. ತಮಸ್ಸನ್ನು ಹೆಣ್ಣು ಚಕ್ರವಾಕಪಕ್ಷಿಗಳ ವಿರಹಾಗ್ನಿಯಿಂದ ಹೊರಹೊಮ್ಮಿದ ಹೊಗೆಯ ರಾಶಿ ಎಂದು ಊಹಿಸುತ್ತೇನೆ. ಕತ್ತಲೆಯು ಶರೀರದ ಅವಯವಗಳನ್ನು ಲೇಪಿಸುತ್ತಿದೆಯೋ ಏನೋ ಎಂಬಂತಿದೆ. ಆಕಾಶವು ಕಾಡಿಗೆಯನ್ನು ಸುರಿಸುತ್ತಿದೆಯೋ ಏನೋ ಎಂಬಂತಿದೆ; ಕೆಂಪಾದ ನಿನ್ನಪಾದಗಳನ್ನು ನೆಲದಮೇಲೆ ಇಡುವುದರಿಂದಲೋ ಏನೋ ಎಂಬಂತೆ ಅವು ಮೃದುವಾಗಿವೆ. ನಿನ್ನ ಮುಖದ ಕಾಂತಿಯನ್ನು ಹೊಂದುವ ಇಚ್ಛೆಯಿಂದಲೋ ಏನೋ ಎಂಬಂತೆ ಚಂದ್ರನು ಕಮಲಗಳೊಡನೆ ದ್ವೇಷವನ್ನು ಬೆಳೆಸುತ್ತಿದ್ದಾನೆ. ಮಧ್ಯಪ್ರದೇಶವು ಕುಚಗಳನ್ನು ಧರಿಸಲಿಕ್ಕಾಗಿಯೋ ಏನೋ ಎಂಬಂತೆ ಬಂಗಾರದ ಡಾಬಿನಿಂದ ಬದ್ಧವಾಗಿದೆ. ಕಮಲವು ನಿನ್ನ ಪಾದದೊಡನೆ ಐಕ್ಯವನ್ನು ಹೊಂದಲಿಕ್ಕೋ ಏನೋ ಎಂಬಂತೆ ನೀರಿನಲ್ಲಿ ತಪಸ್ಸನ್ನೆಸಗುತ್ತಿದೆ.

ಅನ್ಯಧರ್ಮಸಂಬಂಧನಿಮಿತ್ತೇನ ಅನ್ಯಸ್ಯ ಅನ್ಯತಾದಾತ್ಮ್ಯಸಂಭಾವನಂ ಉತ್ಪ್ರೇಕ್ಷಾ— ಸಾ ವಸ್ತುಹೇತುಫಲಾತ್ಮತಾಗೋಚರತ್ವೇನ ತ್ರಿವಿಧಾ. ಅತ್ರ ವಸ್ತುನಃ

ಕಸ್ಯಚಿತ್ ವಸ್ತ್ವಂತರತಾದಾತ್ಮ್ಯಸಂಭಾವನಾ ಪ್ರಥಮಾ ಸ್ವರೂಪೋತ್ಪ್ರೇಕ್ಷೇತ್ಯುಚ್ಯತೇ. ಅಹೇತೋರ್ಹೇತುಭಾವೇನ, ಅಫಲಸ್ಯ ಫಲತ್ವೇನ ಉತ್ಪ್ರೇಕ್ಷಾ ಹೇತೂತ್ಪ್ರೇಕ್ಷಾ ಫಲೋತ್ಪ್ರೇಕ್ಷೇತ್ಯುಚ್ಯತೇ. ಅತ್ರ ಆದ್ಯಾ ಸ್ವರೂಪೋತ್ಪ್ರೇಕ್ಷಾ ಉಕ್ತವಿಷಯಾ, ಅನುಕ್ತವಿಷಯಾ ಚೇತಿ ದ್ವಿವಿಧಾ. ಪರೇ ಹೇತು ಫಲೋತ್ಪ್ರೇಕ್ಷೇ ಸಿದ್ಧವಿಷಯಾ, ಅಸಿದ್ಧವಿಷಯಾ ಚೇತಿ ಪ್ರತ್ಯೇಕಂ ದ್ವಿವಿಧೇ. ಏವಂ ಷಣ್ಣಾಮುತ್ಪ್ರೇಕ್ಷಾಣಾಂ ಧೂಮಸ್ತೋಮೇತ್ಯಾದೀನಿ ಕ್ರಮೇಣ ಉದಾಹರಣಾನಿ. ರಜನೀಮುಖೇ ಸರ್ವತ್ರ ವಿಸ್ತೃತ್ವರಸ್ಯ ತಮಸೋ ನೈಲ್ಯದೃಷ್ಟಿಪ್ರತಿರೋಧಕತ್ವಾದಿಧರ್ಮಸಂಬಂಧೇನ ಗಮ್ಯಮಾನೇನ ನಿಮಿತ್ತೇನ ಸದ್ಯಃ ಪ್ರಿಯವಿಘಟಿತಸರ್ವದೇಶಸ್ಥಿತಕೋಕಾಂಗನಾಹೃದುಪಗತಪ್ರಜ್ವಲಿಷ್ಯದ್ವಿರಹಾನಲಧೂಮಸ್ತೋಮತಾದಾತ್ಮ್ಯ ಸಂಭಾವನಾ ಸ್ವರೂಪೋತ್ಪ್ರೇಕ್ಷಾ ; ತಮಸೋ ವಿಷಯಸ್ಯ ಉಪಾದಾನಾದುಕ್ತವಿಷಯಾ. ತಮೋವ್ಯಾಪನಸ್ಯ ನಭಃಪ್ರಭೃತಿ ಭೂಪರ್ಯಂತಸಕಲವಸ್ತುಸಾಂದ್ರಮಲಿನೀಕರಣೇನ ನಿಮಿತ್ತೇನ ತಮಃ ಕರ್ತೃಕಲೇಪನ ತಾದಾತ್ಮ್ಯೋತ್ಪ್ರೇಕ್ಷಾ ನಭಃಕರ್ತೃಕಾಂಜನವರ್ಷಣತಾದಾತ್ಮ್ಯೋತ್ಪ್ರೇಕ್ಷಾ ಚ ಅನುಕ್ತವಿಷಯಾ ಸ್ವರೂಪೋತ್ಪ್ರೇಕ್ಷಾ, ಉಭಯತ್ರಾಪಿ ವಿಷಯಭೂತತಮೋವ್ಯಾಪನಸ್ಯ ಅನುಪಾದಾನಾತ್. ನನ್ವತ್ರ ತಮಸೋ ವ್ಯಾಪನೇನ ನಿಮಿತ್ತೇನ ಲೇಪನಕರ್ತೃತಾದಾತ್ಮ್ಯೋತ್ಪ್ರೇಕ್ಷಾ, ನಭಸೋ ಭೂಪರ್ಯಂತಂ ಗಾಢನೀಲಿಮವ್ಯಾಪ್ತತ್ವೇನ ನಿಮಿತ್ತೇನ ಅಂಜನವರ್ಷಣಕರ್ತೃತಾದಾತ್ಮ್ಯೋತ್ಪ್ರೇಕ್ಷಾ ಚ ಇತ್ಯುತ್ಪ್ರೇಕ್ಷಾದ್ವಯಂ ಉಕ್ತವಿಷಯಮೇವಾಸ್ತು. ಮೈವಮ್. ಲಿಂಪತಿ ವರ್ಷತಿ ಇತ್ಯಾಖ್ಯಾತಯೋಃ ಕರ್ತೃವಾಚಕತ್ವೇಽಪಿ ಭಾವಪ್ರಧಾನಮಾಖ್ಯಾತಮಿತಿ ಸ್ಮೃತೇಃ ಧಾತ್ವರ್ಥಕ್ರಿಯಾಯಾ ಏವ ಪ್ರಾಧಾನ್ಯೇನ ತದುಪಸರ್ಜನತ್ವೇನಾನ್ವಿತಸ್ಯ ಕರ್ತುರುತ್ಪ್ರೇಕ್ಷಣೀಯತಯಾ ಅನ್ಯತ್ರಾನ್ವಯಾಸಂಭವಾತ್. ಅತ ಏವ ಆಖ್ಯಾತಾರ್ಥಸ್ಯ ಕರ್ತುಃ ಕ್ರಿಯೋಪಸರ್ಜನತ್ವೇ ಅನ್ಯತ್ರ ಅನ್ವಯಾಸಂಭವಾದೇವ ಅಸ್ಯ ಉಪಮಾಯಾಂ ಉಪಮಾನತಯಾ ಅನ್ವಯೋಽಪಿ ದಂಡಿನಾ ನಿರಾಕೃತಃ.

"ಕರ್ತಾ ಯದ್ಯುಪಮಾನಂ ಸ್ಯಾತ್ ನ್ಯಗ್ಭೂತೋಽಸೌ ಕ್ರಿಯಾಪದೇ ।
ಸ್ವಕ್ರಿಯಾಸಾಧನವ್ಯಗ್ರೋ ನಾಲಮನ್ಯದ್ವ್ಯಪೇಕ್ಷಿತುಮ್ ॥" ಇತಿ.

ಕೇಚಿತ್ತು ತಮೋನಭಸೋರ್ವಿಷಯಯೋಸ್ತತ್ಕರ್ತೃಕಲೇಪನವರ್ಷಣ ಸ್ವರೂಪಧರ್ಮೋತ್ಪ್ರೇಕ್ಷೇತ್ಯಾಹುಃ. ತನ್ಮತೇ ಸ್ವರೂಪೋತ್ಪ್ರೇಕ್ಷಾಯಾಂ ಧರ್ಮ್ಯುತ್ಪ್ರೇಕ್ಷಾ ಧರ್ಮೋತ್ಪ್ರೇಕ್ಷಾ ಚೇತ್ಯೇವಂ ದ್ವೈವಿಧ್ಯಂ ದ್ರಷ್ಟವ್ಯಮ್. ಚರಣಯೋಃ ಸ್ವತಃ ಸಿದ್ಧೇ ರಕ್ತಿಮನಿ ವಸ್ತುತೋ ವಿಕ್ಷೇಪಣಂ ನ ಹೇತುರಿತಿ ಅಹೇತೋಸ್ತಸ್ಯ ಹೇತುತ್ವೇನ ಸಂಭಾವನಾ ಹೇತೂತ್ಪ್ರೇಕ್ಷಾ. ವಿಕ್ಷೇಪಣಸ್ಯ ವಿಷಯಸ್ಯ ಸತ್ತ್ವಾತ್ ಸಿದ್ಧವಿಷಯಾ. ಚಂದ್ರಪದ್ಮವಿರೋಧೇ ಸ್ವಾಭಾವಿಕೇ ನಾಯಿಕಾವದನಕಾಂತಿಪ್ರೇಪ್ಸಾ ನ ಹೇತುರಿತಿ ತತ್ರ ತದ್ಧೇತುತ್ವಸಂಭಾವನಾ ಹೇತೂತ್ಪ್ರೇಕ್ಷಾ; ವಸ್ತುತಃ ತದಿಚ್ಛಾಯಾಃ

ಅಭಾವಾದಸಿದ್ಧವಿಷಯಾ. ಮಧ್ಯಃ ಸ್ವಯಮೇವ ಕುಚೌ ಧರತಿ ನ ತು ಕನಕದಾಮ ಬಂಧತ್ವೇನ ಅಧ್ಯವಸಿತಾಯಾಃ ವಲಿತ್ರಯಶಾಲಿತಾಯಾಃ ಬಲಾತ್ ಇತಿ ಮಧ್ಯಕರ್ತೃಕಕುಚಧೃತೇಃ ತತ್ಫಲತ್ವೇನೋತ್ಪ್ರೇಕ್ಷಾ ಸಿದ್ಧವಿಷಯಾ ಫಲೋತ್ಪ್ರೇಕ್ಷಾ. ಜಲಜಸ್ಯ ಜಲಾವಸ್ಥಿತೇರುದವಾಸತಪಸ್ತ್ವೇನ ಅಧ್ಯವಸಿತಾಯಾಃ ಕಾಮಿನೀಚರಣಸಾಯುಜ್ಯ ಪ್ರಾಪ್ತಿರ್ನ ಫಲಮಿತಿ ತಸ್ಯಾಃ ಗಗನಕುಸುಮಾಯಮಾಯಾಸ್ತಪಃ ಫಲತ್ವೇನ ಉತ್ಪ್ರೇಕ್ಷಣಾದಸಿದ್ಧವಿಷಯಾ ಫಲೋತ್ಪ್ರೇಕ್ಷಾ ಅನೇನೈವ ಕ್ರಮೇಣ ಉದಾಹರಣಾಂತರಾಣಿ.

ಒಂದು ವಸ್ತುವಿನಲ್ಲಿರುವ ಧರ್ಮದ ಸಂಬಂಧವನ್ನು ನಿಮಿತ್ತವಾಗಿಟ್ಟುಕೊಂಡು ಬೇರೊಂದು ವಸ್ತುವಿನಲ್ಲಿ ಆ ವಸ್ತುವಿನ ತಾದಾತ್ಮ್ಯವನ್ನು ಊಹಿಸುವುದೇ ಉತ್ಪ್ರೇಕ್ಷೆ ಎನಿಸುತ್ತದೆ. ಅಂದರೆ ಉಪಮಾನದಲ್ಲಿರುವ ಧರ್ಮವನ್ನು ನಿಮಿತ್ತವಾಗಿಟ್ಟುಕೊಂಡು ಅದರ ಆಧಾರದಮೇಲೆ ಉಪಮೇಯವನ್ನು ಉಪಮಾನವೆಂದು ಊಹಿಸುವುದೇ ಉತ್ಪ್ರೇಕ್ಷೆ ಎನಿಸುವುದು. ಇದು ವಸ್ತೂತ್ಪ್ರೇಕ್ಷೆ. ಹೇತೂತ್ಪ್ರೇಕ್ಷೆ. ಫಲೋತ್ಪ್ರೇಕ್ಷೆ ಎಂದು ಮೂರು ಬಗೆಯಾಗಿದೆ. ಒಂದು ವಸ್ತುವಿನಲ್ಲಿ ಅಂದರೆ ಉಪಮೇಯದಲ್ಲಿ ಬೇರೊಂದು ವಸ್ತುವಿನ ಅಂದರೆ ಉಪಮಾನದ ತಾದಾತ್ಮ್ಯವನ್ನು ಊಹಿಸುವುದೇ ವಸ್ತೂತ್ಪ್ರೇಕ್ಷೆ ಎನಿಸುತ್ತದೆ. ಒಂದು ವಸ್ತುವಿನಲ್ಲಿ ಮತ್ತೊಂದು ವಸ್ತುವಿನ ಸ್ವರೂಪವನ್ನೇ ಉತ್ಪ್ರೇಕ್ಷಿಸುವುದರಿಂದ ಇದು ಸ್ವರೂಪೋತ್ಪ್ರೇಕ್ಷೆ ಎನಿಸಿದೆ. ಒಂದು ಕಾರ್ಯಕ್ಕೆ ಯಾವುದು ವಾಸ್ತವವಾಗಿ ಕಾರಣವಾಗಲಾರದೋ ಅದನ್ನೇ ಆ ಕಾರ್ಯಕ್ಕೆ ಕಾರಣವೆಂದು ಊಹಿಸುವುದೇ ಹೇತೂತ್ಪ್ರೇಕ್ಷೆ ಎನಿಸುತ್ತದೆ. ಯಾವ ಫಲವು ಒಂದು ಕಾರಣದಿಂದ ಹುಟ್ಟುವುದಿಲ್ಲವೋ ಅದನ್ನು ಆ ಕಾರಣದಿಂದಲೇ ಹುಟ್ಟಿದ್ದೆಂದು ಎಲ್ಲಿ ಊಹಿಸಬಹುದೋ ಅದು ಫಲೋತ್ಪ್ರೇಕ್ಷೆ ಎನಿಸುತ್ತದೆ. ಇವುಗಳಲ್ಲಿ ಮೊದಲನೆಯದಾದ ವಸ್ತೂತ್ಪ್ರೇಕ್ಷೆಯಲ್ಲಿ ವಿಷಯವೆನಿಸಿದ ಉಪಮೇಯವನ್ನು ಕೆಲವುವೇಳೆ ಶಬ್ದದಿಂದ ತಿಳಿಸಿರಬಹುದು ; ಕೆಲವೆಡೆಗಳಲ್ಲಿ ತಿಳಿಸದೆಯೇ ಇರಬಹುದು. ಆದ್ದರಿಂದ ಇದು ಉಕ್ತವಿಷಯಾ ಅನುಕ್ತವಿಷಯಾ ಎಂದು ಎರಡು ಬಗೆಯಾಗಿದೆ. ಉಳಿದ ಎರಡರಲ್ಲೂ ವಿಷಯವು ಕೆಲವೆಡೆಗಳಲ್ಲಿ ಲೋಕಾನುಭವಸಿದ್ಧವೂ, ಕೆಲವೆಡೆಗಳಲ್ಲಿ ಕವಿಕಲ್ಪಿತವೂ ಆಗಿರುವುದು. ಆದ್ದರಿಂದ ಆವೆರಡರಲ್ಲಿ ಒಂದೊಂದರಲ್ಲೂ ಸಿದ್ಧವಿಷಯಾ, ಅಸಿದ್ಧವಿಷಯಾ, ಎಂದು ಎರಡು ಬಗೆಗಳಾಗುತ್ತವೆ. ಈ ಆರು ಉತ್ಪ್ರೇಕ್ಷೆಗಳಿಗೂ "ಧೂಮಸ್ತೋಮಂ ತಮಃ ಶಂಕೇ" ಇವೇ ಮೊದಲಾದವು ಕ್ರಮವಾಗಿ ಉದಾಹರಣಗಳೆನಿಸಿವೆ. ರಾತ್ರಿಯ ಆರಂಭದಲ್ಲಿ ಎಲ್ಲೆಡೆಯಲ್ಲೂ ಹರಡುತ್ತಿರುವ ತಮಸ್ಸೆಂಬ ಉಪಮೇಯದಲ್ಲಿ ಉಪಮಾನವೆನಿಸಿದ ಹೊಗೆಯರಾಶಿಯ ಕಪ್ಪುಬಣ್ಣ, ದೃಷ್ಟಿಯನ್ನು ತಡೆಯುವಿಕೆ ಮೊದಲಾದ ಧರ್ಮಗಳ ಸಂಬಂಧವು ವ್ಯಂಗ್ಯವಾಗಿ ತೋರುತ್ತಿರುವುದರಿಂದ ಇದನ್ನೇ ನಿಮಿತ್ತವಾಗಿಟ್ಟುಕೊಂಡು ಆ ತಮಸ್ಸನ್ನು ಆಗ

ತಾನೇ ಸಂಭವಿಸಿದ್ದ ಪ್ರಿಯವಿರಹದಿಂದ ಎಲ್ಲಾ ಕಡೆಗಳಲ್ಲೂ ಇರುವ ಹೆಣ್ಣು ಚಕ್ರವಾಕ ಪಕ್ಷಿಗಳ ಹೃದಯದಲ್ಲಿ ಉರಿಯುತ್ತಿದ್ದ ವಿರಹಾಗ್ನಿಯಿಂದ ಹೊರಗೆ ಬಂದ ಹೊಗೆಯ ರಾಶಿಯೋ ಏನೋ ಎಂದು ಇಲ್ಲಿ ಊಹಿಸಲಾಗಿದೆ. ತಮಸ್ಸನ್ನು ಹೊಗೆಯ ರಾಶಿ ಎಂದು ಉತ್ಪ್ರೇಕ್ಷಿಸಿರುವುದರಿಂದ ಇದು ಸ್ವರೂಪೋತ್ಪ್ರೇಕ್ಷೆ ಎನಿಸಿದೆ. ಇಲ್ಲಿ ತಮಸ್ಸೆಂಬ ವಿಷಯವನ್ನು ಶಬ್ದದಿಂದಲೇ ತಿಳಿಸಿರುವ ಪ್ರಯುಕ್ತ ಇದು ಉಕ್ತವಿಷಯವೆನಿಸಿದೆ. ತಮಸ್ಸು ಎಲ್ಲೆಡೆಯಲ್ಲೂ ವ್ಯಾಪಿಸಿ ಆಕಾಶದಿಂದ ಭೂಮಿಯವರೆಗೂ ಎಲ್ಲಾ ವಸ್ತುಗಳನ್ನೂ ಪೂರ್ತಿಯಾಗಿ ಕಪ್ಪುಗೊಳಿಸಿದ್ದರಿಂದ ಅದನ್ನೇ ನಿಮಿತ್ತವಾಗಿಟ್ಟುಕೊಂಡು ತಮಸ್ಸೇ ಲೇಪನವನ್ನು ಮಾಡುತ್ತಿದೆಯೋ ಏನೋ ಎಂದೂ, ಆಕಾಶವೇ ಕಾಡಿಗೆಯನ್ನು ಸುರಿಸುತ್ತಿದೆಯೋ ಏನೋ ಎಂದು ಉತ್ಪ್ರೇಕ್ಷಿಸಿರುವುದು ಅನುಕ್ತವಿಷಯವೆನಿಸಿದ ಸ್ವರೂಪೋತ್ಪ್ರೇಕ್ಷೆ. ಇಲ್ಲಿ ಎರಡು ಕಡೆಗಳಲ್ಲೂ ವಿಷಯವೆನಿಸಿದ ತಮೋವ್ಯಾಪ್ತಿಯನ್ನು ಶಬ್ದದಿಂದ ತಿಳಿಸಿಲ್ಲ. ತಮೋವ್ಯಾಪ್ತಿಯಲ್ಲಿ ತಮಸ್ಸಿನ ಲೇಪನವನ್ನೂ, ಆಕಾಶದ ವರ್ಷಣವನ್ನೂ ಉತ್ಪ್ರೇಕ್ಷಿಸಿರುವುದರಿಂದ ವ್ಯಾಪ್ತಿ ಎಂಬ ಉಪಮೇಯವನ್ನು ಶಬ್ದದಿಂದ ತಿಳಿಸಿಲ್ಲ.

ಇಲ್ಲಿ ತಮಸ್ಸು ವ್ಯಾಪಿಸಿರುವುದನ್ನು ನಿಮಿತ್ತವಾಗಿಟ್ಟುಕೊಂಡು ಆ ಮೂಲಕ ತಮಸ್ಸೇ ಲೇಪನಮಾಡುತ್ತಿರುವುದೆಂದು ಉತ್ಪ್ರೇಕ್ಷಿಸಬಹುದು. ಹಾಗೆಯೇ ಆಕಾಶದಲ್ಲಿ ನೆಲದವರೆಗೂ ಗಾಢವಾಗಿ ಕಪ್ಪುಬಣ್ಣವು ವ್ಯಾಪಿಸಿರುವುದನ್ನು ನಿಮಿತ್ತವಾಗಿಟ್ಟುಕೊಂಡು ಆಕಾಶವೇ ಕಾಡಿಗೆಯನ್ನು ಸುರಿಸುತ್ತಿರುವುದೆಂದೂ ಉತ್ಪ್ರೇಕ್ಷಿಸಬಹುದು. ಹೀಗೆ ಹೇಳುವುದರಿಂದ ಎರಡು ಉತ್ಪ್ರೇಕ್ಷೆಗಳಲ್ಲೂ ವಿಷಯವೆನಿಸಿದ ತಮಸ್ಸನ್ನು ಶಬ್ದದಿಂದಲೇ ತಿಳಿಸಿರುವ ಪ್ರಯುಕ್ತ ಇವು ಉಕ್ತವಿಷಯಗಳೇ ಆಗಲಿ ಎಂದರೆ ಅದು ಸರಿಯಲ್ಲ; ಯಾಕೆಂದರೆ ಲಿಂಪತಿ ವರ್ಷತಿ ಎಂಬಲ್ಲಿ ಆಖ್ಯಾತಪ್ರತ್ಯಯಗಳು ಲೇಪನಕರ್ತೃವನ್ನೂ ವರ್ಷಣಕರ್ತೃವನ್ನೂ ತಿಳಿಸುವುವಾದರೂ ತಿಙಂತಪದವನ್ನು ಪ್ರಯೋಗಿಸುವ ಕಡೆಗಳಲ್ಲಿ ಧಾತ್ವರ್ಥವೇ ಪ್ರಧಾನವೆನಿಸುತ್ತದೆ ಎಂದು ಯಾಸ್ಕಾಚಾರ್ಯರು ಹೇಳಿರುವ ಪ್ರಯುಕ್ತ ಧಾತುವಿನ ಅರ್ಥವೆನಿಸಿದ ಲೇಪನ ಮತ್ತು ವರ್ಷಣಕ್ರಿಯೆಗಳೇ ಇಲ್ಲಿ ಪ್ರಧಾನವೆನಿಸಿದ್ದರಿಂದ ಈ ಕ್ರಿಯೆಯಲ್ಲಿ "ತಿ'' ಎಂಬ ತಿಙ್‌ಪ್ರತ್ಯಯದ ಅರ್ಥವು ವಿಶೇಷವಾಗಿ ಸೇರಿಕೊಂಡಿರುವುದು. ಆದ್ದರಿಂದ ಲೇಪನಕರ್ತೃ ವರ್ಷಣಕರ್ತೃಗಳಿಗೆ ಲಿಂಪತಿ ಇವ ಎಂಬಲ್ಲಿ ಇವಪದದ ಅರ್ಥವೆನಿಸಿದ ಉತ್ಪ್ರೇಕ್ಷೆಯಲ್ಲಿ ಅನ್ವಯವು ಬರುವಂತಿಲ್ಲ. ಹೀಗೆ ತಿಙರ್ಥವೆನಿಸಿದ ಕರ್ತೃವು ಲೇಪನಕ್ರಿಯೆಯಲ್ಲಿ ವಿಶೇಷಣವೆನಿಸಿದ್ದ ಇವಾರ್ಥದೊಡನೆ ಸಂಬಂಧಿಸದಿರುವ ಪ್ರಯುಕ್ತ ಇದು ಉಪಮಾಲಂಕಾರದಲ್ಲಿ ಉಪಮಾನವೂ ಆಗುವಂತಿಲ್ಲವೆಂದು ದಂಡಿಯು ಸಾಧಿಸಿದ್ದಾನೆ. "ಕರ್ತೃವು ಉಪಮಾನವಾಗುವ ಪಕ್ಷದಲ್ಲಿ ಧಾತ್ವರ್ಥಕ್ರಿಯೆಯಲ್ಲಿ ಆದರ ವಿಶೇಷಣವಾಗುವ ಪ್ರಯುಕ್ತ ತನಗೆ

ಸಂಬಂಧಿಸಿದ ಆ ಕ್ರಿಯೆಯನ್ನು ಸಾಧಿಸುವುದರಲ್ಲಿಯೇ ಮಗ್ನವಾಗಿದ್ದು ಬೇರೊಂದು ಅರ್ಥದಲ್ಲಿ ಅನ್ವಯಿಸಲು ಅದು ಸಮರ್ಥವೆನಿಸಲಾರದು." ಹೀಗೆ ಪಂಡಿತನು ಕರ್ತೃವಿಗೆ ಉಪಮಾಲಂಕಾರದಲ್ಲಿ ಇವಾರ್ಥವಾದ ಸಾದೃಶ್ಯದೊಡನೆ ಅನ್ವಯವು ಬರುವುದಿಲ್ಲವೆಂದು ತಿಳಿಸಿ ಪ್ರಾಚೀನರು ಹೇಳುವಂತೆ ತಿಙರ್ಥವೆನಿಸಿದ ಕರ್ತೃವಿಗೆ ಇವಾರ್ಥದಲ್ಲಿ ಅನ್ವಯವುಂಟೆಂಬುದನ್ನು ನಿರಾಕರಿಸಿದ್ದಾನೆ.

ಕೆಲವರು ತಮಸ್ಸು, ನಭಸ್ಸು ಎಂಬ ವಿಷಯಗಳಲ್ಲಿ ಅವುಗಳಿಂದುಂಟಾಗಿರುವ ಲೇಪನ, ವರ್ಷಣ ಎಂಬ ಧರ್ಮಗಳನ್ನು ಉತ್ಪ್ರೇಕ್ಷಿಸಬಹುದೆಂದು ಹೇಳುತ್ತಾರೆ. ಅವರ ಮತದಲ್ಲಿ ಸ್ವರೂಪೋತ್ಪ್ರೇಕ್ಷೆಯಲ್ಲಿ ಧರ್ಮಿಯ ಉತ್ಪ್ರೇಕ್ಷೆ, ಧರ್ಮದ ಉತ್ಪ್ರೇಕ್ಷೆ ಎಂದು ಎರಡು ಬಗೆಗಳಾಗುತ್ತವೆ.

ಪಾದಗಳಲ್ಲಿ ಕೆಂಪುಬಣ್ಣವು ಸಹಜವಾಗಿರುವುದರಿಂದ ನೆಲದ ಮೇಲೆ ಹೆಜ್ಜೆಯನ್ನಿಡುವುದೇ ಆ ಪಾದಗಳು ಕೆಂಪಾಗಲಿಕ್ಕೆ ಕಾರಣವಲ್ಲವಾದರೂ ಅದನ್ನು ಕೆಂಪೇರುವುದಕ್ಕೆ ಇಲ್ಲಿ ಕಾರಣವೆಂದು ಊಹಿಸಿರುವುದರಿಂದ ಇದು ಹೇತೂತ್ಪ್ರೇಕ್ಷೆ ಎನಿಸಿದೆ. ನೆಲದಲ್ಲಿ ಕಾಲನ್ನಿಡುವುದೆಂಬ ವಿಷಯವು ಲೋಕಾನುಭವಸಿದ್ಧವಾಗಿರುವುದರಿಂದ ಇದು ಸಿದ್ಧವಿಷಯವೆನಿಸಿದೆ. ಚಂದ್ರನಿಗೂ ಕಮಲಕ್ಕೂ ಸ್ವಾಭಾವಿಕವಾಗಿ ವಿರೋಧವಿರುವಾಗ ನಾಯಿಕೆಯ ಮುಖದ ಕಾಂತಿಯನ್ನು ಹೊಂದಬೇಕೆಂಬ ಇಚ್ಛೆಯು ಚಂದ್ರಕಮಲಗಳ ವಿರೋಧಕ್ಕೆ ಕಾರಣವಲ್ಲವಾದರೂ ಇಲ್ಲಿ ಕಾರಣವೆಂದು ಊಹಿಸಿರುವುದರಿಂದ ಇದು ಹೇತೂತ್ಪ್ರೇಕ್ಷೆ ಎನಿಸಿದೆ. ವಾಸ್ತವವಾಗಿ ಚಂದ್ರನಿಗೆ ಆ ಬಗೆಯ ಇಚ್ಛೆಯಿಲ್ಲದಿದ್ದರೂ ಅದನ್ನು ಇಲ್ಲಿ ಕವಿಯು ಕಲ್ಪಿಸಿರುವುದು ಅಸಿದ್ಧವಿಷಯವೆನಿಸಿದೆ.

ಮಧ್ಯಪ್ರದೇಶವು ಕುಚಗಳನ್ನು ತಾನಾಗಿಯೇ ಹಿಡಿದು ನಿಲ್ಲಿಸಿದೆ ; ಅವರೆ ಸೊಂಟದಲ್ಲಿ ಹಾಕಿರುವ ಬಂಗಾರದ ಡಾಬೆಂದು ಇಲ್ಲಿ ಭಾವಿಸಲಾಗಿರುವ ತ್ರಿವಳಿಗಳ ಆಧಾರದಿಂದಲೇ ಅದು ಕುಚಗಳನ್ನು ಹಿಡಿದುಕೊಂಡಿಲ್ಲ. ಆದರೂ ಮಧ್ಯಪ್ರದೇಶವು ಕುಚಗಳನ್ನು ಹಿಡಿದುಕೊಂಡಿರುವುದು ತ್ರಿವಳಿಗಳ ಬಂಧನದ ಫಲವೆಂದು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ಇಲ್ಲಿ ಮಧ್ಯಪ್ರದೇಶದ ಕುಚಧಾರಣವೆಂಬ ವಿಷಯವು ಲೋಕಾನುಭವಸಿದ್ಧವಾದ್ದರಿಂದ ಈ ಉತ್ಪ್ರೇಕ್ಷೆಯು ಸಿದ್ಧವಿಷಯವೆನಿಸಿದೆ. ಕಮಲವು ನೀರಿನಲ್ಲಿ ವಾಸಮಾಡುವುದು ಸಹಜವಾದರೂ ಅಲ್ಲಿ ಅದು ನೆಲೆಸಿರುವುದನ್ನು ಅದರ ಒಂದು ಬಗೆಯ ತಪಸ್ಸೆಂದು ಇಲ್ಲಿ ನಿಶ್ಚಯಿಸಲಾಗಿದೆ. ಈ ಬಗೆಯ ತಪಸ್ಸಿಗೆ ಒಂದು ಫಲವಿರಬೇಕೆಂದು ಕವಿಯು ಕಲ್ಪಿಸಿದ್ದಾನೆ. ಕಮಲವು ಮುಂದಿನ ಜನ್ಮದಲ್ಲಾದರೂ ಕಾಮಿನಿಯ ಪಾದಗಳಾಗಿ ಹುಟ್ಟಬೇಕೆಂಬುದೇ ಅದರ ತಪಸ್ಸಿನ ಫಲವೆಂದು ಕಲ್ಪಿಸಲಾಗಿದೆ. ಕಮಲದ ತಪಸ್ಸಿಗೆ ಇದು ವಾಸ್ತವವಾಗಿ ಫಲವಲ್ಲವಾದರೂ ಇಲ್ಲಿ ಫಲವೆಂದೇ ಕವಿಯು ಉತ್ಪ್ರೇಕ್ಷಿಸಿದ್ದಾನೆ. ಆಕಾಶಪುಷ್ಪದಂತಿರುವ ಈ ಬಗೆಯ ಒಯು

ಕೆಯೇ ತಪಸ್ಸಿನ ಫಲವೆಂದು ಉತ್ಪ್ರೇಕ್ಷಿಸಿದ್ದರಿಂದ ಇಲ್ಲಿ ನಿರೂಪಿಸುವ ವಿಷಯವು ಲೋಕಾನುಭವಸಿದ್ಧವಾಗದೆ ಕವಿಕಲ್ಪಿತವಾದ್ದರಿಂದ ಇದು ಅಸಿದ್ಧವಿಷಯವೆನಿಸಿದ ಫಲೋತ್ಪ್ರೇಕ್ಷೆಯಾಗಿದೆ. ಇದೇ ಕ್ರಮದಲ್ಲಿ ಮೂರು ಉತ್ಪ್ರೇಕ್ಷೆಗಳಿಗೂ ಮುಂದ ಉದಾಹರಣೆಗಳನ್ನು ಕೊಡಲಾಗಿದೆ.

ಬಾಲೇಂದುವಕ್ರಾಣ್ಯವಿಕಾಸಭಾವಾದ್ಬಭುಃ ಪಲಾಶಾನ್ಯತಿಲೋಹಿತಾನಿ |
ಸದ್ಯೋ ವಸಂತೇನ ಸಮಾಗತಾನಾಂ ನಖಕ್ಷತಾನೀವ ವನಸ್ಥಲೀನಾಮ್ ||

ಅತ್ರ ಪಲಾಶಕುಸುಮಾನಾಂ ವಕ್ರತ್ವಲೋಹಿತತ್ವೇನ ಸಂಬಂಧೇನ ನಿಮಿತ್ತೇನ ಸದ್ಯಃಕೃತನಖಕ್ಷತತಾದಾತ್ಮ್ಯ ಸಂಭಾವನಾ ಉಕ್ತವಿಷಯಾ ಸ್ವರೂಪೋತ್ಪ್ರೇಕ್ಷಾ ಪೂರ್ವೋದಾಹರಣೇ ನಿಮಿತ್ತಭೂತಧರ್ಮಸಂಬಂಧೋ ಗಮ್ಯಃ ಇಹ ತು ಉಪಾತ್ತ ಇತಿ ಭೇದಃ. ನನ್ವಿವಶಬ್ದಸ್ಯ ಸಾದೃಶ್ಯಪರತ್ವೇನ ಪ್ರಸಿದ್ಧ ತರತ್ವಾದುಪಮೈವಾಸ್ತು. ಲಿಂಪತೀವೇತ್ಯುದಾಹರಣೇ ಲೇಪನಕರ್ತೃರೂಪಮಾನತ್ವಾರ್ಹಸ್ಯ ಕ್ರಿಯೋಪಸರ್ಜನ ತ್ವವತ್ ಇಹ ನಖಕ್ಷತಾನಾಂ ಅನ್ಯೋಪಸರ್ಜನತ್ವಸ್ಯ ಉಪಮಾಬಾಧಕಸ್ಯ ಅಭಾವಾತ್. ಉಚ್ಯತೇ–ಉಪಮಾಯಾಃ ಯತ್ರ ಕ್ವಚಿತ್ ಸ್ಥಿತೈರಪಿ ನಖಕ್ಷತೈಸ್ಸಹ ವಕ್ತುಂ ಶಕ್ಯತಯಾ ವಸಂತನಾಯಕಸಮಾಗತವನಸ್ಥಲೀಸಂಬಂಧಿತ್ವಸ್ಯ ವಿಶೇಷಣಸ್ಯ ಅನಪೇಕ್ಷಿತತ್ವಾತ್ ಇಹ ತದುಪಾದಾನಂ ಪಲಾಶಕುಸುಮಾನಾಂ ನಖಕ್ಷತತಾದಾತ್ಮ್ಯ ಸಂಭಾವನಾಯಾಂ ಇವಶಬ್ದಮವಸ್ಥಾಪಯತಿ. ತಥಾತ್ವ ಏವ ತದ್ವಿಶೇಷಣ ಸಾಫಲ್ಯಾತ್. ಅಸ್ತಿ ಚ ಸಂಭಾವನಾಯಾಂ ಇವಶಬ್ದೋ "ದೂರೇ ತಿಷ್ಠನ್ ದೇವದತ್ತ ಇವಾಭಾತಿ" ಇತಿ.

"ಇನ್ನೂ ಅರಳದೆ ಇರುವುದರಿಂದ ಬಿದಿಗೆಯ ಚಂದ್ರನಂತೆ ಡೊಂಕಾಗಿಯೂ ಕೆಂಪಾಗಿಯೂ ಇರುವ ಮುತ್ತುಗದ ಹೂವುಗಳು ವಸಂತನಾಯಕನೊಡಗೂಡಿದ್ದ ವನದೇವತೆಯರೆಂಬ ಸ್ತ್ರೀಯರಿಗೆ ಆಗ ತಾನೆ ನಾಯಕನ ಹಲ್ಲುಗಳಿಂದ ಉಂಟಾಗಿದ್ದ ಗಾಯಗಳೇನೋ ಎಂಬಂತೆ ಶೋಭಿಸುತ್ತಿದ್ದವು." ಇಲ್ಲಿ ಮುತ್ತುಗದ ಹೂವುಗಳ ಡೊಂಕು, ಕೆಂಪುಬಣ್ಣ ಮೊದಲಾದ ಧರ್ಮಗಳ ಸಂಬಂಧವನ್ನು ನಿಮಿತ್ತವಾಗಿಟ್ಟು ಕೊಂಡು ಅದರಿಂದ ಆ ಹೂವುಗಳನ್ನು ವಸಂತನಾಯಕನ ಹಲ್ಲುಗಳಿಂದ ವನದೇವತೆ ಯರ ಕೆನ್ನೆಗಳಮೇಲೆ ಆಗತಾನೆ ಉಂಟಾಗಿದ್ದ ಗಾಯಗಳೆಂದು ಸಂಭಾವಿಸಲಾಗಿದೆ. ಇಲ್ಲಿ ಮುತ್ತುಗದ ಹೂವುಗಳೆಂಬ ವಿಷಯವನ್ನು ಶಬ್ದದಿಂದಲೇ ತಿಳಿಸಿರುವುದರಿಂದ ಇದು ಉಕ್ತವಿಷಯವೆನಿಸಿದ ಸ್ವರೂಪೋತ್ಪ್ರೇಕ್ಷೆಗೆ ಉದಾಹರಣವಾಗಿದೆ. "ಧೂಮ ಸ್ತೋಮಂ ತಮಃ ಶಂಕೇ" ಎಂಬ ಹಿಂದಿನ ಉದಾಹರಣದಲ್ಲಿ ನಿಮಿತ್ತವೆನಿಸಿದ ನೈಲ್ಯ, ದೃಷ್ಟಿಪ್ರತಿರೋಧಕತ್ವ ಮೊದಲಾದ ಧರ್ಮಗಳ ಸಂಬಂಧವು ತಪಸ್ಸಿನಲ್ಲಿ ವ್ಯಂಗ್ಯವಾಗಿ ತೋರುತ್ತದೆ. ಇಲ್ಲಿಯಾದರೋ ವಕ್ರತ್ವ ಮೊದಲಾದ ಧರ್ಮಗಳ ಸಂಬಂಧವನ್ನು ಶಬ್ದ ದಿಂದಲೇ ತಿಳಿಸಲಾಗಿದೆ. ಇಷ್ಟೇ ಇವೆರಡಕ್ಕೂ ಇರುವ ಭೇದ. "ಇವಶಬ್ದವು ಸಾದೃಶ್ಯ

ವನ್ನು ತಿಳಿಸುವುದೆಂದು ಎಲ್ಲೆಲ್ಲಿಯೂ ಪ್ರಸಿದ್ಧಿ ಇರುವುದರಿಂದಲೂ, ಇಲ್ಲಿಯೂ ಇವ ಶಬ್ದವಿರುವುದರಿಂದಲೂ ನಕ್ಷತ್ರಾನೀವ ಎಂಬುದು ಉಪಮಾಲಂಕಾರಕ್ಕೇ ಉದಾಹರಣವಾಗಲಿ. ಲಿಂಪತೀವ ಎಂಬ ಉದಾಹರಣದಲ್ಲಾದರೋ ಲೇಪನಕರ್ತೃವು ಉಪಮಾನವೆನಿಸಲರ್ಹವಾದರೂ ಕ್ರಿಯೆಯಲ್ಲಿ ವಿಶೇಷಣವಾಗಿರುವುದರಿಂದ ಇವಾರ್ಥವಾದ ಸಾದೃಶ್ಯದಲ್ಲಿ ಅನ್ವಯವಾಗುವುದಿಲ್ಲ. ಇಲ್ಲಿ ಹಾಗೆ ನಕ್ಷತ್ರಗಳು ಬೇರೆ ಎಲ್ಲಿಯೂ ವಿಶೇಷಣವಾಗಿಲ್ಲ. ಹಾಗೆ ವಿಶೇಷಣವಾಗಿದ್ದರೆ ಉಪಮಾನವಾಗಲಿಕ್ಕೆ ಕಷ್ಟವಾಗುತ್ತಿತ್ತು. ಆದ್ದರಿಂದ 'ನಕ್ಷತ್ರಾನೀವ' ಎಂಬಲ್ಲಿ ಮುತ್ತುಗದ ಹೂವುಗಳು ನಕ್ಷತ್ರಗಳಂತೆ ಶೋಭಿಸಿದವು ಎಂದು ಉಪಮಾಲಂಕಾರವನ್ನು ಹೇಳಲಿಕ್ಕೆ ಯಾವ ಬಾಧಕವೂ ಇಲ್ಲದ್ದರಿಂದ ಇಲ್ಲಿ ಉತ್ಪ್ರೇಕ್ಷೆಯನ್ನು ಏಕೆ ಹೇಳಬೇಕು ?'' ಎಂದು ಆಕ್ಷೇಪವು ಬರುತ್ತದೆ. ಇದಕ್ಕೆ ಸಮಾಧಾನವನ್ನು ಈಗ ತಿಳಿಸುತ್ತಾನೆ. ಬೇರೆ ಎಲ್ಲಿಯಾದರೂ ಯಾರಲ್ಲಾದರೂ ಸಂಭವಿಸಿರುವ ನಕ್ಷತ್ರಗಳೊಡನೆ ಮುತ್ತುಗದ ಹೂವುಗಳಿಗೆ ಉಪಮಾಲಂಕಾರವನ್ನು ಹೇಳಲಿಕ್ಕೆ ಸಾಧ್ಯವಾದರೂ ಅವು ವಸಂತನಾಯಕನೊಡಗೂಡಿದ ವನದೇವತೆಯಾಗಿ ಸಂಬಂಧಿಸಿದ್ದವೆಂಬ ವಿಶೇಷಣವನ್ನು ಉಪಮಾಲಂಕಾರವು ಅಪೇಕ್ಷಿಸುವುದಿಲ್ಲ. ಸಾಮಾನ್ಯವಾದ ನಕ್ಷತ್ರಗಳೊಡನೆ ಮುತ್ತುಗದ ಹೂವುಗಳಿಗೆ ಉಪಮಾಲಂಕಾರವನ್ನು ಹೇಳಬಹುದೇ ಹೊರತು ಇಂತಹ ವಿಶೇಷಣವುಳ್ಳ ನಕ್ಷತ್ರಗಳೊಡನೆ ಹೇಳಲಿಕ್ಕೆ ಬರುವಂತಿಲ್ಲ. ಇಲ್ಲಿ ವಸಂತನಾಯಕನೊಡಗೂಡಿದ ವನದೇವತೆಯರ ಸಂಬಂಧವನ್ನು ನಕ್ಷತ್ರಗಳಿಗೆ ವಿಶೇಷಣವಾಗಿ ಕೊಟ್ಟಿದ್ದರಿಂದ ಮುತ್ತುಗದ ಹೂವುಗಳನ್ನು ನಕ್ಷತ್ರಗಳೇನೋ ಎಂದು ಊಹಿಸುವುದೇ ಇವಶಬ್ದಕ್ಕೆ ಅರ್ಥವೆಂದು ಇಲ್ಲಿ ಕೊಟ್ಟಿರುವ ವಿಶೇಷಣವು ನಿಷ್ಕರ್ಷೆಮಾಡಿಕೊಡುತ್ತದೆ. ಇವ ಶಬ್ದವು. ಸಂಭಾವನೆಯನ್ನು ತಿಳಿಸಿದರೇಯೆ ಇಲ್ಲಿ ಈ ಬಗೆಯ ವಿಶೇಷಣವನ್ನು ಕೊಟ್ಟಿದ್ದು ಸಾರ್ಥಕವಾಗುತ್ತದೆ. ''ದೂರದಲ್ಲಿರುವ ಇವನು ದೇವದತ್ತನೋ ಏನೋ ಎಂಬಂತೆ ಕಾಣುತ್ತಾನೆ" ಎಂಬಲ್ಲಿ ಇವ ಶಬ್ದವು ಊಹೆಯನ್ನು ತಿಳಿಸುವುದೇ ಹೊರತು ಸಾದೃಶ್ಯವನ್ನು ತಿಳಿಸುವುದಿಲ್ಲ.

> ಪಿನಷ್ಟೀವ ತರಂಗಾಗ್ರೈಃ ಸಮುದ್ರಃ ಫೇನಚಂದನಮ್ ।
> ತದಾದಾಯ ಕರೈರಿಂದುರ್ಲಿಂಪತೀವ ದಿಗಂಗನಾಃ ॥

ಅತ್ರ ತರಂಗಾಗ್ರೈಃ ಫೇನಚಂದನಸ್ಯ ಪ್ರೇರಣಂ ಪೇಷಣತಯಾ ಉತ್ಪ್ರೇಕ್ಷ್ಯತೇ ಸಮುದ್ರಾದುತ್ಥಿತಸ್ಯ ಚಂದ್ರಸ್ಯ ಪ್ರಥಮಂ ಸಮುದ್ರಪೂರೇ ಪ್ರಸೃತಾನಾಂ ಕರಾಣಾಂ ದಿಕ್ಷು ವ್ಯಾಪನಂ ಚ ಸಮುದ್ರಪ್ರಾಂತ ಫೇನಚಂದನಕೃತಲೇಪನತ್ವೇನ ಉತ್ಪ್ರೇಕ್ಷ್ಯತೇ. ಉಭಯತ್ರ ಕ್ರಮೇಣ ಸಮುದ್ರಪ್ರಾಂತಗತಫೇನಚಂದನಪುಂಜೀಭವನಂ ದಿಶಃ ಧವಲೀಕರಣಂ ಚ ನಿಮಿತ್ತಮಿತಿ ಫೇನಚಂದನಪ್ರೇರಣಕಿರಣವ್ಯಾಪನಯೋರ್ವಿಷಯಯೋಃ ಅನುಪಾದಾನಾದನುಕ್ತವಿಷಯೇ ಸ್ವರೂಪೋತ್ಪ್ರೇಕ್ಷೇ. ಯೇಷಾಂ ತು ಉಪಾ

ತ್ರಯೋಃ ಸಮುದ್ರಚಂದ್ರಯೋರೇವ ತತ್ಕರ್ತೃಕಪೇಷಣಲೇಪನ ರೂಪಧರ್ಮೋ ತ್ಪ್ರೇಕ್ಷೇತಿ ಮತಂ. ತೇಷಾಂ ಮತೇ ಪೂರ್ವೋದಾಹರಣೇ ಧರ್ಮಿಣಿ ಧರ್ಮ್ಯಂತರತಾ ದಾತ್ಮ್ಯೋತ್ಪ್ರೇಕ್ಷಾ. ಇಹ ತು ಧರ್ಮಿಣಿ ಧರ್ಮಸಂಸರ್ಗೋತ್ಪ್ರೇಕ್ಷೇತಿ ಭೇದೋ ವಗಂತವ್ಯಃ.

"ಸಮುದ್ರವು ಅಲೆಗಳ ತುದಿಗಳಿಂದ ನೊರೆ ಎಂಬ ಚಂದನವನ್ನು ಅರೆಯುತ್ತಿದೆಯೋ ಏನೋ ಎಂಬಂತಿದೆ, ಚಂದ್ರನು ಅದನ್ನು ಕಿರಣಗಳೆಂಬ ಕೈಗಳಿಂದ ತೆಗೆದುಕೊಂಡು ದಿಕ್ಕುಗಳೆಂಬ ಸ್ತ್ರೀಯರಿಗೆ ಬಳಿಯುತ್ತಿರುವನೋ ಏನೋ ಎಂಬಂತಿದೆ." ಇಲ್ಲಿ ಸಮುದ್ರವು ಅಲೆಗಳ ತುದಿಗಳಿಂದ ನೊರೆಯನ್ನು ಮುಂದಕ್ಕೆ ತಳ್ಳುತ್ತಿರುವುದನ್ನು ಅದು ಚಂದನವನ್ನು ಅರೆಯುತ್ತಿದೆ ಎಂದು ಉತ್ಪ್ರೇಕ್ಷಿಸಲಾಗಿದೆ. ಹಾಗೆಯೇ ಸಮುದ್ರದಿಂದ ಹೊರಗೆ ಬಂದ ಚಂದ್ರನ ಕಿರಣಗಳು ಮೊದಲು ಸಮುದ್ರದ ಪ್ರವಾಹದಲ್ಲಿ ವ್ಯಾಪಿಸಿದ್ದು ಆಮೇಲೆ ದಿಕ್ಕುಗಳಲ್ಲಿ ವ್ಯಾಪಿಸಿರುವುದನ್ನು ಸಮುದ್ರದ ತೀರದಲ್ಲಿ ನೊರೆ ಎಂಬ ಚಂದನದಿಂದ ಆಗಿರುವ ಲೇಪನವೆಂದು ಉತ್ಪ್ರೇಕ್ಷಿಸಲಾಗಿದೆ. ಈ ಎರಡು ಉತ್ಪ್ರೇಕ್ಷೆಗಳಲ್ಲೂ ಕ್ರಮವಾಗಿ "ಸಮುದ್ರತೀರದಲ್ಲಿ ನೊರೆ ಎಂಬ ಶ್ರೀಗಂಧವನ್ನು ರಾಶಿಹಾಕಿರುವುದು", "ದಿಕ್ಕುಗಳನ್ನು ಬೆಳ್ಳಗೆ ಮಾಡಿರುವುದು" ಇವೇ ನಿಮಿತ್ತವೆನಿಸಿವೆ. ಇಲ್ಲಿ ನೊರೆ ಎಂಬ ಚಂದನವನ್ನು ಸಮುದ್ರವು ಮುಂದಕ್ಕೆ ತಳ್ಳುತ್ತಿರುವುದನ್ನೂ ಮತ್ತು ಕಿರಣಗಳನ್ನು ಹರಡಿರುವುದನ್ನೂ ಶಬ್ದದಿಂದ ತಿಳಿಸಿಲ್ಲ. ಉಪಮೇಯಗಳೆನಿಸಿದ ಈ ಎರಡು ವಿಷಯಗಳನ್ನೂ ಇಲ್ಲಿ ತಿಳಿಸಿಲ್ಲವಾದ್ದರಿಂದ ಇವೆರಡೂ ಅನುಕ್ತವಿಷಯವೆನಿಸಿದ ಸ್ವರೂಪೋತ್ಪ್ರೇಕ್ಷೆಯ ಉದಾಹರಣಗಳಾಗಿವೆ. ಶಬ್ದದಿಂದ ತಿಳಿಸಿರುವ ಸಮುದ್ರ ಮತ್ತು ಚಂದ್ರ ಇವರಲ್ಲಿಯೇ ಇವರಿಬ್ಬರಿಂದಲೇ ಆಗಿರುವ ಶ್ರೀಗಂಧದ ಪೇಷಣ ಮತ್ತು ಅದರ ಲೇಪನ ಇವುಗಳನ್ನು ಉತ್ಪ್ರೇಕ್ಷಿಸಿದೆ ಎಂದು ಯಾರು ಅಭಿಪ್ರಾಯಪಡುವರೋ ಅವರ ಮತದಲ್ಲಿ ಹಿಂದಿನ ಉದಾಹರಣದಲ್ಲಿ ಒಂದು ಧರ್ಮಿಯನ್ನು ಬೇರೊಂದು ಧರ್ಮಿ ಎಂದೇ ಉತ್ಪ್ರೇಕ್ಷಿಸಲಾಗಿದೆ ಎಂದೂ, ಇಲ್ಲಿ ಯಾದರೋ ಒಂದು ಧರ್ಮಿಯಲ್ಲಿ ಮತ್ತೊಂದು ವಸ್ತುವಿನಲ್ಲಿರುವ ಧರ್ಮವನ್ನು ಮಾತ್ರವೇ ಉತ್ಪ್ರೇಕ್ಷಿಸಲಾಗಿವೆ ಎಂದೂ ಇವೆರಡು ಉದಾಹರಣಗಳಲ್ಲೂ ವ್ಯತ್ಯಾಸವನ್ನು ತಿಳಿಯಬೇಕು.

ರಾತ್ರೌ ರವೇರ್ದಿವಾ ಚೇಂದೋರಭಾವಾದಿವ ಸ ಪ್ರಭುಃ ।
ಭೂಮೌ ಪ್ರತಾಪಯಶಸೀ ಸೃಷ್ಟವಾನ್ ಸತತೋದಿತೇ ॥

ರಾತ್ರೌ ರವೇರ್ದಿವಾ ಚಂದ್ರಸ್ಯಾಭಾವಃ ಸನ್ನಪಿ ಪ್ರತಾಪಯಶಸೋಃ ಸರ್ಗೇನ ಹೇತುರಿತಿ ತಸ್ಯ ತದ್ಧೇತುತ್ವಸಂಭಾವನಾತ್ ಸಿದ್ಧವಿಷಯಾ ಹೇತೂತ್ಪ್ರೇಕ್ಷಾ.

ವಿವಸ್ವತಾನಾಯಿಷತೇವ ಮಿಶ್ರಾಃ ಸ್ವಗೋಸಹಸ್ರೇಣ ಸಮಂ ಜನಾನಾಂ ।

ಗಾವೋಽಪಿ ನೇತ್ರಾಪರನಾಮಧೇಯಾಃ ತೇನೇದಮಾಂಧ್ಯಂ ಖಲು
ನಾಂಧಕಾರೈಃ ॥

ಅತ್ರ ವಿವಸ್ವತಾ ಕೃತಂ ಸ್ವಕಿರಣೈಃ ಸಹ ಜನಲೋಚನಾನಾಂ ನಯನಮಪಹರಣಮೇವ ರಾತ್ರಾವಾಂಧ್ಯಂ ಪ್ರತಿ ಹೇತುತ್ವೇನೋತ್ಪ್ರೇಕ್ಷ್ಯತ ಇತ್ಯಸಿದ್ಧವಿಷಯಾ ಹೇತೂತ್ಪ್ರೇಕ್ಷಾ.

"ರಾತ್ರಿಯ ವೇಳೆ ಸೂರ್ಯನಿಲ್ಲದ ಕಾರಣದಿಂದಲೋ, ಹಗಲು ವೇಳೆ ಚಂದ್ರನಿಲ್ಲದ ಕಾರಣದಿಂದಲೋ, ಏನೋ ಎಂಬಂತೆ ಆ ಕೊರತೆಯನ್ನು ಲೋಕಕ್ಕೆ ಪರಿಹರಿಸಲಿಕ್ಕಾಗಿ ಮಹಾರಾಜನು ಯಾವಾಗಲೂ ಉದಯವಾಗಿಯೇ ಇರುವ ತನ್ನ ತೇಜಸ್ಸು ಮತ್ತು ಕೀರ್ತಿ ಇವೆರಡನ್ನೂ ಸೃಷ್ಟಿಸಿದನು". ರಾತ್ರಿಯವೇಳೆ ಸೂರ್ಯನೂ, ಹಗಲು ವೇಳೆ ಚಂದ್ರನೂ ಇಲ್ಲದಿರುವುದು ವಾಸ್ತವವಾದರೂ ಆ ಸೂರ್ಯಚಂದ್ರರ ಅಭಾವವೇ ರಾಜನ ತೇಜಸ್ಸು ಮತ್ತು ಯಶಸ್ಸು ಇವುಗಳ ಸೃಷ್ಟಿಗೆ ಕಾರಣವೆಂದು ಇಲ್ಲಿ ಉತ್ಪ್ರೇಕ್ಷಿತವಾಗಿದೆ. ರಾತ್ರಿಯಲ್ಲಿ ಸೂರ್ಯನಿಲ್ಲದಿರುವುದೂ, ಹಗಲಿನಲ್ಲಿ ಚಂದ್ರನಿಲ್ಲದಿರುವುದೂ ಸರ್ವಾನುಭವಸಿದ್ಧವಾದ್ದರಿಂದ ಅವರ ಅಭಾವವನ್ನು ನೀಗಲು ತೇಜಸ್ಸು, ಯಶಸ್ಸುಗಳನ್ನು ರಾಜನು ಯಾವಾಗಲೂ ಉದಯವಾಗಿರುವಂತೆ ಏರ್ಪಡಿಸಿದ್ದು ಸಿದ್ಧವಿಷಯವೆನಿಸಿದ ಹೇತೂತ್ಪ್ರೇಕ್ಷೆಯಾಗಿದೆ. "ಸೂರ್ಯನು ಗೋವುಗಳೆಂದು ಪ್ರಸಿದ್ಧವಾದ ತನ್ನ ಸಾವಿರ ಕಿರಣಗಳೊಡನೆ ಕೂಡಿಕೊಂಡಿದ್ದ ಜನರ ಕಣ್ಣುಗಳೆನಿಸಿದ ಗೋವುಗಳನ್ನೂ ಸಹ ತನ್ನೆಡೆಗೆ ಸೆಳೆದುಕೊಂಡನೋ ಏನೋ". ಇಲ್ಲಿ ಸೂರ್ಯನ ಕಿರಣಗಳನ್ನೂ, ಜನರ ಕಣ್ಣುಗಳನ್ನೂ ಗೋ ಎಂಬ ಪದದಿಂದಲೇ ತಿಳಿಸಲಾಗಿದೆ. ಸೂರ್ಯನು ಮುಳುಗುವಾಗ ಎಲ್ಲೆಡೆಯಲ್ಲೂ ವ್ಯಾಪಿಸಿದ್ದ ಕಿರಣಗಳನ್ನು ಸೆಳೆದುಕೊಳ್ಳುವುದು ಸಹಜ. ಹಾಗೆ ಅವನು ಕಿರಣಗಳನ್ನು ಸೆಳೆದುಕೊಳ್ಳುವಾಗ ಜನರ ಕಣ್ಣುಗಳನ್ನೂ ಸಹ ಸೆಳೆದುಕೊಂಡನೆಂದು ಇಲ್ಲಿ ಉತ್ಪ್ರೇಕ್ಷಿಸಿದೆ. ಅವನು ಕಿರಣಗಳೊಡನೆ ಜನರ ಕಣ್ಣುಗಳನ್ನು ಸೆಳೆದುಕೊಂಡದ್ದೇ ರಾತ್ರಿವೇಳೆ ಜನರಿಗೆ ಕಣ್ಣು ಕಾಣಿಸದಂತೆ ಕುರುಡಾಗುವುದಕ್ಕೆ ಕಾರಣವೆಂದು ಇಲ್ಲಿ ಕಲ್ಪಿಸಿದೆ. ಆದ್ದರಿಂದ ಇದು ಅಸಿದ್ಧವಿಷಯವೆನಿಸಿದ ಹೇತೂತ್ಪ್ರೇಕ್ಷೆ ಎನಿಸಿದೆ. ರಾತ್ರಿ ವೇಳೆ ಕಣ್ಣು ಕಾಣಿಸದಿರುವುದಕ್ಕೆ ಸೂರ್ಯನು ಕಣ್ಣುಗಳನ್ನು ಸೆಳೆದುಕೊಂಡದ್ದೇ ಕಾರಣವೆಂದು ಹೇಳಿದ್ದು ಕವಿಕಲ್ಪಿತವಾದ್ದರಿಂದ ಇದು ಅಸಿದ್ಧವಿಷಯವೆನಿಸಿದೆ.

ಪೂರಂ ವಿಧುರ್ವರ್ಧಯಿತುಂ ಪಯೋಧೇಃ
ಶಂಕೇಽಯಮೇಣಾಂಕಮಣಿಂ ಕಿಯಂತಿ ।
ಪಯಾಂಸಿ ದೋಗ್ಧಿ ಪ್ರಿಯವಿಪ್ರಯೋಗೇ
ಸಶೋಕಕೋಕೀನಯನೇ ಕಿಯಂತಿ ॥

ಅತ್ರ ಚಂದ್ರೇಣ ಕೃತಂ ಸಮುದ್ರಸ್ಯ ಬೃಂಹಣಂ ಸದೇವ ತೇನ ಕೃತಸ್ಯ ಚಂದ್ರಕಾಂತದ್ರಾವಣಸ್ಯ ಕೋಕಾಂಗನಾಬಾಷ್ಪಸ್ರಾವಣಸ್ಯ ಚ ಫಲತ್ವೇನ ಉತ್ಪ್ರೇಕ್ಷ್ಯತ ಇತಿ ಸಿದ್ಧವಿಷಯಾ ಫಲೋತ್ಪ್ರೇಕ್ಷಾ.

ರಥಸ್ಥಿತಾನಾಂ ಪರಿವರ್ತನಾಯ ಪುರಾತನಾನಾಮಿವ ವಾಹನಾನಾಮ್ ।
ಉತ್ಪತ್ತಿಭೂಮೌ ತುರಗೋತ್ತಮಾನಾಂ ದಿಶಿ ಪ್ರತಸ್ಥೇ ರವಿರುತ್ತರಸ್ಯಾಮ್ ॥

ಅತ್ರೋತ್ತರಾಯಣಸ್ಯಾಶ್ವಪರಿವರ್ತನಮಸದೇವ ಫಲತ್ವೇನೋತ್ಪ್ರೇಕ್ಷ್ಯತ ಇತ್ಯಸಿದ್ಧವಿಷಯಾ ಫಲೋತ್ಪ್ರೇಕ್ಷಾ. ಏತಾ ಏವೋತ್ಪ್ರೇಕ್ಷಾಃ

ಮನ್ಯೇ ಶಂಕೇ ಧ್ರುವಂ ಪ್ರಾಯೋ ನೂನಮಿತ್ಯೇವಮಾದಿಭಿಃ ।
ಉತ್ಪ್ರೇಕ್ಷಾ ವ್ಯಜ್ಯತೇ ಶಬ್ದೈರಿವಶಬ್ದೋಽಪಿ ತಾದೃಶಃ ॥

ಇತ್ಯುತ್ಪ್ರೇಕ್ಷಾವ್ಯಂಜಕತ್ವೇನ ಪರಿಗಣಿತಾನಾಂ ಶಬ್ದಾನಾಂ ಪ್ರಯೋಗೇ ವಾಚ್ಯಾಃ; ತೇಷಾಮಪ್ರಯೋಗೇ ಗಮ್ಯೋತ್ಪ್ರೇಕ್ಷಾ. ಯಥಾ-ತ್ವತ್ಕೀರ್ತಿರ್ಭ್ರಮಣಶ್ರಾಂತಾ ವಿವೇಶ ಸ್ವರ್ಗನಿಮ್ನಗಾಮ್ । ಇತಿ.

"ಈ ಚಂದ್ರನು ಸಮುದ್ರದ ಪ್ರವಾಹವನ್ನು ಹೆಚ್ಚಿಸಲಿಕ್ಕಾಗಿ ಎಷ್ಟೊಂದು ಚಂದ್ರಕಾಂತ ಮಣಿಗಳನ್ನು ಕರಗಿಸಿ ಅವುಗಳಿಂದ ನೀರನ್ನು ಸುರಿಸಿದನೋ ಹಾಗೆಯೇ ಪತಿಯ ವಿಯೋಗದಿಂದ ದುಃಖಗೊಂಡ ಹೆಣ್ಣು ಚಕ್ರವಾಕ ಪಕ್ಷಿಗಳ ಕಣ್ಣುಗಳಿಂದ ಅದೆಷ್ಟೊಂದು ನೀರನ್ನು ಸುರಿಸಿದನೋ ಏನೋ ಎಂದು ಊಹಿಸುತ್ತೇನೆ." ಇದು ಫಲೋತ್ಪ್ರೇಕ್ಷೆಯ ಉದಾಹರಣ. ಇಲ್ಲಿ ಚಂದ್ರನು ತನ್ನ ಕಿರಣಗಳ ಪ್ರಭಾವದಿಂದ ಸಮುದ್ರವನ್ನು ಉಕ್ಕಿಸುವನೆಂಬುದು ಸರ್ವಾನುಭವಸಿದ್ಧವೆನಿಸಿದೆ. ಇದನ್ನೇ ಇಲ್ಲಿ ಫಲವೆಂದು ಉತ್ಪ್ರೇಕ್ಷಿಸಲಾಗಿದೆ. ಈ ಫಲಸಾಧನೆಗೆ ಚಂದ್ರನು ತನ್ನ ಕಿರಣಗಳ ಮೂಲಕ ಅನೇಕ ಚಂದ್ರಕಾಂತ ಶಿಲೆಗಳನ್ನು ಕರಗಿಸಿದನೆಂಬುದೂ, ಹೆಣ್ಣುಚಕ್ರವಾಕ ಪಕ್ಷಿಗಳಿಂದ ವಿಶೇಷವಾಗಿ ಕಣ್ಣೀರನ್ನು ಸುರಿಸಿದನೆಂಬುದೂ ಹೇತುವೆನಿಸಿವೆ. ಈ ಎರಡು ಕಾರಣಗಳಿಂದಲೇ ಸಮುದ್ರವು ಉಕ್ಕಿದುದಾಗಿ ಹೇಳಿ ಇದನ್ನು ಫಲವೆಂದು ಉತ್ಪ್ರೇಕ್ಷಿಸಿರುವುದರಿಂದ ಇದು ಫಲೋತ್ಪ್ರೇಕ್ಷೆ ಎನಿಸಿದೆ ಇವೆರಡರಿಂದಲೇ ಸಮುದ್ರ ಉಕ್ಕಿಲ್ಲವಾದರೂ ಅವುಗಳಿಂದಲೇ ಇದು ಫಲವಾಗಿ ಸಂಭವಿಸಿದೆ ಎಂದು ಇಲ್ಲಿ ಉತ್ಪ್ರೇಕ್ಷಿಸಿದೆ. "ಸೂರ್ಯನು ತನ್ನ ರಥಕ್ಕೆ ಕಟ್ಟಿದ ಹಳೆಯ ಕುದುರೆಗಳನ್ನು ಅವುಗಳ ಉತ್ಪತ್ತಿ ಸ್ಥಾನದಲ್ಲಿ ಬದಲಾಯಿಸಲಿಕ್ಕಾಗಿಯೋ ಏನೋ ಎಂಬಂತೆ ಉತ್ತರ ದಿಕ್ಕಿಗೆ ಹೊರಟನು". ಉತ್ತರ ದಿಕ್ಕು ಕುದುರೆಗಳ ಉತ್ಪತ್ತಿ ಸ್ಥಾನವೆನಿಸಿದೆ. ಅಲ್ಲಿ ತನ್ನ ಕುದುರೆಗಳನ್ನು ಹಿಂತಿರುಗಿಸಿ ಹೊಸವನ್ನು ತೆಗೆದುಕೊಳ್ಳಲಿಕ್ಕಾಗಿ ಸೂರ್ಯನು ಹೊಸದಿಕ್ಕಿಗೆ ಹೊರಟನೆಂದು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ಹೀಗೆ ಉತ್ತರಾಯಣಕ್ಕೆ ಕುದುರೆಗಳ ವಿನಿಮಯವನ್ನೇ ಇಲ್ಲಿ ಫಲವೆಂದು ಉತ್ಪ್ರೇಕ್ಷಿಸಿದೆ. ಅವನು ಹೀಗೆ ಕುದುರೆಗಳನ್ನು ಬದಲಾಯಿಸುವ

ನೆಂಬುದು ಲೋಕಾನುಭವಸಿದ್ಧವಲ್ಲದೆ ಕವಿಕಲ್ಪಿತವಾದ್ದರಿಂದ ಈ ಫಲೋತ್ಪ್ರೇಕ್ಷೆಯು ಅಸಿದ್ಧವಿಷಯುವೆನಿಸಿದೆ.

ಈ ಉತ್ಪ್ರೇಕ್ಷೆಗಳು ಕೆಲವು ವೇಳೆ ವಾಚ್ಯವೂ, ಕೆಲವು ವೇಳೆ ವ್ಯಂಗ್ಯವೂ ಎನಿಸುತ್ತವೆ. "ಮನ್ಯೇ, ಶಂಕೇ, ಧ್ರುವಂ, ಪ್ರಾಯಃ, ನೂನಂ ಇವೇ ಮೊದಲಾದ ಶಬ್ದಗಳನ್ನು ಪ್ರಯೋಗಿಸಿರುವ ಕಡೆಗಳಲ್ಲಿ ಈ ಪದಗಳಿಂದ ಉತ್ಪ್ರೇಕ್ಷೆಯು ತೋರುತ್ತದೆ. ಹಾಗೆಯೇ ಇವ ಶಬ್ದದಿಂದಲೂ ಉತ್ಪ್ರೇಕ್ಷೆಯು ತೋರುತ್ತದೆ. ಈ ಶಬ್ದಗಳ ಪ್ರಯೋಗದಿಂದ ತೋರುವ ಉತ್ಪ್ರೇಕ್ಷೆ ವಾಚ್ಯವೆನಿಸುತ್ತದೆ. ಇವನ್ನು ಪ್ರಯೋಗಿಸದೆ ಅರ್ಥದಿಂದಲೇ ಉತ್ಪ್ರೇಕ್ಷೆಯು ಸಿದ್ಧವಾಗುವುದಾದರೆ ಅದು ವ್ಯಂಗ್ಯವೆನಿಸುವುದು. "ನಿನ್ನ ಕಾಂತಿಯು ಎಲ್ಲಾ ಕಡೆಯಲ್ಲೂ ಸಂಚರಿಸಿದ್ದರಿಂದ ಬಳಲಿ ಬೇಡಾಗಿ ವಿಶ್ರಾಂತಿಗಾಗಿ ಗಂಗೆಯನ್ನು ಪ್ರವೇಶಿಸಿತೋ ಎಂಬಂತಿದೆ." ಇಲ್ಲಿ ಗಂಗಾ ಪ್ರವೇಶಕ್ಕೆ ಭ್ರಮಣದಿಂದಾದ ಶ್ರಮವು ಕಾರಣವಲ್ಲವಾದರೂ ಅದನ್ನು ಕಾರಣವೆಂದು ಉತ್ಪ್ರೇಕ್ಷಿಸಲಾಗಿದೆ. ಇಲ್ಲಿ ಉತ್ಪ್ರೇಕ್ಷೆಯನ್ನು ತಿಳಿಸುವ ಶಬ್ದವಿಲ್ಲದಿದ್ದರೂ ಉತ್ಪ್ರೇಕ್ಷೆಯು ಅರ್ಥದಿಂದಲೇ ಸಿದ್ಧಿಸುತ್ತದೆಯಾದ್ದರಿಂದ ಇದು ವ್ಯಂಗ್ಯೋತ್ಪ್ರೇಕ್ಷೆ ಎನಿಸುತ್ತದೆ.

## ೧೩. ಅತಿಶಯೋಕ್ತ್ಯಲಂಕಾರ

ರೂಪಕಾತಿಶಯೋಕ್ತಿಃ ಸ್ಯಾನ್ನಿಗೀರ್ಯಾಧ್ಯವಸಾನತಃ ।
ಪಶ್ಯ ನೀಲೋತ್ಪಲದ್ವಂದ್ವಾನ್ನಿಸ್ಸರಂತಿ ಶಿತಾಃ ಶರಾಃ ॥

ವಿಷಯಸ್ಯ ಸ್ವಶಬ್ದೇನೋಲ್ಲೇಖನಂ ವಿನಾ ವಿಷಯಿವಾಚಕೇನೈವ ಶಬ್ದೇನ ಗ್ರಹಣಂ ವಿಷಯನಿಗರಣಂ. ತತ್ಪೂರ್ವಕಂ ವಿಷಯಸ್ಯ ವಿಷಯಿ ರೂಪತಯಾ ಅಧ್ಯವಸಾನಂ ಆಹಾರ್ಯನಿಶ್ಚಯಸ್ತಸ್ಮಿನ್ ಸತಿ ರೂಪಕಾತಿಶಯೋಕ್ತಿಃ ಯಥಾ ನೀಲೋತ್ಪಲಶರಶಬ್ದಾಭ್ಯಾಂ ಲೋಚನಯೋಃ ಕಟಾಕ್ಷಾಣಾಂ ಚ ಗ್ರಹಣಪೂರ್ವಕಂ ತದ್ರೂಪತಾಧ್ಯವಸಾನಮ್, ಯಥಾ ವಾ—

ವಾಪೀ ಕಾಪಿ ಸ್ಫುರತಿ ಗಗನೇ ತತ್ಪರಂ ಸೂಕ್ಷ್ಮ ಪದ್ಯಾ
ಸೋಪಾನಾಲೀಮಧಿಗತವತೀ ಕಾಂಚನೀಮೈಂದ್ರ ನೀಲೀ ।

ಅಗ್ರೇ ಶೈಲೌ ಸುಕೃತಿಸುಗಮೌ ಚಂದನಚ್ಛನ್ನದೇಶೌ
ತತ್ರತ್ಯಾನಾಂ ಸುಲಭಮಮೃತಂ ಸನ್ನಿಧಾನಾತ್ಸುಧಾಂಶೋಃ ॥

ಅತ್ರ ವಾಪ್ಯಾದಿಶಬ್ದೈರ್ನಾಭಿಪ್ರಭೃತಯೋ ನಿಗೀರ್ಣಾಃ. ಅತ್ರ ಅತಿಶಯೋಕ್ತೌ ರೂಪಕವಿಶೇಷಣಂ ರೂಪಕೇ ದರ್ಶಿತಾನಾಂ ವಿಧಾನಾಂ ಇಹಾಪಿ ಸಂಭವೋಽಸ್ತೀತ್ಯತಿದೇಶೇನ ಪ್ರದರ್ಶನಾರ್ಥಮ್. ತೇನ ಅತ್ಯಾಪ್ಯಭೇದಾತಿಶಯೋಕ್ತಿಸ್ತಾದ್ರೂ

ಪ್ಯಾತಿಶಯೋಕ್ತಿರಿತಿ ದ್ವೈವಿಧ್ಯಂ ದ್ರಷ್ಟವ್ಯಂ. ತತ್ರಾಪಿ ಆಧಿಕ್ಯನ್ಯೂನತಾದಿವಿಭಾಗಶ್ಚೇತಿ ಸರ್ವಮನುಸಂಧೇಯಂ. ಯಥಾ ವಾ—

ಸುಧಾಬದ್ಧಗ್ರಾಸೈರುಪವನಚಕೋರೈರನುಸೃತಾಂ
ಕಿರನ್ ಜ್ಯೋತ್ಸ್ನಾಮಚ್ಛಾಂ ಲವಲಿಫಲಪಾಕಪ್ರಣಯಿನೀಮ್ ।
ಉಪಪ್ರಾಕಾರಾಗ್ರೇ ಪ್ರಹಿಣು ನಯನೇ ತರ್ಕಯ ಮನಾಕ್
ಅನಾಕಾಶೇ ಕೋಽಯಂ ಗಲಿತಹರಿಣಃ ಶೀತಕಿರಣಃ ॥

ಇತ್ಯತ್ರ ಕೋಽಯಮಿತ್ಯುಕ್ತ್ಯಾ ಪ್ರಸಿದ್ಧಚಂದ್ರಾದ್ಭೇದಸ್ತತ ಉತ್ಕರ್ಷಶ್ಚ ಗರ್ಭಿತಃ ಏವಮನ್ಯತ್ರಾಪ್ಯೂಹನೀಯಂ.

ಉಪಮಾನವನ್ನು ತಿಳಿಸುವ ಪದದಿಂದಲೇ ಸಾಧ್ಯವಸಾನಲಕ್ಷಣೆಯ ಮೂಲಕ ಉಪಮೇಯವನ್ನು ನಿಶ್ಚಯಿಸುವುದೇ ರೂಪಕಾತಿಶಯೋಕ್ತಿ ಎನಿಸುವುದು. "ಕನ್ನೈದಿಲೆಗಳೆರಡರಿಂದ ತೀಕ್ಷ್ಣವಾದ ಬಾಣಗಳು ಹೊರಗೆ ಬರುತ್ತಲಿವೆ". ಇಲ್ಲಿ ಕನ್ನೈದಿಲೆ ಎಂಬ ಪದವು ಉಪಮಾನವನ್ನು ತಿಳಿಸುವ ಪದ. ಇದರಿಂದಲೇ ಉಪಮೇಯವೆನಿಸಿದ ಕಣ್ಣುಗಳನ್ನು ತಿಳಿಸಿಕೊಡಲಾಗಿದೆ. ಹಾಗೆಯೇ ಶರ ಎಂಬ ಪದದಿಂದ ಓರೆನೋಟಗಳೆಂಬ ಉಪಮೇಯವನ್ನು ತಿಳಿಸಲಾಗಿದೆ. ಕಣ್ಣುಗಳೆರಡರಿಂದಲೂ ತೀಕ್ಷ್ಣವಾದ ಓರೆನೋಟಗಳು ಬರುತ್ತಲಿವೆ ಎಂಬುದೇ ಈ ವಾಕ್ಯದ ಅರ್ಥ. ಹೀಗೆ ವಿಷಯವೆನಿಸಿದ ಉಪಮೇಯವನ್ನು ಆ ಶಬ್ದದಿಂದ ತಿಳಿಸದೆಯೇ ಉಪಮಾನ ವಾಚಕದಿಂದ ತಿಳಿಸಿಕೊಡುವುದು ವಿಷಯನಿಗರಣವೆನಿಸುತ್ತದೆ. ಹೀಗೆ ಉಪಮೇಯವನ್ನು ನಿಗರಣ ಮಾಡುವ ಮೂಲಕ ಅದನ್ನೇ ಉಪಮಾನವೆಂದು ನಿಷ್ಕರ್ಷಿಸುವುದೇ ಅತಿಶಯೋಕ್ತಿ ಎನಿಸುವುದು. ಹೀಗೆ ಭಾವಿಸಲು ಬಾಧವಿದ್ದರೂ ಸಹ ಮನಃಪೂರ್ವಕವಾಗಿ ಇಚ್ಛಿಸಿ ನಿಶ್ಚಯಿಸಿರುವುದರಿಂದ ಇದು ಅತಿಶಯವಾದ ಹೇಳಿಕೆ ಎನಿಸುವುದು. ಹೀಗೆ ಎಲ್ಲಿ ತಿಳಿಸಲಾಗಿದೆಯೋ ಅಲ್ಲಿ ರೂಪಕಾತಿಶಯೋಕ್ತಿಯನ್ನು ಕಾಣಬಹುದು. ಹೀಗೆ ನೀಲೋತ್ಪಲಶರ ಎಂಬ ಶಬ್ದಗಳಿಂದ ಕಣ್ಣುಗಳಿಗೂ, ಅವುಗಳಿಂದ ಹೊರಗೆ ಬರುವ ಓರೆನೋಟಗಳಿಗೂ ಬೋಧವಾಗುವುದರಿಂದ ಕಣ್ಣುಗಳನ್ನು ನೀಲೋತ್ಪಲಗಳೆಂದೂ, ಓರೆನೋಟಗಳನ್ನು ಬಾಣಗಳೆಂದೂ ಇಚ್ಛೆಯಿಂದ ನಿಶ್ಚಯಿಸಲಾಗಿದೆ. ಹೀಗೆಯೇ ಬೇರೆ ಉದಾಹರಣೆಗಳಲ್ಲೂ ತಿಳಿಯಬೇಕು.

ಮಧ್ಯಭಾಗದಿಂದಾರಂಭಿಸಿ ಮುಖದವರೆಗೂ ನಾಯಿಕೆಯ ಅವಯವಗಳನ್ನು ಇಲ್ಲಿ ವರ್ಣಿಸಲಾಗಿದೆ. "ಆಕಾಶದಷ್ಟೇ ಸೂಕ್ಷ್ಮವಾದ್ದರಿಂದ ಕಾಣಿಸದಿರುವ ಮಧ್ಯಪ್ರದೇಶದಲ್ಲಿ ಹೆಚ್ಚಿನ ಕಾಂತಿಯಿಂದ ಕೂಡಿರುವ ಬಾವಿಯಂತೆ ಆಳವಾದ ನಾಭಿಯು ಶೋಭಿಸುತ್ತಲಿದೆ. ಅದರ ಮೇಲ್ಭಾಗದಲ್ಲಿ ಇಂದ್ರನೀಲಮಣಿಯಿಂದ ಕೂಡಿದ ಸೂಕ್ಷ್ಮ

ವಾದ ಮಾರ್ಗ ಒಂದು ಶೋಭಿಸುತ್ತಲಿದೆ. ಅದಾದರೋ ಸುವರ್ಣನಿರ್ಮಿತವಾದ ಮೆಟ್ಟಿಲುಗಳ ರಾಶಿಯೊಡನೆ ಸೇರಿಕೊಂಡಿದೆ. ಅದರ ಮೇಲೆ ಪುಣ್ಯಶಾಲಿಗಳಿಗೆ ಮಾತ್ರವೇ ದೊರಕಬಹುದಾದ ಶ್ರೀಗಂಧವಿರುವ ಬೆಟ್ಟಗಳೆರಡು ಶೋಭಿಸುತ್ತಲಿವೆ. ಅವುಗಳನ್ನಾಶ್ರಯಿಸಿದವರಿಗೆ ಚಂದ್ರನ ಸಾನ್ನಿಧ್ಯದಿಂದ ಅಮೃತವು ಸುಲಭವಾಗಿ ದೊರಕುವುದು.'' ಇಲ್ಲ ವ. ಪೀ, ಸೂಕ್ಷ್ಮಸೋಪಾನಾಲಿ, ಶೈಲ, ಚಂದನ, ಸುಧಾಂಶು, ಅಮೃತ ಈ ಶಬ್ದಗಳಿಂದಲೇ ನಾಭಿ, ರೋಮಾವಳೀ (ಕೂದಲುಗಳ ಸಾಲು) ತ್ರಿವಳಿಗಳು, ಸ್ತನಗಳೆರಡು, ಶ್ರೀಗಂಧ, ಮುಖ, ಅಧರರಸ ಇವುಗಳನ್ನು ತಿಳಿಸಲಾಗಿದೆ. ನಾಭಿಯು ಬಾವಿಯಷ್ಟು ಆಳವಾಗಿದೆ. ಅದರ ಮೇಲೆ ನೀಲವರ್ಣದ ಕೂದಲುಗಳ ಸಾಲು ಇದೆ. ಅದರ ಮೇಲೆ ತ್ರಿವಳಿಗಳಿವೆ. ಅದರ ಮೇಲೆ ಶ್ರೀಗಂಧದ ಲೇಪನದಿಂದ ಇಂಪಾದ ಸ್ತನಗಳೆರಡು ನೆಲಸಿವೆ. ಅವುಗಳನ್ನು ಆಶ್ರಯಿಸಿದವರಿಗೆ ಮುಖಚಂದ್ರನು ಹತ್ತಿರದಲ್ಲಿಯೇ ಇರುವುದರಿಂದ ಅಮೃತವೆನಿಸಿದ ಕೆಳತುಟಿಗಳ ಮಾಧುರ್ಯವು ಅನಾಯಾಸವಾಗಿ ದೊರಕುವುದು. ಹೀಗೆ ಹೇಳುವುದಕ್ಕೆ ಬದಲು ಉಪಮಾನವಾಚಕ ಪದಗಳಿಂದಲೇ ಉಪಮೇಯಾಂಶಗಳನ್ನು ಇಲ್ಲಿ ತಿಳಿಸಲಾಗಿದೆ. ಇಲ್ಲಿ ಅತಿಶಯೋಕ್ತಿಗೂ ರೂಪಕಕ್ಕೂ ಇಷ್ಟೇ ವ್ಯತ್ಯಾಸ. ರೂಪಕದಲ್ಲಿ ಉಪಮೇಯವನ್ನು ತಿಳಿಸಿ ಅದನ್ನೇ ಉಪಮಾನವೆಂದು ಭಾವಿಸಲಾಗುವುದು. ಇಲ್ಲಿ ಉಪಮೇಯವನ್ನು ತಿಳಿಸದೆಯೇ ಉಪಮಾನಪದಿಂದಲೇ ತಿಳಿಸಿ ಅದನ್ನೇ ಉಪಮಾನವೆಂದು ನಿಶ್ಚಯಿಸಲಾಗುವುದು. ಅತಿಶಯೋಕ್ತಿಗೆ ರೂಪಕ ಎಂಬ ವಿಶೇಷಣವನ್ನು ಕೊಟ್ಟಿರುವುದರಿಂದ ರೂಪಕದಲ್ಲಿ ಕಂಡುಬರುವ ಬಗೆಗೆಗಳೆಲ್ಲವೂ ಇಲ್ಲಿಯೂ ಸಂಭವಿಸುತ್ತವೆ ಎಂದು ತಿಳಿಯಬೇಕು. ಆದ್ದರಿಂದ ಇಲ್ಲಿಯೂ ಅಭೇದಾತಿಶಯೋಕ್ತಿ, ತಾದ್ರೂಪ್ಯಾತಿಶಯೋಕ್ತಿ ಎಂದೂ, ಅವುಗಳಲ್ಲೂ ಆಧಿಕ್ಯ, ನ್ಯೂನತ್ವ, ಅನುಭಯೋಕ್ತಿ ಈ ಬಗೆಯ ವಿಭಾಗವೂ ಉಂಟೆಂದೂ ತಿಳಿಯಬೇಕು. ಈಗ ಅಧಿಕ ರೂಪಕಾತಿಶಯೋಕ್ತಿಯನ್ನು ಉದಾಹರಿಸಲುಗುವುದು.

ವಿದ್ಧಶಾಲಭಂಜಿಕೆ ಎಂಬ ನಾಟಿಕೆಯಲ್ಲಿ ಸ್ಫಟಿಕಶಿಲೆಯಿಂದ ನಿರ್ಮಿಸಿದ ಉಪ್ಪರಿಗೆಯ ಮೇಲೆ ನಿಂತಿರುವ ಮೃಗಾಂಕಾವಳಿ ಎಂಬ ರಾಣಿಯನ್ನು ನೋಡುತ್ತಿದ್ದ ರಾಜನು ವಿದೂಷಕನಿಗೆ ಹೇಳುವ ಮಾತಿದು. "ಅಯ್ಯಾ ಮಿತ್ರ! ಉಪ್ಪರಿಗೆಯ ಮೇಲ್ಗಡೆಗೆ ನಿನ್ನ ಕಣ್ಣಿನ ನೋಟವನ್ನು ತಿರುಗಿಸು, ಹಾಗೆಯೇ ಕೊಂಚ ಯೋಚನೆ ಮಾಡು, ಬಯಲೇ ಇಲ್ಲದ ಕಡೆ ಜಿಂಕೆಯ ಸಂಪರ್ಕವಿಲ್ಲದೆಯೇ ಕಾಣಿಸುತ್ತಿರುವ ಈ ಚಂದ್ರನಾರು? ಅಮೃತವನ್ನೇ ಬಯಸುತ್ತಿರುವ ಉದ್ಯಾನವನದ ಚಕೋರ ಪಕ್ಷಿಗಳು ಅಪೇಕ್ಷಿಸುವ ಲವಲೀಫಲಕ್ಕೆ ಸದೃಶವೂ ಸ್ವಚ್ಛವೂ ಆದ ಚಂದ್ರಿಕೆ (ಕಾಂತಿ) ಯನ್ನು ಇವನು ಎಲ್ಲೆಡೆಗೂ ಎರಚುತ್ತಿರುವನು.'' ಇಲ್ಲಿ ಈ ಚಂದ್ರನಾರು? ಎಂದು ಕೇಳಿದ್ದರಿಂದ ಪ್ರಸಿದ್ಧ ಚಂದ್ರನಿಗಿಂತ ಪ್ರೇಯಸಿಯ ಮುಖಚಂದ್ರನಲ್ಲಿ ಭೇದವನ್ನು ತಿಳಿಸಿ

ಅವನಿಗಿಂತಲೂ ಇದು ಮನೋಹರವಾದ್ದರಿಂದ ಹೆಚ್ಚಿನದೆಂದು ಸೂಚಿಸಲಾಗಿದ. ಆದ್ದರಿಂದ ಇಲ್ಲಿ ತಾದ್ರೂಪ್ಯವೂ ಆಧಿಕ್ಯವೂ ಕಂಡುಬರುತ್ತವೆ. ಮುಖವನ್ನು ಚಂದ್ರನೆಂದು ಹೇಳಿದ್ದರಿಂದ ಅತಿಶಯೋಕ್ತಿಯೂ ಇದೆ. ಹೀಗೆಯೇ ಬೇರೆ ಉದಾಹರಣೆಗಳನ್ನು ಊಹಿಸಿಕೊಳ್ಳಬೇಕು.

ಯದ್ಯಪಹ್ನುತಿಗರ್ಭತ್ವಂ ಸೈವ ಸಾಪಹ್ನವಾ ಮತಾ ।
ತ್ವತ್ಸೂಕ್ತಿಷು ಸುಧಾ ರಾಜನ್ ಭ್ರಾಂತಾಃ ಪಶ್ಯಂತಿ ತಾಂ ವಿಧೌ ॥೩೬॥

ಅತ್ರ ತ್ವತ್ಸೂಕ್ತಿಮಾಧುರ್ಯಮೇವ ಅಮೃತಮಿತ್ಯತಿಶಯೋಕ್ತಿಃ ; ಚಂದ್ರಮಂಡಲಸ್ಥಂ ಅಮೃತಂ ನ ಭವತೀತ್ಯಪಹ್ನುತಿಗರ್ಭಾ. ಯಥಾ ವಾ—

ವಚಕ್ತ್ರಾವಿದ್ರುಮಮಂತರಾ ಮಧುರಸಃ ಪುಷ್ಪಂ ಪರಂ ಧೂರ್ವಹು
ಪ್ರಾಲೇಯದ್ಯುತಿಮಂಡಲೇ ಖಲು ತಯೋರೇಕಾಸಿಕಾ ನಾರ್ಣವೇ ।
ತಚ್ಚೋದಂಚತಿ ಶಂಖಮೂರ್ಧ್ನಿ ನ ಪುನಃ ಪೂರ್ವಾಚಲಾಭ್ಯಂತರೇ
ತಾನೀಮಾನಿ ವಿಕಲ್ಪಯಂತಿ ತ ಇಮೇ ಯೇಷಾಂ ನ ಸಾ ದೃಕ್ಪಥೇ ॥

ಅತ್ರ ಅಧರರಸ ಏವ ಮಧುರಸಃ ಇತ್ಯಾದ್ಯತಿಶಯೋಕ್ತಿಃ ಪುಷ್ಪರಸೋ ಮಧುರಸೋ ನ ಭವತೀತ್ಯಪಹ್ನುತಿಗರ್ಭಾ.

ಇದೇ ಅತಿಶಯೋಕ್ತಿಯು ಅಪಹ್ನುತಿಯನ್ನೊಳಗೊಂಡಿದ್ದರೆ ಅದು ಸಾಪಹ್ನವ ರೂಪಕಾತಿಶಯೋಕ್ತಿ ಎನಿಸುವುದು. "ಮಹಾರಾಜನೇ, ನಿನ್ನ ಮಾತುಗಳಲ್ಲಿಯೇ ಅಮೃತವಿದೆ, ಆದರೆ ಜನರು ಭ್ರಾಂತಿಯಿಂದ ಚಂದ್ರನಲ್ಲಿ ಅದನ್ನು ಕಾಣುವರು" ಇಲ್ಲಿ ರಾಜನ ಮಾತಿನಲ್ಲಿರುವ ಮಾಧುರ್ಯವನ್ನೇ ಅಮೃತವೆಂದು ಹೇಳಿದ್ದರಿಂದ ಇದು ಅತಿಶಯೋಕ್ತಿ ಎನಿಸಿದೆ. ಆದರೆ ಚಂದ್ರಮಂಡಲದಲ್ಲಿರುವ ಅಮೃತವನ್ನು ಅಮೃತವಲ್ಲ ವೆಂದು ಹೇಳಿದ್ದರಿಂದ ಪ್ರಸಿದ್ಧವಾದ ಅಮೃತದ ನಿಷೇಧವೂ ಇಲ್ಲಿ ಸೇರಿಕೊಂಡಿದೆ. ಹೀಗೆ ಅತಿಶಯೋಕ್ತಿಯೊಳಗೆ ಅಪಹ್ನುತಿಯೂ ಸೇರಿಕೊಂಡಿರುವುದರಿಂದ ಇದು ಅತಿಶಯೋಕ್ತಿಯ ಎರಡನೆಯ ಬಗೆ ಎನಿಸಿದೆ. ಇದಕ್ಕೆ ಬೇರೊಂದು ಉದಾಹರಣೆಯನ್ನು ಕೊಡಲಾಗಿದೆ.

"ಯಾರ ಕಣ್ಣೆದುರಿಗೆ ಆ ಸುಂದರಿ ಇರುವುದಿಲ್ಲವೋ ಅಂತಹ ಜನರಿಗೆ ಅನುಭವಕ್ಕೆ ದೊರೆಯದೆ ಇರುವುದದಿಂದ ಅಂತಹ ವಸ್ತುಗಳು ಇವೆಯೋ ಇಲ್ಲವೋ ಎಂದು ಅವರು ಸಂಶಯ ಪಡುವುದು ಸಹಜ. ಅಂತಹವು ಯಾವುವೆಂಬುದನ್ನು ಇಲ್ಲಿ ತಿಳಿಸುತ್ತಾನೆ. ಮುತ್ತುಹವಳಗಳ ನಡುವೆಯೇ ಮಕರಂದವಿದೆ, ಪುಷ್ಪವಾದರೋ ಹೊರೆಯನ್ನು ಹೊತ್ತಿರುವುದೇ ಹೊರತು ಅದರಲ್ಲಿ ಮಕರಂದವಿಲ್ಲ. ಆ ಮುತ್ತು ಹವಳಗಳೆರಡೂ ಚಂದ್ರಮಂಡಲದಲ್ಲಿ ಒಟ್ಟಿಗೆ ಕೂಡಿಕೊಂಡಿವೆ ಆದರೆ ಸಮುದ್ರದಲ್ಲಿ ಅವು ಇರಲಾರವು. ಆ ಚಂದ್ರಮಂಡಲವೂ ಸಹ ಉದಯಪರ್ವತದ ಮೇಲ್ಭಾಗದಲ್ಲಿ

ಉದಯಿಸುವುದಿಲ್ಲ. ಆದರೆ ಶಂಖದ ಮೇಲ್ಗಡೆ ಉದಯಿಸುತ್ತದೆ. ಈ ವಸ್ತುಗಳೆಲ್ಲವೂ ಅನುಭವಿಗೆ ಸತ್ಯ.'' ಇಲ್ಲಿ ಮುತ್ತು ಹವಳ ಎಂಬ ಪದಗಳಿಂದ ಹಲ್ಲು ಮತ್ತು ತುಟಿಗಳನ್ನೂ, ಮಧು ಎಂಬುದರಿಂದ ಕೆಳ ತುಟಿಯ ಮಾಧುರ್ಯವನ್ನೂ, ಚಂದ್ರಮಂಡಲ ಎಂಬ ಪದದಿಂದ ಮುಖವನ್ನೂ, ಶಂಖ ಎಂಬ ಪದದಿಂದ ಕಂಠವನ್ನೂ ತಿಳಿಸಲಾಗಿದೆ. ಉಪಮೇಯುವನ್ನು ನಿಗರಣಮಾಡಿ ಅಂದರೆ ತಿಳಿಸದಯೇ ಉಪಮಾನ ಪದಗಳಿಂದಲೇ ತಿಳಿಸಲಾಗಿದೆ. ಹಲ್ಲು ಕೆಳತುಟಿಗಳನ್ನು ಬಿಟ್ಟರೆ ಬೇರೆ ಎಲ್ಲಿಯೂ ಮಾರ್ದವವಿಲ್ಲವೆಂದೂ, ಮುಖದಲ್ಲಿಯೇ ಇವೆರಡೂ ಒಟ್ಟಿಗೆ ಸೇರಿಕೊಂಡಿವೆಯೆಂದೂ, ಈ ಮುಖವಾದರೋ ಕಂಠದಮೇಲೆ ಶೋಭಿಸುತ್ತಿದೆ ಎಂದೂ ಉಪಮೇಯವೆನಿಸಿದ ಹಲ್ಲು. ತುಟಿ. ಮಾಧುರ್ಯ, ಮುಖ ಮತ್ತು ಕಂಠ ಇವಿಷ್ಟೂ ಉಪಮಾನರೂಪದಿಂದಲೇ ಇರುವುದಾಗಿ ಇಲ್ಲಿ ನಿಶ್ಚಯಿಸಲಾಗಿದೆ. ಇಲ್ಲಿ ತುಟಿಯಲ್ಲಿ ಅನುಭವಿಸಬಹುದಾದ ರಸವೇ ಮಕರಂದ ಎಂಬ ಅತಿಶಯೋಕ್ತಿಯು 'ಪುಷ್ಪರಸವು ಮಕರಂದವಲ್ಲ' ಎಂಬ ನಿಷೇಧದಿಂದ ಕೂಡಿದೆ. ಮೂಲದ ಉದಾಹರಣದಲ್ಲಿ 'ಭ್ರಾಂತಾಃ' ಎಂಬ ಪದವಿರುವುದರಿಂದ ಅಪಹ್ನುತಿಯು ಸ್ಪಷ್ಟವಾಗಿದೆ. ಇಲ್ಲಿಯಾದರೋ ಹೂವು ಹೊರೆಯನ್ನು ಹೊತ್ತಿದೆ ಎಂದಷ್ಟೇ ಹೇಳಿದ್ದರಿಂದ ಅಪಹ್ನುತಿ ಗೋಪ್ಯವಾಗಿದೆ.

ಅಲಂಕಾರಸರ್ವಸ್ವಕೃತಾ ಸ್ವರೂಪೋತ್ಪ್ರೇಕ್ಷಾಯಾಂ ಸಾಪಹ್ನವತ್ವಂ ಉದಾಹೃತಮ್. ತದ್ಯಥಾ—

ಗತಾಸು ತೀರಂ ತಿಮಿಘಟ್ಟನೇನ ಸಸಂಭ್ರಮಂ ಪೌರವಿಲಾಸಿನೀಷು ।
ಯತ್ರೋಲ್ಲಸತ್ಫೇನತತಿಚ್ಛಲೇನ ಮುಕ್ತಾಟ್ಟಹಾಸೇವ ವಿಭಾತಿ ಶಿಪ್ರಾ ॥

ತತಸ್ತ್ವಯಾನತ್ರ ಭೇದಃ ಏತತ್ತು ಶುದ್ಧಾಪಹ್ನುತಿಗರ್ಭಮ್, ಯತ್ರ ಫೇನ ತತಿತ್ವಮುಪಹ್ನುತಂ ತತ್ರೈವಾಟ್ಟಹಾಸತ್ವೋತ್ಪ್ರೇಕ್ಷಣಾತ್. ಇಹ ತು ಪರ್ಯಸ್ತಾಪಹ್ನುತಿಗರ್ಭತ್ವಂ, ಇಂದುಮಂಡಲಾದೌ ಅಪಹ್ನುತಸ್ಯ ಅಮೃತಾದೇಃ ಸೂಕ್ತ್ಯಾದಿಷು ನಿವೇಶನಾತ್. ಇದಂ ಚ ಪರ್ಯಸ್ತಾಪಹ್ನುತಿಗರ್ಭತ್ವಂ ಉತ್ಪ್ರೇಕ್ಷಾಯಾಮಪಿ ಸಂಭವತಿ. ತತ್ರ ಸ್ವರೂಪೋತ್ಪ್ರೇಕ್ಷಾಯಾಂ ಯಥಾ—

ಜಾನೇಽತಿರಾಗಾದಿದಮೇವ ಬಿಂಬಂ
ಬಿಂಬಸ್ಯ ಚ ವ್ಯಕ್ತಮಿತೋಽಧರತ್ವಮ್ ।
ದ್ವಯೋರ್ವಿಶೇಷಾವಗಮಾಕ್ಷಮಾಣಾಂ
ನಾಮ್ನಿ ಭ್ರಮೋಽಭೂದನಯೋರ್ಜನಾನಾಮ್ ॥

ಅತ್ರ ಪ್ರಸಿದ್ಧಫಲೇ ಬಿಂಬತಾಮಪಹ್ನುತ್ಯ ಅತಿರಾಗೇಣ ನಿಮಿತ್ತೇನ ದಮಯಂತ್ಯಧರೇ ತದುತ್ಪ್ರೇಕ್ಷಾ ಪರ್ಯಸ್ತಾಪಹ್ನುತಿಗರ್ಭಾ. ಹೇತೂತ್ಪ್ರೇಕ್ಷಾಯಾಂ ತದ್ಗರ್ಭತ್ವಂ ಪ್ರಾಗ್ಲಿಖಿತೇ ಹೇತೂತ್ಪ್ರೇಕ್ಷೋದಾಹರಣ ಏವ ದೃಶ್ಯತೇ ತತ್ರ ಚ

ಅಂಧಕಾರೇಷು ಆಂಧ್ಯಹೇತುತ್ವಮುಪಹ್ನುತ್ಯ ಅನ್ಯತ್ರ ತನ್ನಿವೇಶಿತಮ್ ಫಲೋತ್ಪ್ರೇಕ್ಷಾಯಾಂ ಯಥಾ—

ರವಿತಪ್ತೋ ಗಜಃ ಪಕ್ವಾಂಸ್ತದ್ಗೃಹ್ಯಾನ್ಬಾಧಿತುಂ ಧ್ರುವಮ್ ।
ಸರೋ ವಿಶತಿ ನ ಸ್ನಾತುಂ ಗಜಸ್ನಾನಂ ಹಿ ನಿಷ್ಫಲಮ್ ॥

ಅತ್ರ ಗಜಸ್ಯ ಸರಃಪ್ರವೇಶಂ ಪ್ರತಿಫಲೇ ಸ್ನಾನೇ ಫಲತ್ವಮುಪಹ್ನುತ್ಯ ಪಕ್ಷಬಾಧನೇ ತನ್ನಿವೇಶಿತಮ್. ಅಲಮನಯಾ ಪ್ರಸಕ್ತಾನುಪ್ರಸಕ್ತ್ಯಾ ಪ್ರಕೃತಮನುಸರಾಮಃ.

ಅಲಂಕಾರಸರ್ವಸ್ವವನ್ನು ಬರೆದಿರುವ ರುಯ್ಯಕನು ಸ್ವರೂಪೋತ್ಪ್ರೇಕ್ಷೆಯಲ್ಲಿ ಅಪಹ್ನುತಿ ಇರುವುದೆಂದು ತಿಳಿಸಿ ಹೀಗೆ ಉದಾಹರಿಸಿರುವನು. "ಪಟ್ಟಣಗಳಲ್ಲಿರುವ ವಿಲಾಸಿನಿಯರು ಶಿಪ್ರಾನದಿಯಲ್ಲಿ ಒಮ್ಮೆ ಸ್ನಾನ ಮಾಡುತ್ತಿದ್ದಾಗ ಮಿಂಚುಗಳ ಹೊಡೆತಕ್ಕೆ ಸಿಲುಕಿ ಭಯಪಟ್ಟು ತೀರಪ್ರದೇಶಕ್ಕೆ ಹೋಗಿ ಸಾಲಾಗಿ ಕುಳಿತಿರಲು ಆ ನದಿಯು ತನ್ನ ತೀರದಲ್ಲಿ ಸಾಲಾಗಿ ಪ್ರಕಾಶಿಸುತ್ತಿರುವ ನೊರೆಗಳ ನೆಪದಿಂದ ಅಟ್ಟಹಾಸಪಡುತ್ತಿರುವುದೋ ಏನೋ ಎಂಬಂತೆ ಕಾಣುತ್ತಿದೆ," ನದಿಯ ತೀರದಲ್ಲಿ ಸಾಲಾಗಿ ಕುಳಿತಿರುವ ವಿಲಾಸಿನಿಯರು ನೊರೆಯ ಸಾಲೋ ಎಂಬಂತೆ ಕಾಣುತ್ತಿರುವರು. ಇದರ ನೆಪದಿಂದ ಶಿಪ್ರಾನದಿಯು ಅಟ್ಟಹಾಸದಿಂದ ನಗುತ್ತಿರುವುದೋ ಏನೋ ಎಂದು ಕಾಣಿಸುತ್ತದೆ. ಪ್ರಕೃತವಸ್ತುವಿನಲ್ಲಿ ಅದಕ್ಕೆ ಸದೃಶವಾದ ಬೇರೊಂದು ಧರ್ಮವನ್ನು ಆರೋಪಿಸಲಿಕ್ಕಾಗಿ ಆ ವಸ್ತುವಿನಲ್ಲಿರುವ ಧರ್ಮವನ್ನು ನಿಷೇಧಿಸುವುದು ಶುದ್ಧಾಪಹ್ನುತಿ ಎಂದು ಹಿಂದೆ ತಿಳಿಸಿದ ಲಕ್ಷಣವು ಇಲ್ಲಿ ಅನ್ವಯಿಸುತ್ತದೆ. ವಿಲಾಸಿನಿಯರು ಸಾಲಾಗಿ ಕುಳಿತಿರುವುದನ್ನು ತೀರಪ್ರದೇಶದಲ್ಲಿ ನೆಲೆಸಿರುವ ನೊರೆಗಳ ಸಾಲೆಂದು ಉತ್ಪ್ರೇಕ್ಷಿಸಿರುವುದರಿಂದ ಇದು ಸ್ವರೂಪೋತ್ಪ್ರೇಕ್ಷೆ ಎನಿಸದೆ. ಆದರೆ ನದಿಯು ನೊರೆಗಳ ಸಾಲಿನ ನೆಪದಿಂದ ನಗುತ್ತಿದೆಯೋ ಏನೋ ಎಂಬಂತೆ ಕಾಣುವುದೆಂದು ಹೇಳಿದ್ದರಿಂದ ನೊರೆಗಳ ಸಾಲೆಂಬುದನ್ನು ನಿಷೇಧಿಸಿ ಅದು ನೊರೆಗಳ ಸಾಲಲ್ಲ ; ಆದರೆ ನದಿಯ ಅಟ್ಟಹಾಸವೆಂದು ಉತ್ಪ್ರೇಕ್ಷಿಸಿದ್ದರಿಂದ ಇಲ್ಲಿ ಶುದ್ಧಾಪಹ್ನುತಿಯು ಸೇರಿಕೊಂಡಿದೆ. ಮೂಲದಲ್ಲಿ ಕೊಟ್ಟಿರುವ "ತ್ವತ್ಸೂಕ್ತಿಷು ಸುಧಾ" ಎಂಬ ಉದಾಹರಣದಲ್ಲಾದರೋ ಚಂದ್ರಮಂಡಲದಲ್ಲಿ ಅಮೃತವನ್ನು ನಿಷೇಧಿಸಿ ರಾಜನ ಮಾತಿನಲ್ಲಿ ಆರೋಪಿಸಿದ್ದರಿಂದ ಪರ್ಯಸ್ತಾಪಹ್ನುತಿಯು ಸೇರಿಕೊಂಡಿದೆ. ಅಲ್ಲಿ ಶುದ್ಧಾಪಹ್ನುತಿಯಿಲ್ಲ, ಒಂದು ವಸ್ತುವಿನಲ್ಲಿರುವ ಧರ್ಮವನ್ನು ತೋರಿಸಿ ಮತ್ತೊಂದು ಪ್ರಕೃತವಸ್ತುವಿನಲ್ಲಿ ಆರೋಪಿಸುವುದೇ ಪರ್ಯಸ್ತಾಪಹ್ನುತಿ ಎಂದು ಹಿಂದೆ ತಿಳಿಸಿದೆ. ಚಂದ್ರನಲ್ಲಿರುವ ಅಮೃತವನ್ನು ನಿಷೇಧಿಸಿ ರಾಜನ ಮಾತಿನಲ್ಲಿ ಆರೋಪಿಸಿದೆ, ಆದ್ದರಿಂದ ಅತಿಶಯೋಕ್ತಿ

ಯಲ್ಲಿ ಪರ್ಯಾಸ್ತಾಪಹ್ನುತಿ ಸೇರಿದೆ ಎಂದು ತಿಳಿಯಬೇಕು ಅಲಂಕಾರಸರ್ವಸ್ವಕಾರನು ಕೊಟ್ಟಿರುವ ಉತ್ಪ್ರೇಕ್ಷೆಯ ಉದಾಹರಣದಲ್ಲಾದರೋ ಶುದ್ಧಾಪಹ್ನುತಿಯೇ ಇದೆ. ಇಷ್ಟೇ ಇವೆರಡಕ್ಕೂ ಇರುವ ಭೇದ. ಸ್ವರೂಪೋತ್ಪ್ರೇಕ್ಷೆಯಲ್ಲಿ ಶುದ್ಧಾಪಹ್ನುತಿ ಸೇರಿಕೊಂಡಿರುವಂತೆಯೇ ಪರ್ಯಸ್ತಾಪಹ್ನುತಿಯೂ ಸೇರಿಕೊಂಡಿರುವುದನ್ನು ಕಾಣ ಬಹುದು. ಅದನ್ನು ಮುಂದೆ ಉದಾಹರಿಸಲಾಗಿದೆ.

ದಮಯಂತಿಯನ್ನು ವರ್ಣಿಸುವಾಗ ನಳನು ಹೇಳುವ ಮಾತಿದು. "ಹೆಚ್ಚು ಕೆಂಪೇರಿರುವುದರಿಂದ ಈ ಕೆಳತುಟಿಯನ್ನೇ ತೊಂಡೆಯ ಹಣ್ಣೆಂದು ತಿಳಿಯುವೆನು. ಆದರೆ ಈ ಹೆಸರಿನ ಹಣ್ಣನ್ನು ಬಿಂಬಫಲವೆಂದು ಭಾವಿಸಲಾರೆನು. ಆ ಫಲವೂ ಕೆಂಪ ಗಿದ್ದರೂ ತುಟಿಗಿಂತಲೂ ನಿಕೃಷ್ಟವೆಂಬುದು ಈ ತುಟಿಯನ್ನು ನೋಡಿದ್ದರಿಂದ ಸ್ಪಷ್ಟ ವಾಯಿತು. ಹಾಗಾದರೆ ಲೋಕದ ಜನರು ಇದಕ್ಕೆ ವಿರುದ್ಧವಾಗಿ ಏಕೆ ತಿಳಿದಿರುವರು ? ಬಿಂಬಫಲವೇ ತುಟಿಗಿಂತ ಅಧರ (ಕೀಳು) ಆಗಿದ್ದರೂ ಅದನ್ನು ಅಧರವೆಂದು ಕರೆಯದೆ ತುಟಿಯನ್ನೇ ಅಧರವೆಂದು ಜನರು ಕರೆಯುತ್ತಿರುವುದು ಅವರ ಅವಿವೇಕ ವನ್ನು ತಿಳಿಸುತ್ತದೆ. ಅವೆರಡಕ್ಕೂ ಇರುವ ತಾರತಮ್ಯವನ್ನು ತಿಳಿಯಲಾಗದೆ ಇದ್ದುದ ರಿಂದ ಅವರಿಗೆ ಹೆಸರುಗಳಲ್ಲಿ ಬದಲಾವಣೆಯುಂಟಾಯಿತು. ತೊಂಡೆಯ ಹಣ್ಣನ್ನು ಅಧರವೆಂದೂ, (ಅಧರ) ತುಟಿಯನ್ನು ಬಿಂಬಫಲವೆಂದೂ ಅವರು ಕರೆಯಬೇಕಾಗಿತ್ತು, ಆದರೆ ಅವೆರಡಕ್ಕೂ ಅಂತರವು ಅವರಿಗೆ ತಿಳಿಯದೇ ಇದ್ದುದರಿಂದ ಹೆಸರುಗಳಲ್ಲಿ ಭ್ರಾಂತಿಯುಂಟಾಗಿರಬೇಕು." ಇಲ್ಲಿ ಲೋಕಪ್ರಸಿದ್ಧವಾದ (ಬಿಂಬ) ತೊಂಡೆಹಣ್ಣನ್ನು ಅದು ಆ ಹಣ್ಣಲ್ಲವೆಂದು ನಿಷೇಧಿಸಿ ಹೆಚ್ಚು ಕೆಂಪುಬಣ್ಣವಿರುವುದರಿಂದ ದಮಯಂತಿಯ ಕೆಳತುಟಿಯನ್ನೇ ತೊಂಡೆಹಣ್ಣೆಂದು ಉತ್ಪ್ರೇಕ್ಷಿಸಲಾಗಿದೆ. ಆದ್ದರಿಂದ ಈ ಸ್ವರೂಪೋತ್ಪ್ರೇಕ್ಷೆಯಲ್ಲಿ ಪರ್ಯಸ್ತಾಪಹ್ನುತಿಯೇ ಸೇರಿಕೊಂಡಿದೆ. ಹೇತೂತ್ಪ್ರೇಕ್ಷೆ ಯಲ್ಲೂ ಅಪಹ್ನುತಿ ಸೇರಿಕೊಂಡಿರುವುದನ್ನು ಹೇತೂತ್ಪ್ರೇಕ್ಷೆಯ "ವಿವಸ್ವತಾನಾ ಯಿಷತೇವ'' ಎಂಬ ಉದಾಹರಣದಲ್ಲಿಯೇ ಕಾಣಬಹುದು. ರಾತ್ರಿವೇಳೆ ಜನರ ಕಣ್ಣು ಗಳು ಕಾಣಸದಿರುವುದಕ್ಕೆ ಕತ್ತಲೆಯು ಕಾರಣವೆಂಬುದನ್ನು ನಿಷೇಧಿಸಿ ಸೂರ್ಯನು ತನ್ನ ಕಿರಣಗಳೊಡನೆ ಜನರ ದೃಷ್ಟಿಯನ್ನೂ ಸೆಳೆದುಕೊಂಡಿದ್ದೇ ಕಾರಣವೆಂದು ತಿಳಿಸ ಲಾಗಿದೆ. ಕಣ್ಣು ಕಾಣಸದಿರುವುದಕ್ಕೆ ಕತ್ತಲೆಯು ಕಾರಣವಾಗಿದ್ದರೂ ಅದನ್ನು ಅಲ್ಲಿ ತಿಳಿಸದೆ ಬೇರೊಂದು ಹೇತುವನ್ನು ತಿಳಿಸಿದ್ದರಿಂದ ಅಲ್ಲಿಯೂ ಪರ್ಯಾಸ್ತಾಪಹ್ನುತಿಯೇ ಸೇರಿಕೊಂಡಿದೆ.

ಫಲೋತ್ಪ್ರೇಕ್ಷೆಯಲ್ಲಿಯೂ ಇದೇ ಬಗೆಯ ಅಪಹ್ನುತಿ ಸೇರಿರುವುದನ್ನು ಈಗ ಉದಾಹರಿಸಲಾಗಿದೆ. ''ಸೂರ್ಯನ ತಾಪದಿಂದ ನೊಂದ ಆನೆಯು ಅವನ ಬಂಧು ವೆನಿಸಿದ ಕಮಲಗಳನ್ನು ಹಿಂಸಿಸಲಿಕ್ಕೋ ಏನೋ ಎಂಬಂತೆ ಸರೋವರವನ್ನು ಪ್ರವೇಶಿ ಸುತ್ತದೆ. ಆದರೆ ಸ್ನಾನಕ್ಕಾಗಿ ಅದು ಅಲ್ಲಿ ಪ್ರವೇಶಿಸಿಲ್ಲ ; ಯಾಕೆಂದರೆ ಆನೆಯ ಸ್ನಾನವೇ

ವ್ಯರ್ಥವೆನಿಸಿದೆ.'' ಇಲ್ಲಿ ಆನೆಯು ಸರೋವರವನ್ನು ಪ್ರವೇಶಿಸಿದ್ದಕ್ಕೆ ಸ್ನಾನವೇ ಫಲವೆಂಬುದನ್ನು ನಿಷೇಧಿಸಿ ಸೂರ್ಯನು ತನ್ನನ್ನು ಹಿಂಸಿಸಿದ್ದರಿಂದ ಅವನ ಕಡೆಯ ವಸ್ತುಗಳನ್ನಾದರೂ ಹಿಂಸಿಸಬೇಕೆಂಬುದೇ ಅದರ ಉದ್ದೇಶವೆಂದು ಹೇಳಿದ್ದರಿಂದ ಹಿಂಸಕನ ಬಂಧುಗಳನ್ನು ಹಿಂಸಿಸಬೇಕೆಂಬುದೇ ಆನೆಯ ಸರೋವರಪ್ರವೇಶಕ್ಕೆ ಫಲವೆಂದು ಉತ್ಪ್ರೇಕ್ಷಿಸಲಾಗಿದೆ. ಆನೆಯು ಸ್ನಾನಕ್ಕಾಗಿ ಸರೋವರವನ್ನು ಪ್ರವೇಶಿಸಿದುದು ಸಹಜವಾದರೂ ಹಾಗೆ ಪ್ರವೇಶಿಸಿದ್ದಕ್ಕೆ ಸ್ನಾನವು ಫಲವಲ್ಲ; ಆದರೆ ಸೂರ್ಯನ ಬಂಧುಗಳನ್ನು ಹಿಂಸಿಸುವುದೇ ಫಲವೆಂದು ಹೇಳಿ ನಿಜವಾದ ಫಲವನ್ನು ತಪ್ಪಿಸಿ ಬೇರೆ ಫಲವನ್ನು ಆರೋಪಿಸಿದ್ದರಿಂದ ಇಲ್ಲಿಯೂ ಪರ್ಯಸ್ತಾಪಹ್ನುತಿಯೇ ಸೇರಿಕೊಂಡಿದೆ. ಅತಿಶಯೋಕ್ತಿಯಲ್ಲಿ ಅಪಹ್ನುತಿ ಉಂಟೆಂದು ತಿಳಿಸುವ ಪ್ರಸಂಗ ಒದಗಿದ್ದರಿಂದ ಅಲಂಕಾರಸರ್ವಸ್ವಕಾರನು ಹೇಳಿದಂತೆ ಸ್ವರೂಪೋತ್ಪ್ರೇಕ್ಷೆಯಲ್ಲೂ ಶುದ್ಧಾಪಹ್ನುತಿ ಉಂಟೆಂದು ತಿಳಿಸಿ ಅದನ್ನು ಅನುಸರಿಸಿಕೊಂಡು ಬಂದು ಮುಂದೆ ಮೂರು ಬಗೆಯ ಉತ್ಪ್ರೇಕ್ಷೆಗಳಲ್ಲೂ ಪರ್ಯಸ್ತಾಪಹ್ನುತಿಯು ಸೇರಿಕೊಂಡಿರುವುದೆಂಬುದನ್ನು ಈವರಿವಿಗೂ ತಿಳಿಸಿಯಾಯಿತು. ಇನ್ನು ಅತಿಶಯೋಕ್ತಿಯ ಮೂರನೆಯ ಬಗೆಯನ್ನು ತಿಳಿಸಲಾಗುವುದು.

ಭೇದಕಾತಿಶಯೋಕ್ತಿಸ್ತು ತಸ್ಯೈವಾನ್ಯತ್ವವರ್ಣನಮ್ ।
ಅನ್ಯದೇವಾಸ್ಯ ಗಾಂಭೀರ್ಯಂ ಅನ್ಯದ್ಧೈರ್ಯಂ ಮಹೀಪತೇಃ ॥ ೩೭ ॥
ಅತ್ರ ಲೋಕಪ್ರಸಿದ್ಧಗಾಂಭೀರ್ಯಾದ್ಯಭೇದೇಽಪಿ ಭೇದೋ ವರ್ಣಿತಃ

ಯಥಾ ವಾ—

ಅನ್ಯೇಯಂ ರೂಪಸಂಪತ್ತಿರನ್ಯಾ ವೈದಗ್ಧ್ಯಧೋರಣೀ ।
ನೈಷಾ ನಲಿನಪತ್ರಾಕ್ಷೀ ಸೃಷ್ಟಿಃ ಸಾಧಾರಣೀ ವಿಧೇಃ ॥

ಲೋಕಪ್ರಸಿದ್ಧವಾಗಿರುವ ಒಂದು ವಸ್ತುವನ್ನು ಲೋಕವಿಲಕ್ಷಣವೆಂದು ವರ್ಣಿಸುವುದೇ ಭೇದಕಾತಿಶಯೋಕ್ತಿ ಎನಿಸುವುದು. "ಈ ಮಹಾರಾಜನ ಗಾಂಭೀರ್ಯವೇ ಬೇರೆ ರೀತಿಯಾಗಿದೆ. ಅವನ ಧೈರ್ಯವೇ ಬೇರೆ ಬಗೆಯಾಗಿದೆ." ಹೀಗೆ ರಾಜನಲ್ಲಿ ಲೋಕ ಪ್ರಸಿದ್ಧವಾದ ಗಾಂಭೀರ್ಯ ಧೈರ್ಯಗಳೇ ಕೂಡಿಕೊಂಡಿದ್ದರೂ ಅವನ್ನು ಬೇರೆ ಬಗೆ ಎಂದು ತಿಳಿಸಲಾಗಿದೆ. "ಈ ಬಗೆಯ ಆಕಾರಸಂಪತ್ತೇ ಬೇರೆ ಬಗೆ ಎನಿಸಿದೆ. ವಿಲಾಸವೈಭವವೂ ಬೇರೆ ಬಗೆಯಾಗಿದೆ. ಈ ಕಮಲಾಕ್ಷಿಯು ಬ್ರಹ್ಮನ ಸಾಧಾರಣ ಸೃಷ್ಟಿಯಲ್ಲಿ ನಿರ್ಮಿತವಾಗಿಲ್ಲ. ಲೋಕದಲ್ಲಿ ಎಲ್ಲರನ್ನೂ ಸೃಷ್ಟಿಸುವಂತೆಯೇ ಬ್ರಹ್ಮನು ಈ ನಾಯಿಕೆಯನ್ನೂ, ಇವಳ ರೂಪಸಂಪತ್ತು, ರಸಿಕತೆ ಇವುಗಳನ್ನೂ ಸೃಷ್ಟಿಸಿದ್ದರೂ ಸಹ ಕವಿಯು ಇವೆಲ್ಲವನ್ನೂ ಬ್ರಹ್ಮನ ವಿಲಕ್ಷಣವಾದ ಸೃಷ್ಟಿ ಎಂದು ತಿಳಿಸುತ್ತಾನೆ. ಆದ್ದರಿಂದ ಇದು ಭೇದಕಾತಿಶಯೋಕ್ತಿ ಎನಿಸಿದೆ.

ಸಂಬಂಧಾತಿಶಯೋಕ್ತಿಃ ಸ್ಯಾದಯೋಗೇ ಯೋಗಕಲ್ಪನಮ್ ।
ಸೌಧಾಗ್ರಾಣಿ ಪುರಸ್ಯಾಸ್ಯ ಸ್ಪೃಶಂತಿ ವಿಧುಮಂಡಲಮ್ ॥ ೩೮ ॥

ಯಥಾ ವಾ—

ಕತಿಪಯದಿವಸೈಃ ಕ್ಷಯಂ ಪ್ರಯಾಯಾತ್ಕನಕಗಿರಿಃ ಕೃತವಾಸರಾವಸಾನಃ ।
ಇತಿ ಮುದಮುಪಯಾತಿ ಚಕ್ರವಾಕೀ ವಿತರಣಶಾಲಿನಿ ವೀರರುದ್ರದೇವೇ ॥

ಅತ್ರ ಚಕ್ರವಾಕ್ಯಾಸ್ಸೂರ್ಯಾಸ್ತಮಯಕಾರಕಮಹಾಮೇರುಕ್ಷಯಸಂಭಾವನಾಪ್ರಯುಕ್ತಸಂತೋಷಾಸಂಬಂಧೇಽಪಿ ತತ್ಸಂಬಂಧೋ ವರ್ಣಿತಃ.

ಎರಡು ವಸ್ತುಗಳಿಗೆ ಪರಸ್ಪರವಾಗಿ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಕಲ್ಪಿಸುವುದೇ ಸಂಬಂಧಾತಿಶಯೋಕ್ತ್ಯಲಂಕಾರವೆನಿಸುವುದು. ಈ ಪಟ್ಟಣದ ಉಪ್ಪರಿಗೆಗಳ ತುದಿಗಳು ಚಂದ್ರಮಂಡಲವನ್ನು ಮುಟ್ಟುತ್ತವೆ. ಇಲ್ಲಿ ಉಪ್ಪರಿಗೆಗಳ ತುದಿಗಳು ಚಂದ್ರಮಂಡಲವನ್ನು ಮುಟ್ಟುತ್ತವೆ ಎಂಬುದು ಅಸಂಭವವಾದರೂ ಅವು ಮುಟ್ಟುತ್ತವೆ ಎಂದು ಅವಕ್ಕೂ ಚಂದ್ರಮಂಡಲಕ್ಕೂ ಸಂಬಂಧವನ್ನು ಕಲ್ಪಿಸಲಾಗಿದೆ. "ಪ್ರತಾಪರುದ್ರನು ಯಾಚಕರ ಇಷ್ಟಾರ್ಥವನ್ನು ಔದಾರ್ಯದಿಂದ ನೆರವೇರಿಸುತ್ತಿರಲು ಹೆಣ್ಣುಚಕ್ರವಾಕ ಪಕ್ಷಿಯು ಕೆಲವೇ ದಿವಸಗಳಲ್ಲಿ ಮೇರುಪರ್ವತವು ನೆಲಸಮವಾದೀತೆಂದೂ, ರಾಜನು ದಾನಶೂರನಾದ್ದರಿಂದ ಮೇರುಪರ್ವತದ ಬಂಗಾರವನ್ನು ಅಗೆದಗೆದು ಯಾಚಕರಿಗೆ ಆದಷ್ಟು ಬೇಗನೆ ದಾನಮಾಡುವನಾದ್ದರಿಂದ ಮೇರುಪರ್ವತವು ಕರಗಿ ಸೂರ್ಯನು ಮುಳುಗಲಿಕ್ಕೆ ಅವಕಾಶವೇ ಆಗಲಾರದೆಂದೂ ಭಾವಿಸಿ ಚಕ್ರವಾಕಪಕ್ಷಿಯು ಸಂತೋಷಗೊಂಡಿತು. ಸೂರ್ಯನು ಅಸ್ತನಾದನೆಂದರೆ ಚಕ್ರವಾಕಗಳಿಗೆ ವಿಯೋಗದುಃಖವು ಕಾದಿರುವುದು. ಇದನ್ನು ತಪ್ಪಿಸಲಿಕ್ಕಾಗಿ ಸೂರ್ಯನು ಮರೆಯಾಗದಂತೆ ಮೇರುಪರ್ವತವು ಬೇಗನೆ ಕರಗೀತೆಂಬುದೇ ಪಕ್ಷಿಯ ಆಶೆ. ಇಲ್ಲಿ ಹೀಗೆ ಮೇರುಪರ್ವತ ಕರಗೀತೆಂದು ಭಾವಿಸಿ ಪಕ್ಷಿ ಸಂತೋಷಪಡುವುದಕ್ಕೂ ಆ ಪಕ್ಷಿಗೂ ಸಂಬಂಧವಿಲ್ಲದಿದ್ದರೂ ಕವಿಯು ಚಮತ್ಕಾರದಿಂದ ಸಂಬಂಧವನ್ನು ಕಲ್ಪಿಸಿರುವನು.

ಯೋಗೇಽಪ್ಯಯೋಗೋಽಸಂಬಂಧಾತಿಶಯೋಕ್ತಿರಿತೀರ್ಯತೇ ।
ತ್ವಯಿ ದಾತರಿ ರಾಜೇಂದ್ರ ಸ್ವರ್ದ್ರುಮಾನ್ನಾದ್ರಿಯಾಮಹೇ ॥ ೩೯ ॥

ಅತ್ರ ಸ್ವರ್ದ್ರುಮೇಷು ಆದರಸಂಬಂಧೇಽಪಿ ತದಸಂಬಂಧೋ ವರ್ಣಿತಃ ಇತ್ಯಸಂಬಂಧಾತಿಶಯೋಕ್ತಿಃ. ಯಥಾ ವಾ—

ಅನಯೋರನವದ್ಯಾಂಗಿ ಸ್ತನಯೋರ್ಜೃಂಭಮಾಣಯೋಃ ।
ಅವಕಾಶೋ ನ ಪರ್ಯಾಪ್ತಸ್ತವ ಬಾಹುಲತಾಂತರೇ ॥

ಒಂದು ವಸ್ತುವಿಗೆ ಮತ್ತೊಂದು ವಸ್ತುವಿನೊಡನೆ ಸಂಬಂಧವಿದ್ದರೂ ಸಂಬಂಧವಿಲ್ಲವೆಂದು ವರ್ಣಿಸುವುದೇ ಅಸಂಬಂಧಾತಿಶಯೋಕ್ತಿ ಎನಿಸುವುದು. ಮಹಾರಾಜನೇ ನೀನು ದಾನಮಾಡುತ್ತಿರುವಾಗ ಕಲ್ಪವೃಕ್ಷವನ್ನು ನಾವು ಸನ್ಮಾನಿಸುವುದಿಲ್ಲ. ಇಲ್ಲಿ ಕಲ್ಪವೃಕ್ಷವನ್ನು ಯಾವಾಗಲೂ ಆದರಿಸಲೇಬೇಕೆಂಬ ಸಂಬಂಧವಿದ್ದರೂ ನಮಗೆ ಅದರ ಸಂಬಂಧವಿಲ್ಲವೆಂದು ಕವಿಯು ತಿಳಿಸಿದ್ದಾನೆ. ಹೀಗೆಯೇ ಬೇರೊಂದು ಉದಾಹರಣವೂ

ಇದೆ. "ಶೋಭನಾಂಗಿಯೇ, ಬೆಳೆಯುತ್ತಿರುವ ನಿನ್ನ ಈ ಸ್ತನಗಳಿಗೆ ತೋಳುಗಳೆಂಬ ಲತೆಗಳ ಮಧ್ಯದಲ್ಲಿ ಸಾಕಷ್ಟು ಅವಕಾಶವು ದೊರೆತಿಲ್ಲ". ಬಾಹುಗಳೊಳಗಡೆಯೇ ಸ್ತನಗಳು ಅಡಗಲು ಸಾಕಷ್ಟು ಅವಕಾಶವಿದ್ದರೂ ಇಲ್ಲವೆಂದು ವರ್ಣಿಸಿದೆ.

ಅಕ್ರಮಾತಿಶಯೋಕ್ತಿಃ ಸ್ಯಾತ್ ಸಹತ್ವೇ ಹೇತುಕಾರ್ಯಯೋಃ ।

ಆಲಿಂಗಂತಿ ಸಮಂ ದೇವ ಜ್ಯಾಂ ಶರಾಶ್ಚ ಪರಾಶ್ಚ ತೇ ॥ ४೦ ॥

ಅತ್ರ ಮೌರ್ವ್ಯಾಂ ಯದಾ ಶರಸಂಧಾನಂ ತದಾನೀಮೇವ ಶತ್ರವಃ ಕ್ಷಿತೌ ಪತಂತೀತಿ ಹೇತುಕಾರ್ಯಯೋಃ ಸಹತ್ವಂ ವರ್ಣಿತಮ್. ಯಥಾ ವಾ–

ಮುಂಚತಿ ಮುಂಚತಿ ಕೋಶಂ ಭಜತಿ ಚ ಭಜತಿ ಪ್ರಕಂಪಮರಿವರ್ಗಃ ।

ಹಮ್ಮೀರವೀರಖಡ್ಗೇ ತ್ಯಜತಿ ಚ ತ್ಯಜತಿ ಕ್ಷಮಾಮಾಶು ॥

ಅತ್ರ ಖಡ್ಗಸ್ಯ ಕೋಶತ್ಯಾಗಾದಿಕಾಲ ಏವ ರಿಪೂಣಾಂ ಧನಗೃಹತ್ಯಾಗಾದಿ ವರ್ಣಿತಮ್.

ಕಾರ್ಯಕಾರಣಗಳಿಗೆ ಒಂದು ಕ್ರಮವು ಲೋಕದಲ್ಲಿ ರೂಢಿಯಲ್ಲಿದೆ. ಅದೇ ಇಲ್ಲವೆಂದು ತಿಳಿಸಿ ಕಾರಣದೊಡನೆಯೇ ಕಾರ್ಯವೂ ಸಹ ಹುಟ್ಟುವುದೆಂದು ತಿಳಿಸುವುದೇ ಅಕ್ರಮಾತಿಶಯೋಕ್ತಿ ಎನಿಸುವುದು. "ಸ್ವಾಮಿ, ನಿನ್ನ ಬಾಣಗಳು ಮತ್ತು ಶತ್ರುಗಳು ಏಕಕಾಲದಲ್ಲಿ ಬತ್ತಳಿಕೆಯನ್ನೂ, ನೆಲವನ್ನೂ ಅಪ್ಪಿಕೊಳ್ಳುವವು'' ಇಲ್ಲಿ ರಾಜನು ಬತ್ತಳಿಕೆಯಲ್ಲಿ ಬಾಣಗಳನ್ನು ಸೇರಿಸಿದೊಡನೆಯೇ ಶತ್ರುಗಳು ನೆಲದಮೇಲೆ ಬೀಳುತ್ತಾರೆ ಎಂದು ಹೇಳಿದ್ದರಿಂದ ಬಾಣಪ್ರಯೋಗವೆಂಬ ಕಾರಣದೊಡನೆಯೇ ಶತ್ರುಪತನವೆಂಬ ಕಾರ್ಯವೂ ಜೊತೆಯಲ್ಲಿಯೇ ನಡೆಯಿತೆಂದು ತಿಳಿಸಲಾಗಿದೆ.

"ಹಮ್ಮೀರವೀರನ ಖಡ್ಗವು ಬತ್ತಳಿಕೆಯನ್ನು ತೊರೆಯುವಾಗಲೇ ಶತ್ರುಗಳ ಸಮೂಹವು ಭಂಡಾರವನ್ನು ತೊರೆಯಿತು. ಅವನು ಖಡ್ಗವನ್ನು ಅಳ್ಳಾಡಿಸುತ್ತಿರುವಾಗಲೇ ಶತ್ರುಗಳು ಅಳ್ಳಾಡತೊಡಗಿದರು. ಹಾಗೆಯೇ ಅವನ ಖಡ್ಗವು ಶಾಂತಿಯನ್ನು ತೊರೆಯುವಾಗಲೇ ಶತ್ರುಗಳು ಭೂಮಿಯನ್ನೇ ತೊರೆದರು." ಇಲ್ಲಿ ಖಡ್ಗವು ಕೋಶದಿಂದ ಹೊರಗೆ ಬರುವ ವೇಳೆಗೆ ಸರಿಯಾಗಿ ಶತ್ರುಗಳು ಧನಧಾನ್ಯಗೃಹವಿಲಾಸಗಳನ್ನು ತೊರೆದರೆಂದು ಖಡ್ಗಪ್ರಯೋಗವೆಂಬ ಕಾರಣವನ್ನೂ, ಶತ್ರುಗಳ ಕೋಶತ್ಯಾಗವೆಂಬ ಕಾರ್ಯವನ್ನೂ ಏಕಕಾಲದಲ್ಲಿಯೇ ನಡೆದವೆಂದು ವರ್ಣಿಸಲಾಗಿದೆ.

ಚಪಲಾತಿಶಯೋಕ್ತಿಸ್ತು ಕಾರ್ಯೇ ಹೇತುಪ್ರಸಕ್ತಿಜೇ ।

ಯಾಸ್ಯಾಮೀತ್ಯುದಿತೇ ತನ್ವ್ಯಾ ವಲಯೋಽಭವದೂರ್ಮಿಕಾ ॥ ४೧ ॥

ಅತ್ರ ನಾಯಕಪ್ರವಾಸಪ್ರಸಕ್ತಿಮಾತ್ರೇಣ ಯೋಷಿತೋಽತಿಕಾರ್ಶ್ಯಂ ಕಾರ್ಯಮುಖೇನ ದರ್ಶಿತಮ್. ಯಥಾ ವಾ—

ಆದಾತುಂ ಸಕೃದೀಕ್ಷಿತೇಽಪಿ ಕುಸುಮೇ ಹಸ್ತಾಗ್ರಮಾಲೋಹಿತಂ

ಲಾಕ್ಷಾರಂಜನವಾರ್ತಯಾಪಿ ಸಹಸಾ ರಕ್ತಂ ತಲಂ ಪಾದಯೋಃ ।

ಅಂಗಾನಾಮನುಲೇಪನಸ್ಮರಣಮಪ್ಯತ್ಯಂತಖೇದಾವಹಂ
ಹಂತಾಧೀರದೃಶಃ ಕಿಮನ್ಯದಲಕಾಮೋದೋಽಪಿ ಭಾರಾಯತೇ ॥

ಯಾಮಿ ನ ಯಾಮೀತಿ ಧವೇ ವದತಿ ಪುರಸ್ತಾತ್ ಕ್ಷಣೇನ ತನ್ವಂಗ್ಯಾಃ । ಗಲಿತಾನಿ ಪುರೋ ವಲಯಾನ್ಯಪರಾಣಿ ತಥೈವ ದಲಿತಾನಿ ॥

ಕಾರಣವಿಲ್ಲದಿದ್ದರೂ ಅದರ ಪ್ರಸಕ್ತಿಯಿಂದಲೇ ಕಾರ್ಯವು ಸಂಭವಿಸಿತೆಂದು ತಿಳಿಸುವುದೇ ಚಪಲಾತಿಶಯೋಕ್ತಿ ಎನಿಸುವುದು. ಇದನ್ನು ಮುಂದೆ ಉದಾಹರಿಸಿದೆ. 'ಪ್ರಿಯನು ಹೊರಡುವನೆಂದು ಹೇಳಿದೊಡನೆ ಕೃಶಾಂಗಿಯು ಬೆರಳಿನ ಆಭರಣವೆನಿಸಿದ ಉಂಗುರವು ಬಹಳ ಚಿಕ್ಕದಾದರೂ, ಕೈಗೆ ಬಳೆಯಾಗುವಷ್ಟು ಶರೀರವು ಸಣ್ಣಗಾಯಿತು'. ಹೀಗೆ ಅವಳು ಕೃಶಳಾಗಲು ಪತಿಯ ಪ್ರವಾಸವೇ ಕಾರಣವಾದರೂ ಅದು ಇನ್ನೂ ಸಂಭವಿಸಿಲ್ಲ ; ಮುಂದೆ ಒದಗಲಿವೆ. ಅಂತಹ ಕಾರಣದ ಪ್ರಸಕ್ತಿಯಿಂದ ಆಕೆ ಇಂದೇ ಕೃಶಳಾಗಿ ದುಃಖಪಡಲಾರಂಭಿಸಿದಳು. ಪತಿಯು ಪ್ರವಾಸಕ್ಕೆ ಹೊರಡುವನೆಂಬುದನ್ನು ಕೇಳಿದೊಡನೆಯೇ ಪತ್ನಿ ಕೃಶಳಾದಳೆಂಬುದನ್ನು ಇಲ್ಲಿ ಉಂಗುರವು ಬಳೆಯಾಯಿತೆಂಬ ಕಾರ್ಯದ ಮೂಲಕ ತಿಳಿಸಲಾಗಿದೆ. ಸುಕುಮಾರಸ್ತ್ರೀಯೊಬ್ಬಳ ವಿರಹಾವಸ್ಥೆಯನ್ನು ಹೀಗೆ ವರ್ಣಿಸಿದೆ "ಪುಷ್ಪವನ್ನು ಕೈಯಲ್ಲಿ ಹಿಡಿಯಲು ನೋಡಿದ್ದರಿಂದಲೇ ಚಂಚಲಾಕ್ಷಿಗೆ ಕೈ ಕೆಂಪಾಯಿತು. ಇನ್ನು ಕೈಯಲ್ಲಿ ಹಿಡಿದಿದ್ದರೆ ಏನಾಗುತ್ತಿತ್ತೋ! ಲಾಕ್ಷಾರಸವನ್ನು ಕಾಲಿಗೆ ಹಚ್ಚಬೇಕೆಂಬುದನ್ನು ಆಕೆಯು ಕೇಳಿದೊಡನೆಯೇ ಅಂಗಾಲುಗಳು ಕೆಂಪೇರಿದವು. ಇನ್ನು ಹಚ್ಚಿದ್ದರೆ ಏನಾಗುತ್ತಿತ್ತೋ! ಅವಯವಗಳಿಗೆ ಶ್ರೀಗಂಧ ಮೊದಲಾದವನ್ನು ಲೇಪಿಸಬೇಕೆಂದು ಸ್ಮರಿಸಿದೊಡನೆಯೇ ಹೆಚ್ಚು ಆಯಾಸವುಂಟಾಯಿತು. ಇನ್ನು ಲೇಪಿಸಿದ್ದರೆ ಎಷ್ಟು ಆಯಾಸವಾಗುತ್ತಿತ್ತೋ! ಆ ಬಗ್ಗೆ ಹೇಳುವುದೇನಿದೆ? ಆಕೆಯ ಮುಂಗುರುಳಿಗೆ ಧೂಪದ ವಾಸನೆಯನ್ನು ಹಾಯಿಸುವುದೂ ಒಂದು ಹೊರೆ ಎಂದು ಕಾಣಿಸಿತು. ಪುಷ್ಪವನ್ನು ಮುಟ್ಟಲಿಕ್ಕೆ ಕೊಡುವುದು, ಲಾಕ್ಷಾರಸವನ್ನು ಕಾಲಿಗೆ ಬಳಿಯಬೇಕೆಂಬುದು, ಮುಂಗುರುಳಿಗೆ ಗಂಧವನ್ನು ಹಚ್ಚುವುದು ಇವೆಲ್ಲಾ ಕಾರಣಗಳನ್ನು ಕೇಳಿದೊಡನೆಯೇ ಕೈಗಳಲ್ಲೂ, ಕಾಲುಗಳಲ್ಲೂ, ಅವಯವಗಳಲ್ಲೂ ಕೆಂಪೇರುವುದೇ ಮೊದಲಾದ ಕಾರ್ಯಗಳು ಹುಟ್ಟಿದವೆಂಬುದನ್ನು ಇಲ್ಲಿ ವರ್ಣಿಸಲಾಗಿದೆ. ಪುಷ್ಪಗಳನ್ನು ಕೈಯಲ್ಲಿ ಹಿಡಿದುಕೊಂಡ ಮೇಲೆ, ಲಾಕ್ಷಾರಸವನ್ನು ಹಚ್ಚಿದ ಮೇಲೆ, ಅಂಗಗಳಿಗೆ ಲೇಪನಮಾಡಿದ ಮೇಲೆ ಕೈಕಾಲುಗಳು ಕೆಂಪಾಗಬೇಕಿತ್ತು. ಆದರೆ ಅವುಗಳ ಪ್ರಸಕ್ತಿಯಿಂದಲೇ ಕಾರ್ಯದ ಉತ್ಪತ್ತಿಯಾಯಿತೆಂದು ಇಲ್ಲಿ ತಿಳಿಸಲಾಗಿದೆ.

"ಪತಿಯು ಹೊರಡುತ್ತೇನೆ ಎಂದು ಹೇಳುತ್ತಿರುವಾಗಲೇ ಕೃಶಾಂಗಿಯ ಕೈಯಲ್ಲಿ ಮುಂದೆ ಇದ್ದ ಕಡಗಗಳು ಮೊದಲು ಕೆಳಗೆ ಬಿದ್ದವು. ಆ ಕೂಡಲೇ ಅವನು "ಹೊರಡುವುದಿಲ್ಲ" ವೆಂದು ಹೇಳಲು ಕೈಯಲ್ಲಿ ಉಳಿದಿದ್ದ ಬಳೆಗಳು ಹಾಗೆಯೇ ಬಿಗಿದುಕೊಂಡವು." ಹೋಗುವನೆಂದು ತಿಳಿಸಿದಾಗ ಎಷ್ಟುಬೇಗನೆ ಶರೀರವು ಕೃಶ

ವಾಯಿತೋ, ಹೋಗುವುದಿಲ್ಲವೆಂದು ಹೇಳಿದಾಗಲೂ ಅಷ್ಟೇ ಬೇಗನೆ ಶರೀರವು ಪುಷ್ಟ ವಾಯಿತು. ಈ ಚಪಲಾತಿಶಯೋಕ್ತಿಯನ್ನೇ ಅತ್ಯಂತಾತಿಶಯೋಕ್ತಿ ಎಂದು ಕರದು ಅದಕ್ಕೆ ಹೇಳಿದ ಲಕ್ಷಣವನ್ನೇ ಇದಕ್ಕೂ ಹೇಳುವರು. ಆದರೆ ಇವೆರಡಕ್ಕೂ ಭೇದವಿದ ಎಂಬುದನ್ನು ಲಕ್ಷಣಗಳಿಂದಲೇ ತಿಳಿಯಬಹುದು.

ಅತ್ಯಂತಾತಿಶಯೋಕ್ತಿಸ್ತು ಪೌರ್ವಾಪರ್ಯವ್ಯತಿಕ್ರಮೇ ।
ಅಗ್ರೇ ಮಾನೋ ಗತಃ ಪಶ್ಚಾದನುನೀತಾ ಪ್ರಿಯೇಣ ಸಾ ॥ ೪೨ ॥

ಯಥಾ ವಾ—

ಕವೀಂದ್ರಾಣಾಮಾಸನ್ ಪ್ರಥಮತರಮೇವಾಂಗಣಭುವಃ
ಚಲದ್ಭೃಂಗಾಸಂಗಾಕುಲಕರಿಮದಾಮೋದಮಧುರಾಃ ।
ಅಮೀ ಪಶ್ಚಾತ್ತೇಷಾಮುಪರಿ ಪತಿತಾ ರುದ್ರನೃಪತೇಃ
ಕಟಾಕ್ಷಾಃ ಕ್ಷೀರೋದಪ್ರಸರದುರುವೀಚೀಸಹಚರಾಃ ॥

ಏತಾಸ್ತಿಸ್ರೋಽಪ್ಯತಿಶಯೋಕ್ತಯಃ ಕಾರ್ಯಶೈಘ್ರ್ಯಪ್ರತ್ಯಾಯನಾರ್ಥಾಃ ॥

ಕಾರಣಕ್ಕೂ ಕಾರ್ಯಕ್ಕೂ ಹಿಂದುಮುಂದೆಂಬ ಕ್ರಮವನ್ನು ಅತಿಕ್ರಮಿಸಿ ತಿಳಿಸು ವುದೇ ಅತ್ಯಂತಾತಿಶಯೋಕ್ತಿ ಎನಿಸುವುದು. "ಮೊದಲು ಕೋಪವು ತೊಲಗಿತು ಆಮೇಲೆ ಪ್ರಿಯನು ಆಕೆಯನ್ನು ಸಮಾಧಾನಪಡಿಸಿದನು". ಮೊದಲು ಸಮಾಧಾನ ಪಡಿಸಬೇಕು; ಆಮೇಲೆ ಕೋಪವು ತೊಲಗಬೇಕು. ಇದು ಕಾರ್ಯಕಾರಣಗಳ ಸಂಭವಿಸುವ ಕ್ರಮ. ಇಲ್ಲಿ ಇದಕ್ಕೆ ವಿರುದ್ಧವಾದ ಹೇಳಿಕೆ ಇದೆ.

"ಕವಿಶ್ರೇಷ್ಠರ ವಾಸಸ್ಥಳಗಳು ಚಪಲವಾದ ದುಂಬಿಗಳಿಂದ ಕೂಡಿದ ಆನೆಗಳ ಮದೋದಕದಿಂದ ಮೊದಲೇ ಕಂಗೊಳಿಸಿದವು. ಆಮೇಲೆ ಕವಿಗಳ ಮೇಲೆ ಕ್ಷೀರ ಸಮುದ್ರದ ಅಲೆಗಳಿಗೆ ಸದೃಶವಾದ ಪ್ರತಾಪರುದ್ರನ ಕೃಪಾದೃಷ್ಟಿ ಬಿದ್ದಿತು". ಇಲ್ಲಿ ರಾಜನ ಕೃಪಾದೃಷ್ಟಿ ಕವಿಗಳ ಮೇಲೆ ಬಿದ್ದನಂತರ ಅವನು ಆನೆಗಳ ಮೇಲೆ ಯಥೇಚ್ಛ ವಾಗಿ ಧನದ ರಾಶಿಯನ್ನಿಟ್ಟು ಕವಿಗಳ ಮನೆಗೆ ಕಳುಹಿಸಿದನೆಂದು ವರ್ಣಿಸುವ ಬದಲು ಮೊದಲು ಆನೆಗಳ ಮೇಲೆ ಹಣದ ರಾಶಿ ಕವಿಗಳ ಮನೆಗಳಿಗೆ ಹೋಯಿತೆಂದು ಕಾರ್ಯ ವನ್ನು ಮೊದಲೇ ತಿಳಿಸಿ ಆಮೇಲೆ ರಾಜನ ಕೃಪೆ ಕವಿಗಳ ಮೇಲೆ ಉಂಟಾಯಿತೆಂದು ಕೊನೆಗೆ ಕಾರಣವನ್ನು ತಿಳಿಸಿದೆ. ಆದ್ದರಿಂದ ಇಲ್ಲಿ ಕಾರಣದ ಮತ್ತು ಕಾರ್ಯದ ಕ್ರಮ ವನ್ನು ವಿಪರೀತವಾಗಿ ತಿಳಿಸಿದೆ. ಈ ಮೂರು ಬಗೆಯ ಅತಿಶಯೋಕ್ತಿಗಳು ಬಹಳ ಬೇಗನೆ ಕೆಲಸವು ನಡೆಯುವುದನ್ನು ತಿಳಿಸಲಿಕ್ಕಾಗಿ ಹೊರಟಿವೆ.

## ೧೪. ತುಲ್ಯಯೋಗಿತಾಲಂಕಾರ

ವರ್ಣ್ಯಾನಾಮಿತರೇಷಾಂ ವಾ ಧರ್ಮೈಕ್ಯಂ ತುಲ್ಯಯೋಗಿತಾ ।
ಸಂಕುಚಂತಿ ಸರೋಜಾನಿ ಸ್ವೈರಿಣೀವದನಾನಿ ಚ ॥ ೪೩ ॥

ತ್ವದಂಗಮಾರ್ದವೇ ದೃಷ್ಟೇ ಕಸ್ಯ ಚಿತ್ತೇ ನ ಭಾಸತೇ ।
ಮಾಲತೀಶಶಭೃಲ್ಲೇಖಾಕದಲೀನಾಂ ಕಠೋರತಾ ॥ ೪೪ ॥

ಪ್ರಸ್ತುತಾನಾಂ ಅಪ್ರಸ್ತುತಾನಾಂ ವಾ ಗುಣಕ್ರಿಯಾರೂಪೈಕಧರ್ಮಾನ್ವಯ ಸ್ತುಲ್ಯಯೋಗಿತಾ ಸಂಕುಚಂತೀತಿ ಪ್ರಸ್ತುತತುಲ್ಯಯೋಗಿತಾಯಾ ಉದಾಹರಣಮ್. ತತ್ರ ಪ್ರಸ್ತುತಚಂದ್ರೋದಯಕಾರ್ಯತಯಾ ವರ್ಣನೀಯಾನಾಂ ಸರೋಜಾನಾಂ ಪ್ರಕಾಶಭೀರುಸ್ವೈರಿಣೀವದನಾನಾಂ ಚ ಸಂಕೋಚರೂಪೈಕ ಕ್ರಿಯಾನ್ವಯೋ ದರ್ಶಿತಃ. ಉತ್ತರಶ್ಲೋಕೇ ನಾಯಿಕಾಸೌಕುಮಾರ್ಯವರ್ಣನೇ ಪ್ರಸ್ತುತೇ ಅಪ್ರಸ್ತುತಾನಾಂ ಮಾಲತ್ಯಾದೀನಾಂ ಕಠೋರತಾ ರೂಪೈಕಗುಣಾನ್ವಯಃ. ಯಥಾ ವಾ—

ಸಂಜಾತಪತ್ರಪ್ರಕರಾನ್ವಿತಾನಿ ಸಮುದ್ವಹಂತಿ ಸ್ಫುಟಪಾಟಲತ್ವಮ್ ।
ವಿಕಸ್ವರಾಣ್ಯರ್ಕಕರಾಭಿಮರ್ಶಾದ್ದಿನಾನಿ ಪದ್ಮಾನಿ ಚ ವೃದ್ಧಿಮೀಯುಃ ॥
ನಾಗೇಂದ್ರಹಸ್ತಾಸ್ತ್ವಚಿ ಕರ್ಕಶತ್ವಾದೇಕಾಂತಶೈತ್ಯಾತ್ಕದಳೀವಿಶೇಷಾಃ ।
ಲಬ್ಧ್ವಾಪಿ ಲೋಕೇ ಪರಿಣಾಹಿ ರೂಪಂ ಜಾತಾಸ್ತದೂರ್ವೋರುಪಮಾನ ಬಾಹ್ಯಾಃ ॥

ಅತ್ರ ಗ್ರೀಷ್ಮವರ್ಣನೇ ತದೀಯತ್ವೇನ ಪ್ರಸ್ತುತಾನಾಂ ದಿನಾನಾಂ ಪದ್ಮಾನಾಂ ಚ ಏಕಕ್ರಿಯಾನ್ವಯಃ ಊರುವರ್ಣನೇ ಅಪ್ರಸ್ತುತಾನಾಂಕರಿಕರಾಣಾಂ ಕದಲೀವಿಶೇಷಾ ಣಾಂ ಚ ಏಕಗುಣಾನ್ವಯಃ.

ಪ್ರಕೃತಸಂದರ್ಭಕ್ಕೆ ಸಂಬಂಧಿಸಿದ ಅನೇಕ ವಿಷಯಗಳಿಗಾಗಲೀ ಅಥವಾ ಹಾಗೆ ಸಂಬಂಧಿಸದಿರುವ ಅನೇಕ ವಿಷಯಗಳಿಗಾಗಲೀ ಗುಣ ಅಥವಾ ಕ್ರಿಯೆ ಎನಿಸಿದ ಒಂದೇ ಧರ್ಮದಲ್ಲಿ ಅನ್ವಯವು ತೋರುವುದೇ ತುಲ್ಯಯೋಗಿತೆ ಎನಿಸುವುದು. "ಕಮಲಗಳೂ ವ್ಯಭಿಚಾರಿಣಿ ಸ್ತ್ರೀಯರ ಮುಖಗಳೂ ಸಂಕೋಚಗೊಳ್ಳುತ್ತವೆ. ನಿನ್ನ ಶರೀರದ ಮೃದು ಸ್ವಭಾವವನ್ನು ನೋಡಿದಮೇಲೆ ಮಾಲತೀಪುಷ್ಪ, ಚಂದ್ರನ ಕಲೆ, ಬಾಳೆಗಿಡ ಇವೆಲ್ಲವೂ ಒರಟೆಂಬುದು ಯಾರ ಮನಸ್ಸಿನಲ್ಲಿ ಹೊಳೆಯುವುದಿಲ್ಲ?" ಇಲ್ಲಿ ಮೊದಲನೆಯ ಉದಾಹರಣವು ಚಂದ್ರೋದಯವನ್ನು ವರ್ಣಿಸುವ ಸಂದರ್ಭದಲ್ಲಿ ಬಂದಿದೆ. ಆ ಕಾಲದಲ್ಲಿ ವರ್ಣಿಸಬೇಕಾದ ಅಂಶಗಳಿಗೆ ಧರ್ಮೈಕ್ಯವನ್ನು ತಿಳಿಸಿದೆ. ಆಗ ಕಮಲಗಳೂ ಮತ್ತು ಬೆಳಕಿನಲ್ಲಿ ಹೊರಗೆ ಸಂಚರಿಸಲು ಹೆದರುವ ಸ್ವೈರಿಣಿಸ್ತ್ರೀಯರ ಮುಖಗಳೂ ಸಂಕೋಚಗೊಳ್ಳುವುದು ಸ್ವಾಭಾವಿಕ. ಇವೆರಡೂ ಪ್ರಕೃತವಿಷಯಗಳೇ ಆಗಿವೆ.

ಇವುಗಳಲ್ಲಿ ಸಂಕೋಚವೆಂಬ ಕ್ರಿಯೆಯು ಸಮಾನವಾಗಿ ನೆಲಸಿದೆ. ಆದ್ದರಿಂದ ಇಲ್ಲಿ ಪ್ರಕೃತ ವಿಷಯಗಳೆರಡಕ್ಕೂ ಕ್ರಿಯಾರೂಪವಾದ ಧರ್ಮದ ಐಕ್ಯವನ್ನು ಕಾಣಬಹುದು. ಆದ್ದರಿಂದ ಇದು ಕೇವಲ ಪ್ರಕೃತ ವಿಷಯಗಳಿಗೆ ಅನ್ವಯಿಸುವ ತುಲ್ಯಯೋಗಿತೆ. ಮುಂದಿನ ಶ್ಲೋಕವು ನಾಯಿಕೆಯ ಸೌಕುಮಾರ್ಯವನ್ನು ವರ್ಣಿಸುವ ಸಂದರ್ಭದಲ್ಲಿ ಬಂದಿದೆ. ಅಲ್ಲಿ ಅಪ್ರಕೃತವಾದ ಮಾಲತೀಪುಷ್ಪ, ಚಂದ್ರಕಲೆ, ಬಾಳೆಗಿಡ ಇವು ಗಳೆಲ್ಲಕ್ಕೂ ಕಾಠಿಣ್ಯಗುಣವೆಂಬ ಧರ್ಮದಲ್ಲಿ ಅನ್ವಯವನ್ನು ತಿಳಿಸಲಾಗಿದೆ. ಆದ್ದರಿಂದ ಇದು ಕೇವಲ ಅಪ್ರಕೃತವಿಷಯಗಳಿಗೆ ಅನ್ವಯಿಸುವ ತುಲ್ಯಯೋಗಿತೆ. ಹೀಗೆ ಕೇವಲ ಪ್ರಕೃತವಸ್ತುಗಳಿಗಾಗಲೀ ಕೇವಲ ಅಪ್ರಕೃತವಸ್ತುಗಳಿಗಾಗಲೀ ಒಂದೇ ಧರ್ಮದಲ್ಲಿ ಅನ್ವಯವಾಗುವುದನ್ನು ಇಲ್ಲಿ ನಾವು ಕಾಣುತ್ತೇವೆ. ಇನ್ನು ಬೇರೆ ಉದಾಹರಣಗಳು ಹೀಗಿವೆ : "ಎಲೆಗಳೆಲ್ಲವೂ ಉದುರಿಹೋಗಿದ್ದುದರಿಂದ ಹೊಸ ಚಿಗುರುಗಳೊಡ ಗೂಡಿ, ವಿಕಸಿತವಾದ ಪಾಟಲವೃಕ್ಷಗಳನ್ನೊಳಗೊಂಡು. ಸೂರ್ಯನ ಕಿರಣಗಳ ಸಂಪರ್ಕ ದಿಂದ ವಿಕಾಸಗೊಂಡಿರುವ ದಿನಗಳೂ ಕಮಲಗಳೂ ವೃದ್ಧಿಯನ್ನು ಹೊಂದಿದವು." "ಮದಗಜಗಳ ಸೊಂಡಿಲುಗಳಿಗೂ ಮತ್ತು ಬಾಳೆಯ ಗಿಡಗಳಿಗೂ ವಿಶಾಲವಾ ಆಕಾರವಿದ್ದರೂ ಅವು ಚರ್ಮದಲ್ಲಿ ಒರಟಾಗಿದ್ದುದರಿಂದಲೂ, ಹೆಚ್ಚು ಶೀತವಾಗಿದ್ದು ದರಿಂದಲೂ ಪಾರ್ವತಿಯ ತೊಡೆಗಳಿಗೆ ಉಪಮಾನವೆನಿಸಲು ಅರ್ಹವಾಗಲಿಲ್ಲ." ಇಲ್ಲಿ ಮೊದಲನೆಯ ಶ್ಲೋಕವು ಗ್ರೀಷ್ಮಕಾಲದ ವರ್ಣನೆಗೆ ಸಂಬಂಧಿಸಿದ್ದರಿಂದ ಆ ಕಾಲಕ್ಕೆ ಅನ್ವಯಿಸುವಂತೆ ದಿನಗಳೂ ಕಮಲಗಳೂ ವೃದ್ಧಿಹೊಂದಿದವೆಂದು ಅಲ್ಲಿ ತಿಳಿಸಿ ಪ್ರಕೃತವಸ್ತುಗಳಿಗೆ ವೃದ್ಧಿಹೊಂದುವಿಕೆ ಎಂಬ ಒಂದೇ ಕ್ರಿಯೆಯಲ್ಲಿ ಅನ್ವಯವನ್ನು ಅಲ್ಲಿ ತಿಳಿಸಿದೆ. ಎರಡನೆಯ ಶ್ಲೋಕವು ಪಾರ್ವತಿಯ ತೊಡೆಯ ವರ್ಣನೆಗೆ ಸಂಬಂ ಸಿದ್ದರಿಂದ ಅಲ್ಲಿ ಅಪ್ರಕೃತವಾದ ಆನೆಯ ಸೊಂಡಲು ಮತ್ತು ಬಾಳೆಯಗಿಡ ಇವೆರಡೂ ಪಾರ್ವತಿಯ ತೊಡೆಗಳಿಗೆ ಉಪಮಾನವಾಗಲು ಅನರ್ಹವೆನಿಸಿದವು ಎಂಬುದನ್ನು ತಿಳಿಸಿದೆ. ಉಪಮಾನವಾಗದಿರುವಿಕೆ ಎಂಬ ಒಂದೇ ಗುಣದಲ್ಲಿ ಅವೆರಡಕ್ಕೂ ಅನ್ವಯ ವನ್ನು ಇಲ್ಲಿ ಹೇಳಿದೆ. ಆದ್ದರಿಂದ ಇದು ಕೇವಲ ಅಪ್ರಕೃತವಿಷಯಗಳಿಗೆ ಸಂಬಂಧಿಸಿ ತುಲ್ಯಯೋಗಿತೆಯ ಉದಾಹರಣವೆನಿಸಿದೆ.

ಹಿತಾಹಿತೇ ವೃತ್ತಿತೌಲ್ಯಮಪರಾ ತುಲ್ಯಯೋಗಿತಾ ।
ಪ್ರದೀಯತೇ ಪರಾಭೂತಿರ್ಮಿತ್ರಶಾತ್ರವಯೋಸ್ತ್ವಯಾ ॥ ೪೫ ॥

ಅತ್ರ ಹಿತಾಹಿತಯೋಃ ಮಿತ್ರಶಾತ್ರವಯೋಃ ಉತ್ಕೃಷ್ಟಭೂತಿದಾನಸ್ಯ ಪರಾಭವ ನಸ್ಯ ಚ ಶ್ಲೇಷೇಣ ಅಭೇದಾಧ್ಯವಸಾಯಾತ್ ವೃತ್ತಿತೌಲ್ಯಮ್.

ಯಥಾ ವಾ—ಯಶ್ಚ ನಿಂಬಂ ಪರಶುನಾ ಯಶ್ಚೈನಂ ಮಧುಸರ್ಪಿಷಾ ।
ಯಶ್ಚೈನಂ ಗಂಧಮಾಲ್ಯಾದ್ಯೈಃ ಸರ್ವಸ್ಯ ಕಟುರೇವ ಸಃ ॥

ಅತ್ರ ವೃಶ್ಚತಿ ಸಿಂಚತ್ಯರ್ಚತಿ ಇತ್ಯಾಧ್ಯಾಹಾರೇಣ ವಾಕ್ಯಾನಿ ಪೂರಣೀಯಾನಿ ಪೂರ್ವೋದಾಹರಣಂ ಸ್ತುತಿಪರ್ಯವಸಾಯಿ. ಇದಂ ತು ನಿಂದಾಪರ್ಯವಸಾಯೀತಿ ಭೇದಃ, ಇಯಂ ಸರಸ್ವತೀಕಂಠಾಭರಣೋಕ್ತಾತುಲ್ಯಯೋಗಿತಾ—

ಗುಣೋತ್ಕೃಷ್ಟೈಃ ಸಮೀಕೃತ್ಯ ವಚೋಽನ್ಯಾ ತುಲ್ಯಯೋಗಿತಾ ।
ಲೋಕಪಾಲೋ ಯಮಃ ಪಾಶೀ ಶ್ರೀದಃ ಶಕ್ರೋ ಭವಾನಪಿ ॥ ೪೬ ॥

ಅತ್ರ ವರ್ಣನೀಯೋ ರಾಜಾ ಶಕ್ರಾದಿಭಿರ್ಲೋಕಪಾಲತ್ವೇನ ಸಮೀಕೃತಃ. ಯಥಾ ವಾ-ಸಂಗತಾನಿ ಮೃಗಾಕ್ಷೀಣಾಂ ತಡಿದ್ವಿಲಸಿತಾನ್ಯಪಿ ।
ಕ್ಷಣದ್ವಯಂ ನ ತಿಷ್ಠಂತಿ ಘನಾರಬ್ಧಾನ್ಯಪಿ ಸ್ವಯಮ್ ॥

ಪೂರ್ವತ್ರ ಸ್ತುತಿರಿಹ ತು ನಿಂದಾ ಇಯಂ ಕಾವ್ಯಾದರ್ಶೇ ದರ್ಶಿತಾ. ಇಮಾಂ ತುಲ್ಯಯೋಗಿತಾಂ ಸಿದ್ಧಿರಿತಿ ಕೇಚಿದ್ವ್ಯಾಜಹ್ರುಃ.

ಯದಾಹ ಜಯದೇವಃ—

ಸಿದ್ಧಿಃ ಖ್ಯಾತೇಷು ಚೇನ್ನಾಮ ಕೀರ್ತ್ಯತೇ ತುಲ್ಯತೋಕ್ತಯೇ ।
ಯುವಾಮೇವೇಹ ವಿಖ್ಯಾತೌ ತ್ವಂ ಬಲೈರ್ಜಲಧಿರ್ಜಲೈಃ ॥

ಇತಿ ಮಹಾಂತರೇಷ್ವತ್ರ ವಕ್ಷ್ಯಮಾಣಂ ದೀಪಕಮೇವ.

ಹಿತವೆನಿಸಿದ ವಸ್ತುಗಳಿಗೂ ಅಹಿತವೆನಿಸಿದ ವಸ್ತುಗಳಿಗೂ ವರ್ತನೆಯಲ್ಲಿ ಸಾಮ್ಯವು ತೋರಿದರೆ ಅದೂ ಒಂದು ಬಗೆಯ ತುಲ್ಯಯೋಗಿತೆ ಎನಿಸುವುದು. ಎರಡು ಬಗೆಯ ವಸ್ತುಗಳಿಗೂ ಒಂದೇ ಬಗೆಯ ವರ್ತನೆಯೇ ಈ ಬಗೆಯ ಸಾಮ್ಯವೆನಿಸುತ್ತದೆ. "ಮಹಾರಾಜನೇ, ನೀನು ಮಿತ್ರರಿಗೂ, ಶತ್ರುಗಳಿಗೂ ಪರಾಭೂತಿಯನ್ನು ಸಮಾನವಾಗಿ ನೀಡುತ್ತಿರುವೆ'' ಇಲ್ಲಿ ಮಿತ್ರರಿಗೆ ಪರಾಭೂತಿ ಎಂದರೆ ಉತ್ಕೃಷ್ಟವಾದ ಐಶ್ವರ್ಯವನ್ನು ಕೊಡುತ್ತಿರುವೆ ಎಂದರ್ಥ. ಹಾಗೆಯೇ ಶತ್ರುಗಳಿಗೆ ಪರಾಭೂತಿ ಎಂದರೆ ಪರಾಭವ (ಅವಮಾನ) ವನ್ನು ಕೊಡುತ್ತಿರುವೆ ಎಂದರ್ಥ. ಪರಾಭೂತಿ ಎಂಬಲ್ಲಿ ಶಬ್ದಶ್ಲೇಷದಿಂದ ತೋರುವ ಎರಡು ಅರ್ಥಗಳನ್ನು ಒಂದೇ ಎಂದು ಭಾವಿಸಿ ಇಬ್ಬರಿಗೂ ಸಮಾನವಾಗಿ ಪರಾಭೂತಿಯನ್ನು ನೀಡುತ್ತಿರುವೆ ಎಂದು ಹೇಳಿದ್ದರಿಂದ ಪರಾಭೂತಿಯನ್ನು ನೀಡುವುದೆಂಬ ಕ್ರಿಯೆ ಇಬ್ಬರಲ್ಲೂ ಏಕರೀತಿಯಲ್ಲಿ ಅನ್ವಯಿಸುತ್ತದೆ. ಈ ಬಗೆಯ ವೃತ್ತಿಸ್ವಾಮ್ಯವೂ ಒಂದು ಬಗೆಯ ತುಲ್ಯಯೋಗಿತೆಯೇ, ಹಾಗೆಯೇ "ಯಾವನು ಬೇವಿನ ಗಿಡವನ್ನು ಕೊಡಲಿಯಿಂದ ಕಡಿಯುವನೋ, ಯಾವನು ತುಪ್ಪ ಮತ್ತು ಜೇನುತುಪ್ಪಗಳಿಂದ ನೆನೆಸುವನೋ ಮತ್ತು ಯಾವನು ಗಂಧಪುಷ್ಪಗಳಿಂದ ಅದನ್ನು ಅರ್ಪಿಸುವನೋ ಅವರೆಲ್ಲರಿಗೂ ಅದು ಕಹಿಯಾಗಿಯೇ ಇರುವುದು." ಇಲ್ಲಿ ಕಡಿಯುವವನು. ನೆನೆಸುವನು, ಪೂಜಿಸುವನು ಈ ಪದಗಳನ್ನು ಸೇರಿಸಿಕೊಂಡು ವಾಕ್ಯಗಳನ್ನು ಓದಬೇಕು, ಬೇವನ್ನು ಕಡಿಯುವವನು, ನೆನೆಸುವವನು, ಪೂಜಿಸುವವನು

ಇವರೆಲ್ಲರೂ ಅಪ್ರಕೃತರೇ ಆಗಿದ್ದು ಇವರೆಲ್ಲರಿಗೂ ಬೇವಿಸಗಿಡವು ಕಹಿಯಾಗಿಯೇ ಇರು ವುದರಿಂದ ಕಟುತ್ವವೆಂಬ ಪರ್ತನೆಯು ಇವರೆಲ್ಲರಿಗೂ ಸಮಾನವಾಗಿ ಅನ್ವಯಿಸುತ್ತದೆ. ಹಿಂದಿನ ಉದಾಹರಣವು ಸ್ತೋತ್ರದಲ್ಲಿ ಕೊನೆಗೊಂಡರೆ ಇದು ನಿಂದೆಯಲ್ಲಿ ಕೊನೆಗಾಣು ವುದು. ಸರಸ್ವತೀಕಂಠಾಭರಣದಲ್ಲಿ ಇದೇ ತುಲ್ಯಯೋಗಿತೆಯನ್ನು ತಿಳಿಸಿ ಉದಾ ಹರಿಸಿದೆ.

ಪ್ರಕೃತವಸ್ತುವನ್ನು ಅದಕ್ಕಿಂತ ಹೆಚ್ಚಿನ ಗುಣವುಳ್ಳ ವಸ್ತುಗಳೊಡನೆ ಸಮಾ ವೆಂದು ತಿಳಿಸುವುದೇ ಮೂರನೇ ಬಗೆಯ ತುಲ್ಯಯೋಗಿತೆ ಎನಿಸುವುದು. "ಮಹಾರಾ ಜನೇ, ಯಮ, ವರುಣ, ಕುಬೇರ, ಇಂದ್ರ ಇವರೊಡನೆ ನೀನೂ ಸಹ ಲೋಕಪಾ ನೆನಿಸಿರುವೆ" ಇಲ್ಲಿ ಪ್ರಕೃತ ಸಂದರ್ಭದಲ್ಲಿ ವರ್ಣಿಸಬೇಕಾದ ರಾಜನನ್ನು ಗುಣದ ಉತ್ಕೃಷ್ಟರೆನಿಸಿದ ಇಂದ್ರ ಮೊದಲಾದವರೊಡನೆ ಲೋಕಪಾಲನೆನಿಸಲು ಅರ್ಹನಿರು ನೆಂದು ತಿಳಿಸಲಾಗಿದೆ. ಇಂದ್ರ ಮೊದಲಾದವರಲ್ಲಿ ಲೋಕಪಾಲಶಬ್ದವು ರೂಢವಾ ಗಿದ್ದರೂ ರಾಜನಲ್ಲಿ "ಲೋಕಂ ಪಾಲಯತಿ" ಎಂಬ ಯೋಗಾರ್ಥವನ್ನು ಇಟ್ಟುಕೊಂಡ ಲೋಕಪಾಲಶಬ್ದವನ್ನು ಪ್ರಯೋಗಿಸಲಾಗಿದೆ. ಹಾಗೆಯೇ "ಪ್ರಿಯರ ಸಮಾಗಮ ಗಳು ಮತ್ತು ಮಿಂಚಿನ ಹೊಳಪುಗಳು ಗಂಭೀರವಾಗಿಯೂ ಮೇಘಗಳಿಂದಲೂ ಆರು ವಾಗಿದ್ದರೂ ಎರಡು ಕ್ಷಣಗಳ ಮೇಲೆ ಇರುವುದಿಲ್ಲ'' ಇಲ್ಲಿ ವರ್ಣಿಸಬೇಕಾದ ಪ್ರಿ ಸಮಾಗಮವನ್ನು ಮಿಂಚಿನ ಹೊಳಪಿಗೆ ಹೋಲಿಸಿದೆ. ಇದರಿಂದ ಇವೆರಡನ್ನೂ ಸಮವೆಂದು ಭಾವಿಸಲಾಗಿದೆ. ಪ್ರಿಸಮಾಗಮವನ್ನು ಎರಡು ಕ್ಷಣಗಳ ಮೇಲೆ ಇ ವಂತದಲ್ಲವೆಂಬ ಗುಣದಲ್ಲಿ ಉತ್ಕೃಷ್ಟವೆನಿಸಿದ ಮಿಂಚಿನ ಹೊಳಪಿಗೆ ಸಮವೆಂದು ಇ ತಿಳಿಸಿರುವುದರಿಂದ ಇದು ತುಲ್ಯಯೋಗಿತೆ ಎನಿಸಿದೆ. ಹಿಂದಿನ ಉದಾಹರಣದ ಸ್ತುತಿಯೂ, ಇಲ್ಲಿ ನಿಂದೆಯೂ ತೋರುತ್ತವೆ. ಇದನ್ನು ಕಾವ್ಯಾದರ್ಶದಲ್ಲಿಯು ತುಲ್ಯಯೋಗಿತೆಗೆ ಉದಾಹರಿಸಲಾಗಿದೆ. ಈ ಬಗೆಯ ತುಲ್ಯಯೋಗಿತೆಯನ್ನು ಸಿ ಎಂಬ ಹೆಸರಿನಿಂದ ಕೆಲವರು ಕರೆಯುತ್ತಾರೆ. ಜಯದೇವನು ಈ ಬಗ್ಗೆ ಹೀ ಹೇಳಿದ್ದಾನೆ : ''ಗುಣದಲ್ಲಿ ಪ್ರಸಿದ್ಧವೆನಿಸಿದ ವಸ್ತುಗಳೊಡನೆ ಅಪ್ರಸಿದ್ಧವ ವಸ್ತುವನ್ನು ಸಮಾನವೆಂದು ಭಾವಿಸಲಿಕ್ಕಾಗಿ ಅವುಗಳ ಜೊತೆಯಲ್ಲಿ ಇದರ ಹೆಸರನ್ನು ಸೇರಿಸುವುದೇ ಸಿದ್ಧಿ ಎನಿಸುವುದು. ನೀನು ಸೈನ್ಯದಿಂದಲೂ, ಸಮುದ್ರವು ನೀ ನಿಂದಲೂ ಹೀಗೆ ನೀವಿಬ್ಬರೇ ಇಲ್ಲಿ ಪ್ರಸಿದ್ಧರೆನಿಸಿರುವಿರಿ''. ಸಮುದ್ರವು ನ ನೀರ ತುಂಬಿದ್ದಾಗಿ ಲೋಕದಲ್ಲಿ ಪ್ರಸಿದ್ಧವಾಗಿದೆ. ರಾಜನು ಅಪ್ರಸಿದ್ಧನು. ಆದರ ಇವನು ಸಮುದ್ರದಂತೆ ಸೈನ್ಯದಿಂದ ತುಂಬಿಕೊಂಡು ವ್ಯಾಪಕನಾಗಿರುವನೆಂದು ಸಮು ದ್ರದ ಜೊತೆಯಲ್ಲಿ ಇವನ ಹೆಸರನ್ನು ಸೇರಿಸಲಾಗಿದೆ. ಹೀಗೆ ಜಯದೇವನು ಸಿದ್ಧಿ ಎಂಬ ಅಲಂಕಾರವನ್ನು ಹೇಳಿದ್ದರೂ ಬೇರೆ ಮಾತುಗಳಲ್ಲಿ ಇದನ್ನು ದೀಪಕ ಉದಾಹರಣವೆಂದು ಭಾವಿಸಲಾಗಿದೆ.

## ೧೫. ದೀಪಕಾಲಂಕಾರ

ವದಂತಿ ವರ್ಣ್ಯಾವರ್ಣ್ಯಾನಾಂ ಧರ್ಮೈಕ್ಯಂ ದೀಪಕಂ ಬುಧಾಃ ।
ಮದೇನ ಭಾತಿ ಕಲಭಃ ಪ್ರತಾಪೇನ ಮಹೀಪತಿಃ ॥ ೪೭ ॥

ಪ್ರಸ್ತುತಾನಾಂ ಅಪ್ರಸ್ತುತಾನಾಂ ಏಕಧರ್ಮಾನ್ವಯೋ ದೀಪಕಮ್. ಯಥಾಕಲಭ ಮಹೀಪಾಲಯೋಃ ಪ್ರಸ್ತುತಾಪ್ರಸ್ತುತಯೋಃ ಭಾನಕ್ರಿಯಾನ್ವಯಃ ಯಥಾ ವಾ—

ಮಣಿಃ ಶಾಣೋಲ್ಲೀಢಃ ಸಮರವಿಜಯೀ ಹೇತಿದಲಿತೋ
ಮದಕ್ಷೀಣೋ ನಾಗಃ ಶರದಿ ಸರಿತಃ ಶ್ಯಾನಪುಲಿನಾಃ ।
ಕಲಾಶೇಷಶ್ಚಂದ್ರಃ ಸುರತಮೃದಿತಾ ಬಾಲವನಿತಾ
ತನಿಮ್ನಾ ಶೋಭಂತೇ ಗಲಿತವಿಭವಾಶ್ಚಾರ್ಥಿಷು ನೃಪಾಃ ॥

ಅತ್ರ ಪ್ರಸ್ತುತಾನಾಂ ನೃಪಾಣಾಂ ಅಪ್ರಸ್ತುತಾನಾಂ ಮಣ್ಯಾದೀನಾಂ ಚ ಶೋಭೈಕಧರ್ಮಾನ್ವಯಃ, ಪ್ರಸ್ತುತೈಕನಿಷ್ಠಃ ಸಮಾನೋ ಧರ್ಮಃ ಪ್ರಸಂಗಾದನ್ಯತ್ರೋಪಕರೋತಿ ಪ್ರಾಸಾದಾರ್ಥಮಾರೋಪಿತೋ ದೀಪ ಇವ ರಥ್ಯಾಯಾಮಿತಿ ದೀಪಸಾಮ್ಯಾದ್ದೀಪಕಮ್. "ಸಂಜ್ಞಾಯಾಂ ಚ" ಇತಿ ಇವಾರ್ಥೇ ಕನ್‌ಪ್ರತ್ಯಯಃ. ಯದ್ಯಪಿ—

ಸುವರ್ಣಪುಷ್ಪಾಂ ಪೃಥಿವೀಂ ಚಿನ್ವಂತಿ ಪುರುಷಾಸ್ತ್ರಯಃ ।
ಶೂರಶ್ಚ ಕೃತವಿದ್ಯಶ್ಚ ಯಶ್ಚ ಜಾನಾತಿ ಸೇವಿತುಮ್ ॥

ಇತ್ಯತ್ರ ಪ್ರಸ್ತುತಾನಾಂ ಅಪ್ರಸ್ತುತಾನಾಂ ಯುಗಪದ್ಧರ್ಮಾನ್ವಯಃ. ತಥಾಪಿ ಪ್ರಾಸಂಗಿಕತ್ವಂ ನ ಹೀಯತೇ. ವಸ್ತುಗತ್ಯಾ ಪ್ರಸ್ತುತೋದ್ದೇಶೇನ ಪ್ರಸ್ತುತಸ್ಯೈವ ವರ್ಣನಸ್ಯ ಅಪ್ರಸ್ತುತೇಽನ್ವಯಾತ್. ನ ಹಿ ದೀಪಸ್ಯ ರಥ್ಯಾಪ್ರಾಸಾದಯೋಃ ಯುಗಪದುಪಕಾರಕತ್ವೇನ ಜಾಮಾತ್ರರ್ಥಂ ಶ್ರಪಿತಸ್ಯ ಸೂಪಸ್ಯ ಅತಿಥಿಭ್ಯಃ ಪ್ರಥಮಪರಿವೇಷಣೇನ ಚ ಪ್ರಾಸಂಗಿಕತ್ವಂ ಹೀಯತೇ ತುಲ್ಯಯೋಗಿತಾಯಾಂ ತ್ವೇಕಂ ಪ್ರಸ್ತುತಂ ಅನ್ಯದಪ್ರಸ್ತುತಮಿತಿ ವಿಶೇಷಾಗ್ರಹಣಾತ್ ಸರ್ವೋದ್ದೇಶೇನೈವ ಧರ್ಮಾನ್ವಯ ಇತಿ ವಿಶೇಷಃ. ಅಯಂ ಚ ಅನಯೋರಪರೋ ವಿಶೇಷಃ. ಉಭಯೋರನಯೋರುಪಮಾಲಂಕಾರಸ್ಯ ಗಮ್ಯತ್ವಾವಿಶೇಷೇಽಪಿ ಅತ್ರಾಪ್ರಸ್ತುತಮುಪಮಾನಂ ಪ್ರಸ್ತುತಮುಪಮೇಯಮಿತಿ ವ್ಯವಸ್ಥಿತ ಉಪಮಾನೋಪಮೇಯಭಾವಃ ತತ್ರ ತು ವಿಶೇಷಾಗ್ರಹಣಾದ್ವೈಚ್ಛಿಕಃ ಸ ಇತಿ.

ಒಂದು ಪ್ರಕೃತವಾದ ಅಂಶಕ್ಕೂ ಮತ್ತೊಂದು ಅಪ್ರಕೃತವಾದ ಅಂಶಕ್ಕೂ ಗುಣವೋ ಕ್ರಿಯೆಯೋ ಎನಿಸಿದ ಒಂದೇ ಧರ್ಮದಲ್ಲಿ ಅನ್ವಯುವು ಬರುವುದೇ ದೀಪ

ವೆನಿಸುತ್ತದೆ. "ಮದೋದಕದಿಂದ ಆನೆಯೂ, ತೇಜಸ್ಸಿನಿಂದ ಮಹಾರಾಜನೂ ಪ್ರಕಾಶಿಸುತ್ತಾರೆ." ಇಲ್ಲಿ ಪ್ರಕೃತ ವಿಷಯವೆನಿಸಿದ ಮಹಾರಾಜನಿಗೂ ಅಪ್ರಕೃತವಾದ ಆನೆಗೂ ಪ್ರಕಾಶರೂಪವಾದ ಕ್ರಿಯೆಯಲ್ಲಿ ಅನ್ವಯವಾಗಿದೆ.

"ಒರೆಗಲ್ಲಿನ ಮೇಲೆ ಉಜ್ಜಿದ ಮಣಿಯೂ, ಆಯುಧಗಳಿಂದ ಗಾಯಗೊಂಡು ಯುದ್ಧದಲ್ಲಿ ಜಯಿಸಿದ ಯೋಧನೂ, ಮದೋದಕವನ್ನು ಸುರಿಸುತ್ತಿರುವ ಆನೆಯೂ, ಶರತ್ಕಾಲದಲ್ಲಿ ಒಣಗಿದ ಮರಳಿರುವ ನದಿಗಳೂ, ಒಂದೇ ಕಲೆಯಲ್ಲಿ ಉಳಿದಿರುವ ಚಂದ್ರನೂ, ಸಂಭೋಗದಿಂದ ಕೃಶಳಾದ ಯುವತಿಯೂ, ಯಾಚಕರಿಗೆ ಸಂಪತ್ತನ್ನು ಕೊಟ್ಟು ದರಿದ್ರರಾಗಿರುವ ರಾಜರೂ ಕೃಶರಾಗಿಯೇ ಶೋಭಿಸುತ್ತಾರೆ". ಇಲ್ಲಿ ಪ್ರಕೃತವಿಷಯವೆನಿಸಿದ ರಾಜರಿಗೂ ಅಪ್ರಕೃತರೆನಿಸಿದ ಮಣಿ, ಯೋಧ, ಆನೆ ಮೊದಲಾದವುಗಳಿಗೂ ಶೋಭಿಸುವಿಕೆ ಎಂಬ ಒಂದೇ ಧರ್ಮದಲ್ಲಿ ಅನ್ವಯವು ಬಂದಿದೆ. ಪ್ರಕೃತವಸ್ತುವಿನಲ್ಲಿಯೇ ಇರುವ ಧರ್ಮವು ಅಪ್ರಕೃತವಸ್ತುಗಳಲ್ಲಿಯೂ ಪ್ರಾಸಂಗಿಕವಾಗಿ ಅನ್ವಯಿಸಬಹುದು. ಉಪ್ಪರಿಗೆಯಲ್ಲಿ ಬೆಳಕಿಗಾಗಿ ಹಚ್ಚಿರುವ ದೀಪವು ರಸ್ತೆಯಲ್ಲಿಯೂ ಪ್ರಯಾಣಕ್ಕೆ ಸೌಕರ್ಯವನ್ನು ದೊರಕಿಸುತ್ತದೆ. ಅದು ಬೆಳಕನ್ನು ಕೊಡುತ್ತಲೇ ಅದು ಹೊರಗೆ ಬೀದಿಯಲ್ಲಿ ತಿರುಗಾಡುವವರಿಗೂ ಅನುಕೂಲವೇ ಆಗಿರುತ್ತದೆ. ಹಾಗೆ ಪ್ರಕೃತವಸ್ತುವಿನಲ್ಲಿರುವ ಧರ್ಮವು ಅಪ್ರಕೃತವಸ್ತುಗಳಿಗೂ ಅನ್ವಯಿಸುವುದರಿಂದ ಈ ಬಗೆಯ ಧರ್ಮಾನ್ವಯದಲ್ಲೂ ಒಂದು ಬಗೆಯ ಚಮತ್ಕಾರವಿದ್ದು ಅದೇ ದೀಪಕಾಲಂಕಾರವೆನಿಸುತ್ತದೆ. "ಸಂಜ್ಞಾಯಾಂ ಚ" ಎಂಬ ಸೂತ್ರದಿಂದ "ದೀಪ ಇವ ದೀಪಕಂ" ಎಂದು ದೀಪ ಶಬ್ದದ ಮೇಲೆ ಇವ ಎಂಬುದರ ಅರ್ಥವೆನಿಸಿದ ಸಾದೃಶ್ಯವನ್ನು ತಿಳಿಸಲು ಕನ್‌ಪ್ರತ್ಯಯವು ಬಂದಿದೆ.

"ಶೂರ, ವಿದ್ಯಾವಂತ, ಸೇವಾಕ್ರಮವನ್ನರಿತವ ಈ ಮೂವರೂ ಭೂಮಿಯಲ್ಲಿ ಸುವರ್ಣಮಯವಾದ ಪುಷ್ಪಗಳನ್ನು ಬೆಳೆಸುತ್ತಾರೆ." ಇಲ್ಲಿ ಭೂಮಿಯು ಚಿನ್ನವನ್ನು ಸುರಿಸುವಂತೆ ಮಾಡುವುದೇ ಸಮಾನಧರ್ಮವೆನಿಸಿದೆ. ಇದು ಈ ಮೂವರಲ್ಲಿ ಸಮನಾಗಿ ಅಂದರೆ ಏಕಕಾಲದಲ್ಲಿ ಅನ್ವಯಿಸುತ್ತದೆ. ಈ ಮೂವರಲ್ಲಿ ಸೇವಾಕ್ರಮವನ್ನರಿತವನು ಪ್ರಕೃತವೆನಿಸುವನು. ಶೂರ, ವಿದ್ಯಾವಂತ ಇವರಿಬ್ಬರೂ ಅಪ್ರಕೃತರೆನಿಸುವರು. ಆದರೆ ಮೂವರಲ್ಲಿಯೂ ಧರ್ಮವು ಒಂದೇ ಕಾಲದಲ್ಲಿ ಅನ್ವಯಿಸುತ್ತದೆ. ಆದರೂ ಸೇವಾಕ್ರಮವನ್ನರಿತವನು ಪ್ರಕೃತಸಂದರ್ಭಕ್ಕೆ ಸಂಬಂಧಿಸಿದವನೆಂಬುದು ತಪ್ಪುವಂತಿಲ್ಲ. ಪ್ರಕೃತವಸ್ತುವಿಗೆ ಅಪ್ರಕೃತವಸ್ತುವಿನೊಡನೆಯೇ ಒಂದೇ ಧರ್ಮದಲ್ಲಿ ಅನ್ವಯವು ಬಂದರೂ ಪ್ರಕೃತವಸ್ತುವು ಪ್ರಧಾನವಾಗಿಯೇ ಇರುವುದು. ಅಪ್ರಕೃತವಸ್ತುಗಳು ಪ್ರಾಸಂಗಿಕ (ಆಕಸ್ಮಿಕ) ವಾಗಿ ಬಂದವೆಂಬುದು ಅವಕ್ಕೆ ತಪ್ಪುವಂತಿಲ್ಲ. ಪ್ರಕೃತವಸ್ತುವಿನಂತೆ ಅಪ್ರಕೃತವಸ್ತುವಿಗೂ ಧರ್ಮದಲ್ಲಿ ಅನ್ವಯವು ಬಂದಮಾತ್ರದಿಂದಲೇ ಪ್ರಕೃತವಸ್ತುವಿಗೆ ಪ್ರಾಧಾನ್ಯವಿದ್ದೇ ಇರುವುದು, ವಾಸ್ತ

ವಾಗಿ ಪ್ರಕೃತಸಂದರ್ಭವನ್ನು ಉದ್ದೇಶಿಸಿ ಮಾಡುವ ಪ್ರಕೃತವಸ್ತುವಿನ ವರ್ಣನವೇ ಅಪ್ರಕೃತವಸ್ತುವಿನ ವರ್ಣನದಲ್ಲೂ ಅನ್ವಯಿಸುತ್ತದೆ ಉಪ್ಪರಿಗೆಯಲ್ಲಿ ಹಚ್ಚಿದ ದೀಪವು ರಸ್ತೆಗೂ ಉಪ್ಪರಿಗೆಗೂ ಏಕಕಾಲದಲ್ಲಿ ಅನುಕೂಲವಾಗುವಂತೆ ಅಳಿಯನಿಗೋಸ್ಕರ ಮಾಡಿದ ತೊವ್ವೆಯನ್ನು ಆಕಸ್ಮಿಕವಾಗಿ ಬರುವ ಅತಿಥಿಗಳಿಗೆ ಮೊದಲು ಬಡಿಸಿದ್ದರಿಂದಲೇ ಅಳಿಯನಿಗೋಸ್ಕರ ಮಾಡಿದ್ದೆಂಬುದು ಎಂದಿಗೂ ತಪ್ಪುವಂತಿಲ್ಲ. ಮೊದಲು ಯಾವುದಕ್ಕೆ ಅನ್ವಯವು ಬಂದರೂ ಪ್ರಕೃತ ಉದ್ದೇಶವನ್ನು ನೋಡಿಕೊಂಡು ಇದು ಪ್ರಕೃತ, ಇದು ಅಪ್ರಕೃತವೆಂದು ನಿಷ್ಕರ್ಷಿಸಬೇಕು. ಗುಣಕ್ರಿಯಾರೂಪವಾದ ಧರ್ಮದಲ್ಲಿ ಯಾವುದಕ್ಕೆ ಮೊದಲು ಅನ್ವಯ ಬಂದಿದೆ ಯಾವುದಕ್ಕೆ ಆಮೇಲೆ ಅನ್ವಯವಾಗಿದೆ ಎಂಬುದನ್ನು ನೋಡಿಕೊಂಡು ಇದು ಪ್ರಕೃತ, ಇದು ಅಪ್ರಕೃತ ಎಂಬುದನ್ನು ನಿಷ್ಕರ್ಷಿಸಬಾರದು. ಆದ್ದರಿಂದ ಪ್ರಕೃತಧರ್ಮವು ಅಪ್ರಕೃತವಸ್ತುವಿನಲ್ಲಿ ಅನ್ವಯಿಸಿದ್ದರಿಂದಲೇ ಪ್ರಕೃತವಸ್ತುವಿಗೆ ಪ್ರಾಧಾನ್ಯವು ತಪ್ಪುವಂತಿಲ್ಲ; ಹೀಗೆ ಪ್ರಕೃತವಸ್ತುವಿಗೂ ಅಪ್ರಕೃತವಸ್ತುವಿಗೂ ಏಕಧರ್ಮಾನ್ವಯ ಬರುವುದರಲ್ಲಿ ಅಡ್ಡಿ ಇಲ್ಲ. ಆದ್ದರಿಂದಲೇ ತುಲ್ಯಯೋಗಿತೆಗಿಂತ ದೀಪಕವು ಬೇರೆ ಎನಿಸಿದೆ. ಅಲ್ಲಿಯಾದರೋ ಒಂದು ಪ್ರಕೃತವೂ ಮತ್ತೊಂದು ಅಪ್ರಕೃತವೂ ಆಗಿರುವುವೆಂಬ ವಿಶೇಷವು ತಿಳಿಯದೆ ಇರುವುದರಿಂದ ಎಲ್ಲವೂ ಪ್ರಕೃತವೋ ಅಥವಾ ಎಲ್ಲವೂ ಅಪ್ರಕೃತವೋ ಆಗಿರುತ್ತವೆ. ಪ್ರಕೃತವಸ್ತುಗಳಿಗಾದರೂ ಏಕಧರ್ಮಾನ್ವಯವು ಬರಬಹುದು ಅಥವಾ ಅಪ್ರಕೃತವಸ್ತುಗಳಿಗಾದರೂ ಏಕಧರ್ಮಾನ್ವಯವು ಬರಬಹುದು. ದೀಪಕದಲ್ಲಿ ಒಂದು ಪ್ರಕೃತವಸ್ತುವಿಗೂ ಮತ್ತೊಂದು ಅಪ್ರಕೃತವಸ್ತುವಿಗೂ ಏಕಧರ್ಮದಲ್ಲಿ ಅನ್ವಯವು ಬರುವುದು. ಹೀಗೆ ಇವೆರಡಕ್ಕೂ ಸಹಜವಾದ ವೈಲಕ್ಷಣ್ಯವಿದೆ. ಆದ್ದರಿಂದಲೇ ಇವೆರಡೂ ಬೇರೆ ಬೇರೆಯಾಗಿ ಶೋಭಿಸುತ್ತಲಿವೆ. ಇದಿಷ್ಟೇ ಅಲ್ಲದೆ ಇವೆರಡು ಅಲಂಕಾರಗಳಿಗೂ ಬೇರೊಂದು ವಿಶೇಷವೂ ಇದೆ. ಇವೆರಡರಲ್ಲೂ ಉಪಮಾಲಂಕಾರವು ವ್ಯಂಗ್ಯವಾಗಿ ನೆಲಸಿರುವುದೆಂಬುದು ಸಮಾನವೆನಿಸಿದ್ದರೂ ದೀಪಕದಲ್ಲಿ ಉಪಮಾನವು ಅಪ್ರಕೃತವೂ. ಉಪಮೇಯವು ಪ್ರಕೃತವೂ ಆಗಿರುವುದರಿಂದ ಉಪಮಾನೋಪಮೇಯಭಾವವು ವ್ಯವಸ್ಥಿತವೆನಿಸಿದೆ. ತುಲ್ಯಯೋಗಿತೆಯಲ್ಲಾದರೋ ಪ್ರಕೃತ ಮತ್ತು ಅಪ್ರಕೃತ ವಸ್ತುಗಳಲ್ಲಿ ಯಾವುದು ಉಪಮಾನ, ಯಾವುದು ಉಪಮೇಯ ಎಂಬ ವಿಶೇಷವೇ ತಿಳಿಯದಿರುವುದರಿಂದ ಉಪಮಾನೋಪಮೇಯಭಾವವು ವ್ಯವಸ್ಥಿತವಾಗಿಲ್ಲ. ವಕ್ತೃವಿನ ಇಚ್ಛೆಯಂತೆ ಇಂತಹುದು ಉಪಮಾನವೆಂದೂ, ಇಂತಹುದು ಉಪಮೇಯವೆಂದೂ ಅಲ್ಲಿ ನಿಶ್ಚಯಿಸಿಕೊಳ್ಳಬೇಕು. ಇದು ಪ್ರಕೃತ–ಇದು ಅಪ್ರಕೃತವೆಂಬ ವೈಲಕ್ಷಣ್ಯವನ್ನು ತಿಳಿಯಲು ತುಲ್ಯಯೋಗಿತೆಯಲ್ಲಿ ಅವಕಾಶವಿಲ್ಲದ್ದರಿಂದ ಕೇವಲ ಪ್ರಕೃತವಸ್ತುಗಳಿಗೋ ಅಥವಾ ಕೇವಲ ಅಪ್ರಕೃತವಸ್ತುಗಳಿಗೋ ಏಕಧರ್ಮಾನ್ವಯವು ಬರುತ್ತದೆ. ಇವೆರಡರಲ್ಲೂ ಇದೊಂದು ವೈಲಕ್ಷಣ್ಯವು ನೆಲಸಿದೆ.

## ೧೬. ಆವೃತ್ತಿದೀಪಕಾಲಂಕಾರ

ತ್ರಿವಿಧಂ ದೀಪಕಾವೃತ್ತೌ ಭವೇದಾವೃತ್ತಿದೀಪಕಮ್ ।
ವರ್ಷತ್ಯಂಬುದಮಾಲೇಯಂ ವರ್ಷತ್ಯೇಷಾ ಚ ಶರ್ವರೀ ॥ ೪೮ ॥

ಉನ್ಮೀಲಂತಿ ಕದಂಬಾನಿ ಸ್ಫುಟಂತಿ ಕುಟಜೋದ್ಗಮಾಃ ।
ಮಾದ್ಯಂತಿ ಚಾತಕಾಸ್ತೃಪ್ತಾ ಮಾದ್ಯಂತಿ ಚ ಶಿಖಾವಲಾಃ ॥ ೪೯ ॥

ದೀಪಕಸ್ಯಾನೇಕೋಪಕಾರಾರ್ಥತಯಾ ದೀಪಸ್ಥಾನೀಯಸ್ಯ ಪದಸ್ಯ ಅರ್ಥಸ್ಯ ಉಭಯೋರ್ವಾ ಆವೃತ್ತೌ ತ್ರಿವಿಧಮಾವೃತ್ತಿದೀಪಕಮ್. ಕ್ರಮೇಣ ಅರ್ಥತ್ರಯೇಣ ಉದಾಹರಣಾನಿ ದರ್ಶಿತಾನಿ. ಯಥಾ ವಾ—

ಉತ್ಕಂಠಯತಿ ಮೇಘಾನಾಂ ಮಾಲಾ ವರ್ಗಂ ಕಲಾಪಿನಾಮ್ ।
ಯೂನಾಂ ಚೋತ್ಕಂಠಯತ್ಯದ್ಯ ಮಾನಸಂ ಮಕರಧ್ವಜಃ ॥

ಶಮಯತಿ ಜಲಧರಧಾರಾ ಚಾತಕಯೂನಾಂ ತೃಷಂ ಚಿರೋಪನತಾಮ್ ।
ಕ್ಷಪಯತಿ ಚ ವಧೂಲೋಚನಜಲಧಾರಾ ಕಾಮಿನಾಂ ಪ್ರವಾಸರುಚಿಮ್ ॥

ವದನೇನ ನಿರ್ಜಿತಂ ತವ ನಿಲೀಯತೇ ಚಂದ್ರಬಿಂಬಮಂಬುಧರೇ ।
ಅರವಿಂದಮಪಿ ಚ ಸುಂದರಿ ನಿಲೀಯತೇ ಪಾಥಸಾಂ ಪೂರೇ ॥

ಏವಂ ಚ ಆವೃತ್ತೀನಾಂ ಪ್ರಸ್ತುತಾಪ್ರಸ್ತುತೋಭಯವಿಷಯತ್ವಾಭಾವೇಽಪಿ ದೀಪಕಚ್ಛಾಯಾಪತ್ತಿಮಾತ್ರೇಣ ದೀಪಕವ್ಯಪದೇಶಃ.

ಒಂದು ಪ್ರಕೃತವಸ್ತುವಿಗೂ ಒಂದು ಅಪ್ರಕೃತವಸ್ತುವಿಗೂ ಧರ್ಮೈಕ್ಯವುಂಟು ಬುದನ್ನು ಅನೇಕ ವೇಳೆ ಪದಗಳಿಂದಾಗಲೀ, ಅರ್ಥದಿಂದಾಗಲೀ, ಪದ ಮತ್ತು ಅರ್ಥ ಎರಡರಿಂದಾಗಲೀ ತಿಳಿಸುವುದೇ ಆವೃತ್ತಿದೀಪಕವೆನಿಸುವುದು. ಇದು ಮೂರು ಬಗೆಯಾಗಿದೆ. ಈ ಮೇಘಮಾಲೆಯು ಮಳೆಯನ್ನು ವರ್ಷಿಸುತ್ತದೆ (ಸುರಿಸುತ್ತದೆ); ಹಾಗೆಯೇ ಈ ರಾತ್ರಿಯೂ ಸಹ ಒಂದು ವರ್ಷದಂತೆ ತೋರುತ್ತದೆ. ಕದಂಬ ಪುಷ್ಪಗಳು ಅರಳುತ್ತವೆ ; ಹಾಗೆಯೇ ಬೆಟ್ಟದ ಮಲ್ಲಿಗೆ ಮೊಗ್ಗುಗಳೂ ಅರಳುತ್ತವೆ. ಸಂತುಷ್ಟವಾದ ಚಾತಕಪಕ್ಷಿಗಳು ಮದಿಸಿವೆ ; ಹಾಗೆಯೇ ನವಿಲುಗಳೂ ಮದಿಸಿವೆ. ಅನೇಕ ವಸ್ತುಗಳಿಗೆ ಉಪಕಾರವಾಗಲೆಂದು ಉಪಯೋಗಿಸಿಧ ಒಂದು ಪದವನ್ನಾಗಲೀ ಅರ್ಥವನ್ನಾಗಲೀ ಅಥವಾ ಪದ ಅರ್ಥ ಇವೆರಡನ್ನಾಗಲೀ ಮತ್ತೆ ಬಳಸಿಕೊಳ್ಳು ವುದರಿಂದ ಆವೃತ್ತಿದೀಪಕದ ಮೂರುಬಗೆಗಳಿಗೂ ಮೂರು ಉದಾಹರಣಗಳನ್ನು ಕೊಡಲಾಗಿದೆ, ಮೊದಲನೆಯದರಲ್ಲಿ ವರ್ಷತಿ ಎಂಬ ಪದವನ್ನು ಎರಡು ವೇಳೆ ಪ್ರಯೋಗಿಸಲಾಗಿದೆ (ಒಂದೇ ಪದವಾದರೂ ಅರ್ಥದಲ್ಲಿ ಭೇದವಿದೆ). ಈ ಪದವು ಮೇಘಮಾಲೆ ಮತ್ತು ರಾತ್ರಿ ಎರಡಕ್ಕೂ ಅನ್ವಯಿಸುತ್ತದೆ. ಎರಡನೆಯದರಲ್ಲಿ

ವಿಕಾಸ ಎಂಬ ಒಂದೇ ಅರ್ಥವನ್ನು ಕೊಡುವ "ಉನ್ಮೀಲಂತಿ ಸ್ಫುಟಂತಿ" ಎಂಬ ಎರಡು ಪದಗಳನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಇದು ಅರ್ಥಾವೃತ್ತಿದೀಪಕ ವೆನಿಸಿದೆ. ಮೂರನೆಯದರಲ್ಲಿ ಪದ, ಅರ್ಥ ಎರಡಕ್ಕೂ ಆವೃತ್ತಿ ಇದೆ. ಮಾದ್ಯಂತಿ ಎಂಬ ಒಂದೇ ಪದವನ್ನು ಒಂದೇ ಅರ್ಥದಲ್ಲಿ ಚಾತಕಗಳಿಗೂ ನವಿಲುಗಳಿಗೂ ಅನ್ವಯಿಸುವಂತೆ ಪ್ರಯೋಗಿಸಲಾಗಿದೆ.

"ಮೇಘಮಾಲೆಯು ಚಾತಕಪಕ್ಷಿಗಳಿಗೆ ಬಹುಕಾಲದಿಂದಲೂ ಇದ್ದ ನೀರಡಿಕೆಯನ್ನು ಪರಿಹರಿಸುತ್ತದೆ, ಹಾಗೆಯೇ ಸ್ತ್ರೀಯರ ಕಣ್ಣೀರು ಕಾಮುಕರಿಗೆ ಪ್ರವಾಸದ ಅಭಿಲಾಷೆಯನ್ನು ಪರಿಹರಿಸುತ್ತದೆ.'' ಇಲ್ಲಿ ಪರಿಹರಿಸುವಿಕೆ ಎಂಬ ಒಂದೇ ಅರ್ಥದಲ್ಲಿ ಎರಡು ಪದಗಳನ್ನು ಪ್ರಯೋಗಿಸಲಾಗಿದೆ.

"ಎಲೈ ಸುಂದರಿಯೇ ನಿನ್ನ ಮುಖದಿಂದ ಸೋಲನ್ನು ಪಡೆದ ಚಂದ್ರಮಂಡಲವು ಮೇಘದಲ್ಲಿ ಮುಚ್ಚಿಹೋಗಿದೆ. ಹಾಗೆಯೇ ಕಮಲವೂ ಸಹ ನೀರಿನ ಪ್ರವಾಹದಲ್ಲಿ ಮುಚ್ಚಿಹೋಗಿದೆ." ಇಲ್ಲಿ ಒಂದೇ ಅರ್ಥವನ್ನು ಕೊಡುವ ಒಂದೇ ಪದವನ್ನು ಎರಡು ವೇಳೆ ಆವರ್ತಿಸಲಾಗಿದೆ. ಹೀಗೆ ಪದ ಅರ್ಥ ಇವೆರಡರ ಆವೃತ್ತಿಗಳು ಪ್ರಕೃತ ಮತ್ತು ಅಪ್ರಕೃತವಾದ ವಸ್ತುಗಳೆರಡಕ್ಕೂ ಸಂಬಂಧಿಸದೆ ಇದ್ದರೂ, ಧರ್ಮೈಕ್ಯ ವೆಂಬ ದೀಪಕದ ಛಾಯೆ ಇರುವುದರಿಂದಲೇ ಈ ಮೂರು ಆವೃತ್ತಿಗಳನ್ನು ದೀಪಕ ವೆಂದು ಕರೆಯಲಾಗಿದೆ.

## ೧೭. ಪ್ರತಿವಸ್ತೂಪಮಾಲಂಕಾರ

ವಾಕ್ಯಯೋರೇಕಸಾಮಾನ್ಯೇ ಪ್ರತಿವಸ್ತೂಪಮಾ ಮತಾ।
ತಾಪೇನ ಭ್ರಾಜತೇ ಸೂರಃ ಶೂರಶ್ಚಾಪೇನ ರಾಜತೇ ॥ ೫೦ ॥

ಯತ್ರೋಪಮಾನೋಪಮೇಯವಾಕ್ಯಯೋರೇಕಃ ಸಮಾನೋ ಧರ್ಮಃ ಪೃಥಕ್ ನಿರ್ದಿಶ್ಯತೇ ಸಾ ಪ್ರತಿವಸ್ತೂಪಮಾ. ಪ್ರತಿವಸ್ತು ಪ್ರತಿವಾಕ್ಯಾರ್ಥಂ ಉಪಮಾ ಸಮಾನಧರ್ಮೋಽಸ್ಯಾಮಿತಿ ವ್ಯುತ್ಪತ್ತೇಃ ಯಥಾಽತ್ರೈವ ಭ್ರಾಜತೇ ರಾಜತೇ ಇತ್ಯೇಕ ಏವ ಧರ್ಮಃ ಉಪಮಾನೋಪಮೇಯವಾಕ್ಯಯೋಃ ಪೃಥಗ್ಭಿನ್ನ ಪದಾಭ್ಯಾಂ ನಿರ್ದಿಷ್ಟಃ. ಯಥಾ ವಾ—

ಸ್ಥಿರಾ ಶೈಲೀ ಗುಣವತಾಂ ಖಲಬುದ್ಧ್ಯಾನ ಬಾಧ್ಯತೇ ।
ರತ್ನದೀಪಸ್ಯ ಹಿ ಶಿಖಾ ವಾತ್ಯಯಾಪಿ ನ ನಾಶ್ಯತೇ ॥

ತವಾಮೃತಸ್ಯಂದಿನಿ ಪಾದಪಂಕಜೇ ನಿವೇಶಿತಾತ್ಮಾ ಕಥಮನ್ಯದಿಚ್ಛತಿ ।
ಸ್ಥಿತೇಽರವಿಂದೇ ಮಕರಂದನಿರ್ಭರೇ ಮಧುವ್ರತೋ ನೇಕ್ಷುರಸಂ ಸಮೀಕ್ಷತೇ ॥

ಅತ್ರ ಯದ್ಯಪಿ ಉಪಮೇಯವಾಕ್ಯೇ ಅನಿಚ್ಛಾ ಉಪಮಾನವಾಕ್ಯೇ ಅವೀಕ್ಷಣ ಧರ್ಮಭೇದಃ ಪ್ರತಿಭಾತಿ. ತಥಾಪಿ ವೀಕ್ಷಣಮಾತ್ರಸ್ಯ ಅವರ್ಜನೀಯಸ್ಯ ಪ್ರತಿಷೇಧಾನರ್ಹತ್ವಾತ್ ಇಚ್ಛಾಪೂರ್ವಕವೀಕ್ಷಾಪ್ರತಿಷೇಧೋಽಯಂ ಅನಿಚ್ಛಾ ಪರ್ಯವಸಿತ ಏವೇತಿ ಧರ್ಮೈಕ್ಯಮನುಸಂಧೇಯಮ್. ಅರ್ಥಾವೃತ್ತಿದೀಪಕಂ ಪ್ರಸ್ತುತಾನಾಂ ಅಪ್ರಸ್ತುತಾನಾಂ ವಾ ; ಪ್ರತಿವಸ್ತೂಪಮಾ ತು ಪ್ರಸ್ತುತಾಪ್ರಸ್ತು ತಾನಾಮಿತಿ ವಿಶೇಷಃ. ಆವೃತ್ತಿದೀಪಕಂ ವೈಧರ್ಮ್ಯೇಣ ನ ಸಂಭವತಿ ; ಪ್ರತಿವಸ್ತೂಪ ಮಾತು ವೈಧರ್ಮ್ಯೇಣ ದೃಶ್ಯತೇ. ಯಥಾ—

ವಿದ್ವಾನೇವ ವಿಜಾನಾತಿ ವಿದ್ವಜ್ಜನಪರಿಶ್ರಮಮ್ ।<br>
ನ ಹಿ ವಂಧ್ಯಾ ವಿಜಾನಾತಿ ಗುರ್ವೀಂ ಪ್ರಸವವೇದನಾಮ್ ॥<br>
ಯದಿ ಸಂತಿ ಗುಣಾಃ ಪುಂಸಾಂ ವಿಕಸಂತ್ಯೇವ ತೇ ಸ್ವಯಮ್ ।<br>
ನ ಹಿ ಕಸ್ತೂರಿಕಾಮೋದಃ ಶಪಥೇನ ವಿಭಾವ್ಯತೇ ॥

ಉಪಮಾನವನ್ನೊಳಗೊಂಡ ವಾಕ್ಯಕ್ಕೂ ಉಪಮೇಯವನ್ನೊಳಗೊಂಡ ವಾಕ್ಯಕ್ಕೂ ಒಂದು ಸಮಾನಧರ್ಮವನ್ನು ಬೇರೆ ಬೇರೆ ಪದಗಳಿಂದ ತಿಳಿಸುವುದು ಪ್ರತಿವಸ್ತೂಪಮೆ ಎನಿಸುವುದು. ಸೂರ್ಯನು ತಾಪದಿಂದ ಉರಿಯುತ್ತಾನೆ, ಶೂರನು ಧನುಸ್ಸಿನಿಂದ ಪ್ರಕಾಶಿಸುತ್ತಾನೆ. ಪ್ರಕಾಶವೆಂಬ ಧರ್ಮವು ಸೂರ್ಯ ಶೂರ ಇಬ್ಬರಲ್ಲೂ ನೆಲಸಿರುವುದೆಂಬುದನ್ನು ರಾಜತೇ ಭ್ರಾಜತೇ ಎಂಬ ಎರಡು ಪದಗಳಿಂದ ಎರಡು ವಾಕ್ಯಗಳಲ್ಲಿ ತಿಳಿಸಲಾಗಿದೆ. ಹೀಗೆ ಪ್ರತಿವಸ್ತು ಅಂದರೆ ಪ್ರತಿಯೊಂದು ವಾಕ್ಯಾರ್ಥದಲ್ಲೂ ಉಪಮೆ ಅಂದರೆ ಸಮಾನಧರ್ಮ ಒಂದನ್ನು ಬೇರೆಬೇರೆ ಪದ ಗಳಿಂದ ತಿಳಿಸಿರುವುದರಿಂದ ಈ ಅಲಂಕಾರಕ್ಕೆ ಪ್ರತಿವಸ್ತೂಪಮೆ ಎಂಬ ಹೆಸರು ಬಂದಿದೆ. ಇದೇ ಈ ಶಬ್ದದ ಅವಯವಾರ್ಥವೆನಿಸಿದೆ. ಇಲ್ಲಿ ಭ್ರಾಜತೇ ಎಂಬುದು ಉಪಮಾನ ವಾಕ್ಯದಲ್ಲೂ, ರಾಜತೇ ಎಂಬುದು ಉಪಮೇಯವಾಕ್ಯದಲ್ಲೂ ಪ್ರತ್ಯೇಕವಾದ ಪದ ಗಳಿಂದಲೇ ನಿರ್ದಿಷ್ಟವಾಗಿವೆ. ಇವೆರಡು ಪದಗಳೂ ಪ್ರಕಾಶವೆಂಬ ಒಂದೇ ಧರ್ಮವನ್ನು ಬೋಧಿಸುತ್ತವೆ.

" ಸದ್ಗುಣಿಗಳ ನಿಶ್ಚಲವಾದ ಸದ್ವರ್ತನವನ್ನು ನೀಚರ ಬುದ್ಧಿಯು ಚಂ ಲಾಯಿಸಲಾರದು. ರತ್ನವೆಂಬ ದೀಪದ ಪ್ರಕಾಶವು ಸುಂಟರಗಾಳಿಯಿಂದಲೂ ನಾಶ ವಾಗಲಾರದು " ಇಲ್ಲಿ ಮೊದಲನೆಯದು ಉಪಮೇಯವಾಕ್ಯವೂ, ಎರಡನೆಯದು ಉಪಮಾನವಾಕ್ಯವೂ ಆಗಿವೆ. ಎರಡು ಕಡೆಗಳಲ್ಲೂ 'ನಾಶವಾಗದಿರುವಿಕೆ' ಎಂಬುದು ಸಮಾನಧರ್ಮವೆನಿಸಿ ಬೇರೆ ಬೇರೆ ಶಬ್ದಗಳಿಂದ ನಿರ್ದಿಷ್ಟವಾಗಿದೆ. ಇಲ್ಲಿ ಸಾಮಾನ್ಯ ವಾದ ಅಭಾವವನ್ನು ಮಾತ್ರವೇ ತಿಳಿಸುವ ಬಾಧ್ ಧಾತುವು ನಾಶವೆಂಬ ವಿಶೇಷವಾದ

ಅರ್ಥದಲ್ಲಿ ಕೊನೆಗೊಂಡಿದೆ. ಈ ರೀತಿಯಲ್ಲಿ ಸಮಾನಧರ್ಮವನ್ನು ಎರಡು ವಾಕ್ಯಗಳಲ್ಲೂ ಎರಡುಪದಗಳಿಂದಲೂ ಗ್ರಹಿಸಬೇಕು. ಇದಕ್ಕೂ ಹಿಂದಿನ ಉದಾಹರಣಕ್ಕೂ ಇರುವ ಭೇದವೇ ಇದು.

ಈಶ್ವರನನ್ನು ಕುರಿತು ಭಕ್ತನೊಬ್ಬನು ಹೀಗೆ ಹೇಳುತ್ತಾನೆ. "ಅಮೃತವನ್ನು ಸುರಿಸುವ ನಿನ್ನ ಪಾದಕಮಲದಲ್ಲಿಯೇ ಮನಸ್ಸನ್ನು ಇಟ್ಟವನು ಬೇರೆ ಏನನ್ನು ತಾನೆ ಇಚ್ಛಿಸಿಯಾನು ? ಮಕರಂದಪೂರ್ಣವಾದ ಕಮಲದಲ್ಲಿ ನೆಲಸಿರುವ ದುಂಬಿಯು ಕಬ್ಬಿನರಸವನ್ನು ಇಚ್ಛಿಸಿ ನೋಡುವುದಿಲ್ಲ." ಇಲ್ಲಿ ಮೊದಲನೆಯದು ಉಪಮೇಯವಾಕ್ಯ ; ಎರಡನೆಯದು ಉಪಮಾನವಾಕ್ಯ. ಉಪಮೇಯವಾಕ್ಯದಲ್ಲಿ "ಇಚ್ಛೆಯಿಲ್ಲದಿರುವಿಕೆ"ಯನ್ನೂ ಉಪಮಾನವಾಕ್ಯದಲ್ಲಿ "ನೋಡದಿರುವಿಕೆ" ಯನ್ನೂ ತಿಳಿಸಿರುವುದರಿಂದ ಎರಡು ವಾಕ್ಯಗಳಲ್ಲೂ ಧರ್ಮೈಕ್ಯವಿಲ್ಲದೆ ಧರ್ಮಭೇದವೇ ಕಾಣುತ್ತದೆ. ಆದರೂ ನೋಟವನ್ನು ಯಾರಿಗೂ ತಡೆಯಲಿಕ್ಕಾಗದ್ದರಿಂದ ಅದಕ್ಕೆ ನಿಷೇಧವೆಂಬುದೇ ಹೊಂದಿಕೆಯಾಗದ ಪ್ರಯುಕ್ತ ಇಲ್ಲಿ "ನೋಡದಿರುವಿಕೆ" ಎಂಬುದು ಇಚ್ಛಾಪೂರ್ವಕವಾಗಿ ನೋಡುವುದನ್ನು ತಡೆಯುವುದರಲ್ಲಿಯೇ ಅನ್ವಯಿಸುತ್ತದೆ. ಹೀಗೆ ಮಕರಂದದಲ್ಲಿಯೇ ಮೈಮರೆತಿರುವ ದುಂಬಿಯು ಕಬ್ಬಿನರಸವನ್ನು ಇಚ್ಛಿಸಿ ನೋಡುವುದಿಲ್ಲವೆಂದು ಇಲ್ಲಿ ಹೇಳಿದ್ದೂ ಸಹ ಅನಿಚ್ಛೆಯಲ್ಲಿಯೇ ಕೊನೆಗಾಣುತ್ತದೆ ಹೀಗೆ ನೋಡದಿದ್ದುದೂ ಸಹ ಅನಿಚ್ಛೆಯೇ ಆಗುವ ಪ್ರಯುಕ್ತ ಎರಡು ವಾಕ್ಯಗಳಲ್ಲೂ ಅನಿಚ್ಛೆ ಎಂಬ ಒಂದೇ ಧರ್ಮವನ್ನು ಹೇಳಿದಂತಾಯಿತು. ಆದ್ದರಿಂದ ಧರ್ಮಭೇದಕ್ಕೆ ಇಲ್ಲಿ ಅವಕಾಶವಿಲ್ಲ. ಅರ್ಥಾವೃತ್ತಿದೀಪಕವು ಪ್ರಕೃತವಸ್ತುಗಳಿಗಾಗಲೀ ಅಪ್ರಕೃತವಸು ಗಳಿಗಾಗಲೀ ಧರ್ಮೈಕ್ಯವನ್ನು ತಿಳಿಸುತ್ತದೆ, ತುಲ್ಯಯೋಗಿತೆಯೂ ಇದನ್ನೇ ತಿಳಿಸುತ್ತದೆ. ಆದರೂ ಇವೆರಡಕ್ಕೂ ಭೇದವಿದೆ; ಅಲ್ಲಿ ಪ್ರಕೃತ ಅಪ್ರಕೃತ ವಸ್ತುಗಳೆರಡಕ್ಕೂ ಧರ್ಮೈಕ್ಯವು ಒಂದೇ ಪದದಿಂದ ಸಂಭವಿಸುತ್ತದೆ, ಅರ್ಥಾವೃತ್ತಿದೀಪಕದಲ್ಲಾದರೋ ಒಂದೇ ಅರ್ಥವನ್ನು ಕೊಡುವ ಎರಡು ಪದಗಳಿಂದ ಧರ್ಮೈಕ್ಯವನ್ನು ತಿಳಿಸಲಾಗುವುದು. ಅಲ್ಲಿ ಸಂಕುಚಂತಿ ಎಂಬ ಒಂದೇ ಪದವು ಕಮಲಗಳಿಗೂ ಮುಖಕ್ಕೂ ಅನ್ವಯಿಸುವ ಪ್ರಕಾಶವೆಂಬ ಒಂದು ಸಮಾನಧರ್ಮವನ್ನು ತಿಳಿಸುತ್ತವೆ. ಇದೇ ಇವೆರಡು ಅಲಂಕಾರಗಳಿಗೂ ಇರುವ ವೈಲಕ್ಷಣ್ಯ.

ಪ್ರತಿವಸ್ತೂಪಮೆಯಂತೂ ಎರಡು ವಾಕ್ಯಗಳಲ್ಲೂ ಧರ್ಮೈಕ್ಯವನ್ನು ಬೋಧಿಸಿದರೂ ಸಹ ಪ್ರಕೃತ ಮತ್ತು ಅಪ್ರಕೃತವೆನಿಸಿದ ಎರಡು ವಸ್ತುಗಳಿಗೂ ಅನ್ವಯಿಸುತ್ತದೆ. ಅರ್ಥಾವೃತ್ತಿದೀಪಕವು ಎರಡು ಪ್ರಕೃತವಸ್ತುಗಳಿಗಾಗಲೀ ಅಥವಾ ಎರಡು ಅಪ್ರಕೃತವಸ್ತುಗಳಿಗಾಗಲೀ ಧರ್ಮೈಕ್ಯವನ್ನು ತಿಳಿಸುತ್ತದೆ ಇದೇ ಇವೆರಡಕ್ಕೂ ಇರುವ ಭೇದ. ಉಪಮಾನೋಪಮೇಯಗಳಿಗೆ ಸಮಾನಧರ್ಮವಿಲ್ಲದೆ, ಧರ್ಮವು ಬೇರೆ

ಯಾಗಿದ್ದರೆ ಆವೃತ್ತಿದೀಪಕವು ಸಂಭವಿಸುವುದಿಲ್ಲ. ಪ್ರತಿವಸ್ತೂಪಮೆಯು ವೈಧರ್ಮ್ಯ ದಿಂದಲೂ ಸಂಭವಿಸುತ್ತದೆ ; ಉಪಮಾನೋಪಮೆ ಯವಾಕ್ಯಗಳಲ್ಲಿ ಬೇರೆಬೇರೆ ಧರ್ಮ ಗಳನ್ನು ತಿಳಿಸಿದ್ದರೂ ಅಲ್ಲಿ ಪ್ರತಿವಸ್ತೂಪಮೆ ಬರಬಹುದು. "ವಿದ್ವಾಂಸನೊಬ್ಬನೇ" ವಿದ್ವಾಂಸರ ಶ್ರಮವನ್ನು ತಿಳಿಯಬಲ್ಲನು. ಹೆರಿಗೆಯ ಕಾಲದಲ್ಲಿ ಆಗುವ ಹೆಚ್ಚಿನ ನೋವನ್ನು ಬಂಜೆಯಾದವಳು ಅರಿಯಳು", 'ಮನುಷ್ಯರಲ್ಲಿ ಗುಣಗಳಿದ್ದರೆ ಅವು ತಾವಾ ಗಿಯೇ ಹೊರಬೀಳುತ್ತವೆ. ಕಸ್ತೂರಿಯ ವಾಸನೆ ಬಲಾತ್ಕಾರದಿಂದ ಹೊರಬೀಳುವುದಿಲ್ಲ. ಮೊದಲನೆಯ ಉದಾಹರಣದಲ್ಲಿ 'ವಿಜಾನಾತಿ' ಎಂದು ಉಪಮೇಯವಾಕ್ಯದಲ್ಲೂ, "ನ ವಿಜಾನಾತಿ" ಎಂದು ಉಪಮಾನವಾಕ್ಯದಲ್ಲೂ ಹೇಳಿರುವುದರಿಂದ ವಿಜ್ಞಾನ-ಅವಿಜ್ಞಾನ ಈ ಎರಡು ಧರ್ಮಗಳೂ ಪರಸ್ಪರ ವಿರುದ್ಧವಾಗಿವೆ. ಎರಡನೆಯ ಉದಾಹರಣದಲ್ಲಿ ''ಪ್ರಕಾಶಿಸುವಿಕೆ'' ಎಂದು ಉಪಮೇಯವಾಕ್ಯದಲ್ಲೂ "ಪ್ರಕಾಶಿ ಸುವುದಿಲ್ಲ'' ಎಂದು ಉಪಮಾನವಾಕ್ಯದಲ್ಲೂ ತಿಳಿಸಿರುವುದರಿಂದ ಇವೆರಡೂ ಕತ್ತಲೆ ಬೆಳಕುಗಳಂತೆ ಪರಸ್ಪರ ವಿರುದ್ಧವಾಗಿವೆ. ಹೀಗೆ ವೈಧರ್ಮ್ಯದಿಂದಲೂ ಪ್ರತಿ ವಸ್ತೂಪಮೆ ಸಂಭವಿಸುತ್ತದೆ.

## ೧೮ ದೃಷ್ಟಾಂತಾಲಂಕಾರ

ಚೇದ್ಬಿಂಬಪ್ರತಿಬಿಂಬತ್ವಂ ದೃಷ್ಟಾಂತಸ್ತದಲಂಕೃತಿಃ ।<br>
ತ್ವಮೇವ ಕೀರ್ತಿಮಾನ್ರಾಜನ್ ವಿಧುರೇವ ಹಿ ಕಾಂತಿಮಾನ್ ॥ ೫೧ ॥

ಯತ್ರೋಪಮಾನೋಪಮೇಯವಾಕ್ಯಯೋಃ ಭಿನ್ನಾವೇವ ಧರ್ಮೌ ಬಿಂಬ ಪ್ರತಿಬಿಂಬಭಾವೇನ ನಿರ್ದಿಷ್ಟೌ ತತ್ರ ದೃಷ್ಟಾಂತಃ. ತ್ವಮೇವ ಕೀರ್ತಿಮಾನಿತ್ಯತ್ರ ಕೀರ್ತಿಕಾಂತ್ಯೋಃ ಬಿಂಬಪ್ರತಿಬಿಂಬಭಾವಃ. ಯಥಾ ವಾ—

ಕಾಮಂ ನೃಪಾಸ್ಸಂತು ಸಹಸ್ರಶೋಽನ್ಯೇ ರಾಜನ್ವತೀಮಾಹುರನೇನ ಭೂಮಿಮ್ ।<br>
ನಕ್ಷತ್ರತಾರಾಗ್ರಹಸಂಕುಲಾಪಿ ಜ್ಯೋತಿಷ್ಮತೀ ಚಂದ್ರಮಸೈವ ರಾತ್ರಿಃ ॥

ದೇವೀಂ ವಾಚಮುಪಾಸತೇ ಹಿ ಬಹವಃ ಸಾರಂ ತು ಸಾರಸ್ವತಂ ।<br>
ಜಾನೀತೇ ನಿತರಾಮಸೌ ಗುರುಕುಲಕ್ಲಿಷ್ಟೋ ಮುರಾರಿಃ ಕವಿಃ ॥<br>
ಅಬ್ಧಿರ್ಲಂಘಿತ ಏವ ವಾನರಭಟೈಃ ಕಿಂತ್ವಸ್ಯ ಗಂಭೀರತಾಂ ।<br>
ಆಪಾತಾಲನಿಮಗ್ನಪೀವರತನುರ್ಜಾನಾತಿ ಮಂಥಾಚಲಃ ॥

ನನ್ವತ್ರ ಉಪಮಾನೋಪಮೇಯವಾಕ್ಯಯೋರ್ಜ್ಞಾನಮೇಕ ಏವಧರ್ಮ ಇತಿ ಪ್ರತಿವಸ್ತೂಪಮಾ ಯುಕ್ತಾ. ನೈವಮ್. ಅಚೇತನೇ ಮಂಥಾಚಲೇ

ಜ್ಞಾನಸ್ಯ ಬಾಧಿತತ್ವೇನ ತತ್ರ ಜಾನಾತಿ ಇತ್ಯನೇನ ಸಾಗರಾಧಸ್ತಲಾವಧಿ ಸಂಸ್ಪರ್ಶ ಮಾತ್ರಸ್ಯ ವಿವಕ್ಷಿತತ್ವಾತ್. ಅತ್ರೋದಾಹರಣೇ ಪದಾವೃತ್ತಿದೀಪಕಾದ್ವಿಶೇಷಃ ಪೂರ್ವ ವತ್ಪ್ರಸ್ತುತಾಪ್ರಸ್ತುತವಿಷಯತ್ವಕೃತೋ ದ್ರಷ್ಟವ್ಯಃ, ವೈಧರ್ಮ್ಯೇಣಾಪ್ಯಯಂ ದೃಶ್ಯತೇ. ಯಥಾ—

> ಕೃತಂ ಚ ಗರ್ವಾಭಿಮುಖಂ ಮನಸ್ತ್ವಯಾ ।
> ಕಿಮನ್ಯದೇವಂ ನಿಹತಾಶ್ಚ ನೋ ದ್ವಿಷಃ ॥
> ತಮಾಂಸಿ ತಿಷ್ಠಂತಿ ಹಿ ತಾವದಂಶುಮಾನ್ ।
> ನ ಯಾವದಾಯಾತ್ಯುದಯಾದ್ರಿಮೌಲಿತಾಮ್ ॥

ಉಪಮಾನ ಮತ್ತು ಉಪಮೇಯ ಇವುಗಳ ಧರ್ಮಗಳು ಬೇರೆಬೇರೆಯೇ ಆಗಿದ್ದರೂ ಅವನ್ನು ಎರಡು ವಾಕ್ಯಗಳಲ್ಲಿ ಸಾದೃಶ್ಯದ ಮೂಲಕ ಬಿಂಬಪ್ರತಿಬಿಂಬ ಭಾವದಿಂದ ತಿಳಿಸುವುದೇ ದೃಷ್ಟಾಂತಾಲಂಕಾರವೆನಿಸುತ್ತದೆ. ಅಲ್ಲಿಗೆ ಬಿಂಬಪ್ರತಿಬಿಂಬ ಭಾವವನ್ನು ಹೊಂದಿರುವ ಧರ್ಮಗಳೆರಡೇ ದೃಷ್ಟಾಂತವೆನಿಸುತ್ತವೆ ಎಂದು ಹೇಳಿ ದಂತಾಯಿತು, 'ಮಹಾರಾಜನೇ ನೀನೇ ಕೀರ್ತಿಶಾಲಿಯಾಗಿರುವೆ, ಚಂದ್ರನೇ ಕಾಂತಿ ಯುಕ್ತನಾಗಿರುವನು' ಇಲ್ಲಿ ಕೀರ್ತಿ ಮತ್ತು ಕಾಂತಿ ಇವೆರಡಕ್ಕೂ ಬಿಂಬಪ್ರತಿಬಿಂಬ ಭಾವವಿದೆ. ರಾಜನಿಗೂ ಚಂದ್ರನಿಗೂ ಉಪಮಾನೋಪಮೇಯಭಾವವಿದೆ. ಇವರಿಬ್ಬ ರಲ್ಲೂ ಕೀರ್ತಿ ಕಾಂತಿ ಎಂದು ಧರ್ಮಗಳು ಬೇರೆಬೇರೆಯಾಗಿದ್ದರೂ ವ್ಯಾಪ್ತಿ ಎಂಬ ಪರಸ್ಪರ ಸಾದೃಶ್ಯದಿಂದ ಅಭೇದವನ್ನು ಹೊಂದಿ ಒಂದೇ ಎನಿಸಿವೆ. ಚಂದ್ರನ ಕಾಂತಿ ಹೇಗೆ ಎಲ್ಲೆಡೆಯಲ್ಲೂ ವ್ಯಾಪಿಸಿದೆಯೋ ಹಾಗೆಯೇ ಮಹಾರಾಜನ ಕೀರ್ತಿಯೂ ವ್ಯಾಪಿಸಿದೆ. ಹೀಗೆ ಪರಸ್ಪರ ಸಾದೃಶ್ಯದಿಂದ ಕೀರ್ತಿ ಕಾಂತಿಗಳು ಬಿಂಬಪ್ರತಿಬಿಂಬ ಭಾವದ ಮೂಲಕ ಬೇರೆ ಬೇರೆ ವಾಕ್ಯಗಳಲ್ಲಿ ನಿರ್ದಿಷ್ಟವಾಗಿವೆ. ಹೀಗಿದ್ದರೆಯೇ ದೃಷ್ಟಾಂತಾಲಂಕಾರವು ಸಂಭವಿಸುತ್ತದೆ. ಇದಕ್ಕೆ ಬೇರೆ ಎರಡು ಉದಾಹರಣಗಳನ್ನು ಈ ಕೆಳಗೆ ಕೊಡಲಾಗಿದೆ.

ಇಂದುಮತಿಯ ಸ್ವಯಂವರದಲ್ಲಿ ಸೇರಿದ್ದ ರಾಜರನ್ನು ವರ್ಣಿಸುವಾಗ ಅಜ ಮಹಾಜನ ಬಗ್ಗೆ ಸಖಿಯು ಹೇಳುವ ಮಾತಿದು : "ಈ ಭೂಮಿಯ ಮೇಲೆ ಸಾವಿರಾರು ರಾಜರು ನೆಲೆಸಿರುವರು, ಆದರೆ ಅವರೆಲ್ಲರಿಂದಲೂ ಈ ಭೂಮಿಗೆ ರಾಜನ್ವತಿ ಎಂದು ಹೆಸರು ಬಂದಿಲ್ಲ. ಅಜಮಹಾರಾಜನೊಬ್ಬನಿಂದಲೇ ಭೂಮಿಗೆ ರಾಜನ್ವತಿ ಎಂಬ ಹೆಸರು ಬಂದಿದೆ. ರಾತ್ರಿಯ ವೇಳೆ ಆಕಾಶದಲ್ಲಿ ಅನೇಕ ನಕ್ಷತ್ರಗಳು, ಗ್ರಹಗಳು ತುಂಬಿದ್ದರೂ ಅಂತಹ ರಾತ್ರಿಯನ್ನೂ ಜ್ಯೋತಿಷ್ಮತಿ ಎಂದು ಯಾರೂ ಕರೆಯುವುದಿಲ್ಲ. ಆದರೆ ಚಂದ್ರನಿರುವ ರಾತ್ರಿಗೆ ಮಾತ್ರವೇ ಆ ಹೆಸರು ಹೊಂದುತ್ತವೆ" ಚಂದ್ರನಿಂದ ರಾತ್ರಿ ಶೋಭಿಸುತ್ತದೆ ; ಹಾಗೆಯೇ ಅಜಮಹಾರಾಜನಿಂದ ಭೂಮಿಯು ಶೋಭಿ ಸುತ್ತದೆ. ಇಲ್ಲಿ ರಾಜನ್ವತಿ ಅಂದರೆ ಪ್ರಶಸ್ತವಾದ ರಾಜನಿಂದ ಕೂಡಿರುವಿಕೆ;

ಜ್ಯೋತಿಷ್ಮತೀ–ಹೆಚ್ಚಿನ ತೇಜಸ್ಸಿನಿಂದ ಕೂಡಿರುವಿಕೆ ಇವೆರಡು ಪದಾರ್ಥಗಳಿಗೂ ಬಿಂಬಪ್ರತಿಬಿಂಬಭಾವವಿದೆ. ಹಿಂದಿನ ಉದಾಹರಣದಲ್ಲಿ ಕೀರ್ತಿ ಕಾಂತಿಗಳು ಬಿಂಬಪ್ರತಿಬಿಂಬಗಳೆನಿಸಲು ಅನುಕೂಲವಾಗುವಂತೆ ಚಿತ್ತಾಕರ್ಷಕತ್ವವೆಂಬ ಸಾದೃಶ್ಯವು ಅರ್ಥದಿಂದಲೇ ಸಿದ್ಧಿಸುತ್ತದೆ. ಇಲ್ಲಿಯಾದರೋ ಶೋಭೆಗೂ ಪ್ರಕಾಶಕ್ಕೂ ಪ್ರಾಶಸ್ತ್ಯವೆಂಬ ಸಾದೃಶ್ಯವನ್ನು ಶಬ್ದದಿಂದಲೇ ತಿಳಿಸಿದೆ.

"ಅನೇಕರು ಸರಸ್ವತಿಯನ್ನು ಉಪಾಸನಮಾಡಿದ್ದಾರೆ ; ಆದರೆ ಸಾರಸ್ವತ ವೈಭವದ ಸಾರವನ್ನು ಗುರುಕುಲವಾಸದ ಕ್ಲೇಶವನ್ನು ಸಹಿಸಿರುವ ಮುರಾರಿ ಕವಿಯೊಬ್ಬನೇ ಚೆನ್ನಾಗಿ ತಿಳಿಯಬಲ್ಲನು. ಕಪಿಸೈನ್ಯವು ಸಮುದ್ರವನ್ನು ದಾಟಿದ್ದರೂ ಅದರ ಆಳವನ್ನು ಅವು ತಿಳಿಯಲಾರವು : ಆದರೆ ಪಾತಾಳದವರೆಗೂ ವ್ಯಾಪಿಸಿರುವ ಮಂದರಪರ್ವತ ಒಂದೇ ಅದನ್ನು ತಿಳಿಯಬಲ್ಲದು". ಇಲ್ಲಿ ಉಪಮಾನ ಮತ್ತು ಉಪಮೇಯ ಇವನ್ನು ತಿಳಿಸುವ ಎರಡು ವಾಕ್ಯಗಳಲ್ಲಿ ಜಾನೀತೇ ಜಾನಾತಿ ಎಂಬ ಎರಡು ಪದಗಳಿಂದಲೂ ಜ್ಞಾನವೆಂಬುದೊಂದೇ ಧರ್ಮವನ್ನು ಹೇಳಿರುವುದರಿಂದ ಇದು ಪ್ರತಿವಸ್ತೂಪಮೆಯೇ ಆಗಬೇಕಲ್ಲವೆ ? ದೃಷ್ಟಾಂತಾಲಂಕಾರದಲ್ಲಾದರೋ ಎರಡು ವಾಕ್ಯಗಳಲ್ಲಿ ಎರಡು ಧರ್ಮಗಳನ್ನು ಹೇಳಿದ್ದು ಅವು ಪ್ರತಿಬಿಂಬಭಾವದಿಂದ ಸಾಧಾರಣಧರ್ಮವಾಗಿ ತೋರಬೇಕು. ಇಲ್ಲಿ ಹಾಗಿಲ್ಲದೆ ಜ್ಞಾ ಎಂಬ ಧಾತುವಿನ ಪ್ರಯೋಗದಿಂದ ಜ್ಞಾನವೆಂಬ ಒಂದೇ ಧರ್ಮವನ್ನು ತಿಳಿಸಿರುವ ಪ್ರಯುಕ್ತ ಇದು ಪ್ರತಿವಸ್ತೂಪಮೆಯಾಗಬೇಕೇ ಹೊರತು ದೃಷ್ಟಾಂತಕ್ಕೆ ಇದು ಉದಾಹರಣವಾಗಲಾರದು. ಹೀಗೆ ಆಕ್ಷೇಪವು ಬಂದರೆ ಅದನ್ನು ಸಮಾಧಾನಪಡಿಸಿ ಎರಡು ವಾಕ್ಯಗಳಲ್ಲೂ ಬೇರೆಬೇರೆ ಧರ್ಮಗಳನ್ನು ಬಿಂಬಪ್ರತಿಬಿಂಬಭಾವದಿಂದಲೇ ತಿಳಿಸಿದೆ ಎಂಬುದನ್ನು ಈಗ ಹೇಳುತ್ತಾನೆ. ಜಡವಾದ ಮಂದರಪರ್ವತಕ್ಕೆ ಏನನ್ನೂ ತಿಳಿಯಲಿಕ್ಕಾಗುವುದಿಲ್ಲ. ಹೀಗೆ ಅದರಲ್ಲಿ ತಿಳಿದಿವೆಂಬುದು ಹೊಂದುವುದಿಲ್ಲವಾದ್ದರಿಂದ 'ಜಾನಾತಿ' ಎಂಬುದಕ್ಕೆ "ಪಾತಾಳದವರೆಗೂ ಪರ್ವತವು ಸಂಬಂಧಿಸಿಕೊಂಡಿತ್ತು" ಎಂಬ ಅರ್ಥವೇ ವಿವಕ್ಷಿತವಾಗುತ್ತದೆ. ಆಗ ಉಪಮೇಯ ವಾಕ್ಯದಲ್ಲಿ ಜ್ಞಾನವೂ ಉಪಮಾನ ವಾಕ್ಯದಲ್ಲಿ "ಪಾತಾಳದವರೆಗಿನ ವ್ಯಾಪ್ತಿ" ಎಂಬುದೂ ಬೇರೆ ಬೇರೆ ಧರ್ಮಗಳೇ ಆಗಿದ್ದು ಇವಕ್ಕೆ ಬಿಂಬಪ್ರತಿಬಿಂಬಭಾವವಿರುವ ಪ್ರಯುಕ್ತ ಇದು ದೃಷ್ಟಾಂತಾಲಂಕಾರವೇ ಆಗುತ್ತದೆ. ಜ್ಞಾನದಲ್ಲಿ ಬುದ್ಧಿಯ ವ್ಯಾಪ್ತಿಯೂ, ಪರ್ವತದಲ್ಲಿ ಸ್ವರೂಪದ ವ್ಯಾಪ್ತಿಯೂ ಇದ್ದು ಈ ಬಗೆಯ ಸಾದೃಶ್ಯದ ಮೂಲಕ ಜ್ಞಾನ ವ್ಯಾಪ್ತಿಗಳಿಗೆ ಬಿಂಬಪ್ರತಿಬಿಂಬಭಾವವಿದೆ. ಹಾಗಿದ್ದರೂ ಇಲ್ಲಿ ಜಾನಾತಿ ಎಂಬ ಪದವನ್ನು ಎರಡು ವೇಳೆ ಆವರ್ತಿಸಿರುವುದರಿಂದ ಪದಾವೃತ್ತಿದೀಪಕವನ್ನು ಹೇಳಬಹುದಲ್ಲವೇ ? ಅಂದರೆ ಅದು ಸರಿಯಲ್ಲ. ಏಕೆಂದರೆ ಅಲ್ಲಿ ವಸ್ತುಗಳು ಪ್ರಕೃತವೋ ಅಥವಾ ಅಪ್ರಕೃತವೋ ಆಗಿರುತ್ತವೆ. ಒಂದು ಪ್ರಕೃತವಸ್ತುವಿಗೂ ಮತ್ತೊಂದು

ಅಪ್ರಕೃತವಸ್ತುವಿಗೂ ಧರ್ಮೈಕ್ಯವನ್ನು ಅದು ಹೇಳುವುದಿಲ್ಲ, ದೃಷ್ಟಾಂತದಲ್ಲಾದರೋ ಒಂದು ವಸ್ತು ಪ್ರಕೃತವೂ ಮತ್ತೊಂದು ಅಪ್ರಕೃತವೂ ಆಗಿರುತ್ತವೆ. ರಾಜನು ಪ್ರಕೃತನೂ, ಚಂದ್ರನು ಅಪ್ರಕೃತನೂ ಆಗಿರುವುದನ್ನು ಬಿಂಬಪ್ರತಿಬಿಂಬಭಾವದ ಮೂಲಕ ತಿಳಿಸಲಾಗಿದೆ. ಆದರಂತೆಯೇ ಮುರಾರಿಯ ಪದ್ಯದಲ್ಲಿ ಮುರಾರಿವೃತ್ತಾಂತವು ಪ್ರಕೃತವೂ. ಮಂದಾರವೃತ್ತಾಂತವು ಅಪ್ರಕೃತವೂ ಆಗಿವೆ. ಪದಾವೃತ್ತಿದೀಪಕದಲ್ಲಿ ಎರಡೂ ಪ್ರಕೃತವೂ ಅಥವಾ ಎರಡೂ ಅಪ್ರಕೃತವೂ ಆಗಿರುತ್ತವೆ. ಆದ್ದರಿಂದ ಇಲ್ಲಿ ಪದಾವೃತ್ತಿದೀಪಕವನ್ನು ಹೇಳಲಿಕ್ಕಾಗುವುದಿಲ್ಲ. ಇವೆರಡು ಅಲಂಕಾರಗಳಿಗೂ ಬೇರೊಂದು ವೈಲಕ್ಷಣ್ಯವಿದೆ. ಉಪಮಾನೋಪಮೇಯವಾಕ್ಯಗಳಲ್ಲಿ ಒಂದೇ ಧರ್ಮವಿಲ್ಲದೆ ವೈಧರ್ಮ್ಯವಿದ್ದರೂ ದೃಷ್ಟಾಂತಾಲಂಕಾರವನ್ನು ಹೇಳಬಹುದು ; ಆದರೆ ಪದಾವೃತ್ತಿದೀಪಕದಲ್ಲಿ ಹೀಗೆ ಸಂಭವಿಸುವುದಿಲ್ಲ. ಇದನ್ನು ಮುಂದೆ ಉದಾಹರಿಸಿದೆ.

ರಾಜನಿಗೆ ಮಂತ್ರಿ ಹೇಳುವ ಮಾತಿದು : "ಮಹಾರಾಜನೇ, ನಿನ್ನ ಮನಸ್ಸು ಕೊಂಚ ಗರ್ವವನ್ನು ತಾಳಿತು. ಅಷ್ಟರಿಂದಲೇ ಶತ್ರುಗಳೆಲ್ಲರೂ ನಿರ್ನಾಮವಾದರು, ಇನ್ನು ಈ ಬಗ್ಗೆ ಹೇಳುವುದೇನಿದೆ ? ಸೂರ್ಯನು ಎಲ್ಲಿಯವರೆಗೆ ಉದಯಪರ್ವತದ ತುದಿಗೆ ಏರುವುದಿಲ್ಲವೋ ಅಲ್ಲಿಯವರೆಗೂ ಕತ್ತಲೆ ನೆಲಸಿರುತ್ತದೆ." ಇಲ್ಲಿ ಮನಸ್ಸಿನಲ್ಲಿ ರಾಜನು ಗರ್ವವನ್ನು ತಾಳುವುದಕ್ಕೂ, ಶತ್ರುಗಳ ಸಂಹಾರಕ್ಕೂ ಹಾಗೆಯೇ ಸೂರ್ಯನು ಉದಯಪರ್ವತದ ತುದಿಯನ್ನೇರುವುದಕ್ಕೂ, ಕತ್ತಲೆ ಎಲ್ಲೆಡೆಯಲ್ಲೂ ನೆಲಸಿರುವುದಕ್ಕೂ ವೈಧರ್ಮ್ಯದಿಂದ ಬಿಂಬಪ್ರತಿಬಿಂಬಭಾವವಿದೆ. ರಾಜನ ಮನಸ್ಸಿಗೂ ಸೂರ್ಯನಿಗೂ ಉಪಮಾನೋಪಮೇಯಭಾವವಿದೆ. ಆದರೆ ಮನಸ್ಸಿಗೆ ವಿಶೇಷಣವಾಗಿರುವ ಗರ್ವಾಭಿಮುಖ್ಯಕ್ಕೂ ಸೂರ್ಯನಿಗೆ ವಿಶೇಷಣವಾಗಿರುವ ಉದಯಪರ್ವತದ ತುದಿಗೆ ಬಾರದಿರುವಿಕೆಗೂ, ಹಾಗೆಯೇ ಶತ್ರುಸಂಹಾರಕ್ಕೂ ಮತ್ತು ತಮಸ್ಸು ನೆಲಸಿರುವುದಕ್ಕೂ ತೋರುವ ಬಿಂಬಪ್ರತಿಬಿಂಬಭಾವದಲ್ಲಿ ಸಮಾನಧರ್ಮವಿಲ್ಲ. ಏಕೆಂದರೆ ಭಾವಾಭಾವಗಳಿಗೆ ವಿರೋಧವೆಂಬುದು ಲೋಕಪ್ರಸಿದ್ಧವೆನಿಸಿದೆ. ಮನಸ್ಸಿನ ಅಭಿಮುಖ್ಯವೆಂಬುದು ಅಭಾವರೂಪವಿದ್ದು ಹಾಗೆಯೇ ಶತ್ರುಸಂಹಾರವೆಂಬುದು ಭಾವರೂಪವಾಗಿರುವುದು. ಹಾಗೆಯೇ ತಮಸ್ಸು ನೆಲಸಿರುವುದು ಅಭಾವರೂಪವಾದದ್ದು. ಹೀಗೆ ವೈಧರ್ಮ್ಯವಿದ್ದರೂ ಸಹ ಇಲ್ಲಿ ಬಿಂಬಪ್ರತಿಬಿಂಬಭಾವವಿದ್ದು ಇದು ದೃಷ್ಟಾಂತಾಲಂಕಾರದ ಉದಾಹರಣವೆನಿಸಿದೆ.

———

## ೧೯ ನಿದರ್ಶನಾಲಂಕಾರಃ—

ವಾಕ್ಯಾರ್ಥಯೋಃ ಸದೃಶಯೋರೈಕ್ಯಾರೋಪೋ ನಿದರ್ಶನಾ ।
ಯದಾತುಃ ಸೌಮ್ಯತಾ ಸೇಯಂ ಪೂರ್ಣೇಂದೋರಕಲಂಕತಾ ॥

ಅತ್ರ ದಾತೃಪುರುಷಸೌಮ್ಯತ್ವಸ್ಯ ಉಪಮೇಯವಾಕ್ಯಾರ್ಥಸ್ಯ, ಪೂರ್ಣೇಂದೋಃ ಕಳಂಕತ್ವಸ್ಯ ಉಪಮಾನವಾಕ್ಯಾರ್ಥಸ್ಯ ಯತ್ತದ್ಭ್ಯಾಂ ಐಕ್ಯಾರೋಪಃ. ಯಥಾ ವಾ—

ಅರಣ್ಯರುದಿತಂ ಕೃತಂ ಶವಶರೀರಮುದ್ವರ್ತಿತಂ
ಸ್ಥಲೇಽಬ್ಜಮವರೋಪಿತಂ ಸುಚಿರಮೂಷರೇ ವರ್ತಿತಮ್ ॥
ಶ್ವಪುಚ್ಛಮವನಾಮಿತಂ ಬಧಿರಕರ್ಣಜಾಪಃ ಕೃತಃ
ಧೃತೋಽಂಧಮುಖದರ್ಪಣೋ ಯದಬುಧೋ ಜನಃ ಸೇವಿತಃ ॥

ಅತ್ರ ಅಬುಧಜನಸೇವಾಯಾಃ ಅರಣ್ಯರೋದನಾದೀಃ ಯತ್ತದ್ಭ್ಯಾಂ ಐಕ್ಯಾರೋಪಃ.

ಎರಡು ವಾಕ್ಯಾರ್ಥಗಳು ಸದೃಶವಾಗಿರುವಾಗ ಉಪಮೇಯವಾಕ್ಯಾರ್ಥದಲ್ಲಿ ಉಪಮಾನವಾಕ್ಯಾರ್ಥದ ಅಭೇದವನ್ನು ಆರೋಪಿಸುವುದೇ ನಿದರ್ಶನ ಎನಿಸುವುದು. ದಾನಶೂರನಲ್ಲಿರುವ ಸೌಮ್ಯತೆಯೂ ಪೂರ್ಣಚಂದ್ರನಲ್ಲಿರುವ ನಿಷ್ಕಳಂಕಸ್ಥಿತಿಯೂ ಒಂದೇ.' ಇಲ್ಲಿ ದಾತೃವಿನಲ್ಲಿ ಸೌಮ್ಯತೆ ಇದೆ ಎಂಬುದೇ ಉಪಮೇಯವಾಕ್ಯಾರ್ಥ. ಪೂರ್ಣಚಂದ್ರನಲ್ಲಿ ನಿಷ್ಕಳಂಕಸ್ಥಿತಿ ಇದೆ ಎಂಬುದೇ ಉಪಮಾನ ವಾಕ್ಯಾರ್ಥ. ಪೂರ್ಣಚಂದ್ರನಲ್ಲಿ ಕಳಂಕವಿರುವಂತೆ ದಾತೃವಿನಲ್ಲಿ ಕೊಂಚ ಅಭಿಮಾನವಿದ್ದೇ ಇರುತ್ತದೆ ಚಂದ್ರನು ನಿಷ್ಕಳಂಕನಾಗುವುದು ಹೇಗೆ ಅಸಾಧ್ಯವೋ ಹಾಗೆ ದಾತೃ ಸೌಮ್ಯನಾಗುವುದೂ ಅಸಾಧ್ಯವೇ ಎಂಬ ಅಭಿಪ್ರಾಯದಿಂದ ಉಪಮೇಯ ವಾಕ್ಯಾರ್ಥದಲ್ಲಿ ಉಪಮಾನವಾಕ್ಯಾರ್ಥದ ಐಕ್ಯವನ್ನು ಯತ್—ತತ್ ಎಂಬ ಪದಗಳಿಂದ ತಿಳಿಸಲಾಗಿದೆ. ಇಲ್ಲಿ ಮುಖವೇ ಚಂದ್ರನೆಂಬಂತೆ ದಾತೃವಿನ ಸೌಮ್ಯತೆಯು ಪೂರ್ಣಚಂದ್ರನ ನಿಷ್ಕಳಂಕಸ್ಥಿತಿ ಎಂದು ಹೇಳಿದರೂ ಐಕ್ಯವನ್ನು ಆರೋಪಿಸಬಹುದು, ಆದರೂ ಯತ್ ತತ್ ಎಂಬ ಪದಗಳಿಂದ ಐಕ್ಯಾರೋಪವು ಬೇಗ ತೋರುವುದೆಂದು ತಿಳಿಸಲಿಕ್ಕಾಗಿ ನಿದರ್ಶನೆ ಹೊರಟಿದೆ.

"ಅವಿವೇಕಿಗಳ ಸೇವೆಯೂ ಅರಣ್ಯರೋದನವೂ ಒಂದೇ. ಹಾಗೆಯೇ ಹೆಣಗಳಿಗೆ ಸ್ನಾನಮಾಡಿಸುವುದು, ಗಟ್ಟಿಯಾದ ನೆಲದಲ್ಲಿ ಕಮಲವನ್ನು ಬೆಳೆಸುವುದು, ಬಂಜರುಭೂಮಿಯಲ್ಲಿ ಬಹುಕಾಲ ಮಳೆ ಸುರಿಯುವುದು, ನಾಯಿ ಬಾಲವನ್ನು ಬಗ್ಗಿಸುವುದು, ಕಿವುಡನ ಕಿವಿಯಲ್ಲಿ ಜಪಿಸುವುದು, ಕುರುಡನ ಮುಖದೆದುರಿಗೆ ಕನ್ನಡಿಯನ್ನು ತೋರಿಸುವುದು ಇವೆಲ್ಲವೂ ಹೇಗೋ ಹಾಗೆಯೇ ಅವಿವೇಕಿಗಳ ಸೇವೆ." ಇಲ್ಲಿ ಹೇಳಿರುವ ಅಂಶಗಳೆಲ್ಲವೂ ಯಾವ ಫಲವನ್ನೂ ಕೊಡುವಂತಿಲ್ಲ.

ಲ್ಲಕ್ಕೂ ನೀಚರ ಸೇವೆ ಎಂಬ ಪ್ರಕೃತವಾಕ್ಯಾರ್ಥದಲ್ಲಿ ಐಕ್ಯವನ್ನು ಕಲ್ಪಿಸಲಾಗಿದೆ. ಮೂಲದ ಉದಾಹರಣೆಯಲ್ಲಿ ಒಂದೇ ಉಪಮೇಯವಾಕ್ಯಾರ್ಥಕ್ಕೆ ಒಂದೇ ಉಪಮಾನ ವಾಕ್ಯಾರ್ಥದೊಡನೆ ಐಕ್ಯವನ್ನು ಆರೋಪಿಸಿದೆ. ಇಲ್ಲಿಯಾದರೋ ಒಂದು ಉಪಮೇಯವಾಕ್ಯಾರ್ಥಕ್ಕೆ ಅನೇಕ ಉಪಮಾನವಾಕ್ಯಾರ್ಥಗಳೊಡನೆ ಐಕ್ಯವನ್ನು ಯತ್ ತತ್ ಎಂಬ ಪದಗಳ ಮೂಲಕ ಆರೋಪಿಸಲಾಗಿದೆ.

ಪದಾರ್ಥವೃತ್ತಿಮಪ್ಯೇಕೇ ವದಂತ್ಯನ್ಯಾಂ ನಿದರ್ಶನಾಮ್ ।
ತ್ವನ್ನೇತ್ರಯುಗಳಂ ಧತ್ತೇ ಲೀಲಾಂ ನೀಲಾಂಬುಜನ್ಮನೋಃ ॥

ಅತ್ರ ನೇತ್ರಯುಗಳೇ ನೀಲಾಂಬುಜಗತಲೀಲಾಪದಾರ್ಥಾರೋಪೋ ನಿದರ್ಶನಾ. ಯಥಾ ವಾ —

ವಿಯೋಗೇ ಗೌಡನಾರೀಣಾಂ ಯೋ ಗಂಡತಲಪಾಂಡಿಮಾ ।
ಅದೃಶ್ಯತಸ ಖರ್ಜೂರೀಮಂಜರೀಗರ್ಭರೇಣುಷು ॥

ಪೂರ್ವಸ್ಮಿನ್ನುದಾಹರಣೇ ಉಪಮೇಯೇ ಉಪಮಾನಧರ್ಮಾರೋಪಃ ; ಇಹ ತು ಉಪಮಾನೇ ಉಪಮೇಯಧರ್ಮಾರೋಪ ಇತಿ ಭೇದಃ ಉಭಯತ್ರಾಪ್ಯನ್ಯಧರ್ಮಸ್ಯ ಅನ್ಯತ್ರ ಅಸಂಭವೇನ ತತ್ಸದೃಶಧರ್ಮಾಕ್ಷೇಪಾತ್ ಔಪಮ್ಯೇ ಪರ್ಯವಸಾನಂ ತುಲ್ಯಮ್. ಇಯಂ ಪದಾರ್ಥವೃತ್ತಿನಿದರ್ಶನಾ ಲಲಿತೋಪಮೇತಿ ಜಯದೇವೇನ ವ್ಯಾಹೃತಾ. ಯದ್ಯಪಿ ವಿಯೋಗೇ ಗೌಡನಾರೀಣಾಂ ಇತಿ ಶ್ಲೋಕಃ ಪ್ರಾಚೀನೈರ್ವಾಕ್ಯಾರ್ಥವೃತ್ತಿನಿದರ್ಶನಾಯಾಂ ಉದಾಹೃತಸ್ತಥಾಪಿ ವಿಶಿಷ್ಟಯೋರ್ಧರ್ಮಯೋರೈಕ್ಯಾರೋಪೋ ವಾಕ್ಯಾರ್ಥವೃತ್ತಿನಿದರ್ಶನಾ ; ಉಪಮಾನೋಪಮೇಯಯೋರನ್ಯತರಸ್ಮಿನ್ನನ್ಯತರಧರ್ಮಾರೋಪಃ ಪದಾರ್ಥವೃತ್ತಿನಿದರ್ಶನೇತಿ ವ್ಯವಸ್ಥಾಮಾಶ್ರಿತ್ಯ ಅಸ್ಮಾಭಿರಿಹೋದಾಹೃತಃ. ಏವಂ ಚ—

ತ್ವಯಿ ಸತಿ ಶಿವ ದಾತರ್ಯಸ್ಮದಭ್ಯರ್ಥಿತಾನಾಂ
ಇತರಮನುಸರಾಮೋ ದರ್ಶಯಾಮೋಽರ್ಥಿಮುದ್ರಾಮ್ ।
ಚರಮಚರಣಪಾತ್ರೈರ್ದುಗ್ರ್ರಹಂ ದೋಗ್ಧುಕಾಮಾಃ
ಕರಭಮನುಸರಾಮಃ ಕಾಮಧೇನೌ ಸ್ಥಿತಾಯಾಮ್ ॥
"ದೋರ್ಭ್ಯಾಮಬ್ಧಿಂ ತಿತೀರ್ಷಂತಸ್ತುಷ್ಟುವುಸ್ತೇ ಗುಣಾರ್ಣವಮ್"

ಇತ್ಯಾದಿಷು ವಾಕ್ಯಭೇದಾಭಾವೇಽಪಿ ವಾಕ್ಯಾರ್ಥವೃತ್ತಿರೇವ ನಿದರ್ಶನಾ. ವಿಶಿಷ್ಟಯೋರೈಕ್ಯಾರೋಪಸದ್ಭಾವಾತ್. ವಾಕ್ಯಾರ್ಥಯೋಃ ಸದೃಶಯೋರಿತಿ ವಿಶಿಷ್ಟಸ್ವರೂಪಯೋಃ ಪ್ರಸ್ತುತಾಪ್ರಸ್ತುತಧರ್ಮಯೋಃ ವಿವಕ್ಷಿತತ್ವಾದಿತಿ.

ವಾಕ್ಯಾರ್ಥಗಳಂತೆ ಪದಾರ್ಥಗಳಿಗೂ ಐಕ್ಯವನ್ನು ಆರೋಪಿಸಿದರೆ ಅವನ್ನು ನಿದರ್ಶನೆಯು ಬೇರೊಂದು ಬಗೆ ಎಂದು ಕರೆಯುತ್ತಾರೆ. 'ನಿನ್ನ ಕಣ್ಣುಗಳೆರಡು ನೀಲೋತ್ಪಲಗಳ ಕಾಂತಿಯನ್ನು ಹೊಂದಿವೆ' ಇಲ್ಲಿ ಕಣ್ಣುಗಳೆರಡರಲ್ಲಿ ನೀಲೋತ್ಪಲಗಳಲ್ಲಿರುವ ಕಾಂತಿಯನ್ನು ಆರೋಪಿಸಲಾಗಿದೆ. ಲೀಲೆ ಎಂಬ ಒಂದೇ ಪದದ ಅರ್ಥವನ್ನು ಇಲ್ಲಿ ಆರೋಪಿಸಿದ್ದರಿಂದ ಇದು ಪದಾರ್ಥನಿದರ್ಶನೆ ಎನಿಸಿದೆ.

'ಗೌಡ ದೇಶದ ಹೆಂಗಸರಿಗೆ ಅವರವರ ಪತಿಯ ವಿರಹದಿಂದ ಕಪೋಲ ಸ್ಥಲದಲ್ಲಿ ಯಾವ ಬಿಳುಪು ಕಾಣುತ್ತಿರುವುದೋ ಅದೇ ಖರ್ಜೂರದ ಗೊಂಚಲಿನೊಳಗಿರುವ ಧೂಳಿನಲ್ಲೂ ಕಂಡುಬಂದಿತು' ಇಲ್ಲಿ ಉಪಮಾನವೆನಿಸಿದ ಖರ್ಜೂರದ ಗೊಂಚಲಿನೊಳಗಿನ ಧೂಳಿನಲ್ಲಿ ಉಪಮೇಯವೆನಿಸಿದ ಗೌಡಸ್ತ್ರೀಯರ ಕಪೋಲದ ಬಿಳುಪನ್ನು ಆರೋಪಿಸಲಾಗಿದೆ ಹಿಂದಿನ 'ತ್ವನ್ನೇತ್ರಯುಗಳಂ ಧತ್ತೇ. ಎಂಬ ಉದಾಹರಣದಲ್ಲಿ ಉಪಮೇಯದಲ್ಲಿ ಉಪಮಾನದ ಧರ್ಮವನ್ನಾರೋಪಿಸಿದೆ'. ಇಲ್ಲಿಯಾದರೋ ಉಪಮಾನದಲ್ಲಿ ಉಪಮೇಯದ ಧರ್ಮವನ್ನಾರೋಪಿಸಲಾಗಿದೆ. ಇದೇ ಇವೆರಡರಲ್ಲೂ ಇರುವ ಭೇದ. ಆದರೆ ಈ ಎರಡು ಉದಾಹರಣಗಳಲ್ಲೂ ಒಂದರ 'ಧರ್ಮವನ್ನು ಮತ್ತೊಂದರಲ್ಲಿ ಆರೋಪಿಸಲಿಕ್ಕಾಗದ ಪ್ರಯುಕ್ತ ಆದಕ್ಕೆ ಸದೃಶವಾದ ಧರ್ಮವನ್ನು ಆಕ್ಷೇಪಿಸಿಕೊಂಡು ಆರೋಪಿಸಿರುವುದರಿಂದ ಎರಡೂ ಸಾದೃಶ್ಯದಲ್ಲಿಯೇ ಕೊನೆಗಾಣುತ್ತವೆ ಎಂಬುದು ಸಮಾನವಾಗಿದೆ. ನೀಲೋತ್ಪಲದ ಧರ್ಮವು ನೇತ್ರಗಳಲ್ಲಿ, ಗೌಡಸ್ತ್ರೀಯರ ಕಪೋಲದ ಬಿಳುಪು ಖರ್ಜೂರದ ಗೊಂಚಲಿನ ಗರ್ಭದಲ್ಲೂ ಬರಲಿಕ್ಕೆ ಸಾಧ್ಯವಿಲ್ಲವೆಂಬುದು ಸರ್ವಾನುಭವಸಿದ್ಧ. ಆದರೆ ನೀಲೋತ್ಪಲಗಳ ಕಾಂತಿಗೆ ಸದೃಶವಾದ ಕಾಂತಿಯು ನೇತ್ರಗಳಲ್ಲೂ, ಸ್ತ್ರೀಯರ ಕಪೋಲದ ಬಿಳುಪಿಗೆ ಸದೃಶವಾದ ಬಿಳುಪು ಖರ್ಜೂರದ ಗೊಂಚಲಿನ ಮಧ್ಯದಲ್ಲೂ ಇದ್ದುದರಿಂದ ಸಾದೃಶ್ಯವು ಎರಡುಕಡೆಗಳಲ್ಲೂ ಸಮಾನವೆನಿಸಿದೆ. ಈ ಪದಾರ್ಥ' ವೃತ್ತಿನಿದರ್ಶನೆಯನ್ನು ಲಲಿತೋಪಮೆ ಎಂದು ಜಯದೇವನು ತಿಳಿಸಿದ್ದಾನೆ. 'ವಿಯೋಗೇ ಗೌಡನಾರೀಣಾಂ' ಎಂಬ ಶ್ಲೋಕವನ್ನು ಪ್ರಾಚೀನರು ವಾಕ್ಯಾರ್ಥ ವೃತ್ತಿನಿದರ್ಶನೆಗೆ ಉದಾಹರಿಸಿರುವರು. ಆದರೂ ಬಿಂಬಪ್ರತಿಬಿಂಬಭಾವದೊಡಗೂಡಿದ ಧರ್ಮಗಳಿಗೆ ಐಕ್ಯವನ್ನಾರೋಪಿಸುವುದೇ ವಾಕ್ಯಾರ್ಥವೃತ್ತಿನಿದರ್ಶನೆ ಎಂದೂ, ಉಪಮಾನೋಪಮೇಯಗಳೊಳಗೆ ಒಂದರಲ್ಲಿ ಮತ್ತೊಂದರ ಧರ್ಮವನ್ನಾರೋಪಿಸುವುದೇ ಪದಾರ್ಥವೃತ್ತಿನಿದರ್ಶನೆ ಎಂದೂ ವ್ಯವಸ್ಥೆ ಮಾಡಿಕೊಂಡಿರುವುದರಿಂದ ಈ ಪದ್ಯವನ್ನು ಪದಾರ್ಥವೃತ್ತಿನಿದರ್ಶನೆಗೇ ಉದಾಹರಿಸಲಾಗಿದೆ. ಹೀಗೆಯೇ 'ಶಿವನೇ, ನೀನು ನಮ್ಮಂತಹ ಯಾಚಕರಿಗೆ ಯಥೇಚ್ಛವಾಗಿ ದಾನ ಮಾಡುತ್ತಿರುವಾಗ ಬೇರೆಯವರನ್ನು ಅನುಸರಿಸುತ್ತಲೂ, ಅಪರೆದುರಿಗೆ ಯಾಚನಾಗುರುತನ್ನು ತೋರಿಸುತ್ತಲೂ ಇರುವ ನಾವು ಹಾಲು ಕರೆಯಲಿಚ್ಛೆಯಿದ್ದರು

ಎದುರಿಗೆ ಕಾಮಧೇನುವಿದ್ದರೂ ಹಿಂದಿನ ಕಾಲುಗಳಿಂದ ಒದೆಯುತ್ತಿರುವ ಒಂಟೆಯನ್ನು ಹಿಂಬಾಲಿಸುತ್ತೇವೆ.' 'ತೋಳುಗಳಿಂದಲೇ ಸಮುದ್ರವನ್ನು ದಾಟಲು ಇಚ್ಛಿಸಿದವರು ಗುಣಸಾಗರನೆನಿಸಿದ ವಿಷ್ಣುವನ್ನು ಸ್ತುತಿಸಿದರು.' ಇಲ್ಲಿ ಭಗವಂತನನ್ನು ಸ್ತುತಿಸುವುದು ಸಮುದ್ರವನ್ನು ತೋಳಿನಿಂದ ದಾಟುವುದು ಇವೆರಡೂ ಒಂದೇ ಅಂದರೆ ಅಸಾಧ್ಯ ವೆಂದರ್ಥ. ಇಷ್ಟಪ್ರದನಾದ ಮಹೇಶ್ವರನಿರುವಾಗ ಕ್ಷುದ್ರನಾದ ಧನಿಕನನ್ನು ಅನುಸರಿ ವವನೇ ಇಲ್ಲ ಉಪಮೇಯ. ಕಾಮಧೇನುವಿರುವಾಗ ಒಂಟೆಯನ್ನು ಆಶ್ರಯಿಸುವವನೇ ಉಪಮಾನ. ಇವುಗಳಲ್ಲಿ ವಿಶೇಷಣವಾಗಿರುವ ಕಾಮಧೇನುವಿಗೂ ಮಹೇಶ್ವರನಿಗೂ ಕ್ಷುದ್ರನಾದ ಧನಿಕನಿಗೂ ಒಂಟೆಗೂ ಬಿಂಬಪ್ರತಿಬಿಂಬಭಾವವಿದೆ. ಇಂತಹ ವಾಕ್ಯಾರ್ಥ ದೊಳಗೆ ಉಪಮೇಯ ವಾಕ್ಯಾರ್ಥದಲ್ಲಿ ಉಪಮಾನವಾಕ್ಯಾರ್ಥವನ್ನು ಆರೋಪಿಸುವುದೇ ನಿದರ್ಶನ ಎಂದು ಹಿಂದೆಯೇ ತಿಳಿಸಿದೆ. ಹೀಗೆ ಹೇಳಿದ್ದರಿಂದ ಈ ಕೆಳಗಿನ ಎರಡು ಉದಾಹರಣೆಗಳಲ್ಲಿ ಒಂದೊಂದರಲ್ಲೂ ಬೇರೆಬೇರೆ ವಾಕ್ಯಗಳಿಲ್ಲದೆ ಒಂದೊಂದೇ ವಾಕ್ಯ ದಲ್ಲಿಯೇ ಐಕ್ಯವನ್ನು ಆರೋಪಿಸಿದ್ದರೂ ವಾಕ್ಯಾರ್ಥವೃತ್ತಿನಿದರ್ಶನೆಯನ್ನು ಹೇಳ ಬೇಕೇ ಹೊರತು ಪದಾರ್ಥವೃತ್ತಿನಿದರ್ಶನೆಗೆ ಇಲ್ಲಿ ಅವಕಾಶವಿಲ್ಲ. ಏಕೆಂದರೆ ಇವೆರಡ ರಲ್ಲೂ ಬಿಂಬಪ್ರತಿಬಿಂಬಭಾವವುಳ್ಳ ವಾಕ್ಯಾರ್ಥಗಳಲ್ಲಿಯೇ ಐಕ್ಯವನ್ನು ಆರೋಪಿಸಿರುವು ದಾಗಿ ಕಂಡಬಂದಿದೆ. ಹಾಗಾದರೆ ವಾಕ್ಯಾರ್ಥವೃತ್ತಿನಿದರ್ಶನೆಯ ಲಕ್ಷಣದಲ್ಲಿ ಹಾಗೆ ಏಕೆ ಹೇಳಿಲ್ಲವೆಂದರೆ ಅಲ್ಲಿ ಬಂದಿರುವ ವಾಕ್ಯಾರ್ಥಪದದಿಂದ ಬಿಂಬಪ್ರತಿಬಿಂಬಭಾವವುಳ್ಳ ವಸ್ತುವಿಗೆ ಸಂಬಂಧಿಸಿದ ಪ್ರಕೃತ ಅಪ್ರಕೃತ ಧರ್ಮಗಳನ್ನೇ ಗ್ರಹಿಸಬೇಕೆಂಬುದು ನಮ್ಮ ಇಷ್ಟ. ಹೀಗೆ ಎರಡು ಬಗೆಯ ನಿದರ್ಶನಗಳಿಗೂ ವೈಲಕ್ಷಣ್ಯವನ್ನು ಗ್ರಹಿಸಬೇಕೆಂದು ವ್ಯವಸ್ಥೆಮಾಡಲಾಗಿದೆ.

ಏವಂ ಚ—

> ರಾಜಸೇವಾ ಮನುಷ್ಯಾಣಾಂ ಅಸಿಧಾರಾವಲೇಹನಮ್ ।
> ಪಂಚಾನನಪರಿಷ್ವಂಗೋ ವ್ಯಾಲೀವದನಚುಂಬನಮ್ ॥

ಇತ್ಯತ್ರ ಪ್ರಸ್ತುತಾಪ್ರಸ್ತುತವೃತ್ತಾಂತಯೋಃ ಐಕ್ಯೈಕದೇಶೋಪಾತ್ತತ್ವೇಽಪಿ ವಾಕ್ಯಾರ್ಥವೃತ್ತಿನಿದರ್ಶನಾಯಾ ನ ಕ್ಷತಿಃ, ತಯೋರ್ಬಿಂಬಪ್ರತಿಬಿಂಬಭಾವಾಪನ್ನ ವಸ್ತುವಿಶಿಷ್ಟವ್ಯವಹಾರರೂಪತ್ವಾತ್. ಅತ ಏವ ನಿದರ್ಶನಾಯಾಃ ರೂಪಕಾದ್ಭೇದಃ, ರೂಪಕೇ ಹ್ಯವಿಶಿಷ್ಟಯೋರೇವ ಮುಖಚಂದ್ರಾದಿಕಯೋಸ್ಸೈಕ್ಯಾರೋಪಃ.

> ಅಂಘ್ರಿದಂಡೋ ಹರೇರೂರ್ಧ್ವಂ ಉತ್ಕ್ಷಿಪ್ತೋ ಬಲಿನಿಗ್ರಹೇ ।
> ವಿಧಿವಿಷ್ಟರಪದ್ಮಸ್ಯನಾಲದಂಡೋ ಮುದೇಽಸ್ತುವಃ ॥

ಇತಿ ವಿಶಿಷ್ಟರೂಪಕೋದಾಹರಣೇऽಪಿ ನ ಬಿಂಬಪ್ರತಿಬಿಂಬಭಾವಾಪನ್ನ ವಸ್ತುವಿಶಿಷ್ಟ ರೂಪತಾ ವಿಧಿವಿಷ್ಟರಕವಮಲಶ್ಲಿಷ್ಟತ್ವರೂಪಸಾಧಾರಣಧರ್ಮ ವತ್ತ್ವಸಂಪಾದನಾರ್ಥ ಮೇವ ತದ್ವಿಶೇಷಣೋಪಾದಾನಾತ್. 'ಯದ್ವಾದ್ಭುತಃ ಸೌಮ್ಯತಾ' ಇತ್ಯಾದಿಷ್ವಿದರ್ಶನೋದಾಹರಣೇಷು ದಾತೃಪೂರ್ಣೇಂದ್ವಾದೀನಾಂ ಆನಂದಕರತ್ವಾದಿನೇವ ಅತ್ರ ವಿಶೇಷಣಯೋಃ ಬಿಂಬಪ್ರತಿಬಿಂಬಭಾವಾಭಾವಾತ್. ಯತ್ರ ತು ವಿಷಯವಿಷಯಿವಿಶೇಷಣಾನಾಂ ಪರಸ್ಪರಸಾದೃಶ್ಯೇನ ಬಿಂಬಪ್ರತಿಬಿಂಬಭಾವೋऽಸ್ತಿ

ಜ್ಯೋತ್ಸ್ನಾಭಸ್ಮಚ್ಛುರಣಧವಳಾ ಬಿಭ್ರತೀ ತಾರಕಾಸ್ಥೀ-
ನ್ಯಂತರ್ಧಾನವ್ಯಸನರಸಿಕಾ ರಾತ್ರಿಕಾಪಾಲಕೀಯಮ್ ।
ದ್ವೀಪಾದ್ದ್ವೀಪಂ ಭ್ರಮತಿ ದಧತೀ ಚಂದ್ರಮುದ್ರಾಕಪಾಲೇ
ನ್ಯಸ್ತಂ ಸಿದ್ಧಾಂಜನಪರಿಮಲಂ ಲಾಂಛನಸ್ಯ ಛಲೇನ ।।

ಇತಿ ಸಾವಯವರೂಪಕೋದಾಹರಣೇಂ. ತತ್ರಾಪಿ ವಿಷಯವಿಷಯಿಣೋಃ ತದ್ವಿಶೇಷಣಾನಾಂ ಚ ಪ್ರತ್ಯೇಕಮೇವೈಕ್ಯರೂಪೋ ನ ತು ಜ್ಯೋತ್ಸ್ನಾದಿವಿಶಿಷ್ಟರಾತ್ರಿರೂಪವಿಷಯಸ್ಯ ಭಸ್ಮಾದಿವಿಶಿಷ್ಟಕಾಪಾಲಕೀರೂಪವಿಷಯಿಣಶ್ಚ ವಿಶಿಷ್ಟರೂಪೇಣ ಐಕ್ಯಾರೋಪೋऽಸ್ತೀತಿ. ತಸ್ಮಾದ್ರಾಜಸೇವಾ ಮನುಷ್ಯಾಣಾಂ ಇತ್ಯಾದಾವಪಿ ವಾಕ್ಯಾರ್ಥವೃತ್ತಿ ನಿದರ್ಶನೈವ ಯುಕ್ತಾ. ಮತಾಂತರೇ ತ್ವಿಹ ಪದಾರ್ಥವೃತ್ತ್ಯೈವ ನಿದರ್ಶನಯಾ ಭಾವ್ಯಮಿತಿ.

"ಮನುಷ್ಯರಿಗೆ ರಾಜರ ಸೇವೆಯೂ, ಖಡ್ಗದ ಧಾರೆಯನ್ನು ನೆಕ್ಕುವುದೂ, ಸಿಂಹದ ಆಲಿಂಗನೆಯೂ. ಸರ್ಪದ ಬಾಯಿಗೆ ಮುತ್ತಿಡುವುದೂ ಒಂದೇ ಎನಿಸಿವೆ" ಇಲ್ಲಿ ಪ್ರಕೃತವೂ ಮತ್ತು ಅಪ್ರಕೃತವೂ ಆದ ವೃತ್ತಾಂತಗಳನ್ನು ಒಂದೊಂದೇ ಪದದಿಂದಲೇ ತಿಳಿಸಿದ್ದರೂ ವಾಕ್ಯಾರ್ಥವೃತ್ತಿನಿದರ್ಶನೆಯನ್ನು ಹೇಳುವುದರಲ್ಲಿ ಯಾವ ಅಡ್ಡಿಯೂ ಇಲ್ಲ; ಯಾಕೆಂದರೆ ಇವೆರಡು ವೃತ್ತಾಂತಗಳೂ ಬಿಂಬಪ್ರತಿಬಿಂಬ ಭಾವವುಳ್ಳ ವಸ್ತುಗಳಿಗೆ ಸಂಬಂಧಿಸಿಕೊಂಡೇ ಇವೆ. ರಾಜಸೇವೆ ಎಂಬುದು ಪ್ರಕೃತ ವಿಷಯ ಅಂದರೆ ಉಪಮೇಯ. ಉಳಿದವು ಮೂರೂ ಅಪ್ರಕೃತವಿಷಯಿ ಅಂದರೆ ಉಪಮಾನಗಳು, ರಾಜಸೇವೆಯಲ್ಲಿ ರಾಜನೇ ವಿಶೇಷಣ. ಖಡ್ಗಧಾರೆಯನ್ನು ನೆಕ್ಕುವುದೆಂದು ಹೇಳಿದಾಗ ಅದರಲ್ಲಿ ಖಡ್ಗಧಾರೆಯೇ ವಿಶೇಷಣ. ಹಾಗೆಯೇ ಸಿಂಹದ ಆಲಿಂಗನದಲ್ಲಿ ಸಿಂಹವೇ ವಿಶೇಷಣ. ಸರ್ಪದ ಮುಖಚುಂಬನದಲ್ಲಿ ಸರ್ಪದ ಮುಖವೇ ವಿಶೇಷಣ. ಇವುಗಳಿಗೆ ಬಿಂಬಪ್ರತಿಬಿಂಬಭಾವವಿದೆ. ಇದರಿಂದ ಕೂಡಿದ ವಸ್ತುಗಳೆಂದರೆ ಸೇವೆ, ಅವಲೇಹನ, ಪರಿಷ್ವಂಗ, ಚುಂಬನ. ರಾಜಸೇವೆಯಲ್ಲಿ ಉಳಿದ ಮೂರು ವಸ್ತುಗಳ ಅಭೇದವನ್ನೇ ಇಲ್ಲಿ ಆರೋಪಿಸಲಾಗಿದೆ. ಅದರಿಂದ ಇಲ್ಲಿ ವಾಕ್ಯಾರ್ಥವೃತ್ತಿನಿದರ್ಶನೆಯನ್ನು ಹೇಳುವುದೇ ಯುಕ್ತ. ಇದರಿಂದಲೇ

ನಿದರ್ಶನೆಗೂ ರೂಪಕಕ್ಕೂ ಭೇದವು ಸ್ಪಷ್ಟಪಡುತ್ತದೆ. ರೂಪಕದಲ್ಲಿ ಬಿಂಬಪ್ರತಿಬಿಂಬಗಳ ಸಂಪರ್ಕವಿಲ್ಲದ ಉಪಮೇಯಉಪಮಾನಗಳಿಗೆ ಮಾತ್ರವೇ ಐಕ್ಯವನ್ನು ಆರೋಪಿಸಲಾಗುವುದು. ನಿದರ್ಶನೆಯಲ್ಲಾದರೋ ಬಿಂಬಪ್ರತಿಬಿಂಬಭಾವವುಳ್ಳ ವಸ್ತುಗಳಿಗೆ ಐಕ್ಯವನ್ನು ಆರೋಪಿಸಲಾಗುವುದು. ಹಾಗಾದರೆ ರೂಪಕದಲ್ಲೂ ಉಪಮೇಯೋಪಮಾನಗಳಿಗೆ ವಿಶೇಷಣಗಳಿರುವುದರಿಂದ ಅವಕ್ಕೆ ಬಿಂಬಪ್ರತಿಬಿಂಬ ಭಾವವಿರುವುದಿಲ್ಲವೆ ? ಎಂದು ಆಕ್ಷೇಪವು ಬರಲು ಅದನ್ನು ಈಗ ಉಪಪಾದಿಸಿ ಸಮಾಧಾನ ಮಾಡಲಾಗುವುದು. "ಬ್ರಹ್ಮನಿಗೆ ಆಸನವೆನಿಸಿದ ಕಮಲದ ನಾಳದಂಡವೆನಿಸಿದ್ದು ಬಲಿಯನ್ನು ಕೊಲ್ಲುವಾಗ ಮೇಲಕ್ಕೆ ಎತ್ತಿದ್ದ ಹರಿಯ ಪಾದದಂಡವು ನಿಮ್ಮನ್ನು ಸಂತೋಷಪಡಿಸಲಿ" ಇಲ್ಲಿ ಪಾದದಂಡವನ್ನು ನಾಳದಂಡವೆಂದು ಆರೋಪಿಸಲಾಗಿದೆ. ಆದರೆ ಇಲ್ಲಿ ಇವೆರಡಕ್ಕೂ ವಿಶೇಷಣಗಳಿವೆ. ಪಾದದಂಡವನ್ನು ಬಲಿಯ ನಿಗ್ರಹಕ್ಕಾಗಿ ಮೇಲಕ್ಕೆ ಎತ್ತಿದ್ದುದರಿಂದ ಅದರಲ್ಲಿ ಮೇಲಕ್ಕೆ ಎತ್ತಿರುವಿಕೆ ಎಂಬ ವಿಶೇಷಣವಿದೆ. ಅದರಂತೆಯೇ ನಾಳದಂಡವೂ ಕಮಲಕ್ಕೆ ಸಂಬಂಧಿಸಿದ್ದರಿಂದ ಕಮಲಸಂಬಂಧಿತ್ವ ಎಂಬ ವಿಶೇಷಣವು ಅದರಲ್ಲೂ ಇದೆ. ಹೀಗೆ ಉಪಮೇಯವೆನಿಸಿದ ಪಾದದಂಡದಲ್ಲೂ, ಉಪಮಾನವೆನಿಸಿದ ನಳದಂಡದಲ್ಲೂ ಒಂದೊಂದು ವಿಶೇಷಣವಿರುವ ಪ್ರಯುಕ್ತ ಇದು ವಿಶೇಷಣವಿಶಿಷ್ಟವಾದ ರೂಪಕಕ್ಕೆ ಉದಾಹರಣವೆನಿಸಿದೆ. ನಿದರ್ಶನೆಯಲ್ಲೂ ಹೀಗೆಯೇ ಇರುವುದರಿಂದ ಅದನ್ನು ರೂಪಕವಲ್ಲಿಯೇ ಸೇರಿಸಬಹುದಲ್ಲವೆ ? ಇವೆರಕ್ಕೂ ವೈಲಕ್ಷಣ್ಯವೇನಿದೆ ? ಎಂದು ಆಕ್ಷೇಪಿಸಲಾಗಿದೆ ಅದಕ್ಕೆ ಸಮಾಧಾನ ಈಗ ತಿಳಿಸಲಾಗುವುದು. ರೂಪಕದಲ್ಲಿ ಉಪಮಾನೋಪಮೇಯಗಳು ವಿಶೇಷಣವಿಶಿಷ್ಟವಾಗಿದ್ದರೂ ಬಿಂಬಪ್ರತಿಬಿಂಬಭಾವವುಳ್ಳ ವಸ್ತುವಿನೊಡನೆ ಕೂಡಿರುವುದಿಲ್ಲ ; ಹಾಗಾದರೆ ಅಲ್ಲಿ ವಿಶೇಷಣಗಳನ್ನು ಯಾಕೆ ಹೇಳಬೇಕು ? ಅಲ್ಲಿ ವಿಶೇಷಗಳನ್ನು ಕೊಡುವುದರಿಂದ ಫಲವೇನು ? ಆದರೆ ಆ ಫಲವನ್ನು ತಿಳಿಸುತ್ತಾನೆ. ಪಾದದಂಡ–ನಾಳದಂಡ ಇವೆರಡಕ್ಕೂ ಒಂದು ಸಾಧಾರಣ ಧರ್ಮವಿದ್ದರೆ ಮಾತ್ರವೇ ಐಕ್ಯವನ್ನು ಆರೋಪಿಸಲು ಸಾಧ್ಯವಾದೀತು. ಈ ಸಾಧಾರಣಧರ್ಮವನ್ನು ತಿಳಿಸಲಿಕ್ಕಾಗಿಯೇ ರೂಪಕೋದಾಹರಣದಲ್ಲಿ ವಿಶೇಷಣವು ಬಂದಿದೆ ಪಾದದಂಡ ಮತ್ತು ನಾಳದಂಡ ಇವೆರಡೂ ಬ್ರಹ್ಮನಿಗೆ ಆಸನವನಿಸಿದ ಕಮಲಕ್ಕೆ ಸಂಬಂಧಿಸಿದವು. ಕಮಲಸಂಬಂಧಿತ್ವ ಎಂಬುದೇ ಇಲ್ಲಿ ಇವಕ್ಕೆ ಸಾಧಾರಣಧರ್ಮವೆನಿಸಿದೆ. ಹೀಗೆ ಸಾಧಾರಣಧರ್ಮ ಒಂದನ್ನು ಸಾಧಿಸಲಿಕ್ಕಾಗಿಯೇ ವಿಶೇಷಣವನ್ನು ಇಲ್ಲಿ ಕೊಡಲಾಗಿದೆ. "ಯದ್ದಾತುಃ ಸೌಮ್ಯತಾ" ಎಂಬ ನಿದರ್ಶನೆಯ ಉದಾಹರಣದಲ್ಲಿ ದಾತೃ ಮತ್ತು ಪೂರ್ಣಚಂದ್ರ ಇವರಿಬ್ಬರಲ್ಲಿ ಆನಂದಕರತ್ವ, ನೋಡುವವರಿಗೆ ಸಂತೋಷಪಡಿಸುವಿಕೆ ಎಂಬ ಸಾಧಾರಣಧರ್ಮವಿರುವುದರಿಂದ ಬಿಂಬಪ್ರತಿಬಿಂಬ ಭಾವವಿದೆ. ಹಾಗೆ ರೂಪಕೋದಾಹರಣದಲ್ಲಿ ದುೀಲಕ್ಕೆ ಎತ್ತಿರುವಿಕೆ ನಾಭಿಕಮಲಕ್ಕೆ ಸಂಬಂಧಿಸಿರುವಿಕೆ' ಇವೆರಡು ವಿಶೇಷಣಗಳಿಗೆ ಬಿಂಬ ಪ್ರತಿಬಿಂಬಭಾವವಿಲ್ಲ. ಹಾಗಾ

ದರೆ ಎಲ್ಲಿ ಉಪಮೇಯ ಮತ್ತು ಉಪಮಾನ ಇವುಗಳ ವಿಶೇಷಣಗಳಿಗೆ ಪರಸ್ಪ ಸಾದೃಶ್ಯದಿಂದ ಬಿಂಬಪ್ರತಿಬಿಂಬಭಾವವು ತೋರುವುದೋ ಅಂತಹ "ಜ್ಯೋತ್ಸ್ನಾ ಭಸ್ಮಚ್ಛುರಣಧವಳಾ" ಎಂಬ ಸಾವಯುವರೂಪಕದ ಉದಾಹರಣದಲ್ಲಿ ಬಿಂಬಪ್ರ ಬಿಂಬಭಾವವಿಶಿಷ್ಟವಾದ ವಸ್ತುಗಳಿಗೇ ಐಕ್ಯವನ್ನು ಆರಂಭಿಸಿರುವುದರಿಂದ ಅ ಲ್ಲಿಯೇ ನಿದರ್ಶನೆಯುನ್ನು ಸೇರಿಸಬಹುದಲ್ಲವೆ ? ಇದನ್ನು ಪ್ರತ್ಯೇಕವಾಗಿ ಏಕೆ ಹೇ ಬೇಕು ಎಂದು ಮತ್ತೆ ಆಕ್ಷೇಪವು ಬರುವುದೆಂದು ಉಪಪಾದಿಸಿ ಅನಂತರ ಸಮಾಧಾ ಮಾಡುತ್ತಾನೆ. ಸಾವಯುವರೂಪಕದಲ್ಲಿ ಉಪಮಾನೋಪಮೇಯಗಳ ವಿಶೇಷ ಗಳಿಗೆ ಸಾದೃಶ್ಯವಿರುವುದರಿಂದ ಬಿಂಬಪ್ರತಿಬಿಂಬಭಾವವುಂಟೆಂಬುದನ್ನು ಮೊದ ಉದಾಹರಿಸುತ್ತಾನೆ.

"ಚಂದ್ರಿಕೆ ಎಂಬ ಭಸ್ಮವನ್ನು ಹಚ್ಚಿಕೊಂಡದ್ದರಿಂದ ಬೆಳ್ಳಗಿದ್ದು" ನಕ್ಷ ಗಳೆಂಬ ಮೂಳೆಗಳನ್ನು ಧರಿಸಿ, ನೋಡುವವರೆದುರಿಗೆ ಆಕಸ್ಮಿಕವಾಗಿ ಕಣ್ಮರೆಯಾ ವುದನ್ನು ಚೆನ್ನಾಗಿ ಅರಿತು ಚಂದ್ರನೆಂಬ ಭಿಕ್ಷಾಪಾತ್ರದಲ್ಲಿಟ್ಟಿರುವ ಸಿದ್ಧಾಂಜ ಚೂರ್ಣವನ್ನು ಕಳಂಕದ ನೆಪದಿಂದ ಧರಿಸಿರುವ ರಾತ್ರಿ ಎಂಬ ಯೋಗಿನಿ ದ್ವೀಪದಿಂದ ದ್ವೀಪಕ್ಕೆ ಅಲೆಯುತ್ತಿರುವಳು". ಇಲ್ಲಿ ರಾತ್ರಿಯನ್ನು, ಯೋಗಿನಿ ಎ ಭಾವಿಸುವುದೇ ಪ್ರಧಾನ ರೂಪಕ. ಇದರ ಅಂಗವೆನಿಸಿದ ಬೇರೆ ರೂಪಕಗಳ ವಿಶೇಷಣಗಳು ತಿಳಿಸುತ್ತವೆ. ಚಂದ್ರಿಕೆಯೇ ಭಸ್ಮ, ನಕ್ಷತ್ರಗಳೇ ಮೂಳೆಗ ಚಂದ್ರನೇ ಮುದ್ರಾಕಪಾಲ, ಸಿದ್ಧಾಂಜನವೇ ಲಾಂಛನ. ಹೀಗೆ ಹೇಳಿದ್ದ ಇವೆಲ್ಲವೂ ಅವಯವ ರೂಪಕಗಳು. ಹೀಗೆ ಸಾವಯುವರೂಪಕದಲ್ಲಿ ಉಪಮಾ ಮತ್ತು ಉಪಮೇಯದ ವಿಶೇಷಣಗಳೇ ಬಿಂಬಪ್ರತಿಬಿಂಬಗಳ ಸ್ಥಾನದಲ್ಲಿರು ರಿಂದ ಇದರಂತೆಯೇ ನಿದರ್ಶನೆಯೂ ಆಯಿತೆಂಬುದೇ ಆಕ್ಷೇಪಕನ ಆಶ ಇದಕ್ಕೆ ಸಮಾಧಾನವು ಹೀಗಿದೆ. ಸಾವಯುವರೂಪಕದಲ್ಲಿ ವಿಶೇಷಣಗಳ ತಿಳಿಸಿದ್ದರೂ ಅಲ್ಲಿ ಉಪಮಾನೋಪಮೇಯಗಳಿಗೂ, ಅವುಗಳ ವಿಶೇಷಣಗಳ ಪ್ರತ್ಯೇಕವಾಗಿ ಐಕ್ಯವನ್ನಾರೋಪಿಸಲಾಗಿದೆ. ಆದರೆ ಚಂದ್ರಿಕೆ ಮೊದಲಾದ ವಿಶೇ ಗಳಿಂದೊಡಗೂಡಿದ ರಾತ್ರಿ ಎಂಬ ಉಪಮೇಯಕ್ಕೂ, ಭಸ್ಮ ಮೊದಲಾ ಗಳಿಂದೊಡಗೂಡಿದ ಯೋಗಿನಿ ಎಂಬ ಉಪಮಾನಕ್ಕೂ ಇಲ್ಲಿ ಐಕ್ಯವನ್ನಾರೋಪಿ ಇಲ್ಲಿ ಕೇವಲ ಉಪಮೇಯದಲ್ಲಿ ಕೇವಲ ಉಪಮಾನದ ಐಕ್ಯಾರೋಪವನ್ನೂ ಉಪಮೇಯದ ವಿಶೇಷಣಗಳಲ್ಲಿ ಆ ಉಪಮಾನದ ವಿಶೇಷಣಗಳಿಗೆ ಐಕ್ಯಾರೋ ವನ್ನೂ ಪ್ರತ್ಯೇಕವಾಗಿ ತಿಳಿಸಿದೆಯೇ ಹೊರತು ವಿಶೇಷಣಗಳಿಂದೊಡಗೂಡಿದ ಉ ಮೇಯದಲ್ಲಿ ವಿಶೇಷಣಗಳಿಂದೊಡಗೂಡಿದ ಉಪಮಾನದ ಐಕ್ಯವನ್ನು ಆರೋಪಿ ಆದ್ದರಿಂದ ರೂಪಕದಲ್ಲಿ ನಿದರ್ಶನೆಯು ಸೇರಲಾರದು. ಆದರ ಕಾರ್ಯವೇ ಬೇ ನಿದರ್ಶನೆಯ ಕಾರ್ಯವೇ ಬೇರೆ, ಹೀಗೆ ಇವೆರಡಕ್ಕೂ ವೈಲಕ್ಷಣ್ಯವಿರುವುದ

ಎರಡೂ ಸ್ವತಂತ್ರವಾದ ಅಲಂಕಾರಗಳಾಗಿ ಶೋಭಿಸುತ್ತಿವೆ. ಹೀಗೆ ರೂಪಕಕ್ಕೂ ನಿದರ್ಶನೆಗೂ ಭೇದವಿರುವುದರಿಂದ "ರಾಜಸೇವಾ ಮನುಷ್ಯಾಣಾಂ" ಎಂಬ ಶ್ಲೋಕದಲ್ಲಿ ವಾಕ್ಯಾರ್ಥನಿದರ್ಶನೆಯನ್ನು ಹೇಳುವುದರಲ್ಲಿ ಏನೂ ಅಡ್ಡಿಯಿಲ್ಲ. ಬೇರೆಯವರ ಮತದಲ್ಲಿ ಅದು ಪದಾರ್ಥವೃತ್ತಿನಿದರ್ಶನೆಯೇ ಆಗುವುದು. ಅಲ್ಲಿ ರೂಪಕಕ್ಕಂತೂ ಅವಕಾಶವೇ ಇಲ್ಲ.

ಅಪರಾಂ ಬೋಧನಂ ಪ್ರಾಹುಃ ಕ್ರಿಯಯಾಽಸತ್ಸದರ್ಥಯೋಃ ।
ನಶ್ಯೇದ್ರಾಜವಿರೋಧೀತಿ ಕ್ಷೀಣಂ ಚಂದ್ರೋದಯೇ ತಮಃ ॥೪೫॥
ಉದಯನ್ನೇವ ಸವಿತಾ ಪದ್ಮೇಷ್ವರ್ಪಯತಿ ಶ್ರಿಯಮ್ ।
ವಿಭಾವಯನ್ ಸಮೃದ್ಧೀನಾಂ ಫಲಂ ಸುಹೃದನುಗ್ರಹಃ ॥೫೫॥

ಕಸ್ಯಚಿತ್ ಕಿಂಚಿತ್ಕ್ರಿಯಾವಿಶಿಷ್ಟಸ್ಯ ಸ್ವಕ್ರಿಯಯಾ ಪರಾನ್ಪ್ರತಿ ಅಸತಃ ಸತೋ ವಾ ಅರ್ಥಸ್ಯ ಬೋಧನಂ ಯನ್ನಿಬಧ್ಯತೇ ತದಪರಾಂ ನಿದರ್ಶನಾಮಾಹುಃ. ಅಸದರ್ಥ ಬೋಧನೇ ಉತ್ತರಾರ್ಧಮುದಾಹರಣಮ್. ತತ್ರ ನಶ್ಯೇದಿತಿ ಬೋಧಯದಿತಿ ವಕ್ತವ್ಯೇ ಬೋಧಯದಿತ್ಯಸ್ಯ ಗಮ್ಯಮಾನತ್ವಾತ್ ಅಪ್ರಯೋಗಃ. ತತಶ್ಚ ರಾಜ್ಞಾ ಚಂದ್ರೇಣ ಸಹ ವಿರುಧ್ಯ ಸ್ವಯಂ ನಾಶಕ್ರಿಯಯಾ ವಿಶಿಷ್ಟಂ ತಮಃ ಸ್ವಕೀಯನಾಶಕ್ರಿಯಯಾ ದೃಷ್ಟಾಂತಭೂತಯಾ ಅನ್ಯೋಽಪ್ಯೇವಂ ರಾಜವಿರುದ್ಧಶ್ಚೇನ್ನಶ್ಯೇದಿತ್ಯನಿಷ್ಟಪರ್ಯವಸಾಯಿನಮರ್ಥಂ ಬೋಧಯದೇವ ನಷ್ಟಮಿತಿ ನಿಬಂಧನಾತ್ಅಸದರ್ಥನಿದರ್ಶನಾ. ತಥಾ ಉತ್ತರಶ್ಲೋಕೇ ಸವಿತಾ ಸ್ವೋದಯಸಮಯ ಏವ ಪದ್ಮೇಷು ಲಕ್ಷ್ಮೀಮಾದಧಾನಃ ಸ್ವಯಾ ಪದ್ಮಲಕ್ಷ್ಮ್ಯಾಧಾನಕ್ರಿಯಯಾ ಪರಾನ್ಪ್ರತಿ ಸಮೃದ್ಧೀನಾಂ ಫಲಂ ಸುಹೃದನುಗ್ರಹ ಏವೇತಿ ಶ್ರೇಯಸ್ಕರಮರ್ಥಂ ಬೋಧಯನ್ನಿಬದ್ಧ ಇತಿ ಸದರ್ಥನಿದರ್ಶನಾ. ಯಥಾ ವಾ—

ಉನ್ನತಂ ಪದಮವಾಪ್ಯ ಯೋ ಲಘುರ್ಹೇಲಯೈವ ಸ ಪತೇದಿತಿ ಬ್ರುವನ್।
ಶೈಲಶೇಖರಗತಃ ಪೃಷದ್ಗಣಶ್ಚಾರುಮಾರುತಧುತಃ ಪತತ್ಯಧಃ ॥

ಅತ್ರಗಿರಿ ಶೇಖರಗತೋ ವೃಷ್ಟಿಬಿಂದುಗಣೋ ಮಂದಮಾರುತಮಾತ್ರೇಣಾಪಿ ಕಂಪಿತಃ ಪತನ್ ಲಘೋರುನ್ನತಪದಪ್ರಾಪ್ತಿಃಪತನಹೇತುರಿತ್ಯಸದರ್ಥಂ ಬೋಧಯನ್ನಿಬದ್ಧ ಇತ್ಯಸರ್ಥನಿದರ್ಶನಾ.

ಚೂಡಾಮಣಿಪದೇ ಧತ್ತೇ ಯೋ ದೇವಂ ರವಿಮಾಗತಮ್ ।
ಸತಾಂ ಕಾರ್ಯಾತಿಥೇಯೀತಿ ಬೋಧಯನ್ ಗೃಹಮೇಧಿನಃ ॥

ಅತ್ರ ಸಮಾಗತಂ ರವಿಂ ಶಿರಸಾ ಸಂಭಾವಯನ್ನುದಯಾಚಲಃ ಸ್ವನಿಷ್ಠಯಾ ರವಿಧಾರಣಕ್ರಿಯಯಾ ಸತಾಮೇವಂ ಗೃಹಮೇಧಿಭಿರಾತಿಥ್ಯಂ ಕಾರ್ಯಮಿತಿ ಸದರ್ಥಂ

ಬೋಧಯನ್ನಿಬದ್ಧ ಇತಿ ಸದರ್ಥನಿದರ್ಶನಾ. ಅತ್ರ ಕೇಚಿತ್ ವಾಕ್ಯಾರ್ಥವೃ
ಪದಾರ್ಥವೃತ್ತಿನಿದರ್ಶನಾದ್ವಯಂ ಅಸಂಭವದ್ವಸ್ತುಸಂಬಂಧನಿಬಂಧನಮಿತಿ, ತೃ
ಯಾ ತು ಸಂಭವದ್ವಸ್ತುಸಂಬಂಧನಿಬಂಧನೇತಿ ಚ ವ್ಯವಹರಂತಿ. ತಥಾಹಿ, ಪ್ರ
ನಿದರ್ಶನಾಯಾಂ ವಾಕ್ಯಾರ್ಥಯೋರೈಕ್ಯಮಸಂಭವತ್ ತಯೋಃ ಸಾಮ್ಯೇ ಪರ್ಯವ
ದ್ವಿತೀಯನಿದರ್ಶನಾಯಾಮಪ್ಯನ್ಯಧರ್ಮೋಽನ್ಯತ್ರಾಽಸಂಭವನ್ ಧರ್ಮಿಣೋಃ ಸಾ
ಮ್ಯೇ ಪರ್ಯವಸ್ಯತಿ. ತೃತೀಯನಿದರ್ಶನಾಯಾಂ ತು ಸ್ವಕ್ರಿಯಯಾ ಪರಾನ್ಪ್ರ
ಸದಸದರ್ಥಬೋಧನಂ ಸಂಭವದೇವ ಸಮತಾಂ ಗರ್ಭೀಕರೋತಿ. "ಬೋಧಯ
ಗೃಹಮೇಧಿನಃ'' ಇತ್ಯಾದೌ ಹಿ ಕಾರೀಷೋಽಗ್ನಿರಧ್ಯಾಪಯತೀತಿವತ್ ಸಮ
ಚರಣೇ ಣಿಚಃ ಪ್ರಯೋಗಃ. ತತಶ್ಚ ಯಥಾ ಕಾರೀಷೋಽಗ್ನಿಃ ಶೀತಾಪನಯ
ವಟೂನ್ ಅಧ್ಯಯನ ಸಮರ್ಥಾನ್ ಕರೋತಿ ಏವಂ ವರ್ಣ್ಯಮಾನಃ ಪರ್ವತಃ ಸ್ವ
ಮುಪಮಾನಭಾವೇನ ಗೃಹಮೇಧಿನಃ ಉಕ್ತಬೋಧನಸಮರ್ಥಾನ್ ಕರ್ತುಂ ಕ್ಷಮ
ಯಥಾಽಯಂ ಪರ್ವತಃ ಸಮಾಗತಂ ಕವಿಂ ಶಿರಸಾ ಸಂಭಾವಯತ್ಯೇವಂ ಗೃಹಮ
ಸಮಾಗತಂ ಸಂತಮುಚಿತಪೂಜಯಾ ಸಂಭಾವಯೇದಿತಿ. ಅತಃ ಸಂಭವತಿ ಬೋ
ಸಂಬಂಧ ಇತಿ.

ಯಾವುದೋ ಒಂದು ಕ್ರಿಯೆಯಲ್ಲಿ ನಿರತನಾಗಿರುವ ಯಾವನೋ ಒ
ವ್ಯಕ್ತಿಯು ತನ್ನ ಕ್ರಿಯೆಯಿಂದ ಬೇರೊಬ್ಬನಿಗೆ ಒಳ್ಳೆಯದೋ ಅಥವಾ ಕೆಟ್ಟದು
ಆಗಿರುವ ಒಂದು ಅಂಶವನ್ನು ತಿಳಿಸಿಕೊಡುವುದೇ ನಿದರ್ಶನೆಯ ಮೂರನೆಯ
ಎನಿಸುತ್ತದೆ. "ರಾಜನ ವಿರೋಧಿಯು ನಾಶವಾಗಲೇಬೇಕೆಂದು ತಿಳಿದು ಕತ್ತಲೆ
ಚಂದ್ರೋದಯವಾದೊಡನೆಯೇ ಕಣ್ಮರೆಯಾಯಿತು, ಸ್ನೇಹಿತರನ್ನು ಅನುಗ್ರ
ವುದೇ ಐಶ್ವರ್ಯದ ಫಲವೆಂದು ಭಾವಿಸುತ್ತ ಸೂರ್ಯನು ಉದಯಿಸುವಾಗ
ಕಮಲಗಳಲ್ಲಿ ಕಾಂತಿಯನ್ನು ಬೀರುವನು." ಇಲ್ಲಿ ರಾಜನ ಶತ್ರುವು ನಾಶವಾ
ಬೇಕೆಂಬುದನ್ನು ಬೋಧಿಸುತ್ತಲೇ ಕತ್ತಲೆಯು ತೊಲಗಿತು ಎಂಬಲ್ಲಿ 'ಬೋಧಿ
ತ್ತಲೇ' ಎಂಬ ಅರ್ಥವು ವ್ಯಂಗ್ಯವಾಗಿ ತೋರುವುದರಿಂದ ಆ ಪದವನ್ನು ಪ್ರಯೋ
ಸಿಲ್ಲ; ಆದ್ದರಿಂದ ರಾಜನೆನಿಸಿದ ಚಂದ್ರನೊಡನೆ ವಿರೋಧಮಾಡಿಕೊಂಡು ತಾ
ನಾಶವಾಗಲಿರುವ ಕತ್ತಲೆಯು ತಾನು ನಾಶವಾಗುವುದನ್ನೇ ಉದಾಹರಣವಾಗಿ
ಕೊಂಡು ತನ್ನಂತೆ ರಾಜನಿಗೆ ವಿರೋಧಿಯಾದವನೂ ಸಹ ನಾಶವಾಗಲೇಬೇ
ಎಂದು ಅನಿಷ್ಟದಲ್ಲಿ ಕೊನೆಗಾಣುವ ಅರ್ಥವನ್ನು ಜನರಿಗೆ ಬೋಧಿಸುತ್ತಲೇ ತೊ
ಗಿತು, ಹೀಗೆ ಹೇಳಿದ್ದರಿಂದ ಅಸದರ್ಥವನ್ನು ತಿಳಿಸಿದಂತಾಯಿತು. ಹಾಗೆ
ಮುಂದಿನ ಶ್ಲೋಕದಲ್ಲಿ ಸೂರ್ಯನು ತನ್ನ ಉದಯಕಾಲದಲ್ಲಿಯೇ ಕಮಲಗ
ತನ್ನ ವೈಭವವನ್ನು ನೆಲೆಗೊಳಿಸುತ್ತ ಅವುಗಳ ಕಾಂತಿಯನ್ನು ಹೆಚ್ಚಿಸುವ ಮೂ

ಬೇರೆಯಾವರಿಗೂ ಆಶ್ರಿತರನ್ನು ಅನುಗ್ರಹಿಸುವುದೇ ಐಶ್ವರ್ಯದ ಫಲವೆಂಬ ಒಳ್ಳೆಯ ಅಂಶವನ್ನು ಬೋಧಿಸುತ್ತಲಿರುವನೆಂದು ತಿಳಿಸಲಾಗಿದೆ. ಆದ್ದರಿಂದ ಎರಡನೆಯದು ಸದರ್ಥನಿದರ್ಶನೆ ಎನಿಸಿದೆ. ಕತ್ತಲೆಯು ತಾನೇ ನಾಶವಾಗಲಿದ್ದು ತನ್ನ ಆ ನಾಶಕ್ರಿಯೆಯನ್ನೇ ಬೇರೆಯವರಿಗೂ ತಿಳಿಯಪಡಿಸುತ್ತಿರುವುದಾಗಿ ಮೊದಲನೆಯ ಉದಾಹರಣದಲ್ಲಿ ಹೇಳಿದೆ. ರಾಜನೆನಿಸಿದ ಚಂದ್ರನಿಗೆ ವಿರೋಧಿಯಾದ್ದರಿಂದ ಕತ್ತಲೆ ನಾಶವಾಗುವುದು ಸಹಜ. ಅರಸು ಮುನಿದೊಡೆ ನಾಡೊಳಗಿರಬಾರದೆಂಬಂತೆ ಕತ್ತಲೆ ರಾಜನೆದುರಿಗೆ ನಿಲ್ಲದೆ ತೊಲಗಲೇಬೇಕು. ಹಾಗೆ ಹೋಗುವಾಗ ಅದು ಬೇರೆ ಯವರಿಗೂ ರಾಜವಿರೋಧಿಗಳಿಗೆಲ್ಲಾ ಇದೇ ಗತಿ ಎಂದು ತಿಳಿಸುತ್ತಲಿದೆ. ಅದ ರಂತೆಯೇ ಸೂರ್ಯನು ಕಮಲಗಳನ್ನು ತಾನೇ ವಿಕಾಸಗೊಳಿಸುತ್ತಲಿದ್ದು ಇದೇ ವಿಕಾಸಕ್ರಿಯೆಯನ್ನು ಬೇರೆಯವರಿಗೂ ತಿಳಿಯಪಡಿಸಿರುತ್ತಿರುವನೆಂದು ಎರಡನೆಯ ಉದಾಹರಣದಲ್ಲಿ ತಿಳಿಸಿದೆ, ಒಬ್ಬನು ಶ್ರೀಮಂತನಾಗಿದ್ದು ಅವನು ತನ್ನ ಐಶ್ವರ್ಯ ವನ್ನು ಮಿತ್ರರಿಗೆ ಹಂಚಿದರೆ ಆಗಲೇ ಅವನ ಐಶ್ವರ್ಯವು ಸಾರ್ಥಕವಾದೀತೆಂಬು ದನ್ನು ಸೂರ್ಯನು ಬಲ್ಲನು. ಆದಕ್ಕಾಗಿಯೇ ಅವನು ತಾನು ಮಾಡುವ ಕ್ರಿಯೆ ಯನ್ನೇ ಇತರರೂ ಆಚರಿಸಲೆಂಬ ಸದಾಶಯವನ್ನು ಕ್ರಿಯೆಯ ಮೂಲಕವೇ ಬೋಧಿಸುತ್ತಿರುವನು.

"ನೀಚನು ಉನ್ನತಸ್ಥಾನವನ್ನು ಹೊಂದಿದರೂ ಕೆಳಗೆ ಬೀಳುವನೆಂದು ತಿಳಿಸುತ ಬೆಟ್ಟದ ತುದಿಯಲ್ಲಿದ್ದ ಮಳೆನೀರಿನ ಹನಿಗಳು ಮಂದಮಾರುತದಿಂದಲೇ ನಡುಗುತ್ತ ಕೆಳಗೆ ಬೀಳುತ್ತಿವೆ". ಇಲ್ಲಿ ಬೆಟ್ಟದ ತುದಿಯಲ್ಲಿರುವ ಮಳೆನೀರಿನ ಹನಿಗಳು ಮಂದ ಮಾರುತದಷ್ಟರಿಂದಲೇ ಅಲ್ಲಾಡಿ ಕೆಳಗೆ ಬೀಳುತ್ತ ಹಗುರವಾದ ವ್ಯಕ್ತಿಯು ಉನ್ನತ ಸ್ಥಾನವನ್ನೇರುವುದು ಅವನ ಅವನತಿಗೇ ಮೂಲವೆಂಬ ಅನಿಷ್ಟವನ್ನು ತಿಳಿಸುತ್ತಿರುವು ದಾದ್ದರಿಂದ ಇದು ಅಸದರ್ಥನಿದರ್ಶನೆ ಎನಿಸಿದೆ.

"ಉದಯಪರ್ವತವು ತನ್ನೆಡೆಗೆ ಬಂದ ಸೂರ್ಯನನ್ನು ಚೂಡಾಮಣಿಯ ಸ್ಥಾನದಲ್ಲಿ ಧರಿಸಿದ್ದು ಮನೆಗೆ ಬಂದ ಸತ್ಪುರುಷರಿಗೆ ಸೇವೆಯನ್ನು ಮಾಡಬೇಕಾದ್ದು ಗೃಹಸ್ಥರ ಧರ್ಮವೆಂಬುದನ್ನು ಬೋಧಿಸುತ್ತಿರುವುದು." ಇಲ್ಲಿ ತನ್ನೆಡೆಗೆ ಬಂದ ಸೂರ್ಯನನ್ನು ಶಿರಸ್ಸಿನಲ್ಲಿ ಧರಿಸಿ ಗೌರವಿಸಿದ ಉದಯಪರ್ವತವು ತನ್ನ ಈ ಕ್ರಿಯೆ ಯಿಂದ ಇತರ ಗೃಹಸ್ಥರಿಗೂ ಸಹ ಮನೆಗೆ ಬಂದ ಅತಿಥಿಗಳಿಗೆ ಸೇವೆಯನ್ನು ಸಲ್ಲಿಸ ಬೇಕೆಂಬ ಸದರ್ಥವನ್ನು ಬೋಧಿಸುತ್ತಿರುವುದಾಗಿ ತಿಳಿಸಿದೆ. ಇಲ್ಲಿ ಕೆಲವರು ವಾಕ್ಯಾರ್ಥನಿದರ್ಶನೆ ಮತ್ತು ಪದಾರ್ಥನಿದರ್ಶನೆ ಇವೆರಡೂ ಸಹ ಲೋಕದಲ್ಲಿ ಸಂಭವಿಸದೇ ಕವಿಯಿಂದಲೇ ಕಲ್ಪಿತವಾದ ವಸ್ತುವಿಗೆ ಸಂಬಂಧಿಸಿವೆ ಎಂದೂ, ಮೂರ ನೆಯ ನಿದರ್ಶನೆಯು ಸಹಜವಾಗಿ ಸಂಭವಿಸುವ ವಸ್ತುವಿಗೆ ಸಂಬಂಧಿಸಿದ್ದೆಂದೂ ತಿಳಿಸುತ್ತದೆ. ಮೊದಲನೆಯ ನಿದರ್ಶನೆಯಲ್ಲಿ ವಾಕ್ಯಾರ್ಥಗಳೆರಡಕ್ಕೆ ಐಕ್ಯವು ಸಂಭ.

ವಿಸದೇ ಇರುವುದರಿಂದ ಅದು ಅವೆರಡರ ಸಾಮ್ಯದಲ್ಲಿಯೇ ಕೊನೆಗಾಣುವದು, ಎ
ಡನೆಯ ನಿದರ್ಶನೆಯಲ್ಲಿ ಒಂದು ವಸ್ತುವಿನಲ್ಲಿರುವ ಧರ್ಮವು ಮತ್ತೊಂದು ವ
ವಿನಲ್ಲಿ ಸಂಭವಿಸದೇ ಇರುವುದರಿಂದ ಧರ್ಮಿಗಳೆರಡರ ಹೋಲಿಕೆಯಲ್ಲಿ ಕೊ
ಗಾಣುತ್ತದೆ. ಮೂರನೆಯ ನಿದರ್ಶನೆಯಲ್ಲಿ ತನ್ನ ಕ್ರಿಯೆಯಿಂದ ಬೇರೆಯವರ
ಸಹ ಒಳ್ಳೆಯದು ಮತ್ತು ಕೆಟ್ಟದು ಎರಡನ್ನೂ ಬೋಧಿಸುವುದೆಂಬುದು ಸ್ವಾಭಾ
ವೆನಿಸಿದೆ. ಆದ್ದರಿಂದ ಇದು ಒಬ್ಬನಿಗೆ ಒದಗಿದ ಅವಸ್ಥೆಯೂ ಇತರರಿಗೆ ಸಂಭ
ಸಿದ ಅವಸ್ಥೆಯೂ ಸಮವೆಂಬುದನ್ನು ತಿಳಿಸುತ್ತದೆ. ಒಟ್ಟಿನಲ್ಲಿ ಮೂರರಲ್ಲೂ ಸಾ
ವೆಂಬುದಂತೂ ತೋರುತ್ತದೆ. ಬೋಧಯನ್ ಎಂಬುದನ್ನು" ಬೋಧಿಸಲು ಸಮರ್ಥ
ನ್ನಾಗಿ ಮಾಡುತ್ತ' ಎಂಬ ಅರ್ಥದಲ್ಲಿ ಣಿಜಂತವಾಗಿ ಪ್ರಯೋಗಿಸಲಾಗಿದೆ. ಕಾ
ಬೆರಣಿಯ ಬೆಂಕಿಯು ಶೀತವನ್ನು ತೊಲಗಿಸುತ್ತ ಮಕ್ಕಳಿಗೆ ಓದುವಂತೆ ಹೇಗೆ ಮಾ
ವುದೋ ಹಾಗೆಯೇ ಪ್ರಕೃತವಿಷಯವೆನಿಸಿದ ಪರ್ವತವು ತಾನೇ ಉಪಮಾನವಾಗಿ
ಕೊಂಡು ಗೃಹಸ್ಥರನ್ನು "ನೀವೂ ಈ ರೀತಿಯಲ್ಲಿ ಸೇವೆಮಾಡಿರಿ" ಎಂದು ಬೋ
ಸುತ್ತಲೇ ಅವರು ತಮ್ಮ ಆಚರಣದಿಂದ ಇತರರಿಗೂ ಹಾಗೆ ಬೋಧಿಸಲು ಸಮ
ರಾಗುವಂತೆ ಮಾಡುತ್ತಿತ್ತು. ಹೇಗೆ ಪರ್ವತವು ತನ್ನಡೆಗೆ ಬಂದ ಸೂರ್ಯನನ್ನು ಶಿ
ನಿಂದ ಗೌರವಿಸುವುದೋ ಹಾಗೆಯೇ ಗೃಹಸ್ಥನು ತನ್ನೆಡೆಗೆ ಬಂದವನನ್ನು ಯಥೋ
ಚಿತವಾದ ಸೇವೆಯಿಂದ ಗೌರವಿಸಬೇಕೆಂಬುದನ್ನು ಪರ್ವತವು ತಿಳಿಸುತ್ತಿರುವುದು
ನಿದರ್ಶನೆಯಲ್ಲಿ ಬೋಧನಕ್ಕೆ ಸಂಬಂಧವಿರುವ ಪ್ರಯುಕ್ತ ಮೂರನೆಯ ನಿದರ್ಶನೆ
ಅನ್ವರ್ಥವೆನಿಸಿದೆ,

## ೨೦. ವ್ಯತಿರೇಕಾಲಂಕಾರ

ವ್ಯತಿರೇಕೋ ವಿಶೇಷಶ್ಚೇದುಪಮಾನೋಪಮೇಯಯೋಃ ।
ಶೈಲಾ ಇವೋನ್ನತಾಃ ಸಂತಃ ಕಿಂತು ಪ್ರಕೃತಿಕೋಮಲಾಃ ॥ ೫೬ ॥

ಅಯಮುಪಮೇಯಾಧಿಕ್ಯಪರ್ಯವಸಾಯೀ ವ್ಯತಿರೇಕಃ. ಯಥಾ ವಾ—

ಫಲವತಃ ಕಲ್ಪತರೋರೇಷಃ ವಿಶೇಷಃ ಕರಸ್ಯ ತೇ ವೀರ ।
ಭೂಷಯತಿ ಕರ್ಣಮೇಕಃ ಪರಸ್ತು ಕರ್ಣಂ ತಿರಸ್ಕುರುತೇ ॥

ತನ್ನ್ಯೂನತ್ವಪರ್ಯವಸಾಯೀ ಯಥಾ—

ರಕ್ತಸ್ತ್ವಂ ನವಪಲ್ಲವೈರಹಮಪಿ ಶ್ಲಾಘ್ಯೈಃ ಪ್ರಿಯಾಯಾ ಗುಣೈಃ
ತ್ವಾಮಾಯಾಂತಿ ಶಿಲೀಮುಖಾಃಸ್ಮರಧನುರ್ಮುಕ್ತಾಸ್ತಥಾಮಾಮಪಿ ।

ಕಾಂತಾಪಾದತಲಾಹತಿಸ್ತವಮುದೇ ತದ್ವನ್ಮಮಾಪ್ಯಾವಯೋಃ
ಸರ್ವಂ ತುಲ್ಯಮಶೋಕ ಕೇವಲಮಹಂ ಧಾತ್ರಾ ಸಶೋಕಃ ಕೃತಃ ॥

ಅನುಭಯಪರ್ಯವಸಾಯೀ ಯಥಾ—

ದೃಢತರನಿಬದ್ಧಮುಷ್ಟೇಃ ಕೋಶನಿಷಣ್ಣಸ್ಯ ಸಹಜಮಲಿನಸ್ಯ ।
ಕೃಪಣಸ್ಯ ಕೃಪಾಣಸ್ಯ ಚ ಕೇವಲಮಾಕಾರತೋ ಭೇದಃ ॥

ಉಪಮಾನ ಮತ್ತು ಉಪಮೇಯಗಳಿಗೆ ಒಂದು ಧರ್ಮದಿಂದ ಸಾದೃಶ್ಯವಿದ್ದು ಬೇರೊಂದು ಧರ್ಮದಲ್ಲಿ ವೈಲಕ್ಷಣ್ಯವನ್ನು ತೋರಿಸುವುದೇ ವ್ಯತಿರೇಕವೆನಿಸುವುದು. ಹೆಚ್ಚು ಗುಣವುಳ್ಳ ವಸ್ತುವೇ ಉಪಮಾನವೆಂದೂ,ಕಡಮೆ ಗುಣವುಳ್ಳದ್ದೇ ಉಪಮೇಯ ವೆಂದೂ ಲೋಕದಲ್ಲಿ ರೂಢಿಯಿದೆ. ಇಂತಹ ಎರಡು ವಸ್ತುಗಳಿಗೆ ಒಂದು ಬಗೆಯ ಸಾದೃಶ್ಯವನ್ನು ತೋರಿಸಿ ಆದರೆ ಮೇಲೆ ಬೇರೊಂದು ಧರ್ಮದಲ್ಲಿ ಉಪಮಾನ ಕ್ಕಿಂತಲೂ ಉಪಮೇಯದಲ್ಲಿ ಹೆಚ್ಚು ಗುಣವು ಕಂಡುಬಂದರೆ ಅದು ಒಂದು ಬಗೆಯ ವಿಶೇಷವೆನಿಸುವುದು. ಇಂತಹ ವಿಶೇಷವೇ ವ್ಯತಿರೇಕವೆನಿಸುವುದು. ಈ ವಿಶೇಷವು ನ್ಯೂನವಸ್ತುವಿನಲ್ಲಿ ಆಧಿಕ್ಯವನ್ನು ಒಮ್ಮೆ ತೋರಿಸುವಂತಹದೋ ಅಥವಾ ಎರಡೂ ಇಲ್ಲದ ಸ್ಥಿತಿಯನ್ನು ತೋರಿಸುವಂತಹದೋ ಆಗಿರಬಹುದು, ಆದ್ದರಿಂದ ವ್ಯತಿರೇಕವು ಮೂರು ಬಗೆಯಾಗಿದೆ. ಸತ್ಪುರುಷರು ಬೆಟ್ಟಗಳಂತೆಯೇ ಉನ್ನತರು ; ಆದರೆ ಸಹಜ ವಾಗಿ ಕೋಮಲ ಸ್ವಭಾವದವರು'. ಇಲ್ಲಿ ಸತ್ಪುರುಷರು ಉಪಮೇಯವೂ, ಬೆಟ್ಟ ಗಳು ಉಪಮಾನವೂ ಆಗಿದ್ದು ಇಬ್ಬರಲ್ಲೂ ಔನ್ನತ್ಯವು ಸಮಾನವಾಗಿದ್ದರೂ ಕೋಮಲ ಸ್ವಭಾವದಿಂದ ಸತ್ಪುರುಷರು ಬೆಟ್ಟಗಳಿಗಿಂತಲೂ ಹೆಚ್ಚಿನವರೆಂದು ಉಪಮೇಯದಲ್ಲಿ ಆಧಿಕ್ಯವನ್ನು ತಿಳಿಸಿದೆ. "ಎಲೈ ವೀರನೇ, ಕಲ್ಪವೃಕ್ಷದ ಚಿಗುರಿಗಿಂತಲೂ ನಿನ್ನ ಹಸ್ತ ದಲ್ಲಿರುವ ವಿಶೇಷವೇನೆಂದರೆ ಚಿಗುರು ಕರ್ಣವನ್ನು ಅಲಂಕರಿಸುತ್ತದೆ. ನಿನ್ನ ಹಸ್ತ ವಾದರೋ ಕರ್ಣವನ್ನು ತಿರಸ್ಕರಿಸುತ್ತದೆ." ಇಲ್ಲಿ ಉಪಮೇಯವೆನಿಸಿದ ಹಸ್ತದಲ್ಲಿ ಉತ್ಕರ್ಷವನ್ನು ತಿಳಿಸಲಾಗಿದೆ. ಹಿಂದಿನ ಉದಾಹಣದಲ್ಲಿ ಔನ್ನತ್ಯವೆಂಬ ಸಾಧಾರಣ ಧರ್ಮವನ್ನು ಶಬ್ದದಿಂದಲೇ ತಿಳಿಸಿದೆ. ಇಲ್ಲಿಯಾದರೋ, ಹೊಂಬಣ್ಣ ಕೋಮಲತ್ವ ಮೊದಲಾದ ಸಾಧಾರಣ ಧರ್ಮಗಳು ವ್ಯಂಗ್ಯವಾಗಿ ತೋರುತ್ತವೆ.

ಉಪಮೇಯವನ್ನು ಉಪಮಾನಕ್ಕಿಂತ ಕೀಳೆಂದು ತಿಳಿಸುವುದರಲ್ಲೂ ಚಮತ್ಕಾರ ವಿಶೇಷವಿರುವುದರಿಂದ ಅದನ್ನು ಉದಾಹರಿಸುತ್ತಾನೆ. ಅಶೋಕವೃಕ್ಷವನ್ನು ನೋಡಿ ವಿರಹಿಯಾದ ರಾಮನು ಹೇಳುವ ಮಾತಿದು. ಎಲೈ ಅಶೋಕವೃಕ್ಷವೇ, ನೀನು ಹೊಸ ಚಿಗುರುಗಳಿಂದ (ರಕ್ತ) ಕೆಂಪಾಗಿರುವೆ. ನಾನು ಸಹ ಅಭಿನಂದನೀಯವಾದ ಪ್ರಿಯೆಯ ಸೌಂದರ್ಯ ಮೊದಲಾದ ಗುಣಗಳಿಂದ ಆಕೆಯಲ್ಲಿ ಅನುರಕ್ತನಾಗಿರುವೆ. ನಿನ್ನಲ್ಲಿಗೂ ಪುಷ್ಪಗಳಿಂದ ದುಂಬಿಗಳು ಬರುತ್ತಿವೆ. ನನ್ನಲ್ಲಿಗೂ ಮನ್ಮಥನ ಧನುಸ್ಸ

ನಿಸಿದ ಪುಷ್ಪಗಳಿಂದಲೇ ಬಾಣಗಳು ಬರುತ್ತಿವೆ. ಪ್ರಿಯೆಯ ಕಾಲಿನಿಂದ ಒದೆಸಿಕೊಳ್ಳು ವುದು ನಿನ್ನಂತೆ ನನಗೂ ಹಿತಕರವಾಗಿದೆ. ನಮ್ಮಿಬ್ಬರಿಗೂ ಇವೆಲ್ಲವೂ ಸಮಾನವ ಆಗಿದ್ದರೂ ಬ್ರಹ್ಮನು ನಿನ್ನನ್ನು ಅಶೋಕನೆನಿಸಿ ನನ್ನನ್ನು ಸಶೋಕನೆನಿಸಿರುವನು. ಅವನು ನಿನ್ನನ್ನು ದುಃಖವಿಲ್ಲದಂತೆ ಸೃಷ್ಟಿಸಿ ನನ್ನನ್ನು ಮಾತ್ರ ದುಃಖಿಯನ್ನಾಗಿ ಮಾಡಿರುವನು, ನಮ್ಮಿಬ್ಬರಿಗೂ ಇಷ್ಟೇ ವ್ಯತ್ಯಾಸ" ಇಲ್ಲಿ ಉಪಮೇಯನೆನಿಸಿ ರಾಮನಿಗೂ ಉಪಮಾನವೆನಿಸಿದ ಅಶೋಕವೃಕ್ಷಕ್ಕೂ ಅನೇಕ ಅಂಶಗಳಲ್ಲಿ ಸಾಧರ್ಮ್ಯ ವಿದ್ದರೂ ಅಶೋಕತ್ವ ಸಶೋಕತ್ವವೆಂಬ ಅಂಶದಲ್ಲಿ ವೈಧರ್ಮ್ಯವಿರುವುದರಿಂದ ಇಲ್ಲಿ ವ್ಯತಿರೇಕವು ಉಪಮೇಯದ ನ್ಯೂನತೆಯಲ್ಲಿ ಕೊನೆಗಾಣುತ್ತದೆ.

ಉಪಮೇಯದಲ್ಲಿ ನ್ಯೂನತೆ ಮತ್ತು ಆಧಿಕ್ಯ ಎರಡೂ ಇಲ್ಲದ್ದು ಹೀಗಿ "ಮುಷ್ಟಿಯಿಂದ ಬಿಗಿಯಾಗಿ ಹಿಡಿಯಬಹುದಾದ ಸನ್ನಿವೇಶವಿದ್ದರೂ ಯಾವಾಗಲೂ ಬತ್ತಳಿಕೆಯಲ್ಲಿಯೇ ಇರುತ್ತ ಸಹಜವಾಗಿ ಕಲ್ಮಷಗೊಂಡಿರುವ ಕತ್ತಿಗೂ ಹಣವನ್ನು ಎಂದೆಂದಿಗೂ ಕೈಯಿಂದ ಕೊಡದೆ ಇಟ್ಟಿದ್ದು ಯಾವಾಗಲೂ ಆ ಹಣದ ಹತ್ತಿರ ಕುಳಿತು ಸ್ನಾನವಿಲ್ಲದೆ ಮೈಯನ್ನು ಕಲ್ಮಷಗೊಳಿಸಿಕೊಂಡ ಜಿಪುಣನಿಗೂ ಆಕಾರದ ಭೇದವೇ ಹೊರತು ವರ್ತನೆಯಲ್ಲಿ ಯಾವ ಭೇದವೂ ಕಾಣಿಸದು''. ಇಲ್ಲಿ ಕೃಪಣನಿಗೂ ಕೃಪಾಣಕ್ಕೂ ಮೂರು ಅಂಶಗಳಲ್ಲಿ ಸಾಮ್ಯವನ್ನು ತೋರಿಸಿ ಒಂದು ಅಂಶದಲ್ಲಿ ಮಾತ್ರ ವೈಲಕ್ಷಣ್ಯವನ್ನು ತಿಳಿಸಿದೆ. ಉಪಮೇಯವೆನಿಸಿದ ಕೃಪಣನು ಉಪಮಾನವೆನಿಸಿ ಕತ್ತಿಗಿಂತಲೂ ಹೆಚ್ಚೂ ಅಲ್ಲ, ಕಡಿಮೆಯೂ ಅಲ್ಲವೆಂದು ತಿಳಿಸಿದ್ದರಿಂದ ಇವರಿಬ್ಬರಿಗೂ ಆಕಾರ ಅಂದರೆ ಸ್ವರೂಪದಲ್ಲಿ ಭೇದವೇ ಹೊರತು ಅಂಶಗಳಲ್ಲಿ ಸಾದೃಶ್ಯವೇ ಆದ್ದರಿಂದ ಉಪಮೇಯದಲ್ಲಿ ಉಪಮಾನಕ್ಕಿಂತ ಆಧಿಕ್ಯವೂ ಇಲ್ಲ; ನ್ಯೂನತೆಯೂ ಇಲ್ಲ.

## ೨೧ ಸಹೋಕ್ತ್ಯಲಂಕಾರ

ಸಹೋಕ್ತಿಃ ಸಹಭಾವಶ್ಚೇದ್ಭಾಸತೇ ಜನರಂಜನಃ ।
ದಿಗಂತಮಗಮತ್ತಸ್ಯ ಕೀರ್ತಿಃ ಪ್ರತ್ಯರ್ಥಿಭಿಃ ಸಹ ॥ ೫೭ ॥

ಯಥಾ ವಾ:—

ಛಾಯಾ ಸಂಶ್ರಯತೇ ತಲಂ ವಿಟಪಿನಾಂ ಶ್ರಾಂತೇವ ಪಾಂಥೈಸ್ಸಮಂ
ಮೂಲಂ ಯಾತಿ ಸರೋಜಲಸ್ಯ ಜಡತಾ ಗ್ಲಾನೇವ ಮೀನೈಸ್ಸಹ ।
ಆಚಾಮತ್ಯಹಿಮಾಂಶುದೀಧಿತಿರಪಸ್ತೃಷ್ಣೇವ ಲೋಕೈಃ ಸಮಂ ।
ನಿದ್ರಾ ಗರ್ಭಗೃಹಂ ಸಹ ಪ್ರವಿಶತಿ ಕ್ಲಾಂತೇವ ಕಾಂತಾಜನೈಃ ॥

ಜನರಂಜನ ಇತ್ಯುಕ್ತೇಃ "ಅನೇನ ಸಾರ್ಧಂ ವಿಹರಾಂಬುರಾಶೇಃ" ಇತ್ಯಾದೌ ನ ಸಹೋಕ್ತಿರಲಂಕಾರಃ.

ಉಪಮಾನ ಮತ್ತು ಉಪಮೇಯಗಳಿಗೆ ಚಮತ್ಕಾರಜನಕವಾದ ಸಾಹಿತ್ಯ ವಿದ್ದರೆ ಅದು ಸಹೋಕ್ತ್ಯಲಂಕಾರವೆನಿಸುತ್ತದೆ. ಆವೆರಡು ವಸ್ತುಗಳೂ ಒಂದೇ ಕಾಲದಲ್ಲಿ ಒಂದೇ ಕ್ರಿಯೆಯಲ್ಲಿ ಅನ್ವಯಿಸುವುದೇ ಸಾಹಿತ್ಯವೆನಿಸುತ್ತದೆ. "ಅವನ ಕೀರ್ತಿಯು ಶತ್ರುಗಳೊಡನೆಯೇ ಸ್ವರ್ಗವನ್ನೇರಿತು." ಉಪಮೇಯವೆನಿಸಿದ ಕೀರ್ತಿಯೂ ಉಪಮಾನವೆನಿಸಿದ ಶತ್ರುಗಳೂ ಏಕಕಾಲದಲ್ಲಿ ಸ್ವರ್ಗವನ್ನೇರಿದರೆಂದು ಇಲ್ಲಿ ವರ್ಣಿಸಿದೆ. ಶತ್ರುಗಳ ಸಂಹಾರವಾದ ಮೇಲೆ ರಾಜನ ಕೀರ್ತಿಯು ಎಲ್ಲೆಡೆಯಲ್ಲೂ ವ್ಯಾಪಿಸಬೇಕಾಗಿತ್ತು. ಆದರೆ ಇಲ್ಲಿ ಶತ್ರುಗಳೊಡನೆಯೇ ಕೀರ್ತಿಯೂ ದಿಗಂತವನ್ನು ವ್ಯಾಪಿಸಿತೆಂದು ಕ್ರಿಯೆಯಲ್ಲಿ ಅನ್ವಯವನ್ನು ತಿಳಿಸಲಾಗಿದೆ.

ಗ್ರೀಷ್ಮಋತುವಿನಲ್ಲಿ ಮಧ್ಯಾಹ್ನಕಾಲದ ವರ್ಣನವಿದು, 'ನೆರಳು ಬಳಲಿಕೆಯಿಂದಲೊ ಏನೋ ಎಂಬಂತೆ ಪಥಿಕರೊಡನೆ ಮರದ ಬುಡವನ್ನಾಶ್ರಯಿಸಿದೆ. ಶೈತ್ಯವು ಬಳಲಿಕೆಯಿಂದಲೋ ಏನೋ ಎಂಬಂತೆ ಮೀನುಗಳೊಡನೆ ಸರೋವರದ ತಳವನ್ನು ಹೊಕ್ಕಿದೆ. ಸೂರ್ಯನ ಕಿರಣವು ತಾಪದಿಂದ ಕಾದಿದೆಯೋ ಏನೋ ಎಂಬಂತೆ ಲೋಕದ ಜನರೊಡನೆ ನೀರನ್ನು ಕುಡಿಯುತ್ತಿದೆ. ನಿದ್ರೆಯು ಬಳಲಿಕೆಯಿಂದಲೋ ಏನೋ ಎಂಬಂತೆ ಪ್ರಿಯರೊಡನೆ ಶಯ್ಯಾಗೃಹವನ್ನು ಪ್ರವೇಶಿಸುತ್ತದೆ," ಇಲ್ಲಿ ಛಾಯೆಗಳಿಗೆ ದಾರಿಗ ಮೊದಲಾದವರೊಡನೆಯೇ ಮರದ ಬುಡ ಮೊದಲಾದ ಕಡೆ ಸೇರುವಿಕೆ ಮೊದಲಾದ ಕ್ರಿಯೆಗಳಲ್ಲಿ ಅನ್ವಯವನ್ನು ತಿಳಿಸಲಾಗಿದೆ, ಇದರಲ್ಲೂ ಒಂದು ಬಗೆಯ ಚಮತ್ಕಾರವಿರುವುದರಿಂದ ಇದು ಅಲಂಕಾರವೆನಿಸಿದೆ. ಲಕ್ಷಣದಲ್ಲಿ 'ಜನರಂಜನಃ' ಎಂದು ಹೇಳಿದ್ದರಿಂದ "ಅನೇನ ಸಾರ್ಧಂ ವಿಹರಾಂಬುರಾಶೇಃ" ಎಂಬ ಪದ್ಯದಲ್ಲಿ ಸಾರ್ಧಂ ಎಂಬ ಪದದಿಂದ ರಾಜನಿಗೂ ವಿವಾಹವಾಗುವ ಕನ್ಯೆಗೂ ಸಹ ಯೋಗವನ್ನು ಹೇಳಿದ್ದರೂ ಆದರಲ್ಲಿ ಚಮತ್ಕಾರವಿಲ್ಲದ್ದರಿಂದ ಅಲ್ಲಿ ಸಹೋಕ್ತ್ಯಲಂಕಾರವಿಲ್ಲ,

## ೨೨. ವಿನೋಕ್ತ್ಯಲಂಕಾರ

ವಿನೋಕ್ತಿಶ್ಚೇದ್ವಿನಾ ಕಿಂಚಿತ್ಪ್ರಸ್ತುತಂ ಹೀನಮುಚ್ಯತೇ ।
ವಿದ್ಯಾ ಹೃದ್ಯಾಪಿ ಸಾವದ್ಯಾ ವಿನಾ ವಿನಯಸಂಪದಮ್ ॥

ಯಥಾ ವಾ–ಯಶ್ಚ ರಾಮಂ ನ ಪಶ್ಯೇತ್ತು ಯಂ ಚ ರಾಮೋ ನ ಪಶ್ಯತಿ ।
ನಿಂದಿತಃ ಸ ಭವೇಲ್ಲೋಕೇ ಸ್ವಾತ್ಮಾಪ್ಯೇನಂ ವಿಗರ್ಹತೇ ।

ಅತ್ರ ಚ ರಾಮದರ್ಶನೇನ ವಿನಾ ಹೀನತ್ವಂ ವಿನಾಶಬ್ದಮಂತರೇಣೈವ ದರ್ಶಿತಂ

ತಚ್ಚೇತ್ಕಿಂಚಿದ್ವಿನಾ ರಮ್ಯಂ ವಿನೋಕ್ತಿಃ ಸಾಪಿ ಕಥ್ಯತೇ ।
ವಿನಾ ಖಲೈರ್ವಿಭಾತ್ಯೇಷಾ ರಾಜೇಂದ್ರ ಭವತಸ್ಸಭಾ ॥

ಯಥಾ ವಾ—

ಆವಿರ್ಭೂತೇ ಶಶಿನಿ ತಮಸಾ ಮುಚ್ಯಮಾನೇವ ರಾತ್ರಿಃ
ನೈಶಸ್ಯಾರ್ಚಿರ್ಹುತಭುಜ ಇವ ಚ್ಛಿನ್ನಭೂಯಿಷ್ಠಧೂಮಾ ।
ಮೋಹೇನಾಂತರ್ವರತನುರಿಯಂ ಲಕ್ಷ್ಯತೇ ಮುಕ್ತಕಲ್ಪಾ
ಗಂಗಾ ರೋಧಃಪತನಕಲುಷಾ ಗೃಹ್ಣತೀವ ಪ್ರಸಾದಮ್ ॥

ಅತ್ರ ತಮಃಪ್ರಭೃತೀನ್ವಿನಾ ನಿಶಾದೀನಾಂ ರಮ್ಯತ್ವಂ ವಿನಾಶಬ್ದಮಂತರ... ದರ್ಶಿತಮ್.

ಯಾವುದೋ ಅಂಶವಿಲ್ಲದ್ದರಿಂದ ಪ್ರಕೃತವಸ್ತುವು ಶೋಭಿಸುವುದೆಂದು ತಿ... ವುದೂ ಸಹ ವಿನೋಕ್ತ್ಯಲಂಕಾರವೆನಿಸುವುದು. 'ಮಹಾರಾಜನೆ, ನೀಚರಿಲ್ಲದ್ದ... ನಿನ್ನ ಸಭೆಯು ಶೋಭಿಸುತ್ತಿದೆ.' ಊರ್ವಶಿಯ ವಿಷಯದಲ್ಲಿ ಪುರೂರವನು ಆ... ಚಿಸುವ ರೀತಿಯಿದು 'ಈ ಸುಂದರಿಯು ಮನಸ್ಸಿನಲ್ಲಿ ಕೋಪವನ್ನು ಕೊಂಚ ಬಿಟ್ಟ... ವಂತೆ ಕಾಣುವಳು. (ಈಗ ಆಕೆ ಹೇಗಿದ್ದಾಳೆ ಎಂಬುದನ್ನು ತಿಳಿಸುತ್ತಾನೆ) ದ... ಕಸಿದುಬಿದ್ದುದರಿಂದ ಕಲ್ಮಷಗೊಂಡಿದ್ದು ಅಮೇಲೆ ನೈರ್ಮಲ್ಯವನ್ನು ಹೊಂದು... ಗಂಗೆಯಂತೆಯೂ, ಚಂದ್ರನು ಉದಯಿಸಲು ಕತ್ತಲೆಯಿಂದ ಬಿಡುಗಡೆಯಾಗು... ರಾತ್ರಿಯಂತೆಯೂ ಹೊಗೆ ಎಲ್ಲವೂ ತೊಲಗಿದ್ದರಿಂದ ರಾತ್ರಿವೇಳೆ ಚೆನ್ನಾಗಿ ಉ... ಯುವ ಬೆಂಕಿಯಂತೆಯೂ ಈಕೆ ಕಾಣುತ್ತಿರುವಳು'. ಇಲ್ಲಿ ಕಲ್ಮಷವಿಲ್ಲದ್ದ... ಗಂಗೆಯೂ, ತಮಸ್ಸಿಲ್ಲದ್ದರಿಂದ ರಾತ್ರಿಯೂ, ಹೊಗೆಯಿಲ್ಲದ್ದರಿಂದ ಬೆಂಕಿಯೂ, ಕೋ... ವಿಲ್ಲದ್ದರಿಂದ ಸುಂದರಿಯೂ ಶೋಭಿಸುತ್ತಾರೆ ಎಂದು ಹೇಳಿ ವಿನಾಶಬ್ದವಿಲ್ಲದೆ... ರಾತ್ರಿ ಮೊದಲಾದವುಗಳ ಸೊಬಗನ್ನು ತಿಳಿಸಲಾಗಿದೆ.

## ೨೩. ಸಮಾಸೋಕ್ತ್ಯಲಂಕಾರ

ಸಮಾಸೋಕ್ತಿಃ ಪರಿಸ್ಫೂರ್ತಿಃ ಪ್ರಸ್ತುತೇಽಪ್ರಸ್ತುತಸ್ಯ ಚೇತ್ ।
ಅಯಮೈಂದ್ರೀಮುಖಂ ಪಶ್ಯ ರಕ್ತಶ್ಚುಂಬತಿ ಚಂದ್ರಮಾಃ ॥

ಯತ್ರ ಪ್ರಸ್ತುತವೃತ್ತಾಂತೇ ವರ್ಣ್ಯಮಾನೇ ವಿಶೇಷಣಸಾಮ್ಯಾದಪ್ರಸ್ತು... ವೃತ್ತಾಂತಸ್ಯಾಪಿ ಪರಿಸ್ಫೂರ್ತಿಸ್ತತ್ರ ಸಮಾಸೋಕ್ತಿರಲಂಕಾರಃ. ಸಮಾಸೇನ ಸಂಕ್ಷೇಪೇ... ಪ್ರಸ್ತುತಾಪ್ರಸ್ತುತವೃತ್ತಾಂತಯೋರ್ವಚನಾತ್. ಉದಾಹರಣಮಯಮೈಂದ್ರೀತಿ. ಅ... ಹಿ ಚಂದ್ರಸ್ಯ ಪ್ರಾಚೀಪ್ರಾರಂಭಲಕ್ಷಣಮುಖಸಂಬಂಧಲಕ್ಷಣೇ ಉದಯೇ ವರ್ಣ್ಯ... ಮಾನೇ ಮುಖಶಬ್ದಸ್ಯ ಪ್ರಾರಂಭವದನಸಾಧಾರಣ್ಯಾತ್ ರಕ್ತಶಬ್ದಸ್ಯ ಅರುಣಕಾಮು... ಸಾಧಾರಣ್ಯಾತ್ ಚುಂಬತೀತ್ಯಸ್ಯ ಪ್ರಸ್ತುತಾರ್ಥಸಂಬಂಧಮಾತ್ರಪರಸ್ಯ ಶಕ್ಯಾರ್ಥ...

ತರಸಾಧಾರಣ್ಯಾಚ್ಚ ಚಂದ್ರಮಶ್ಶಬ್ದಗತಪುಲ್ಲಿಂಗೇನ ಐಂದ್ರೀಶಬ್ದಗತಸ್ತ್ರೀಲಿಂಗೇನ ತತ್ಪ್ರತಿ ಪಾದ್ಯೇಂದ್ರಸಂಬಂಧಿತ್ವೇನ ಚೋಪಸ್ಕೃತಾತ್ ಅಪ್ರಸ್ತುತಪರವನಿತಾ ವೃತ್ತಾಂತಃ ಪ್ರತೀಯತೇ. ಯಥಾ ವಾ—

ವ್ಯಾವಲ್ಗತ್ಕುಚಭಾರಮಾಕುಲಕಚಂ ವ್ಯಾಲೋಲಹಾರಾವಳಿ
ಪ್ರೇಂಖತ್ಕುಂಡಶೋಭಿಗಂಡಯುಗಳಂ ಪ್ರಸ್ವೇದಿವಕ್ತ್ರಾಂಬುಜಮ್ ।
ಶಶ್ವದ್ದತ್ತಕರಪ್ರಹಾರಮಧಿಕಶ್ವಾಸಂ ರಸಾದೇತಯಾ
ಯಸ್ಮಾತ್ಕಂದುಕ ಸಾದರಂ ಸುಭಗಯಾ ಸಂಸೇವ್ಯಸೇ ಶಕ್ಕೃತೀ ॥

ಅತ್ರ ಕಂದುಕವೃತ್ತಾಂತೇ ವರ್ಣ್ಯಮಾನೇ ವ್ಯಾವಲ್ಗತ್ಕುಚಭಾರಮಿತ್ಯಾದಿ ಕ್ರಿಯಾವಿಶೇಷಣಸಾಮ್ಯಾದ್ವಿಪರೀತಾಸಕ್ತನಾಯಿಕಾವೃತ್ತಾಂತಃ ಪ್ರತೀಯತೇ, ಪೂರ್ವತ್ರ ವಿಶೇಷಣಾನಿ ಶ್ಲಿಷ್ಟಾನಿ ಇಹತು ಸಾಧರಣಾನೀತಿ ಭೇದಃ.

ಪ್ರಕೃತವೃತ್ತಾಂತವನ್ನು ವರ್ಣಿಸುವಾಗ ಉಪಯೋಗಿಸುವ ವಿಶೇಷಣಗಳ ಬಲದಿಂದ ಅಪ್ರಕೃತವೃತ್ತಾಂತ ಬಂದು ತೋರುವಂತೆ ತಿಳಿಸುವುದೇ ಸಮಾಸೋಕ್ತ್ಯಲಂಕಾರವೆನಿಸುತ್ತದೆ. 'ಈ ಚಂದ್ರನು ರಕ್ತನಾಗಿ ಇಂದ್ರದಿಕ್ಕಿನ ಮುಖವನ್ನು ಚುಂಬಿಸುತ್ತಿದ್ದಾನೆ, ನೋಡು' ಇಲ್ಲಿ 'ಮುಖವನ್ನು ಚುಂಬಿಸುತ್ತಾನೆ' ಎಂದೂ, ರಕ್ತನಾಗಿರುವನೆಂದೂ ಪ್ರಕೃತ ಚಂದ್ರನ ವೃತ್ತಾಂತವನ್ನು ತಿಳಿಸಿದ್ದರೂ ಮುಖ, ರಕ್ತ ಈ ಪದಗಳ ಬಲದಿಂದ ನಾಯಕನೊಬ್ಬನು ಅನುರಕ್ತನಾಗಿ ನಾಯಿಕೆಯ ಮುಖವನ್ನು ಚುಂಬಿಸುತ್ತಿರುವನೆಂಬ ಅಪ್ರಕೃತವೃತಾಂತವು ತೋರುವುದು. ಆದ್ದರಿಂದ ಇದು ಸಮಾಸೋಕ್ತಿ ಎನಿಸಿದೆ,

ಪ್ರಕೃತವೃತಾಂತವನ್ನು ವರ್ಣಿಸುವಾಗಲೇ ವಿಶೇಷಣಗಳ ಸಾಮ್ಯವಷ್ಟರಿಂದ ಅಪ್ರಕೃತವೃತ್ತಾಂತ ಒಂದು ಎಲ್ಲಿ ತೋರುವುದೋ ಅಲ್ಲಿ ಸಮಾಸೋಕ್ತಿ ಇರುವುದು. ಸಮಾಸೇನ ಉಕ್ತಿಃ ಅಂದರೆ ಪ್ರಕೃತ ಅಪ್ರಕೃತ ವೃತ್ತಾಂತಗಳೆರಡನ್ನೂ ಸಂಕ್ಷೇಪದಿಂದ ತಿಳಿಸುವುದೇ ಸಮಾಸೋಕ್ತಿ ಎನಿಸುವುದು. ಉದಾಹರಣದಲ್ಲಿ ಇದು ಸ್ಪಷ್ಟಪಡುತ್ತದೆ. ಇಲ್ಲಿ ಪೂರ್ವದಿಕ್ಕಿನ ಆದಿಭಾಗವೆಂಬ ಮುಖಕ್ಕೆ ಸಂಬಂಧಿಸಿದಂತೆ ಚಂದ್ರನು ಉದಯಿಸುವುದನ್ನು ವರ್ಣಿಸುವಾಗ 'ಮುಖ' ಎಂಬ ಶಬ್ದವು ಆರಂಭ ಮತ್ತು ವದನ ಈ ಎರಡು ಅರ್ಥಗಳನ್ನು ಶ್ಲೇಷದ ಮೂಲಕ ತಿಳಿಸುವುದರಿಂದಲೂ 'ರಕ್ತ' ಎಂಬುದು ಹೊಂಬಣ್ಣದಲ್ಲೂ ಕಾಮುಕನಲ್ಲೂ ಸಾಮಾನ್ಯವಾಗಿ ಅನ್ವಯಿಸುವುದರಿಂದಲೂ 'ಚುಂಬತಿ ಎಂಬುದು ಪ್ರಕೃತಾರ್ಥವೆನಿಸಿದ ಚಂದ್ರನಿಗೆ ಮಾತ್ರವೇ ಅನ್ವಯಿಸುವಂತೆ (ಸಂಬಂಧಿಸಿದ್ದಾನೆ) ಎಂಬ ಅರ್ಥವನ್ನು ತಿಳಿಸಿದರೂ ಸಹ 'ಮುತ್ತಿಡುವನು' ಎಂಬ ಬೇರೊಂದು ವಾಚ್ಯಾರ್ಥವನ್ನೂ ಬೋಧಿಸುವುದರಿಂದಲೂ, ಚಂದ್ರಮಸ್ ಶಬ್ದವನ್ನು

ಪುಲ್ಲಿಂಗದಲ್ಲೂ, ಐಂದ್ರೀಶಬ್ದವನ್ನು ಸ್ತ್ರೀಲಿಂಗದಲ್ಲೂ ಪ್ರಯೋಗಿಸಿದ್ದರಿಂದಲೂ, ಇಂದ್ರಶಬ್ದಕ್ಕೆ ಇಂದ್ರೋ ದೇವತಾ ಅಸ್ಯ ಇತಿ ಐಂದ್ರೀ ದಿಕ್'' ಎಂದು "ಅಸ್ಯ ದೇವತಾ'' ಎಂಬ ಅರ್ಥದಲ್ಲಿ ಇಂದ್ರಶಬ್ದದ ಮೇಲೆ ಅಣ್ ಪ್ರತ್ಯಯವು ಬಂದು ಇಂದ್ರನಿಗೂ ದಿಕ್ಕಿಗೂ ಸಂಬಂಧವನ್ನು ಬೋಧಿಸುವದರಿಂದ ಈ ದಿಕ್ಕಿನಲ್ಲಿ ಇಂದ್ರನ ಸಂಬಂಧವು ಕಂಡುಬರುದು. ಆ ಇಂದ್ರನಿಗೆ ಸಂಬಂಧಿಸಿದ ದಿಗ್ದೇವಿಗೆ ಚಂದ್ರನು ಸಂಬಂಧಿಸಿರುವನೆಂದು ಹೇಳಿದ್ದರಿಂದಲೂ ತಿಳಿದುಬರುವ ಚಂದ್ರವೃತ್ತಾಂತದಿಂದ ಒಬ್ಬ ಕಾಮುಕನು ಪರಸ್ತ್ರೀಯಲ್ಲಿ ಆಸಕ್ತನಾಗಿರುವನೆಂಬ ಅಪ್ರಕೃತವೃತ್ತಾಂತವು ವ್ಯಂಗ್ಯವಾಗಿ ತೋರಿಬರುವುದು.

ನಾಯಿಕೆಯಲ್ಲಿ ಅನುರಕ್ತನಾದವನೊಬ್ಬನು ಅವಳು ಕ್ರೀಡೆಗಾಗಿ ಉಪಯೋಗಿಸುತ್ತಿದ್ದ ಚಂಡನ್ನು ನೋಡಿ ಹೇಳುವ ಮಾತಿದು. "ಎಲೈ ಚಂಡೇ, ಸುಂದರಿಯಾದ ಈ ನಾಯಿಕೆಯು ನಿನ್ನನ್ನು ಎಷ್ಟು ಪ್ರೀತಿಯಿಂದ ಆದರಿಸಿ ಆಡಿಸುತ್ತಿರುವಳು! ಆದ್ದರಿಂದ ನೀನೇ ಧನ್ಯ. ಆ ಚಂಡನ್ನು ಹೇಗೆ ಆಡಿಸುತ್ತಿರುವಳೆಂದು ಅವನು ತಿಳಿಸುತ್ತಾನೆ. ಆಕೆಯು ಆಟದಲ್ಲಿಯೇ ಮಗ್ನಳಾಗಿರುವುದರಿಂದ ಕುಚಗಳು ಎಲ್ಲಾ ಕಡೆಗಳಲ್ಲೂ ಅಳ್ಳಾಡುತ್ತಿರುವುವು. ಕೂದಲುಗಳೆಲ್ಲವೂ ಈ ಕಡೆಗೂ ಆ ಕಡೆಗೂ ಚೆದುರಿವೆ. ಕೊರಳಲ್ಲಿರುವ ಹಾರಗಳು ಅಲುಗಾಡುತ್ತಲಿವೆ. ಆದುರುತ್ತಿರುವ ಕುಂಡಲಗಳಿಂದ ಕೆನ್ನೆಗಳೆರಡೂ ಶೋಭಿಸುತ್ತವೆ. ಕಮಲದಂತಿರುವ ಮುಖದಲ್ಲಿ ಬೆವರು ಕಾಣಿಸುತ್ತಿದೆ. ಚಂಡನ್ನು ಕೈಯಿಂದ ಪದೇ ಪದೇ ಹೊಡೆಯುತ್ತಿರುವುದರಿಂದ ಹೆಚ್ಚು ನಿಟ್ಟುಸಿರು ಬರುತ್ತಲಿದೆ.'' ಹೀಗೆ ಚಂಡಿನ ವೃತ್ತಾಂತವನ್ನು ವರ್ಣಿಸುತ್ತಿರುವಾಗ ಇಲ್ಲಿ ತಿಳಿಸಿರುವ ವ್ಯಾವಲ್ಗತ್ಕುಚಭಾರ ಮೊದಲಾದ ವಿಶೇಷಣಗಳ ಸಾಮ್ಯದಿಂದ ವಿಪರೀತ ರತಿಯಲಿ ಆಸಕ್ತಳಾಗಿದ್ದ ನಾಯಿಕೆಯೊಬ್ಬಳ ವೃತ್ತಾಂತವು ವ್ಯಂಗ್ಯವಾಗಿ ತೋರುತ್ತದೆ. ಹಿಂದಿನ ಉದಾಹರಣದಲ್ಲಿ 'ರಕ್ತಃ' ಮೊದಲಾದ ವಿಶೇಷಣಗಳು ಶ್ಲೇಷದಿಂದ ಕೂಡಿವೆ. ಇಲ್ಲಿಯಾದರೋ ವಿಶೇಷಣಗಳು ನೇರವಾಗಿ ಎರಡು ಕಡೆಗಳಲ್ಲೂ ಅನ್ವಯಿಸುವಷ್ಟು ಸಾಮಾನ್ಯವೆನಿಸಿದೆ.

ಸಾರೂಪ್ಯಾದಪಿ ಸಮಾಸೋಕ್ತಿರ್ದೃಶ್ಯತೇ. ಯಥಾ ವಾ—

ಪುರಾ ಯತ್ರ ಸ್ರೋತಃ ಸಲಿಲಮಧುನಾ ತತ್ರ ಸರಿತಾಂ
ವಿಪರ್ಯಾಸಂ ಯಾತೋ ಘನವಿರಳಭಾವಃ ಕ್ಷಿತಿರುಹಾಮ್ ।
ಬಹೋರ್ದೃಷ್ಟಂ ಕಲಾದಪರಮಿವ ಮನ್ಯೇ ವನಮಿದಂ
ನಿವೇಶಃ ಶೈಲಾನಾಂ ತದಿದಮಿತಿ ಬುದ್ಧಿಂ ದ್ರಢಯತಿ ॥

ಅತ್ರ ವನವರ್ಣನೇ ಪ್ರಸ್ತುತೇ ತತ್ಸಾರೂಪ್ಯಾತ್ ಕುಟುಂಬಿಷು ಧನಸಂತಾನಾದಿಸಮೃದ್ಧಿವಿಪರ್ಯಾಸಂ ಪ್ರಾಪ್ತಸ್ಯ ತತ್ಸಮಾಶ್ರಯಸ್ಯ ಗ್ರಾಮನಗರಾದೇರ್ವೃತ್ತಾಂತಃ ಪ್ರತೀಯತೇ.

ಅತ್ರ ಚ ಪ್ರಸ್ತುತಾಪ್ರಸ್ತುತಸಾಧಾರಣವಿಶೇಷಣಬಲಾತ್ಸಾರೂಪ್ಯಬಲಾದ್ವಾ ಅಪ್ರಸ್ತುತವೃತ್ತಾಂತಸ್ಯ ಪ್ರತ್ಯಾಯನಂ ತತ್ಪ್ರಸ್ತುತೇ ವಿಶೇಷ್ಯೇ ತತ್ಸಮಾರೋಪಾರ್ಥಂ; ಸರ್ವಥೈವ ಪ್ರಸ್ತುತಾನನ್ವಯಿನಃ ಕವಿಸಂರಂಭ ಗೋಚರತ್ವಾಯೋಗಾತ್. ತತಶ್ಚ ಸಮಾಸೋಕ್ತೌ ಅಪ್ರಸ್ತುತ ವ್ಯವಹಾರ ಸಮಾರೋಪಃ ಚಾರುತಾಹೇತುಃ; ನ ತು ರೂಪಕ ಇವ ಪ್ರಸ್ತುತೇಽಪ್ರಸ್ತುತ ರೂಪಸಮಾರೋಪೋಽಸ್ತಿ. "ಮುಖಂ ಚಂದ್ರಃ" ಇತ್ಯತ್ರ ಮುಖೇ ಚಂದ್ರತ್ವಾರೋಪಹೇತುಚಂದ್ರಪದಸಮಭಿವ್ಯಾಹಾರವತ್ "ರಕ್ತಶ್ಚುಂಬತಿ ಚಂದ್ರಮಾಃ" ಇತ್ಯಾದಿ ಸಮಾಸೋಕ್ತ್ಯುದಾಹರಣೇ ಚಂದ್ರಾದೌ ಜಾರತ್ವಾದ್ಯಾರೂಪಹೇತೋಸ್ತದ್ವಾಚಕಪದಸಮಭಿವ್ಯಾಹಾರಸ್ಯ ಅಭಾವತ್.

ವಿಶೇಷಣಗಳ ಸಾಮ್ಯದಿಂದ ಸಮಾಸೋಕ್ತಿಯು ಸಂಭವಿಸುವಂತೆ ಉಪಮೇಯದಲ್ಲಿ ಉಪಮಾನದ ಸಾದೃಶ್ಯವು ತೋರುವುದರಿಂದಲೂ ಸಮಾಸೋಕ್ತಿ ಬರಬಹುದೆಂಬುದನ್ನು ಉದಾಹರಿಸುತ್ತಾನೆ. ಉತ್ತರರಾಮಚರಿತದಲ್ಲಿ ಸೀತೆಯನ್ನು ತೊರೆದ ಮೇಲೆ ಶಿಂಬೂಕನೆಂಬ ಶೂದ್ರನ ಕೊಲೆಗಾಗಿ ರಾಮನು ಮತ್ತೆ ಅರಣ್ಯಕ್ಕೆ ಹೋದಾಗ ಅಲ್ಲಿ ಆಗಿದ್ದ ಬದಲಾವಣೆಗಳನ್ನು ನೋಡಿ ಹೇಳುವ ಮಾತಿದು. "ಹಿಂದೆ ನದಿಗಳ ಪ್ರವಾಹವು ಎಲ್ಲಿ ಹರಿಯುತ್ತಿತ್ತೋ ಅಲ್ಲೆಲ್ಲಾ ಈಗ ಮರಳು ತುಂಬಿಕೊಂಡಿದೆ. ಎಲ್ಲಿ ಮರಗಳು ದಟ್ಟವಾಗಿ ಬೆಳೆದಿದ್ದವೋ ಅಲ್ಲಿ ಈಗ ಅವು ವಿರಳವಾಗಿವೆ. ಎಲ್ಲಿ ವಿರಳವಾಗಿದ್ದವೋ ಅಲ್ಲಿ ಈಗ ಹೆಚ್ಚು ಮರಗಳು ಬೆಳೆದಿವೆ ಆದ್ದರಿಂದ ಬಹಳ ಕಾಲದ ಮೇಲೆ ಕಂಡ ಈ ವನವನ್ನು ಬೇರೊಂದು ವನವೆಂದೇ ಭಾವಿಸುತ್ತೇನೆ. ಆದರೆ ಈಗಿನಂತೆ ಈಗಲೂ ಸ್ಥಿರವಾಗಿ ನೆಲೆಸಿರುವ ಬೆಟ್ಟಗಳ ಸನ್ನಿವೇಶವು ಹಿಂದೆ ಕಂಡಿದ್ದ ಈ ವನವೇ ಇದೆಂಬ ನೆನಪನ್ನು ದೃಢಪಡಿಸುತ್ತಲಿದೆ." ಇಲ್ಲಿ ವನವರ್ಣನವು ಪ್ರಕೃತಸಂದರ್ಭಕ್ಕೆ ಸಂಬಂಧಿಸಿರುವಾಗ ಅಲ್ಲಿ ಕಾಣುವ ಅಸ್ತವ್ಯಸ್ತ ಸನ್ನಿವೇಶಗಳ ಸಾದೃಶ್ಯದಿಂದ ಗೃಹಸ್ಥರಲ್ಲಿ ಧನಸಂತಾನ ಮೊದಲಾದವು ಒಮ್ಮೆ ಯಥೇಚ್ಛವಾಗಿದ್ದು ಆನಂತರ ಕಡಿಮೆಯಾಗುವುವೆಂದೂ, ಒಮ್ಮೆ ಕಡಮೆಯಾಗಿದ್ದು ಅನಂತರ ಹೆಚ್ಚುವುವೆಂದೂ ತಿಳಿಸುವ ಅಪ್ರಸ್ತುತವೃತ್ತಾಂತವು ತೋರಿಬರುತ್ತದೆ. ವನದಲ್ಲಿ ಕಂಡುಬರುವ ವ್ಯತ್ಯಾಸಗಳಿಂದ ಕುಟುಂಬಿಗಳ ಜೀವನವೂ ಏರುಪೇರುಗಳಿಂದ ಕೂಡಿದೆ ಎಂಬುದು ತಿಳಿದುಬರುತ್ತದೆ.

ಇಲ್ಲಿ ಪ್ರಕೃತ ಮತ್ತು ಅಪ್ರಕೃತ ವೃತ್ತಾಂತಗಳಿಗೆ ಸಮನಾಗಿ ಅನ್ವಯಿಸಬಹುದಾದ ವಿಶೇಷಣಗಳನ್ನು ಉಪಯೋಗಿಸುವದರಿಂದಲೋ ಅಥವಾ ಅವೆರಡು ವಿಷಯಗಳಿಗೂ ಇರುವ ಸಾದೃಶ್ಯದಿಂದಲೋ ಅಪ್ರಕೃತ ವೃತ್ತಾಂತವು ವ್ಯಂಗ್ಯವಾಗಿ ತೋರುತ್ತದೆ. ಪ್ರಕೃತ ವೃತ್ತಾಂತದಲ್ಲಿ ಆರೋಪಿಸಲಿಕ್ಕಾಗಿಯೇ ಅದನ್ನು ಹೀಗೆ ವಿಶೇಷಣಸಾಮ್ಯ ಅಥವಾ ಸಾದೃಶ್ಯ ಇವುಗಳ ಮೂಲಕ ವ್ಯಂಗ್ಯವಾಗಿ ತಿಳಿಸಲಾಗು

ವುದಂ. ಆದರೆ ಈ ಅಪ್ರಕೃತವೃತ್ತಾಂತವು ಪ್ರಕೃತವೃತ್ತಾಂತಕ್ಕೆ ಪೂರ್ತಿಯಾ
ಹೊಂದಿಕೆಯಾಗದೇ ಇರುವುದಾದರೆ ಅಂತಹದನ್ನು ವ್ಯಂಗ್ಯವಾಗಿ ತಿಳಿಸಲು ಕವಿಯ
ಉಪಯೋಗಿಸಿದ ಪ್ರತಿಭೆ ಎಲ್ಲವೂ ವ್ಯರ್ಥವೇ ಆದೀತಂ. ಆದ್ದರಿಂದ ಅಪ್ರಕೃ
ವೃತ್ತಾಂತವು ಪ್ರಕೃತಕ್ಕೆ ಕೊಂಚವಾದರೂ ಸಂಬಂಧಿಸಿಕೊಂಡೇ ಇರಬೇಕು. ಹಾ
ಅದು ಸಂಬಂಧಪಡದೇ ಇದ್ದರೆ ಅದು ಕವಿಯ ಪ್ರತಿಭೆಗೆ ಗೋಚರವಾಗಲಿ
ಶಕ್ಯವಿಲ್ಲ. ಆದ್ದರಿಂದ ಸಮಾಸೋಕ್ತಿಯಲ್ಲಿ ಪ್ರಕೃತವ್ಯವಹಾರದಲ್ಲಿ ಅಪ್ರಕೃತವ್ಯ
ಹಾರವನ್ನು ಆರೋಪಿಸುವುದೇ ಸೌಂದರ್ಯದ ಮೂಲವೆನಿಸಿದೆ. ರೂಪಕದ
ಇಲ್ಲಿ ಪ್ರಕೃತವಸ್ತುವಿನಲ್ಲಿ ಅಪ್ರಕೃತವಸ್ತುವಿನ ಆರೋಪವನ್ನು ವಿರ್ಪಡಿಸ
ಪ್ರಶ್ನೆಯೇ ಇಲ್ಲ. ಮುಖವೇ ಚಂದ್ರನೆಂಬಲ್ಲಿ ಮುಖದಲ್ಲಿ ಚಂದ್ರಭಾವವ
ಆರೋಪಿಸಲಿಕ್ಕಾಗಿಯೇ ಚಂದ್ರಪದವನ್ನು ಪ್ರಯೋಗಿಸಲಾಗಿದೆ. ಆದರೆ "ರಕ್ತಶ್ಚು
ಬತಿ ಚಂದ್ರಮಾಃ" ಎಂಬ ಸಮಾಸೋಕ್ತಿಯ ಉದಾಹರಣದಲ್ಲಿ ಚಂದ್ರನಲ್ಲಿ ಜಾ
ಭಾವವನ್ನು ಆರೋಪಿಸಲು ಅನುಕೂಲವಾಗುವಂತೆ ಚಂದ್ರಪದದೊಡನೆ ಜಾರ ವಾ
ಪದವನ್ನು ಉಪಯೋಗಿಸಿಲ್ಲ. ಆದ್ದರಿಂದ ರೂಪಕದಲ್ಲಿ ಒಂದು ವಸ್ತುವಿನ
ಮತ್ತೊಂದು ವಸ್ತುವಿನ ರೂಪವನ್ನು ಆರೋಪಿಸಿದರೆ ಸಮಾಸೋಕ್ತಿಯಲ್ಲಿ ಒಂ
ವೃತ್ತಾಂತದಲ್ಲಿ ಮತ್ತೊಂದು ವೃತ್ತಾಂತವನ್ನು ಆರೋಪಿಸುವುದೇ ಚಮತ್ಕಾ
ವೆನಿಸಿದೆ.

ನಿರೀಕ್ಷ್ಯವಿದ್ಯುನ್ನಯನೈಃ ಪಯೋದೋ
ಮುಖಂ ನಿಶಾಯಾಮಭಿಸಾರಿಕಾಯಾಃ ।
ಧಾರಾನಿಪಾತೈಃ ಸಹ ಕಿಂ ನು ವಾಂತಃ
ಚಂದ್ರೋಽಯಮಿತ್ಯುರ್ತತರಂ ರರಾಸೇ ॥

ಇತ್ಯೇಕದೇಶವಿವರ್ತಿರೂಪಕೋದಾಹರಣ ಇವ ಪ್ರಸ್ತುತೇಽಪ್ರಸ್ತುತ ರೂ
ಸಮಾರೋಪಗಮಕಸ್ಯಾಪ್ಯಭಾವಾತ್. ತತ್ರ ಹಿ ವಿದ್ಯುನ್ನಯನೈರಿತ್ಯತ್ರ ನಿರೀಕ್ಷ
ಣಾನುಗುಣ್ಯಾದುತ್ತರಪದಾರ್ಥಪ್ರಧಾನರೂಪ ಮಯೂರವ್ಯಂಸಕಾದಿಸಮಾಸವ್ಯ
ಸ್ಥಿತಾತ್ ಉತ್ತರಪದಾರ್ಥಭೂತನಯನಸಾನ್ವಯಾನುರೋಧಾತ್ ಪಯೋದೇಽನುಕ್ತ
ಮಪಿ ದ್ರಷ್ಟೃ ಪುರುಷತ್ವರೂಪಣಂ ಗಮ್ಯಮುಪಗಮ್ಯತೇ. ನ ಚೇಹ ತಥಾ ನಿರೀ
ಕ್ಷಣವತ್ "ತ್ವಯ್ಯಾಗತೇ ಕಿಮಿತಿ ವೇಪತ ಏಷ ಸಿಂಧುಃ" ಇತೀ ಶ್ಲೋಕೇ ಸತ್ಕೃ
ಕೃತ್ಯಾದಿವತ್ಕ್ವ ಅಪ್ರಸ್ತುತಾಸಾಧಾರಣವೃತ್ತಾಂತ ಉಪಾತ್ತೋಽಸ್ತಿ. ನಾಪಿ ಶ್ಲಿಷ್ಟ
ಸಾಧಾರಣಾದಿವಿಶೇಷಣಸಮರ್ಪಿತಯೋಃ ಪ್ರಸ್ತುತಾಪ್ರಸ್ತುತವೃತ್ತಾಂತಯೋಃ ಅಪ್ರ
ಸ್ತುತವೃತ್ತಾಂತಸ್ಯ ವಿದ್ಯುನ್ನಯನವತ್ ಪ್ರಾಧಾನ್ಯಮಸ್ತಿ. ಯೇನ ತದನುರೋ
ಧಾತ್ "ತ್ವಂ ಸೇತುಮಂಥಕೃತ್" ಇತ್ಯತ್ರೇವ ಪ್ರಸ್ತುತೇಽನುಕ್ತಮಪಿ ಅಪ್ರಸ್ತು

ರೂಪಸಮಾರೋಪಂ ಅಭ್ಯುಪಗಚ್ಛೇಮ. ತಸ್ಮಾದ್ವಿಶೇಷಣ ಸಮರ್ಪಿತಾಪ್ರಸ್ತುತ ವ್ಯವಹಾರಸಮಾರೋಪಮಾತ್ರಮಿಹ ಚಾರುತಾಹೇತುಃ. ಯದ್ಯಪಿ ಪ್ರಸ್ತುತಾಪ್ರಸ್ತುತ ವೃತ್ತಾಂತಯೋರಿಹ ಶ್ಲಿಷ್ಟಸಾಧಾರಣಾದಿವಿಶೇಷಣಸಮರ್ಪಿತಯೋರ್ಭಿನ್ನಪದೋಪಾತ್ತವಿಶೇಷಣಯೋರಿವ ವಿಶೇಷ್ಯೇಣೈವ ಸಾಕ್ಷಾದನ್ವಯಾದಸ್ತಿ ಸಮಪ್ರಾಧಾನ್ಯಮ್,ತಥಾಪ್ಯಪ್ರಸ್ತುತವೃತ್ತಾಂತಾನ್ವಯಾನುರೋಧಾನ್ನ ಪ್ರಸ್ತುತೇಽಪ್ರಸ್ತುತರೂಪಸಮಾರೋಪೋಽಂಗೀಕಾರ್ಯಃ. ತಥಾ ಹಿ ಯಥಾ ಪ್ರಸ್ತುತವಿಶೇಷ್ಯೇಽಪ್ರಸ್ತುತವೃತ್ತಾಂತಸ್ಯ ನಾಸ್ತ್ಯನ್ವಯ ಯೋಗ್ಯತಾ. ತಥೈವ ಅಪ್ರಸ್ತುತೇಽಪಿ ಜಾರಾದೌ ನಾಸ್ತಿ ಪ್ರಸ್ತುತವೃತ್ತಾಂತಸ್ಯ ಅನ್ವಯಯೋಗ್ಯತಾ.ಏವಂ ಚ ಸಮಪ್ರಧಾನಯೋಃ ಪ್ರಸ್ತುತಾಪ್ರಸ್ತುತವೃತ್ತಾಂತಯೋರನ್ಯತರಸ್ಯಾವಶ್ಯಮಾರೋಪೇಽಭ್ಯುಪಗಂತವ್ಯೇ ಶ್ರುತ ಏವ ಪ್ರಸ್ತುತೇಽಪ್ರಸ್ತುತಸ್ಯಾರೋಪಶ್ಚಾರುತಾಹೇತುರಿತಿಯುಕ್ತಮ್.

"ಮೇಘಪುರುಷನು ಮಿಂಚುಗಳೆಂಬ ಕಣ್ಣುಗಳಿಂದ ರಾತ್ರಿಯವೇಳೆ ಅಭಿಸಾರಿಕೆಯ ಮುಖವನ್ನು ನೋಡಿ ಜಲಧಾರೆಗಳೊಡನೆ ಚಂದ್ರನೇ ಹೀಗೆ ಹೊರ ಬಿದ್ದಿರುವನೋ ಏನೋ ಎಂದು ತಿಳಿದು ಗಟ್ಟಿಯಾಗಿ ಶಬ್ದ ಮಾಡಿದನು.'' ಇದು ಏಕದೇಶವಿವರ್ತಿರೂಪದಕದ ಉದಾಹರಣವೆನಿಸಿದೆ. ಇಲ್ಲಿ ಮಿಂಚಿನಲ್ಲಿ ಕಣ್ಣಿನ ರೂಪಣವಿರುವುದರಿಂದ ಮೇಘದಲ್ಲಿ ದೃಷ್ಟೃಪುರುಷನೆಂಬ ಆರೋಪವು ವಾಚ್ಯವೆನಿಸದೆ ವ್ಯಂಗ್ಯವಾಗಿ ತೋರುತ್ತದೆ. ಮಿಂಚೆಂಬ ಕಣ್ಣಿನಿಂದ ನೋಡುವಿಕೆ ಎಂಬುದು ಚೇತನದಲ್ಲಿ ಮಾತ್ರವೇ ಸಂಭವಿಸತಕ್ಕದ್ದು. ಒಂದು ಕಡೆ ಮಾತ್ರ ಆರೋಪವನ್ನು ಶಬ್ದದಿಂದ ಸ್ಪಷ್ಟಪಡಿಸಿ ಬೇರೆ ಕಡೆ ಆರೋಪವನ್ನು ವ್ಯಂಗ್ಯವಾಗಿ ತೋರಿಸುವುದೇ ಏಕದೇಶವಿವರ್ತಿರೂಪಕವೆನಿಸುತ್ತದೆ. ವಿದ್ಯುನ್ನಯನೈಃ ಎಂಬಲ್ಲಿ ರೂಪಣವು ವಾಚ್ಯವಾಗಿದೆ. ಇದರ ಮೂಲಕ ಮೇಘದಲ್ಲಿ ಪುರುಷನೆಂಬ ರೂಪಣವನ್ನು ಶಬ್ದದಿಂದ ಹೇಳದಿದ್ದರೂ ವ್ಯಂಗ್ಯವಾಗಿ ಭಾವಿಸಿಕೊಳ್ಳಬೇಕು. ಇಲ್ಲಿ ಪ್ರಕೃತವಸ್ತುವಿನಲ್ಲಿ ಅಪ್ರಕೃತವಸ್ತುವಿನ ರೂಪವನ್ನು ಆರೋಪಿಸಿರುವಂತೆ ಸಮಾಸೋಕ್ತಿಯಲ್ಲೂ ಆರೋಪಿಸಲಿಕ್ಕೆ ಸಾಧಕವಾದ ಯಾವ ಆಧಾರವೂ ಇಲ್ಲ. ವಿದ್ಯುನ್ನಯನೈಃ ಎಂಬ ರೂಪಕದ ಉದಾಹರಣದಲ್ಲಾದರೋ ನಿರೀಕ್ಷಣ ಕ್ರಿಯೆಗೆ ಹೊಂದಿಕೆಯಾಗುವಂತೆ ಉತ್ತರಪದಾರ್ಥವೇ ಮುಖ್ಯವೆನಿಸಿದ ವಿಶೇಷಣಸಮಾಸವನ್ನಾಶ್ರಯಿಸುವ ಪ್ರಯುಕ್ತ ಉತ್ತರಪದಾರ್ಥವೆನಿಸಿದ ನೇತ್ರದಲ್ಲಿ ನಿರೀಕ್ಷಣಕ್ಕೆ ಅನ್ವಯವು ಬರುವುದರಿಂದ ಮೇಘದಲ್ಲಿ ದೃಷ್ಟೃಪುರುಷನೆಂಬ ಆರೋಪವನ್ನು ಶಬ್ದದಿಂದ ತಿಳಿಸದೇ ಇದ್ದರೂ ವ್ಯಂಗ್ಯವಾಗಿಯಾದರೂ ಭಾವಿಸಬೇಕಾಗುತ್ತದೆ. ಮೇಘದಲ್ಲಿ ಪುರುಷನೆಂದು ಆರೋಪಿಸಲು ನಿರೀಕ್ಷಣಕ್ರಿಯೆ ಹೇಗೆ ಸಹಾಯಕವಾಗುವುದೋ, "ನೀನು ಬಂದರೆ ಸಮುದ್ರವು ಏಕೆ ನಡುಗುತ್ತದೆ ? ಎಂದು ತಿಳಿಸುವ ಪದ್ಯದಲ್ಲಿ 'ನೀನು ಸೇತುವೆಯನ್ನು ಕಟ್ಟಿಸಿದವನು' ಎಂದು ಮುಂತಾದ ಧರ್ಮವು

ನಿನ್ನನ್ನು ರಾಮನೆಂದು ಆರೋಪಿಸಲು ಹೇಗೆ ಸಾಧಕವಾಗುವುದೋ ಹಾಗೆ ಸಮಾಸೋಕ್ತಿಯಲ್ಲಿ ಅಪ್ರಸ್ತುತವೂ ಅಸಾಧಾರಣವೂ ಆದ ವೃತ್ತಾಂತವನ್ನು ಶಬ್ದದಿಂದ ತಿಳಿಸಿರುವುದಿಲ್ಲ. ಶ್ಲೇಷದ ಮೂಲಕವೋ ಅಥವಾ ಎರಡಕ್ಕೂ ಸಮಾನವಾಗಿ ಅನ್ವಯಿಸುವ ವಿಶೇಷಣಗಳ ಮೂಲಕವೋ ತಿಳಿದುಬರುವ ಪ್ರಕೃತ ಮತ್ತು ಅಪ್ರಕೃತ ವೃತ್ತಾಂತಗಳಲ್ಲಿ ಅಪ್ರಕೃತವೃತ್ತಾಂತಕ್ಕೆ 'ವಿದ್ಯುನ್ನಯನೈಃ' ಎಂಬಲ್ಲಿಯಂತೆ ಪ್ರಾಧಾನ್ಯವೂ ಇಲ್ಲ. ಹಾಗೆ ಪ್ರಾಧಾನ್ಯವಿದ್ದಿದ್ದರೆ ಅದನ್ನು ಅನುಸರಿಸಿಕೊಂಡು ನೀನು ಸೇತುವೆಯನ್ನು ಕಟ್ಟಿಸಿದವನು, ಸಮುದ್ರವನ್ನು ಕಡೆದವನು ಎಂಬಲ್ಲಿರುವಂತೆ ಪ್ರಕೃತವಸ್ತುವಿನಲ್ಲಿ ಅಪ್ರಕೃತವಸ್ತುವಿನ ಸಮಾರೋಪವನ್ನು ಶಬ್ದದಿಂದ ತಿಳಿಸದೇ ಇದ್ದರೂ ಅದು ವ್ಯಂಗ್ಯವಾಗಿಯಾದರೂ ತೋರುವುದೆಂದು ಒಪ್ಪಬಹುದಾಗಿತ್ತು. ಅಂತಹ ಪರಿಸ್ಥಿತಿಯೂ ಸಮಾಸೋಕ್ತಿಯಲ್ಲಿ ಕಂಡುಬರುವುದಿಲ್ಲ. ಆದ್ದರಿಂದ ವಿಶೇಷಣಗಳ ಮೂಲಕ ತಿಳಿದುಬರುವ ಅಪ್ರಸ್ತುತ ವೃತ್ತಾಂತವನ್ನು ಪ್ರಸ್ತುತವೃತ್ತಾಂತದಲ್ಲಿ ಆರೋಪಿಸಬೇಕೆಂಬುದಷ್ಟೇ ಸಮಾಸೋಕ್ತಿಯಲ್ಲಿ ಸೌಂದರ್ಯವನ್ನು ಹುಟ್ಟಿಸುವ ಅಂಶವೆಂಬುದು ಸ್ಪಷ್ಟವಾಗುತ್ತದೆ. ಶ್ಲೇಷದಿಂದಲೋ ಅಥವಾ ಎರಡು ಕಡೆಗಳಲ್ಲೂ ಸಮಾನವಾಗಿ ಅನ್ವಯಿಸುವ ವಿಶೇಷಣಗಳಿಂದಲೋ ತಿಳಿದುಬರುವ ಪ್ರಕೃತ ಅಪ್ರಕೃತ ವೃತ್ತಾಂತಗಳಿಗೆ ಬೇರೆ ಬೇರೆ ಪದಗಳಿಂದ ತೋರುವ ವಿಶೇಷಣಗಳಂತೆಯೇ ವಿಶೇಷ್ಯದೊಡನೆ ನೇರವಾಗಿ ಅನ್ವಯ ಬರುವುದರಿಂದ ಅವೆರಡು ವೃತ್ತಾಂತಗಳೂ ಸಮಾನವಾಗಿಯೇ ಪ್ರಧಾನವೆನ್ನಿಸುತ್ತವೆ. ಅವೆರಡರಲ್ಲಿ ಒಂದು ಹೆಚ್ಚು ಮತ್ತೊಂದು ಕಡಮೆ ಎಂದು ಹೇಳುವಂತಿಲ್ಲ. ಆದರೂ ಪ್ರಕೃತವೃತ್ತಾಂತಕ್ಕೆ ಅಪ್ರಕೃತವೃತ್ತಾಂತದಲ್ಲಿ ಅನ್ವಯವು ಸಂಭವಿಸುವ ಪ್ರಯುಕ್ತ ಅದನ್ನು ಅನುಸರಿಸಿಕೊಂಡು ಪ್ರಕೃತವಸ್ತುವಿನಲ್ಲಿ ಅಪ್ರಕೃತವಸ್ತುವಿನ ರೂಪವನ್ನೇ ಆರೋಪಿಸಬೇಕೆಂಬುದನ್ನು ಒಪ್ಪಲಿಕ್ಕೆ ಯಾವ ಆಧಾರವೂ ಇರುವುದಿಲ್ಲ. ಪ್ರಕೃತವಿಶೇಷ್ಯದಲ್ಲಿ ಅಪ್ರಕೃತವೃತ್ತಾಂತಕ್ಕೆ ಹೇಗೆ ಅನ್ವಯವಾಗುವ ಯೋಗ್ಯತೆ ಇಲ್ಲವೋ ಹಾಗೆಯೇ ಅಪ್ರಕೃತವಾದ ಜಾರ ಮೊದಲಾದ ವಿಶೇಷ್ಯದಲ್ಲಿಯೂ ಪ್ರಕೃತವೃತ್ತಾಂತಕ್ಕೆ ಅನ್ವಯವಾಗುವ ಯೋಗ್ಯತೆಯೂ ಇರುವುದಿಲ್ಲ. ಹೀಗೆ ಸಮವಾಗಿಯೇ ಪ್ರಧಾನವೆನಿಸಿರುವ ಎರಡು ವೃತ್ತಾಂತಗಳೊಳಗೆ ಒಂದರಲ್ಲಿ ಮತ್ತೊಂದರ ಆರೋಪವನ್ನು ಮಾಡಬೇಕೆಂದು ಅವಶ್ಯವಾಗಿ ಒಪ್ಪಲೇಬೇಕಾಗಿರುವಾಗ ಶಬ್ದದಿಂದಲೇ ಸ್ಪಷ್ಟವಾಗಿ ತಿಳಿಸಿರುವ ಪ್ರಕೃತವೃತ್ತಾಂತದಲ್ಲಿ ಅಪ್ರಕೃತವೃತ್ತಾಂತವನ್ನು ಆರೋಪಿಸುವುದರಲ್ಲಿಯೇ ಸಮಾಸೋಕ್ತಿಯ ಸೌಂದರ್ಯವು ಅಡಗಿದೆ ಎಂದು ಹೇಳುವುದೇ ಯುಕ್ತವೆನಿಸುತ್ತದೆ.

ನನ್ವೇವಂ ಸತಿ ವಿಶೇಷಣಸಾಮ್ಯಾದಪ್ರಸ್ತುತಸ್ಯ ಗಮ್ಯತ್ವಂ ಸಮಾಸೋಕ್ತಿಃ.

"ವಿಶೇಷಣಾನಾಂ ಸಾಮ್ಯೇನ ಯತ್ರ ಪ್ರಸ್ತುತವರ್ತಿನಾಮ್ ।
ಅಪ್ರಸ್ತುತಸ್ಯ ಗಮ್ಯತ್ವಂ ಸಾ ಸಮಸೋಕ್ತಿರಿಷ್ಯತೇ ॥''

ಇತ್ಯಾದೀನಿ ಪ್ರಾಚೀನಾನಾಂ ಸಮಾಸೋಕ್ತಿಲಕ್ಷಣಾನಿ ನ ಸಂಗಚ್ಛೇರನ್. ಪ್ರಸ್ತುತೇ-ಶ್ಲಿಷ್ಟಸಾಧಾರಣಾದಿವಿಶೇಷಣಸಮರ್ಪಿತಾನುರಾಗಪೂರ್ವಕವದನಚುಂಬನಾದ್ಯಪ್ರಸ್ತುತ ವೃತ್ತಾಂತಸಮಾರೋಪಮಾತ್ರಸ್ಯ ಚಾರುತಾಹೇತುತ್ವಾಭ್ಯುಪಗಮೇನ ವಿಶೇಷಣಸಾ-ಮ್ಯಕೃತಕಾಮುಕಾದ್ಯಪ್ರಸ್ತುತ ಧರ್ಮಿವ್ಯಂಜನಾನಪೇಕ್ಷಣಾದಿತಿ ಚೇದುಚ್ಯತೇ ಸ್ವರೂ-ಪತೋಽಪ್ರಸ್ತುತಕಾಮುಕಾದಿಸಂಬಂಧಿತ್ವೇನ ಅವಗಮ್ಯಮಾನಸ್ಯ ತಸ್ಯ ಆರೋಪಃ. ತಥಾಭೂತಸ್ಯೈವ ರಸಾನುಗುಣತ್ವಾತ್. ನ ಚ ತಾವದವಗಮನೇ ವಿಶೇಷಣಪದಾ-ನಾಂ ಸಾಮರ್ಥ್ಯಮಸ್ತಿ. ಅತಃ ಶ್ಲೇಷಾದಿಮಹಿಮ್ನಾ ವಿಶೇಷಣಪದೈಃ ಸ್ವರೂಪತಃ ಸಮರ್ಪಿತೇನ ವದನಚುಂಬನಾದಿನಾ ತತ್ಸಂಬಂಧಿನಿ ಕಾಮುಕಾದಾವಭಿವ್ಯಕ್ತೇ ಪುನಸ್ತ ದೀಯತ್ವಾನುಸಂಧಾನಂ ತತ್ರ ಭವತಿ. ಯಥಾ ಸ್ವರೂಪತೋ ದೃಷ್ಟೇನ ರಾಜಾಶ್ವಾದಿ ನಾತತ್ಸಂಬಂಧಿನಿ ರಾಜಾದೌ ಸ್ಮಾರಿತೇ ಪುನರಶ್ವಾದೌ ತದೀಯತ್ವಾನುಸಂಧಾನಮಿತಿ ವಿಶೇಷಣಸಾಮ್ಯೇನ ವಾಚ್ಯೋಪಸ್ಕಾರಕಸ್ಯಾಪ್ರಸ್ತುತವ್ಯಂಜನಸ್ಯ ಅಸ್ತ್ಯಪೇಕ್ಷಾ. ಅತ ಏವ ಶ್ಲಿಷ್ಟವಿಶೇಷಣಾಯಾಮಿವ ಸಾಧಾರಣ ವಿಶೇಷಣಾಯಾಮಪಿ ಅಪ್ರಸ್ತುತವ್ಯವ ಹಾರಸಮಾರೋಪ ಇತ್ಯೇವ ಪ್ರಾಚೀನಾನಾಂ ಪ್ರವಾದಃ. ಕಂದುಕೇ ವ್ಯಾವಲ್ಗತ್ಕುಚ-ಭಾರತ್ವಾದಿ ವಿಶಿಷ್ಟವನಿತಾಸೇವ್ಯತ್ವಸ್ಯ ಕಾಮುಕಸಂಬಂಧಿತ್ವೇನೈವ ಸಮಾರೋಪಣೀ-ಯತ್ವಾತ್. ಸ್ವರೂಪತಃ ಕಂದುಕೇಽಪಿ ತಸ್ಯ ಸತ್ತ್ವೇನ ಅಸಮಾರೋಪಣೀಯತ್ವಾತ್ ಕಿಂಚ ಸಾರೂಪ್ಯನಿಬಂಧನತ್ವೇನ ಉದಾಹೃತಾಯಾಂ ಸಮಾಸೋಕ್ತೌ ಅಪ್ರಸ್ತುತ-ವೃತ್ತಾಂತಸ್ಯ ಅಶಬ್ದಾರ್ಥಸ್ಯ ಅಪ್ರಸ್ತುತವೃತ್ತಾಂತರೂಪೇಣೈವ ಗಮ್ಯತಯಾ ತೇನ ರೂಪೇಣ ತತ್ರ ಸಮಾರೋಪಸಿದ್ಧೇಃ ಅನ್ಯತ್ರಾಪಿ ತಥೈವ ಯುಕ್ತಮಿತಿ ಯುಕ್ತಮೇವ ಪ್ರಾಚೀನಾನಾಂ ಲಕ್ಷಣಮಿತಿ ವಿಭಾವನೀಯಮ್.

ಅಪ್ರಕೃತ ವಸ್ತುವಿನ ಸಮಾರೋಪವನ್ನು ಒಪ್ಪಿಕೊಳ್ಳದೆ ಅಪ್ರಕೃತ ವ್ಯವಹಾರದ ಸಮಾರೋಪವನ್ನೇ ಒಪ್ಪುವುದಾದರೆ ಪ್ರಾಚೀನರು ಹೇಳಿದ ಲಕ್ಷಣಗಳು ಹೊಂದದೇ ಹೋಗುತ್ತವೆ ಎಂಬ ಆಕ್ಷೇಪವು ಬರುವುದೆಂದು ತಿಳಿಸುತ್ತಾನೆ. ವಿಶೇಷಣಗಳ ಸಾಮ್ಯ ದಿಂದ ಅಪ್ರಕೃತವಾದ ಧರ್ಮಿಯು ಎಲ್ಲಿ ವ್ಯಂಗ್ಯವಾಗಿ ತೋರುವುದೋ ಅಲ್ಲಿ ಸಮಾಸೋಕ್ತಿಯುಂಟೆಂದು ಅವರು ಹೇಳಿದ್ದಾರೆ.

"ಪ್ರಕೃತವೃತ್ತಾಂತಕ್ಕೆ ಅನ್ವಯಿಸುವ ವಿಶೇಷಣಗಳ ಸಾಮ್ಯದಿಂದ ಅಪ್ರಕೃತ ಧರ್ಮಿಯು ವ್ಯಂಗ್ಯವಾಗಿ ತೋರುವುದೇ ಸಮಾಸೋಕ್ತಿ ಎನಿಸುವುದು" ಎಂದು ಅವರು ಸಮಾಸೋಕ್ತಿಗೆ ಹೇಳಿರುವ ಲಕ್ಷಣವು ಹೊಂದದೇ ಹೋಗುತ್ತದೆ. ಶ್ಲೇಷದ ಮೂಲಕವೋ ಅಥವಾ ಸಮಾನವಾದ ವಿಶೇಷಣಗಳ ಮೂಲಕವೋ ತಿಳಿದು ಬರುವ

"ಮುಖಚುಂಬನ" ಮೊದಲಾದ ಅಪ್ರಕೃತವೃತ್ತಾಂತದಲ್ಲಿ ಆರೋಪಿಸುವುದಷ್ಟೇ ಸಮಾಸೋಕ್ತಿಯ ಜೀವಾಳವೆಂದು ನವೀನರು ಒಪ್ಪಿರುವುದರಿಂದ ವಿಶೇಷಣಗಳ ಸಾಮ್ಯದಿಂದ ತಿಳಿದುಬರುವ ಕಾಮುಕ ಮೊದಲಾದ ಅಪ್ರಕೃತಧರ್ಮಿಯು ವ್ಯಂಗ್ಯವಾಗಿ ತೋರಬೇಕೆಂಬ ಆವಶ್ಯಕತೆಯೇ ಇರುವುದಿಲ್ಲ. ಅಪ್ರಕೃತವೃತ್ತಾಂತವು ಅಪ್ರಕೃತಧರ್ಮಿಗೆ ಸಂಬಂಧಿಸಿರಬೇಕೆಂಬ ನಿಯಮವೇ ತಪ್ಪಿಹೋಗುವುದರಿಂದ ಅಪ್ರಕೃತಧರ್ಮಿಯು ವ್ಯಂಗ್ಯವಾಗಿಯೂ ತೋರದೇಹೋದೀತು. ಧರ್ಮಿಯೇ ತೋರದ ಮೇಲೆ ಅಂತಹ ವ್ಯವಹಾರವನ್ನು ಆರೋಪಿಸಿ ಆಗುವ ಫಲವಾದರೂ ಏನು ? ಹೀಗೆ ಆಕ್ಷೇಪವು ಬರಲು ಅದಕ್ಕೆ ಸಮಾಧಾನವನ್ನು ಈಗ ತಿಳಿಸುತ್ತಾನೆ. ಪ್ರಕೃತವೃತ್ತಾಂತದಲ್ಲಿ ಅಪ್ರಕೃತವೃತ್ತಾಂತವನ್ನಾರೋಪಿಸುವಾಗ ಅಪ್ರಕೃತಧರ್ಮಿಗೆ ಅನ್ವಯಿಸದಂತೆ ಪ್ರತ್ಯೇಕವಾಗಿ ಆರೋಪಿಸುವುದರಲ್ಲಿ ಏನೂ ಸ್ವಾರಸ್ಯವಿಲ್ಲ. ಅದು ನಮಗೆ ಇಷ್ಟವೂ ಅಲ್ಲ. ಆದರೆ ಅಪ್ರಕೃತಧರ್ಮಿಗೆ ಅನ್ವಯಿಸುವಂತೆ ಅದನ್ನು ಆರೋಪಿಸುವುದು ನಮಗೆ ಇಷ್ಟ. ಅಪ್ರಕೃತನಾದ ಕಾಮುಕನಿಗೆ ಸಂಬಂಧಿಸಿದ್ದೆಂದು ತಿಳಿದುಬರುವ ಆ ವೃತ್ತಾಂತವನ್ನು ಪ್ರಕೃತವೃತ್ತಾಂತದಲ್ಲಿ ಆರೋಪಿಸುವುದೇ ನಮಗೆ ಇಷ್ಟ. ಅಪ್ರಕೃತಧರ್ಮಿಗೆ ಸಂಬಂಧಿಸಿದಂತೆ ವ್ಯಂಗ್ಯವಾಗಿ ತೋರುವ ಅಪ್ರಕೃತವ್ಯವಹಾರವನ್ನು ಆರೋಪಿಸುವುದರಲ್ಲಿಯೇ ಸೌಂದರ್ಯವೂ ಅಡಗಿದೆ. ಹಾಗೆ ಆರೋಪಿಸುವುದರಿಂದಲೇ ರಸಾನುಭವಕ್ಕೆ ಅವಕಾಶವಿರುತ್ತದೆ. ಧರ್ಮಿಯ ಸಂಬಂಧವೇ ಇಲ್ಲದಂತೆ ವ್ಯವಹಾರವನ್ನಾರೋಪಿಸುವದರಿಂದ ಯಾವ ರಸವನ್ನೂ ಅನುಭವಿಸಲಿಕ್ಕಾಗುವುದಿಲ್ಲ. ವಿಶೇಷಣಗಳು ಸಮಾನವಾಗಿರುವದರಿಂದಲೇ ಅವು ಅಪ್ರಕೃತಧರ್ಮಿಯನ್ನು ಅಭಿಧಾವೃತ್ತಿಯಿಂದಲೇ ತಿಳಿಸಲಿಕ್ಕಾಗುವುದಿಲ್ಲ, ಹಾಗೆ ತಿಳಿಸಲು ಆ ವಿಶೇಷಣಗಳಿಗೆ ಸಾಮರ್ಥ್ಯವೂ ಇಲ್ಲ. ಆದ್ದರಿಂದ ಶ್ಲೇಷದ ಮೂಲಕ ವಿಶೇಷಣಗಳು ಸಹಜವಾಗಿ ಚುಂಬನ ಮೊದಲಾದ ಕ್ರಿಯೆಯನ್ನು ತಿಳಿಸುವುದರಿಂದ ಆ ಕ್ರಿಯೆಗೆ ಸಂಬಂಧಿಸಿದಂತೆ ಕಾಮುಕ ಮೊದಲಾದ ಧರ್ಮಿಯು ವ್ಯಂಗ್ಯವಾಗಿ ತೋರಿ, ವದನಚುಂಬನವು ಆ ಕಾಮುಕನಿಗೆ ಸಂಬಂಧಿಸಿದ್ದೆಂದು ಊಹಿಸಿಕೊಳ್ಳಬೇಕಾಗುತ್ತದೆ. ಆದ್ದರಿಂದ ಅಪ್ರಕೃತಧರ್ಮಿಯು ವ್ಯಂಜನೆಯಿಂದಲೇ ತೋರಬೇಕು ; ಆದರೆ ಅಭಿಧಾವೃತ್ತಿಯಿಂದ ಅದನ್ನು ತಿಳಿಯಲಿಕ್ಕಾಗುವಂತಿಲ್ಲ. ಹೊಲದಲ್ಲಿ ಮೇಯುತ್ತಿದ್ದ ರಾಜನ ಕುದುರೆಯನ್ನು ನಾವು ಕಂಡೊಡನೆಯೇ ನಮಗೆ ರಾಜನ ಸ್ಮರಣವುಂಟಾಗಿ ಆ ಮೂಲಕ ಕುದುರೆಯು ರಾಜನಿಗೆ ಸಂಬಂಧಿಸಿದ್ದೆಂಬ ಅರಿವು ಉಂಟಾಗುತ್ತದೆ. ಹಾಗಯೇ ರಕ್ತ ಮೊದಲಾದ ವಿಶೇಷಣಗಳು ಮುಖಚುಂಬನವನ್ನು ಅಭಿದಾವೃತ್ತಿಯಿಂದ ತಿಳಿಸಿದರೂ, ಈ ಚುಂಬನ ಯಾರಿಗೆ ಸಂಬಂಧಿಸಿದ್ದು ? ಎಂದು ವಿಚಾರಿಸಿದಾಗ ಕಾಮುಕನ ಸ್ಮರಣವುಂಟಾಗಿ ಅವನಿಗೆ ಸಂಬಂಧಿದ್ದೆಂಬುದರ ಸ್ಮರಣವುಂಟಾಗುತ್ತದೆ. ಹೀಗೆ ಅಪ್ರಕೃತವ್ಯವಹಾರವನ್ನು ಆರೋಪಿಸುವಾಗಲೂ ಅಪ್ರಕೃತಧರ್ಮಿಗೆ ಸಂಬಂಧಿಸಿದಂತೆ ಆರೋಪಿಸುವುದರಲ್ಲಿಯೇ

ಚಮತ್ಕಾರವು ನೆಲಸಿದೆ. ಪ್ರಕೃತ ಮತ್ತು ಅಪ್ರಕೃತಗಳೆರಡಕ್ಕೂ ಅನ್ವಯಿಸುವ ವಿಶೇಷಣಗಳ ಸಾಮ್ಯದಿಂದ ನೇರವಾಗಿ ತಿಳಿದುಬರುವ ವಾಚ್ಯಾರ್ಥಕ್ಕೆ ಪೋಷಕವಾಗಿ ಅಪ್ರಕೃತಧರ್ಮಿಯು ವ್ಯಂಗ್ಯವಾಗಿ ತೋರಬೇಕೆಂದು ಪ್ರಾಚೀನರು ಹೇಳಿದ್ದರಲ್ಲಿ ತಪ್ಪೇನಿಲ್ಲ. ಆದ್ದರಿಂದಲೇ ಶ್ಲೇಷದ ಮೂಲಕ ತಿಳಿದುಬರುವ ಸಮಾಸೋಕ್ತಿಯಂತೆಯೇ ವಿಶೇಷಣಸಾಮ್ಯದಿಂದ ತಿಳಿದುಬರುವ ಸಮಾಸೋಕ್ತಿಯಲ್ಲೂ ಪ್ರಕೃತವ್ಯವಹಾರದಲ್ಲಿ ಅಪ್ರಕೃತವ್ಯವಹಾರವನ್ನಾರೋಪಿಸಬೇಕೆಂದು ಪ್ರಾಚೀನರು ಹೇಳಿದ್ದು ಹೊಂದಿಕೆಯಾಗುತ್ತದೆ. ನಾಯಿಕೆಯು ಚೆಂಡನ್ನಾಡುತ್ತಿರುವುದನ್ನು ತಿಳಿಸುವ ಪದ್ಯದಲ್ಲಿ ಚೆಂಡು ಆಕೆಗೆ ಪ್ರಿಯವಾಗಿತ್ತೆಂದು ಹೇಳುವಾಗಲೂ ಆಟವಾಡುವ ಕಾಲದಲ್ಲಿ ಸ್ತನಗಳು ಕೂದಲು, ಹಾರ ಇವೆಲ್ಲವೂ ಅಳ್ಳಾಡುತ್ತಿದ್ದುದು ಈ ಬಗೆಯ ವಿಶೇಷಣಗಳು ಚೆಂಡಿಗೂ ಕಾಮುಕನಿಗೂ ಸಮಾನವೆನಿಸಿದ ಪ್ರಯುಕ್ತ ''ನಾಯಿಕೆಗೂ ಸಂತೋಷಪಡಿಸುವಿಕೆ'' ಎಂಬುದನ್ನು ಚೆಂಡಿನಲ್ಲಿ ಆರೋಪಿಸುವಾಗ ಕಾಮುಕನಿಗೆ ಸಂಬಂಧಿಸಿದಂತೆಯೇ ಆರೋಪಿಸಲಾಗುವುದು. ಹೀಗೆ ಸಂಬಂಧಿಸಿದ್ದರೇಯೆ ಚೆಂಡಿನಲ್ಲಿ ಅದನ್ನು ಆರೋಪಮಾಡಲು ಅನುಕೂಲವಾಗುತ್ತದೆ. ಆಟವಾಡುವಾಗ ಕೂದಲು, ಸ್ತನ ಇವೆಲ್ಲವೂ ಅಳ್ಳಾಡುವುದು ಸ್ವಾಭಾವಿಕವಾದ್ದರಿಂದ ಚೆಂಡಿನಲ್ಲಿ ''ನಾಯಿಕೆಯನ್ನು ಸಂತೋಷಪಡಿಸುವಿಕೆ'' ಎಂಬುದು ಸಹಜವಾಗಿ ಇದ್ದೇ ಇದೆ. ಅದನ್ನು ಆರೋಪಿಸುವ ಆವಶ್ಯಕತೆಯೇ ಇರುವುದಿಲ್ಲ. ಕಾಮುಕನಿಗೆ ಸಂಬಂಧಿಸಿದಂತೆ ವಿಶೇಷಣಗಳನ್ನು ಪ್ರಯೋಗಿಸಿರುವುದರಿಂದ ಅವನ ವೃತ್ತಾಂತವನ್ನು ಚೆಂಡಿನಲ್ಲಿ ಆರೋಪಿಸುವುದೇ ವರ್ಣನೀಯವೆನಿಸುತ್ತದೆ. ಆದರೆ ವಿಶೇಷಣಸಾಮ್ಯದ ಮೂಲಕ ತೋರುವ ಸಮಾಸೋಕ್ತಿಯಲ್ಲಿ ಅಪ್ರಕೃತವೃತಾಂತವನ್ನು ಶಬ್ದದಿಂದ ತಿಳಿಸದೇ ಇದ್ದರೂ ಅದು ವ್ಯಂಗ್ಯವಾಗಿತೋರುವುದರಿಂದ ಆ ರೂಪದಿಂದಲೇ ಅದನ್ನು ಅಲ್ಲಿ ಆರೋಪಿಸಬೇಕೆಂಬುದು ಸ್ಪಷ್ಟಪಡುತ್ತದೆ. ಒಂದು ಕಡೆ ಹೀಗೆ ಸಂಭವಿಸಿದರೆ ಬೇರೆ ಕಡೆಗಳಲ್ಲೂ ಇದೇ ಯುಕ್ತವೆನಿಸುವುದರಿಂದ ಪ್ರಾಚೀನರ ಲಕ್ಷಣದಲ್ಲಿ ಯಾವ ಅನೌಚಿತ್ಯವೂ ಇಲ್ಲವೆಂದು ತಿಳಿಯಬೇಕು. ಪ್ರಕೃತವೃತ್ತಾಂತದಲ್ಲಿ ಅಪ್ರಕೃತವೃತ್ತಾಂತವನ್ನಾರೋಪಿಸುವಾಗಲೂ ಅಪ್ರಕೃತಧರ್ಮಿಯು ವ್ಯಂಗ್ಯವಾಗಿ ತೋರಬೇಕೆಂದು ಪ್ರಾಚೀನರು ಹೇಳಿದ್ದು ಸಮಂಜಸವೇ ಆಯಿತು. ಆ ಧರ್ಮಿಗೆ ಸಂಬಂಧಿಸಿದಂತೆಯೇ ಅಪ್ರಕೃತ ವ್ಯವಹಾರವನ್ನು ಪ್ರಕೃತವ್ಯವಹಾರದಲ್ಲಿ ಆರೋಪಿಸುವುದರಲ್ಲಿಯೇ ಚಮತ್ಕಾರವಿರುವುದೆಂದು ಹೇಳಿದ್ದರಿಂದ ನವೀನರ ಮತಕ್ಕೂ ಸಮಂಜಸವಾಯಿತು.

---

## ೨೪. ಪರಿಕರಾಲಂಕಾರ

ಅಲಂಕಾರಃ ಪರಿಕರಃ ಸಾಭಿಪ್ರಾಯೇ ವಿಶೇಷಣೇ ।
ಸುಧಾಂಶುಕಲಿತೋತ್ತಂಸಸ್ತಾಪಂ ಹರತು ವಃ ಶಿವಃ ॥೬

ಅತ್ರ ಸುಧಾಂಶುಕಲಿತೋತ್ತಂಸ ಇತಿ ವಿಶೇಷಣಂ ತಾಪಹರಣಸಾಮರ್ಥ್ಯಾ ಪ್ರಾಯಗರ್ಭಮ್. ಯಥಾ ವಾ—

ತವ ಪ್ರಸಾದಾತ್ ಕುಸುಮಾಯುಧೋಽಪಿ
ಸಹಾಯಮೇಕಂ ಮಧುಮೇವ ಲಬ್ಧ್ವಾ ।
ಕುರ್ಯಾಂ ಹರಸ್ಯಾಪಿ ಪಿನಾಕಪಾಣೇಃ
ಧೈರ್ಯಚ್ಯುತಿಂ ಕೇ ಮಮ ಧನ್ವಿನೋಽನ್ಯೇ ॥

ಅತ್ರ ಪಿನಾಕಪಾಣೇರಿತಿ ಹರವಿಶೇಷಣಂ ಕುಸುಮಾಯುಧ ಇತ್ಯರ್ಥಲಭ್ಯ ಮರ್ಥವಿಶೇಷಣಂ ಚ ಸಾರಾಸಾರಾಯುಧತ್ವಾಭಿಪ್ರಾಯಗರ್ಭಮ್.

ಯಥಾ ವಾ—

ಸರ್ವಾಶುಚಿನಿಧಾನಸ್ಯ ಕೃತಘ್ನಸ್ಯ ವಿನಾಶಿನಃ ।
ಶರೀರಕಸ್ಯಾಪಿ ಕೃತೇ ಮೂಢಾಃ ಪಾಪಾನಿ ಕುರ್ವತೇ ॥

ಅತ್ರ ಶರೀರವಿಶೇಷಣಾನಿ ತಸ್ಯ ಹೇಯತ್ವೇನ ಅಸಂರಕ್ಷಣೀಯತ್ವಾಭಿಪ್ರಾ ಗರ್ಭಾಣಿ.

ವ್ಯಾಸ್ಥಂ ನೈಕತಯಾ ಸ್ಥಿತಂ ಶ್ರುತಿಗಣಂ ಜನ್ಮೀ ನ ವಲ್ಮೀಕತೋ
ನಾಭೌನಾಭವಮಚ್ಯುತಸ್ಯ ಸುಮಹದ್ಭಾಷ್ಯಂ ಚ ನಾಭಾಷಿಷಮ್ ।
ಚಿತ್ರಾರ್ಥಾಂ ನ ಬೃಹತ್ಕಥಾಮಚಕಥಂ ಸುತ್ರಾಮ್ಣಿ ನಾಸಂ ಗುರುಃ
ದೇವ ತ್ವದ್ಗುಣವೃಂದವರ್ಣನಮಹಂ ಕರ್ತುಂ ಕಥಂ ಶಕ್ನುಯಾಮ್ ।

ಅತ್ರ ಶ್ರುತಿಗಣಂ ನ ವ್ಯಾಸ್ಥಮಿತ್ಯಾದೀನಿ ವಿಶೇಷಣಾನಿ ಸ್ವಸ್ಮಿನ್ ವ್ಯಾ ಸಾಧಾರಣಕಾರ್ಯಕರ್ತೃತ್ವನಿಷೇಧಮುಖೇನ ನಾಹಂ ವ್ಯಾಸಃ ಇತ್ಯಾದ್ಯಭಿಪ್ರಾ ಗರ್ಭಾಣಿ. ತತ್ರ ಆದ್ಯಯೋರುದಾಹರಣಯೋರೇಕೈಕಂ ವಿಶೇಷಣಂ ಸಮನಂತರ ಪ್ರತ್ಯೇಕಂ ಬಹೂನಿ ವಿಶೇಷಣಾನಿ : ತತ್ರಾಪಿ ಪ್ರಥಮೋದಾಹರಣೇ ಸ ವಿಶೇಷಣಾನಿ ಏಕಾಭಿಪ್ರಾಯಗರ್ಭಾಣಿ ಪದಾರ್ಥರೂಪಾಣಿ ಚ; ದ್ವಿತೀಯೋದಾಹ ಭಿನ್ನಾಭಿಪ್ರಾಯಗರ್ಭಾಣಿ. ವಾಕ್ಯಾರ್ಥರೂಪಾಣಿ ಚೇತಿ ಭೇದಃ. ಏತೇಷು ವ್ಯಂಗ್ಯ ಸದ್ಭಾವೇಽಪಿ ನ ಧ್ವನಿವ್ಯಪದೇಶಃ, ಶಿವಸ್ಯ ತಾಪಹರಣೇ ಮನ್ಮಥಸ್ಯ ಕೈಮುತ್ಯ ಯೇನ ಸರ್ವಧನ್ವಿಧೈರ್ಯಭಂಜಕತ್ವೇ ಶರೀರಸಂರಕ್ಷಣಾರ್ಥಂ ಪಾಪಮಾಚ ಮೂಢತ್ವೇ, ಸ್ವಸ್ಯ ವರ್ಣನೀಯರಾಜಗುಣಕನಾಶಕ್ತತ್ವೇ ಚ ವಾಚ್ಯ ಏವೋಪ

ಕತ್ವಾತ್; ಅತ ಏವ ವ್ಯಂಗ್ಯಸ್ಯವಾಚ್ಯಪರಿಕರತ್ವಾತ್ ಪರಿಕರ ಇತಿ ನಾಮ ಅಸ್ಯಾಲಂಕಾರಸ್ಯ. ಕೇಚಿತ್ತು ನಿಷ್ಪ್ರಯೋಜನವಿಶೇಷಣೋಪಾದಾನೇಽಪುಷ್ಟಾರ್ಥತ್ವದೋಷಸ್ಯ ಉಕ್ತತ್ವಾತ್ ಸಪ್ರಯೋಜನತ್ವಂ ವಿಶೇಷಣಸ್ಯ ದೋಷಾಭಾವಮಾತ್ರಂ ನ ಕಶ್ಚಿದಲಂಕಾರಃ ; ಏಕನಿಷ್ಠತಾದೃಶಾನೇಕ ವಿಶೇಷಣೋಪನ್ಯಾಸೇ ಪರಂ ವೈಚಿತ್ರ್ಯವಿಶೇಷಾತ್ ಪರಿಕರ ಇತ್ಯಲಂಕಾರ ಮಧ್ಯೇ ಪರಿಗಣಿತ ಇತ್ಯಾಹುಃ. ವಸ್ತುತಸ್ತು ಅನೇಕವಿಶೇಷಣೋಪನ್ಯಾಸ ಏವ ಪರಿಕರ ಇತಿ ನ ನಿಯಮಃ. ಶ್ಲೇಷಯಮಕಾದಿಷ್ವಪುಷ್ಟಾರ್ಥದೋಷಾಭಾವೇನ ತತ್ರೈಕಸ್ಯಾಪಿ ವಿಶೇಷಣಸ್ಯ ಸಾಭಿಪ್ರಾಯಸ್ಯ ವಿನ್ಯಾಸೇ ವಿಚ್ಛಿತ್ತಿವಿಶೇಷಸದ್ಭಾವಾತ್ ಪರಿಕರೋಪಪತ್ತೇಃ. ಯಥಾ—

ಅತಿಯಜೇತ ನಿಜಾಂ ಯದಿ ದೇವತಾಂ
ಉಭಯತಶ್ಚ್ಯವತೇ ಜುಷತೇಽಪ್ಯಘಮ್
ಕ್ಷಿತಿಭೃತೈವ ಸದೈವತಕಾ ವಯಂ ।
ವನವತಾಽನವತಾ ಕಿಮಹಿದ್ರುಹಾ ॥

ಅತ್ರ ಹಿ ಪುರುಹೂತಪೂಜೋದ್ಯುಕ್ತಾನ್ನಂದಾದೀನ್ ಪ್ರತಿ ಭಗವತಃ ಕೃಷ್ಣಸ್ಯವಾಕ್ಯೇ ಗೋವರ್ಧನಗಿರಿರೇವ ಚ ಅಸ್ಮಾಕಂ ರಕ್ಷಕತ್ವೇನ ದೈವತಮಿತಿ ಸ ಏವ ಪೂಜನೀಯೋ ನ ತ್ವರಕ್ಷಕಃ ಪುರುಹೂತ ಇತ್ಯೇವಂ ಪರಂ ವನವತೇತಿ ಗೋವರ್ಧನಗಿರೇರ್ವಿಶೇಷಣಂ ಕಾನನವತ್ತ್ವಾನ್ನಿರ್ಝರಾದಿಮತ್ತ್ವಾಚ್ಚ ಪುಷ್ಪ ಮೂಲಫಲತೃಣಾದಿಭಿರಾರಣ್ಯಕಾನಾಮಸ್ಮಾಕಮಸ್ಮದ್ಧನಾನಾಂ ಗವಾಂ ಚ ಅಯಮೇವ ರಕ್ಷಕ ಇತ್ಯಭಿಪ್ರಾಯಗರ್ಭಮ್. ಏವಮತ್ರ ಸಾಭಿಪ್ರಾಯೈಕವಿಶೇಷಣವಿನ್ಯಾಸಸ್ಯಾಪಿ ವಿಚ್ಛಿತ್ತಿವಿಶೇಷವಶಾದಸ್ಯ ಸಾಭಿಪ್ರಾಯಸ್ಯ ಅಲಂಕಾರತ್ವಸಿದ್ಧೌ ಅನ್ಯತ್ರಾಪಿ "ಸುಧಾಂಶುಕಲಿತೋತ್ತಂಸ" ಇತ್ಯಾದೌ ತಸ್ಯಾತ್ಮಲಾಭೋ ನ ನಿವಾರ್ಯತೇ. ಅಪಿ ಚ ಏಕಪದಾರ್ಥಹೇತುಕಂ ಕಾವ್ಯಲಿಂಗಮಲಂಕಾರ ಇತಿ ಸರ್ವಸಿದ್ಧಮ್. ತದ್ವದೇಕಸ್ಯಾಪಿ ವಿಶೇಷಣಸ್ಯ ಸಾಭಿಪ್ರಾಯಸ್ಯ ಅಲಂಕಾರತ್ವಂ ಯುಕ್ತಮೇವ.

ಅರ್ಥಗರ್ಭಿತವಾದ ವಿಶೇಷಣಗಳನ್ನು ಪ್ರಯೋಗಿಸುವುದರಲ್ಲಿ ಒಂದು ಬಗೆಯ ಚಮತ್ಕಾರವು ಅಡಗಿದೆ. ಇದನ್ನು ಪರಿಕರಾಲಂಕಾರವೆಂದು ಅನುಭವಿಗಳು ಕರೆದಿದ್ದಾರೆ. "ಚಂದ್ರನಿಂದ ಅಲಂಕೃತನಾದ ಶಿವನು ನಿಮ್ಮ ಸಂತಾಪವನ್ನು ಪರಿಹರಿಸಲಿ" ಇಲ್ಲಿ ''ಸುಧಾಂಶುಕಲಿತೋತ್ತಂಸಃ" ಎಂಬ ವಿಶೇಷಣವು ಶಿವನಿಗೆ ಭಕ್ತರ ಸಂತಾಪವನ್ನು ಪರಿಹರಿಸುವ ಸಾಮರ್ಥ್ಯ ಉಂಟೆಂಬುದನ್ನು ತಿಳಿಸುತ್ತದೆ. ಈ ಅಭಿಪ್ರಾಯವನ್ನು ತನ್ನೊಳಗೆ ಅಡಗಿಸಿಕೊಂಡಿರುವ ಈ ವಿಶೇಷಣವನ್ನು ಕವಿ ಉದ್ದೇಶಪೂರ್ವಕವಾಗಿ ಪ್ರಯೋಗಿಸಿದ್ದಾನೆ. ಇಂತಹ ಪ್ರಯೋಗಚಾತುರ್ಯವೇ ಪರಿಕರಾಲಂಕಾರವೆನಿಸುತ್ತದೆ.

"ನಿನ್ನ ಪ್ರಸಾದದಿಂದ ಪುಷ್ಪಬಾಣನಾದರೂ ನಾನು ವಸಂತನೊಬ್ಬನ
ವನ್ನು ಪಡೆದು ಪಿನಾಕವೆಂಬ ಧನುಸ್ಸನ್ನು ಹೊಂದಿರುವ ಶಿವನಿಗೂ ಸಹ
ಚಾಂಚಲ್ಯವನ್ನುಂಟುಮಾಡಬಲ್ಲೆನು. ಇನ್ನು ಉಳಿದ ಧನುರ್ಧಾರಿಗಳು ನನ್ನ ಎದು
ಹೇಗೆ ನಿಲ್ಲಬಲ್ಲರು ?" ಇಲ್ಲಿ ಶಿವನಿಗೆ 'ಪಿನಾಕಪಾಣಿ' ಎಂಬುದೂ, ಮನ್ಮಥ
'ಕುಸುಮಾಯುಧ' ಎಂಬುದೂ. ಅರ್ಥದಿಂದಲೇ ತೋರುವ ಅಹಂ ಎಂಬು
ಭಾವಪೂರ್ಣವೆನಿಸಿವೆ. ಶಿವನ ಆಯುಧವು ಸಾರವತ್ತರವೂ, ಮನ್ಮಥನ ಆಯು
ನಿಸ್ಸಾರವೂ ಆಗಿದ್ದವೆಂಬ ಅಭಿಪ್ರಾಯವು ಇಲ್ಲಿ ವ್ಯಂಗ್ಯವಾಗಿ ತೋರುತ್ತದೆ. "
ಅಮಂಗಳಗಳಿಗೂ ಆಶ್ರಯವೆನಿಸಿದ್ದು, ಹೊಂದಿದ ಉಪಕಾರವೆಲ್ಲವನ್ನು ಮ
ತಾನೇ ನಾಶವಾಗಲಿರುವ ಈ ತುಚ್ಛವಾದ ಶರೀರಕೋಸ್ಕರವೇ ಮೂ
ಪಾಪಗಳನ್ನಾಚರಿಸುವರು". ಇಲ್ಲಿ ಶರೀರಕ್ಕೆ ತಿಳಿಸಿರುವ ವಿಶೇಷಣಗಳು
ತುಚ್ಛವಾದ್ದರಿಂದ ನಂಬಿಕೆಗರ್ಹವಲ್ಲವೆಂಬ ಅಂಶವನ್ನು ತಿಳಿಸುತ್ತವೆ.

ಒಬ್ಬರಾಜನಿಗೆ ಕವಿ ಹೀಗೆ ಹೇಳುವನು "ಸ್ವಾಮಿ ! ನಿನ್ನ ಗುಣಗಳ ಸಮು
ವನ್ನು ವರ್ಣಿಸಲು ನಾನು ಒಂದೇ ಶಾಖೆ ಎನಿಸಿದ್ದ ವೇದವನ್ನು ಅನೇಕ ಶಾಖೆ
ವಿಂಗಡಿಸಿಲ್ಲ. (ಇದರಿಂದ ನಾನು ವೇದವ್ಯಾಸನಲ್ಲವೆಂಬ ಅಂಶವು ವ್ಯಂಗ್ಯ
ತೋರುತ್ತದೆ.) ಹಾಗೆಯೇ ನಾನು ಹುತ್ತದಿಂದಲೂ ಹುಟ್ಟಲಿಲ್ಲ. (ಇದರಿಂದ ನಾ
ವಾಲ್ಮೀಕಿಯಲ್ಲವೆಂಬುದು ಸ್ಪಷ್ಟವಾಯಿತು) ಹಾಗೆಯೇ ವಿಷ್ಣುವಿನ ನಾಭಿಕಮಲ
ನಾನು ಹುಟ್ಟಲಿಲ್ಲ (ಅಂದರೆ ನಾನು ಚತುರ್ಮುಖನೂ ಅಲ್ಲವೆಂಬುದು ತೋರು
ಮಹಾಭಾಷ್ಯವನ್ನೂ ನಾನು ಓದಿದವನಲ್ಲ, ಅಂದರೆ ನಾನು ಸಾವಿರ ನಾ
ಆದಿಶೇಷನೂ ಅಲ್ಲವೆಂಬುದು ತಿಳಿಯುತ್ತದೆ. ವಿಚಿತ್ರವಾದ ಅರ್ಥವುಳ್ಳ ಬೃಹ
ಯನ್ನು ನಾನು ಹೇಳಿದವನಲ್ಲ (ಅಂದರೆ ಅದನ್ನು ರಚಿಸಿದ ಗುಣಾಢ್ಯನೂ ಅ
ವೆಂಬುದು ತಿಳಿದುಬರುತ್ತದೆ.) ಹಾಗೆಯೇ ಇಂದ್ರನಿಗೆ ನಾನು ಗುರುವೂ
(ಅಂದರೆ ನಾನು ಬೃಹಸ್ಪತಿಯಲ್ಲವೆಂಬುದು ವ್ಯಕ್ತವಾಯಿತು). ನಾನು ಇ
ಯಾರಾದರೂ ಒಬ್ಬನಾಗಿದ್ದರೆ ನಿನ್ನ ಗುಣಗಳನ್ನು ವರ್ಣಿಸಬಹುದಾಗಿತ್ತು. ಆ
ಸೌಲಭ್ಯ ನನಗೆ ದೌರ್ಭಾಗ್ಯದಿಂದ ಒದಗಲಿಲ್ಲ" ಇಲ್ಲಿ ಕೊಟ್ಟಿರುವ ವಿಶೇಷಣ
ಕವಿಗೆ ವ್ಯಾಸ ಮೊದಲಾದವರು ಮಾಡಿದಂತೆ ಅಸಾಧಾರಣವಾದ ಕ
ಗಳನ್ನು ನಡೆಸುವ ಸಾಮರ್ಥ್ಯವಿಲ್ಲವೆಂದು ತಿಳಿಸುವ ಮೂಲಕ "ಅವನು ಪ
ನಲ್ಲ" ವೆಂದು ಮುಂತಾದ ಅಭಿಪ್ರಾಯವನ್ನು ಸೂಚಿಸುತ್ತವೆ. ಇಲ್ಲಿ ಮ
ಕೊಟ್ಟಿರುವ ಎರಡು ಉದಾಹರಣೆಗಳಲ್ಲಿ ಒಂದೊಂದು ವಿಶೇಷಣವೂ, ಮು
ಗಳಲ್ಲಿ ಅನೇಕ ವಿಶೇಷಣಗಳೂ ಬಂದಿವೆ. ಅದರಲ್ಲೂ ಮೊದಲನೆಯ ಉದಾಹರ
ವಿಶೇಷಣಗಳೆಲ್ಲವೂ ಒಂದೇ ಅಭಿಪ್ರಾಯವನ್ನೊಳಗೊಂಡ ಪದಾರ್ಥಗಳ
ಎರಡನೆಯ ಉದಾಹರಣದಲ್ಲಿರುವ ವಿಶೇಷಣಗಳು ಬೇರೆ ಬೇರೆ ಅಭಿಪ್ರಾ

ವನ್ನೊಳಗೊಂಡು ವಾಕ್ಯಾರ್ಥಗಳೆನಿಸಿವೆ. ಇಷ್ಟೇ ಇವೆರಡಕ್ಕೂ ಇರುವ ವಿಶೇಷ. ಇವೆಲ್ಲದರಲ್ಲೂ ವ್ಯಂಗ್ಯಾರ್ಥವು ತೋರಿದರೂ ಅದನ್ನು ಧ್ವನಿ ಎಂದು ಕರೆದಿಲ್ಲ. ಶಿವನು ಭಕ್ತರ ತಾಪವನ್ನು ಪರಿಹರಿಸಬಲ್ಲನೆಂಬಲ್ಲೂ, ಮನ್ಮಥನೆದುರಿಗೆ ಬೇರೆ ಧನುರ್ಧಾರಿಗಳು ಹೇಗೆ ನಿಲ್ಲಬಲ್ಲರು ? ಎಂದು ಹೇಳಿದ್ದರಿಂದ ಧನುರ್ಧಾರಿಗಳೆಲ್ಲರ ಧೈರ್ಯವನ್ನು ಅವನು ನಾಶಪಡಿಸಬಲ್ಲನೆಂಬುದರಲ್ಲೂ, ಶರೀರಕ್ಕಾಗಿ ಪಾಪವನ್ನಾಚರಿಸುವವರೆಲ್ಲರೂ ಮೂಢರೆಂಬಲ್ಲೂ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕೆ ಪೋಷಕವಾಗಿ ಬಂದಿದೆಯೇ ಹೊರತು ಸ್ವತಂತ್ರವಾಗಿ ಶೋಭಿಸುತ್ತಿಲ್ಲ. ಆದ್ದರಿಂದ ಈ ಅಲಂಕಾರಕ್ಕೆ ಪರಿಕರ (ಪೋಷಕ) ವೆಂಬ ಹೆಸರು ಬಂದಿದೆ. ನಿಷ್ಪ್ರಯೋಜನವೆನಿಸಿದ ವಿಶೇಷಣಗಳನ್ನು ಪ್ರಯೋಗಿಸಿದರೆ ದೋಷವಿಲ್ಲವೆಂಬುದು ತಿಳಿದು ಬರುವುದೇ ಹೊರತು ಬೇರೊಂದು ಅಲಂಕಾರಕ್ಕೆ ಇಲ್ಲಿ ಅವಕಾಶವೇ ಇಲ್ಲವೆಂದು ಕೆಲವರು ಹೇಳುತ್ತಾರೆ. ಭಾವಪೂರ್ಣವಾದ ವಿಶೇಷಣಗಳನ್ನು ಪ್ರಯೋಗಿಸಿದ್ದರಿಂದ ದೋಷವಿಲ್ಲದಂತಾಯಿತೇ ಹೊರತು ಅಲ್ಲಿ ಪರಿಕರವೆಂಬ ಅಲಂಕಾರವೇ ಬೇಕಾಗಿಲ್ಲವೆಂದು ಹೇಳಿದವರೇ ಈ ಅಲಂಕಾರವನ್ನು ಹೇಗೆ ಒಪ್ಪಿಕೊಂಡಿರುವರು ? ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ಒಂದೇ ವಸ್ತುವಿಗೆ ಅನ್ವಯಿಸುವಂತೆ ಅನೇಕ ವಿಶೇಷಣಗಳನ್ನು ತಿಳಿಸುವುದರಲ್ಲಿ ಒಂದು ಬಗೆಯ ಚಮತ್ಕಾರವಿರುವುದರಿಂದ ಇದನ್ನು ಗಮನಿಸಿಯೇ ಪರಿಕರವನ್ನು ಅಲಂಕಾರವೆಂದು ಭಾವಿಸಲಾಗಿದೆ ಎಂದೂ, ಆದ್ದರಿಂದಲೇ ಅಲಂಕಾರಗಳ ಮಧ್ಯದಲ್ಲಿ ಅದನ್ನು ಸೇರಿಸಿರುವುದಾಗಿಯೂ ಅವರು ಹೇಳುತ್ತಾರೆ. ಆದ್ದರಿಂದ ಅನೇಕ ವಿಶೇಷಣಗಳನ್ನು ತಿಳಿಸುವುದಷ್ಟೇ ಪರಿಕರವೆಂಬಲ್ಲಿ ನಿಯಮವಿಲ್ಲ. ಶ್ಲೇಷ ಯಮಕ ಮೊದಲಾದವುಗಳಲ್ಲಿ ಅಪುಷ್ಟಾರ್ಥವೆಂಬ ದೋಷವಿಲ್ಲದ್ದರಿಂದ ಅಲ್ಲಿ ಅರ್ಥಗರ್ಭಿತವಾದ ಒಂದು ವಿಶೇಷಣವನ್ನು ಪ್ರಯೋಗಿಸಿದರೂ ಅಷ್ಟರಿಂದಲೇ ವೈಚಿತ್ರ್ಯವು ತೋರಿಬರುವುದರಿಂದ ಅದನ್ನು ಪರಿಕರವೆಂದು ಒಪ್ಪಲೇಬೇಕು. "ತನ್ನ ದೇವರನ್ನು ತೊರೆದು ಬೇರೆ ದೇವರನ್ನು ಪೂಜಿಸಿದರೆ ಆಗ ಪೂಜಕನು ಎರಡು ಲೋಕಗಳಿಂದಲೂ ಭ್ರಷ್ಟನೆನಿಸಿ ಪಾಪವನ್ನು ಹೊಂದುವನು," ಇಲ್ಲಿ ತನ್ನ ದೇವರು ಯಾರೆಂಬುದನ್ನು ಸ್ಪಷ್ಟಪಡಿಸುತ್ತಾನೆ, "ಪ್ರಶಸ್ತವಾದ ವನದೊಡಗೂಡಿ ನಮ್ಮನ್ನು ರಕ್ಷಿಸುತ್ತಿರುವ ಗೋವರ್ಧನಪರ್ವತವೇ ನಮಗೆ ದೇವನೆನಿಸಿದೆ. ನಮ್ಮನ್ನು ರಕ್ಷಿಸಲಿಕ್ಕೆ ಆಗದಿರುವ ಆ ಇಂದ್ರನ ಅರ್ಚನೆಯಿಂದ ನಮಗಾಗುವ ಫಲವೇನು ?" ಇಂತಹ ಕಡೆಗಳಲ್ಲಿಯೇ ಪರಿಕರಾಲಂಕಾರವನ್ನು ಹೇಳೋಣ, "ಸುಧಾಂಶುಕಲಿತೋತ್ತಂಸಃ" ಎಂಬಲ್ಲಿ ಪರಿಕರಾಲಂಕಾರವೇ ಇಲ್ಲದೇ ಹೋಗಲಿ ? ಎಂದು ಆಕ್ಷೇಪಿಸಿ ಪರಿಹರಿಸುತ್ತಾನೆ. ಇಂದ್ರನ ಪೂಜೆಯಲ್ಲಿ ತೊಡಗಿದ್ದ ನಂದ ಮೊದಲಾದವರಿಗೆ ಕೃಷ್ಣನು ಹೇಳುವ ಈ ಮಾತಿನಲ್ಲಿ ಗೋವರ್ಧನಗಿರಿಗೆ ಕೊಟ್ಟಿರುವ

ವಿಶೇಷಣವು ಅರ್ಥಗರ್ಭಿತವೆನಿಸಿದೆ. ಆರಣ್ಯವಿರುವುದರಿಂದಲೂ, ಪ್ರವಾಹ
ವುದರಿಂದಲೂ ಅದು ಹೂವು ಗೆಣಸು ಹಣ್ಣು ಹುಲ್ಲು ಮೊದಲಾದವನ್ನು
ದಲ್ಲಿಯೇ ವಾಸಿಸುವ ನಮಗೂ, ನಮ್ಮ ಐಶ್ವರ್ಯವೆನಿಸಿದ ಗೋವು
ಕೊಡುತ್ತ ನಮ್ಮೆಲ್ಲರಿಗೂ ರಕ್ಷಕವೆನಿಸಿದೆ ಎಂಬ ಅಭಿಪ್ರಾಯವನ್ನು ಈ ವಿಶೇ
ವ್ಯಕ್ತಪಡಿಸುತ್ತದೆ. ಹೀಗೆ ಅರ್ಥಗರ್ಭಿತವಾದ ಒಂದು ವಿಶೇಷಣವನ್ನು ತಿಳಿ
ಅಷ್ಟರಲ್ಲಿಯೇ ಒಂದು ಹೆಚ್ಚಿನ ವೈಚಿತ್ರ್ಯವಿರುವುದರಿಂದ ಹೀಗೆ ಹೆಚ್ಚಿನ ಅಭಿಪ್ರಾ
ವನ್ನೊಳಗೊಂಡಿರುವುದೇ ಅಲಂಕಾರದ ಬೀಜವೆನಿಸಿದೆ. ಆದ್ದರಿಂದಲೇ 'ಸುಧಾ
ಶುಕಲಿತೋತ್ತಂಸಃ' ಎಂಬಲ್ಲೂ ಹೆಚ್ಚಿನ ಅಭಿಪ್ರಾಯವು ಅಡಗಿರುವ ಪ್ರ
ಅಲ್ಲಿಯೂ ಪರಿಕರಾಲಂಕಾರವಿರುವುದೆಂಬ ಬಗ್ಗೆ ಸಂದೇಹಪಡಬೇ
ಹಾಗೆಯೇ ಒಂದೇ ವಿಶೇಷಣವಿದ್ದು ಅದರಲ್ಲಿ ಹೆಚ್ಚಿನ ಅಭಿಪ್ರಾಯವು ಅಡಗಿ
ಅದನ್ನು ಅಲಂಕಾರವೆಂದು ಭಾವಿಸುವುದು ಯುಕ್ತವೇ ಆಗುತ್ತದೆ.

## ೨೫. ಪರಿಕರಾಂಕುರಾಲಂಕಾರ

ಸಾಭಿಪ್ರಾಯೇ ವಿಶೇಷ್ಯೇ ತು ಭವೇತ್ಪರಿಕರಾಂಕುರಃ ।
ಚತುರ್ಣಾಂ ಪುರುಷಾರ್ಥಾನಾಂ ದಾತಾ ದೇವಶ್ಚತುರ್ಭುಜಃ ॥ ೬

ಅತ್ರ ಚತುರ್ಭುಜಃ ಇತಿ ವಿಶೇಷ್ಯಂ ಪುರುಷಾರ್ಥಚತುಷ್ಟಯದಾನಸಾಮರ್ಥ್ಯಾ
ಭಿಪ್ರಾಯಗರ್ಭಮ್. ಯಥಾ ವಾ—

ಫಣೀಂದ್ರಾಸ್ತೇ ಗುಣಾನ್ವಕ್ತುಂ ಲಿಖಿತುಂ ಹೈಹಯಾಧಿಪಃ ।
ದ್ರಷ್ಟುಮಾಖಂಡಲಃ ಶಕ್ತಃ ಕ್ವಾಹಮೇಷಃ ಕ್ವ ತೇ ಗುಣಾಃ ॥

ಫಣೀಂದ್ರ ಇತ್ಯಾದಿ ವಿಶೇಷ್ಯಪದಾನಿ ಸಹಸ್ರವದನಾದ್ಯಭಿಪ್ರಾಯಗರ್ಭಾ

ವಿಶೇಷ್ಯವು ಹೆಚ್ಚಿನ ಅಭಿಪ್ರಾಯವನ್ನೊಳಗೊಂಡಿದ್ದರೆ ಅಂತಹ ಪ್ರಯೋ
ಪರಿಕರಾಂಕುರವೆನಿಸುತ್ತದೆ. "ನಾಲ್ಕು ಭುಜಗಳಿರುವ ದೇವನೇ ನಾಲ್ಕು ಪುರು
ಗಳನ್ನು ಕರುಣಿಸಬಲ್ಲನು" ಇಲ್ಲಿ ಎಲ್ಲಾ ದೇವರನ್ನೂ ಬಿಟ್ಟು ಒಬ್ಬ
'ಚತುರ್ಭುಜಃ' ಎಂದು ತಿಳಿಸಿದ್ದರಿಂದ ಈ ವಿಶೇಷ್ಯದಲ್ಲಿ ನಾಲ್ಕುಭುಜಗಳ
ನಾಲ್ಕು ಪುರುಷಾರ್ಥಗಳನ್ನು ಅನುಗ್ರಹಿಸುಲು ಈ ದೇವನೊಬ್ಬನೆ ಸಮರ್ಥ
ಅಭಿಪ್ರಾಯವು ಅಡಗಿದೆ.

"ನಿನ್ನ ಗುಣಗಳನ್ನು ವರ್ಣಿಸಲು ಆದಿಶೇಷನೂ, ಬರೆಯಲು
ವೀರ್ಯನೂ, ನೋಡಲು ಇಂದ್ರನೂ ಶಕ್ತರು. ಮರ್ತ್ಯನೆನಿಸಿದ ನಾ

ನಿನ್ನ ಗುಣಗಳೆಲ್ಲಿ ? ಇವೆರಡಕ್ಕೂ ಎಷ್ಟು ಅಂತರವಿದೆ." ಇಲ್ಲಿ ಕಾರ್ತವೀರ್ಯನಿಗೆ ಸಾವಿರ ಕೈಗಳೂ, ಆದಿಶೇಷನಿಗೆ ಸಾವಿರ ಮುಖಗಳೂ, ಇಂದ್ರನಿಗೆ ಸಾವಿರ ಕಣ್ಣುಗಳೂ ಇರುವುದರಿಂದ ನಿನ್ನ ಗುಣಗಳನ್ನು ವರ್ಣಿಸಲಿಕ್ಕೂ ಬರೆಯಲಿಕ್ಕೂ ನೋಡಲಿಕ್ಕೂ ಅವರಿಗೆ ಮಾತ್ರವೇ ಸಾಮರ್ಥ್ಯವಿದೆ ಎಂಬ ಅಭಿಪ್ರಾಯವು ಫಣೀಂದ್ರಃ ಮೊದಲಾದ ವಿಶೇಷ್ಯಗಳಿಂದ ಸೂಚಿತವಾಗುತ್ತದೆ.

## ೨೬. ಶ್ಲೇಷಾಲಂಕಾರ

ನಾನಾರ್ಥಸಂಶ್ರಯಃ ಶ್ಲೇಷೋ ವರ್ಣ್ಯಾವರ್ಣ್ಯೋಭಯಾಶ್ರಿತಃ ।
ಸರ್ವದೋ ಮಾಧವಃ ಪಾಯಾತ್ಸ ಯೋಽಗಂ ಗಾಮದೀಧರತ್ ॥ ೬೩ ॥
ಅಬ್ಜೇನ ತ್ವನ್ಮುಖಂ ತುಲ್ಯಂ ಹರಿಣಾಹಿತಸಕ್ತಿನಾ ।
ಉಚ್ಚರದ್ಭೂರಿಕೀಲಾಲಃ ಶುಶುಭೇ ವಾಹಿನೀಪತಿಃ ॥

ಅನೇಕಾರ್ಥಶಬ್ದವಿನ್ಯಾಸಃ ಶ್ಲೇಷಃ. ಸ ಚ ತ್ರಿವಿಧಃ ಪ್ರಕೃತಾನೇಕ ವಿಷಯಃ, ಅಪ್ರಕೃತಾನೇಕವಿಷಯಃ, ಪ್ರಕೃತಾಪ್ರಕೃತಾನೇಕವಿಷಯಶ್ಚೇತಿ. ಸರ್ವದೇತ್ಯಾದಿಕ್ರಮೇಣೋದಾಹರಣಾನಿ. ತತ್ರ ಸರ್ವದೋ ಮಾಧವಃ ಇತಿ ಸ್ತೋತವ್ಯತ್ವೇನ ಪ್ರಕೃತಯೋರ್ಹರಿಹರಯೋಃ ಕೀರ್ತನಂ ಪ್ರಕೃತಶ್ಲೇಷಃ. ಅಬ್ಜಂ ಕಮಲಂ ಅಬ್ಜಶ್ಚಂದ್ರಃ ತಯೋರುಪಮಾನಮಾತ್ರತ್ವೇನ ಅಪ್ರಕೃತಯೋಃ ಕೀರ್ತನಮಿತ್ಯಪ್ರಕೃತಶ್ಲೇಷಃ. ವಾಹಿನೀಪತಿಃ ಸೇನಾಪತಿಃ ಸಮುದ್ರಶ್ಚ. ತತ್ರ ಸಮಿತೌ ಶಸ್ತ್ರಪ್ರಹಾರೋತ್ಪತದ್ರುಧಿರಸ್ಯ ಸೇನಾಪತೇರೇವ ವರ್ಣನಂ ಪ್ರಕೃತಮಿತಿ ಪ್ರಕೃತಾಪ್ರಕೃತಃ ಶ್ಲೇಷಃ. ಯಥಾ ವಾ—

ತ್ರಾತಃ ಕಾಕೋದರೋ ಯೇನ ದ್ರೋಗ್ಧಾಪಿ ಕರುಣಾತ್ಮನಾ ।
ಪೂತನಾಮಾರಣಖ್ಯಾತಃ ಸ ಮೇಽಸ್ತು ಶರಣಂ ಪ್ರಭುಃ ॥
ನೀತಾನಾಮಾಕುಲೀಭಾವಂ ಲುಬ್ಧೈರ್ಭೂರಿಶಿಲೀಮುಖೈಃ ।
ಸದೃಶೇ ವನವೃದ್ಧಾನಾಂ ಕಮಲಾನಾಂ ತ್ವದೀಕ್ಷಣೇ ॥
ಅಸಾವುದಯಮಾರೂಢಃ ಕಾಂತಿಮಾನ್ರಕ್ತಮಂಡಲಃ ।
ರಾಜಾ ಹರತಿ ಲೋಕಸ್ಯ ಹೃದಯಂ ಮೃದುಲೈಃ ಕರೈಃ ॥ ಇತಿ

ತತ್ರ ಆದ್ಯೇ ಸ್ತೋತವ್ಯತ್ವೇನ ಪ್ರಕೃತಯೋಃ ರಾಮಕೃಷ್ಣಯೋಃ ಶ್ಲೇಷಃ. ದ್ವಿತೀಯೇ ಉಪಮಾನತ್ವೇನಾಪ್ರಕೃತಯೋಃ ಪದ್ಮಹರಿಣಯೋಃ ಶ್ಲೇಷಃ. ತೃತೀಯೇ ರಾಜಾ ಹರತಿ ಲೋಕಸ್ಯೇತಿ ಚಂದ್ರವರ್ಣನಪ್ರಸ್ತಾವೇ ಪ್ರಕೃತಸ್ಯ ಪ್ರತ್ಯಗ್ರೋದಿತ-

ಚಂದ್ರಸ್ಯಾಪ್ರಕೃತಸ್ಯ ನವಾಭಿಷಿಕ್ತಸ್ಯ ನೃಪತೇಃ ಶ್ಲೇಷಃ. ಯದತ್ರ ಪ್ರಕೃತಾಪ್ರಕೃತಶ್ಲೇಷೋದಾಹರಣೇ ಶಬ್ದಶಕ್ತಿಮೂಲಧ್ವನಿ ಮಿಚ್ಛಂತಿ ಪ್ರಾಂಚಃ ತತ್ಪ್ರಕೃತಾಪ್ರಕೃತಾಭಿಧಾನಮೂಲಕಸ್ಯ ಉಪಮಾದೇರಲಂಕಾರಸ್ಯ ವ್ಯಂಗ್ಯತ್ವಾಭಿಪ್ರಾಯಂ ನ ತ್ವಪ್ರಕೃತಾರ್ಥಸ್ಯೈವ ವ್ಯಂಗ್ಯತ್ವಭಿಪ್ರಾಯಮ್. ಅಪ್ರಕೃತಾರ್ಥಸ್ಯಾಪಿ ಶಕ್ತ್ಯಾ ಪ್ರತಿಪಾದ್ಯಸ್ಯ ಅಭಿಧೇಯತ್ವಾವಶ್ಯಂಭಾವೇನ ವ್ಯಕ್ತ್ಯನಪೇಕ್ಷಣಾತ್. ಯದ್ಯಪಿ ಪ್ರಕೃತಾರ್ಥೇ ಪ್ರಕರಣಬಲಾತ್ ಝಟಿತಿ ಬುದ್ಧಿಸ್ಥೇ ಸತ್ಯನಂ ಪಶ್ಚಾತ್ ನೃಪತಿತದ್ಗ್ರಾಹ್ಯಧನಾದಿವಾಚಿನಾಂ ರಾಜಕರಾದಿಪದಾನಾಂ ಅನ್ಯೋನ್ಯ ಸನ್ನಿಧಾನಬಲಾತ್ ತತ್ತದ್ವಿಷಯಶಕ್ತ್ಯಂತರೋನ್ಮೇಷಪೂರ್ವಕಂ ಅಪ್ರಸ್ತುತಾರ್ಥ ಸ್ಫುರೇತ್. ನ ಚೈತಾವತಾ ತಸ್ಯ ವ್ಯಂಗ್ಯತ್ವಮ್, ಶಕ್ತ್ಯಾ ಪ್ರತಿಪಾದ್ಯಮಾನೇ ಸ್ವಾರ್ಥೈವ ವ್ಯಕ್ತ್ಯನಪೇಕ್ಷಣಾತ್ಪರ್ಯವಸಿತೇ ಪ್ರಕೃತಾರ್ಥಾಭಿಧಾನೇ ಪಶ್ಚಾತ್ ಸ್ಫುರಚೇತ್ಕಾಮಂ ಗೂಢಶ್ಲೇಷೋ ಭವತು.

ಅನೇಕ ಅರ್ಥಗಳನ್ನು ಕೊಡುವ ಶಬ್ದವನ್ನು ಪ್ರಯೋಗಿಸುವುದೇ ಶ್ಲೇಷಾಲಂಕಾರವೆನಿಸುತ್ತದೆ. ವರ್ಣಿಸಬೇಕಾಗಿರುವ ಪ್ರಕೃತವಿಷಯಕ್ಕೂ. ವರ್ಣಿಸದೇ ಇರುವ ಅಪ್ರಕೃತವಿಷಯಕ್ಕೂ ಹಾಗೆಯೇ ಇವೆರಡು ವಿಷಯಗಳಿಗೂ ಸಂಬಂಧಿಸುವುದರಿಂದ ಶ್ಲೇಷವು ಮೂರು ಬಗೆಯಾಗಿದೆ. "ಯಾವನು ಗೋವರ್ಧನಗಿರಿಯನ್ನೂ ಭೂಮಿಯನ್ನೂ ವರಾಹಾವತಾರದಲ್ಲಿ ಎತ್ತಿ ಹಿಡಿದಿದ್ದನೋ ಅಂತಹ ಮಾಧವನು (ವಿಷ್ಣುವು) ಎಲ್ಲರಿಗೂ ಇಷ್ಟಾರ್ಥಗಳನ್ನು ಸಲ್ಲಿಸುತ್ತ ರಕ್ಷಿಸಲಿ. ಯಾವನು ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿರುವನೋ ಅಂತಹ ಉಮಾಧವನು (ಶಿವನು) ಯಾವಾಗಲೂ ನಿಮ್ಮನ್ನು ಕಾಪಾಡಲಿ. ಕಳಂಕರೂಪದಿಂದ ನೆಲೆಸಿರುವ ಜಿಂಕೆಯಿಂದ ಗೂಡಿರುವ ಚಂದ್ರನೊಡನೆಯೂ ಮತ್ತು ಸೂರ್ಯನೊಡನೆ ಸಂಬಂಧಿಸಿರುವ ಕಮಲದೊಡನೆಯೂ ನಿನ್ನ ಮುಖವು ಸದೃಶವಾಗಿದೆ. ರಕ್ತವನ್ನು ಸುರಿಸುತ್ತಿರುವ ಸೈನ್ಯಪತಿಯೂ ಹೆಚ್ಚು ನೀರಿನಿಂದ ತುಂಬಿರುವ ಸಮುದ್ರವೂ ಶೋಭಿಸುತ್ತಿವೆ." ಈ ಮೂರುಬಗೆಯ ಶ್ಲೇಷಗಳಿಗೂ ಉದಾಹರಣಗಳು.

ಅನೇಕ ಅರ್ಥಗಳನ್ನು ತಿಳಿಸುವಂತಹ ಶಬ್ದಗಳ ಜೋಡಣೆಯೇ ಶ್ಲೇಷವೆನಿಸುತ್ತದೆ. ಅದು ಪ್ರಕೃತಸಂದರ್ಭಕ್ಕನುಗುಣವಾದ ಅನೇಕ ವಿಷಯಗಳಿಗೂ, ಅಪ್ರಕೃತವಾದ ಅನೇಕ ವಿಷಯಗಳಿಗೂ ಹಾಗೆಯೇ ಪ್ರಕೃತವೂ ಅಪ್ರಕೃತವೂ ಆದ ಅನೇಕ ವಿಷಯಗಳಿಗೂ ಸಂಬಂಧಿಸುವುದರಿಂದ ಮೂರುಬಗೆಯಾಗಿರುತ್ತದೆ. ಈ ಮೂರನ್ನೂ ಮೂಲದಲ್ಲಿ ಉದಾಹರಿಸಿದೆ. ಸರ್ವದೋಮಾಧವಃ ಎಂಬಲ್ಲಿ ಸ್ತೋತ್ರಾರ್ಹರಾದ ಹರಿಹರ ಎಂಬ ಪ್ರಕೃತ ವಿಷಯಗಳೆರಡನ್ನು ಶ್ಲೇಷದ ಮೂಲಕ ತಿಳಿಸಿರುವುದರಿಂದ ಅದು ಪ್ರಕೃತ ಶ್ಲೇಷವೆನಿಸಿದೆ. ಎರಡನೆಯ ಉದಾಹರಣದಲ್ಲಿ ಅಬ್ಜಪದವು ಚಂ

ಮತ್ತು ಚಂದ್ರ ಎಂಬ ಎರಡು ಅರ್ಥಗಳನ್ನು ತಿಳಿಸುತ್ತದೆ. ಇವೆರಡೂ ಪ್ರಕೃತ ವಿಷಯವೆನಿಸಿದ ಮುಖಕ್ಕೆ ಉಪಮಾನವೆನಿಸಿದ್ದರಿಂದ ಇವೆರಡನ್ನೂ ಶ್ಲೇಷದಿಂದ ತಿಳಿಸಿರುವ ಪ್ರಯುಕ್ತ ಇದು ಅಪ್ರಕೃತಶ್ಲೇಷವೆನಿಸಿದೆ. ಮೂರನೆಯ ಉದಾಹರಣದಲ್ಲಿ ವಾಹಿನೀಪತಿ ಎಂಬ ಪದವು ಪ್ರಕೃತನಾದ ಸೇನಾಪತಿಗೂ ಅಪ್ರಕೃತವಾದ ಸಮುದ್ರಕ್ಕೂ ಅನ್ವಯಿಸುತ್ತದೆ. ಯುದ್ಧದಲ್ಲಿ ಶಸ್ತ್ರಪ್ರಹಾರದಿಂದ ರಕ್ತವು ಸುರಿಯುತ್ತಿರುವ ಪ್ರಯುಕ್ತ ಸೇನಾಪತಿಯ ವರ್ಣನವೇ ಪ್ರಕೃತವೆನಿಸಿ ಸಮುದ್ರದ ವರ್ಣನವೇ ಅಪ್ರಕೃತವೆನಿಸಿದೆ. ಆದ್ದರಿಂದ ಅದು ಪ್ರಕೃತಾಪ್ರಕೃತಶ್ಲೇಷವೆನಿಸಿದೆ.

"ದ್ರೋಹಿಯೂ ನಿರ್ಭಯನೂ ಆಗಿದ್ದ ಕಾಕಾಸುರನನ್ನು ದಯಾಮಯನಾದ ಯಾವ ಸ್ವಾಮಿಯು ರಕ್ಷಿಸಿದನೋ ಅಂತಹ ಪವಿತ್ರವಾದ ಹೆಸರಿನಿಂದ ಯುದ್ಧವೀರನೆನಿಸಿದ ರಾಮನು ನನ್ನನ್ನು ರಕ್ಷಿಸಲಿ. ಯಾವನು ದ್ರೋಹಿಯಾದ ಕಾಳಿಂಗ ಸರ್ಪವನ್ನೂ ಸಹ ರಕ್ಷಿಸಿದನೋ, ಪೂತನೆಯನ್ನು ಕೊಂದು ಜಗತ್ಪ್ರಭುವೆನಿಸಿದನೋ ಅಂತಹ ಕೃಷ್ಣನು ನನ್ನನ್ನು ರಕ್ಷಿಸಲಿ.'' ಪ್ರೇಯಸಿಗೆ ನಾಯಕನು ಹೀಗೆ ಹೇಳುವನು : ''ನಿನ್ನ ಕಣ್ಣುಗಳು ನೀರಿನಲ್ಲಿ ಬೆಳೆದ ಕಮಲಗಳಿಗೂ ಕಾಡಿನಲ್ಲಿ ಬೆಳೆದ ಜಿಂಕೆಗಳಿಗೂ ಸದೃಶವೆನಿಸಿವೆ. ಕಮಲಗಳು ಲೋಭಶೀಲವಾದ ದುಂಬಿಗಳಿಂದ ವ್ಯಾಕುಲಗೊಂಡಿವೆ. ಜಿಂಕೆಗಳು ವ್ಯಾಧರು ಪ್ರಯೋಗಿಸುವ ಬಾಣಗಳಿಂದ ಚಂಚಲಗೊಂಡಿವೆ.'' "ಚಂದ್ರನು ಕೆಂಪಾದ ಮಂಡಲದಿಂದ ಶೋಭಿಸುತ್ತ, ಉದಯಪರ್ವತವನ್ನೇರಿ ಹೊಸ ಕಿರಣಗಳಿಂದ ಜನರ ಹೃದಯವನ್ನು ಆಕರ್ಷಿಸುತ್ತಿರುವನು. ರಾಜನು ಪ್ರೀತಿಪಾತ್ರವಾದ ದೇಶಗಳಲ್ಲಿ ಅಭಿವೃದ್ಧಿಯಿಂದ ಶೋಭಿಸುತ್ತ ಮಿತವಾದ ತೆರಿಗೆಗಳ ಮೂಲಕ ಜನರ ಹೃದಯವನ್ನು ಸೂರೆಗೊಳ್ಳುತ್ತಿರುವನು.'' ಇಲ್ಲಿ ಮೊದಲನೆಯ ಉದಾಹರಣದಲ್ಲಿ ರಾಮ ಕೃಷ್ಣ ಇವರಿಬ್ಬರೂ ಸ್ತೋತ್ರಾರ್ಹರೆನಿಸಿದ್ದರಿಂದ ಆ ಇಬ್ಬರನ್ನೂ ತಿಳಿಸಿರುವ ಪ್ರಯುಕ್ತ ಅಲ್ಲಿ ಪ್ರಕೃತವಿಷಯಗಳಿಗನ್ವಯಿಸುವ ಶ್ಲೇಷವಿದೆ. ಎರಡನೆಯದರಲ್ಲಿ ಉಪಮಾನವೆನಿಸಿದ ಕಮಲ ಜಿಂಕೆ ಎಂಬ ವಿಷಯಗಳನ್ನು ಶ್ಲೇಷದಿಂದ ತಿಳಿಸಿರುವ ಪ್ರಯುಕ್ತ ಅದು ಅಪ್ರಕೃತಶ್ಲೇಷವೆನಿಸಿದೆ. ಮೂರನೆಯದರಲ್ಲಿ 'ರಾಜಾ ಹರತಿ' ಎಂದು ಚಂದ್ರವರ್ಣನವೇ ಪ್ರಕೃತವಾದ್ದರಿಂದ ರಾಜಪದವು ಆಗ ತಾನೇ ಉದಯಿಸಿರುವ ಚಂದ್ರನಿಗೂ, ಹೊಸದಾಗಿ ಪಟ್ಟಾಭಿಷೇಕವನ್ನು ಹೊಂದಿರುವ ಅಪ್ರಕೃತ ರಾಜನಿಗೂ ಅನ್ವಯಿಸುತ್ತದೆ. ಆದ್ದರಿಂದ ಇದು ಪ್ರಕೃತಾಪ್ರಕೃತಶ್ಲೇಷವೆನಿಸಿದೆ. ಪ್ರಕೃತಾಪ್ರಕೃತಶ್ಲೇಷದ ಉದಾಹರಣದಲ್ಲಿ ಶಬ್ದಶಕ್ತಿಯ ಮೂಲಕವೇ ಅಪ್ರಕೃತಾರ್ಥವು ವ್ಯಂಗ್ಯವಾಗಿ ತೋರುವುದರಿಂದ ಅಲ್ಲಿ ಶಬ್ದಶಕ್ತಿಮೂಲಧ್ವನಿಯುಂಟೆಂದು ಪ್ರಾಚೀನರು ಹೇಳುತ್ತಾರೆ. ಹಾಗೆ ಹೇಳಿರುವುದರ ತಾತ್ಪರ್ಯವಿಷ್ಟೇ. ಒಂದು ಪ್ರಕೃತವೂ ಮತ್ತೊಂದು ಅಪ್ರಕೃತವೂ ಆದ ಎರಡು ಅರ್ಥಗಳು ತೋರುವಾಗ ಎರಡನೆಯ ಅರ್ಥವು ಉಪಮೆ ಮೊದಲಾದ ಅಲಂಕಾರವೆನಿಸಿದ್ದು ವ್ಯಂಗ್ಯವಾಗಿ

ತೋರುವುದೇ ಹೊರತು ಅಪ್ರಕೃತಾರ್ಥವೇ ವ್ಯಂಗ್ಯವೆನಿಸುವುದಿಲ್ಲ : ಯಾಕೆಂದರೆ ಅಪ್ರಕೃತವಾದ ಅರ್ಥವೂ ಸಹ ಅಭಿಧಾವೃತ್ತಿಯಿಂದಲೇ ತಿಳಿದುಬರುವುದರಿಂದ ವಾಚ್ಯವೇ ಆಗುವ ಪ್ರಯುಕ್ತ ಅದು ವ್ಯಂಜನಾವೃತ್ತಿಯನ್ನೇ ಅಪೇಕ್ಷಿಸುವುದಿಲ್ಲ. ಪ್ರಕೃತಾರ್ಥವು ಪ್ರಕರಣದ ಬಲದಿಂದ ಬೇಗನೆ ತೋರಿದ ಮೇಲೆಯೇ ಅನಂತರದಲ್ಲಿ ರಾಜನನ್ನೂ ಅವನು ಜನರಿಂದ ತೆಗೆದುಕೊಳ್ಳುವ ಸುಂಕ ಮೊದಲಾದವನ್ನು ತಿಳಿಸುವ ರಾಜ ಕರ ಮೊದಲಾದ ಪದಗಳಿಗೆ ಅನ್ವಯಿಸುವಂತೆ ಬೇರೊಂದು ಅಭಿಧಾವೃತ್ತಿಯು ಪ್ರಕಟವಾಗುತ್ತದೆ. ಆ ಮೂಲಕವೇ ಅಪ್ರಕೃತಾರ್ಥವು ಇಲ್ಲಿ ತೋರಿಬರುತ್ತದೆ. ಇಷ್ಟರಿಂದಲೇ ಈ ಅರ್ಥವು ವ್ಯಂಗ್ಯವೆನಿಸಲಾರದು. ಅಭಿಧಾವೃತ್ತಿಯಿಂದ ತಿಳಿದು ಬರುವ ಅರ್ಥವು ಎಂದೆಂದಿಗೂ ವ್ಯಂಜನಾವೃತ್ತಿಯನ್ನು ಅಪೇಕ್ಷಿಸುವುದಿಲ್ಲ. ಪ್ರಕೃತಾರ್ಥವನ್ನು ತಿಳಿಸಿಯಾದಮೇಲೆ ಅಭಿಧೆಯಿಂದಲೇ ಬೇರೊಂದು ಅರ್ಥವು ತೋರುವುದಾದರೆ ಅದೂ ಕೂಡ ಗೂಢಶ್ಲೇಷವಾಗಲಿಕ್ಕೆ ಯಾವ ಆತಂಕವೂ ಇರಲಾರದು.

ಅಸ್ತಿ ಚ ಅನ್ಯತ್ರಾಪಿ ಗೂಢಶ್ಲೇಷಃ–

ಯಥಾ ವಾ—

ಅಯಮತಿಜರಠಾಃ ಪ್ರಕಾಮಗುರ್ವೀರಲಘುವಿಲಂಬಿಪಯೋಧರೋಪರುದ್ಧಾಃ ।
ಸತತಮಸುಮತಾಮಗಮ್ಯರೂಪಾಃ ಪರಿಣತದಿಕ್ಕರಿಕಾಸ್ತಟೀರ್ಬಿಭರ್ತಿ ॥

ಮಂದಮಗ್ನಿ ಮಧುರಾರ್ಯಮೋಪಲಾಃ
ದರ್ಶಿತಶ್ವಯಥು ಚಾಭವತ್ತಮಃ ।
ದೃಷ್ಟಯಸ್ತಿಮಿರಜಂ ಸಿಷೇವಿರೇ
ದೋಷಮೋಷಧಿಪತೇರಸನ್ನಿಧೌ ॥

ಅತ್ರ ಹಿ ಸಮಾಸೋಕ್ತ್ಯುದಾಹರಣಯೋಃ ಪ್ರಾಕರಣಿಕೇಽರ್ಥೇ ಪ್ರಕರಣವಶಾತ್ ಝಟಿತಿ ಬುದ್ಧಿಸ್ಥೇ ವಿಶೇಷಣಸಾಮ್ಯಾದಪ್ರಕೃತೋಽಪಿ 'ವೃದ್ಧವೇಶ್ಯಾವೃತ್ತಾಂತಾದಿಃ ಪ್ರತೀಯತೇ, ತತ್ರ ಸಮಾಸೋಕ್ತಿಃ ಅಭಂಗಶ್ಲೇಷ ಇತಿ ಸರ್ವೇಷಾಮಭಿಮತಮೇವ ಏವಮನ್ಯತ್ರಾಪಿ ಗೂಢಶ್ಲೇಷೇ ಧ್ವನಿಬುದ್ಧಿರ್ನ ಕಾರ್ಯಾ.

ಯಥಾ ವಾ—

ರಮ್ಯಾ ಇತಿ ಪ್ರಾಪ್ತವತೀಃ ಪತಾಕಾಃ
ರಾಗಂ ವಿವಿಕ್ತಾ ಇತಿ ವರ್ಧಯಂತೀಃ ।
ಯಸ್ಯಾಮಸೇವಂತ ನಮದ್ವಲೀಕಾಃ
ಸಮಂ ವಧೂಭಿರ್ವಲಭೀರ್ಯುವಾನಃ ॥

ಅತ್ರ ದ್ವಿತೀಯಾಂತವಿಶೇಷಣಸಮರ್ಪಿತಾರ್ಥಾಂತರಾಣಾಂ ನ ಶಬ್ದ ಸಾಮರ್ಥ್ಯೇನ ವಧೂಭಿರನ್ವಯಃ ವಿಭಕ್ತಿಭೇದಾತ್. ನ ಚ ವಿಭಕ್ತಿಭೇದೇಽಪಿ ತದನ್ವಯಾಕ್ಷೇಪಂ ಸಾಧರ್ಮ್ಯಮಿಹ ನಿಬದ್ಧಮಸ್ತಿ. ಯತಃ—

ಏತಸ್ಮಿನ್ನಧಿಕಪಯಃಶ್ರಿಯಂ ವಹಂತ್ಯಃ
ಸಂಕ್ಷೋಭಂ ಪವನಭುವಾ ಜವೇನ ನೀತಾಃ ।
ವಲ್ಮೀಕೇರರಹಿತರಾಮಲಕ್ಷ್ಮಣಾನಾಂ
ಸಾಧರ್ಮ್ಯಂ ದಧತಿ ಗಿರಾಂ ಮಹಾಸರಸ್ಯಃ ॥

ಇತ್ಯತ್ರೇವಾಕ್ಷಿಪ್ತಶ್ಲೇಷೋ ಭವೇತ್. ಸಮಮಿತ್ಯೇತತ್ತು ಕ್ರಿಯಾವಿಶೇಷಣಂ ಸಹಾರ್ಥತ್ವೇನಾಪ್ಯುಪಪನ್ನಮ್. ವಧೂಷು ಶ್ಲಿಷ್ಟವಿಶೇಷಣಾರ್ಥಾನ್ವಯಾತ್ಪ್ರಾಕ್ ದ್ರಾಗಪ್ರತೀತಂ ಸಾಮ್ಯಂ ನಾಲಂಬತೇ. ತಸ್ಮಾದರ್ಥಸೌಂದರ್ಯಬಲಾದೇವ ತದನ್ವಯಾನುಸಂಧಾನಮಿತಿ ಗೂಢಶ್ಲೇಷಃ. ತದನುತದ್ಬಲಾದೇವ ಸಮಶಬ್ದಸ್ಯ ಸಾಧರ್ಮ್ಯಾರ್ಥಕಲ್ಪನಮಿತಿ ವಾಚ್ಯಸ್ಯೈವೋಪಮಾಲಂಕಾರಸ್ಯಾಂಗಮಯಮಿತ್ಯಲಂ ಪ್ರಪಂಚೇನ, ತಸ್ಮಾತ್ಸಿದ್ಧಂ ಶ್ಲೇಷತ್ರೈವಿಧ್ಯಮ್. ಏವಂ ಚ ಶ್ಲೇಷಃ ಪ್ರಕಾರಾಂತರೇಣಾಪಿ ದ್ವಿವಿಧಃ ಸಂಪನ್ನಃ ಉದಾಹರಣಗತೇಷು ಅಬ್ಜಕೀಲಾಲವಾಹಿನೀಪತ್ಯಾದಿ ಶಬ್ದೇಷು ಪರಸ್ಪರ ವಿಲಕ್ಷಣಂ ಪದಭಂಗಮನಪೇಕ್ಷ್ಯ ಅನೇಕಾರ್ಥಕ್ರೋಡೀಕಾರಾದಭಂಗಃ ಸರ್ವದೋ ಮಾಧವಃ, ಯೋ ಗಂಗಾಂ ಹರಿಣೀಹಿತಸಕ್ತಿನಾ ಇತ್ಯಾದಿಶಬ್ದೇಷು ಪರಸ್ಪರವಿಲಕ್ಷಣಂ ಪದಭಂಗಮಪೇಕ್ಷ್ಯ ನಾನಾರ್ಥಕ್ರೋಡೀಕಾರಾತ್ ಸಭಂಗಃ ಶ್ಲೇಷಃ ಇತಿ. ತತ್ರ ಸಭಂಗಶ್ಲೇಷಃ ಶಬ್ದಾಲಂಕಾರಃ, ಅಭಂಗಶ್ಲೇಷಸ್ತ್ವರ್ಥಾಲಂಕಾರ ಇತಿ ಕೇಚಿತ್. ಉಭಯಮಪಿ ಶಬ್ದಾಲಂಕಾರ ಇತ್ಯನ್ಯೇ. ಉಭಯಮಪ್ಯರ್ಥಾಲಂಕಾರ ಇತಿ ಸ್ವಾಭಿಪ್ರಾಯಃ. ಏತದ್ವಿವೇಚನಂ ತು ಚಿತ್ರಮೀಮಾಂಸಾಯಾಂ ದ್ರಷ್ಟವ್ಯಮ್.

ಪ್ರಕೃತಾಪ್ರಕೃತಶ್ಲೇಷವಿರುವ ಕಡೆಗಳಲ್ಲಿ ಅಪ್ರಕೃತಾರ್ಥವು ಗೂಢವಾಗಿದ್ದು ಶ್ಲೇಷದಿಂದ ತೋರುವಂತೆ ಬೇರೆ ಅಲಂಕಾರಗಳಲ್ಲೂ ಶ್ಲೇಷವು ಗೋಪ್ಯವಾಗಿರುವುದನ್ನು ಕಾಣಬಹುದು."ಬಹಳ ಕಠಿಣವೂ ದೊಡ್ಡವೂ ಆಗಿದ್ದು ಎಲ್ಲೆಡೆಯೂ ಜೋತಾಡುತ್ತಿರುವ ಮೇಘದೊಡನೆಯೂ, ಜನರಿಗೆ ಸುಲಭವಾಗಿ ದೊರೆಯದಷ್ಟು ಅಡ್ಡಲಾಗಿ ದಂತದಿಂದ ಹೊಡೆಯುವ ದಿಗ್ಗಜಗಳೊಡಗೂಡಿಯೂ ಇರುವ ತಪ್ಪಲುಪ್ರದೇಶಗಳಿಂಡ ಪರ್ವತವು ಶೋಭಿಸುತ್ತಲಿದೆ. ಬಹಳ ಜೀರ್ಣವೂ ದೊಡ್ಡವೂ ಆಗಿದ್ದು ವಿಶೇಷವಾಗಿ ಜೋತುಬಿದ್ದಿರುವ ಸ್ತನಗಳೊಡಗೂಡಿಯೂ, ಗಂಡಸರಿಗೆ ಅನುಭವಿಸಲು ದೊರೆಯದಂತೆಯೂ, ಹಲ್ಲುಗಳ ಕಡಿತವನ್ನು ಪ್ರಕಟಿಸುತ್ತಲೂ ಇರುವ ಸ್ತನಗಳ ಮೇಲ್ಭಾಗವನ್ನು ವೃದ್ಧವೇಶ್ಯೆಯು ಪಡೆದಿರುವಳು." "ಚಂದ್ರನಿಲ್ಲದ ವೇಳೆಯಲ್ಲಿ ಸೂರ್ಯಕಾಂತ ಶಿಲೆಗಳು ಬೆಂಕಿಯನ್ನು ಸ್ವಲ್ಪವೇ ಸುರಿಸಿದವು. ಕತ್ತಲೆಯು ವಿಶೇಷವಾಗಿ ವ್ಯಾಪಿಸಿತು.

ಕಣ್ಣುಗಳು ಕತ್ತಲೆಯಿಂದುಂಟಾದ ತೊಂದರೆಯನ್ನು ಅನುಭವಿಸಿದವು. ವೈದ್ಯ ನಿಲ್ಲದ ವೇಳೆಯಲ್ಲಿ ಅಗ್ನಿಮಾಂದ್ಯದಿಂದದೇಹದಲ್ಲಿ ವಾತದೋಷದಿಂದ ಶೋಭೆಯುಂಟಾಗಿ ಕಣ್ಣುಗಳು ಕಾಣಿಸದಂತೆ ರೋಗಗ್ರಸ್ತವಾದವು.'' ಇವೆರಡೂ ಸಮಾಸೋಕ್ತಿಯ ಉದಾ ಹರಣಗಳೆನಿಸಿವೆ. ಇಲ್ಲಿ `ರೈವತಪರ್ವದ ವೃತ್ತಾಂತವೂ, ಕತ್ತಲೆಯವ್ಯಾಪ್ತಿಯ ವಿಷ ಯವೂ ಪ್ರಕೃತಾರ್ಥವೆನಿಸಿವೆ. ಈ ಪ್ರಕೃತಾರ್ಥವು ಪ್ರಕರಣಕ್ಕನುಗುಣವಾಗಿ ತಾನಾ ಗಿಯೇ ತಿಳಿದುಬರುತ್ತದೆ. ಹಾಗೆ ತಿಳಿದಮೇಲೆ ಅಲ್ಲಿ ಪ್ರಯೋಗಿಸಿರುವ ವಿಶೇಷಣಗಳ ಸಾಮ್ಯದಿಂದ ಅಪ್ರಕೃತವೃತ್ತಾಂತವೂ ಸಹ ತೋರುತ್ತದೆ. ಇಲ್ಲಿ ವೃದ್ಧವೇಶ್ಯೆಯ ವೃತ್ತಾಂತವೂ, ವಾತರೋಗವು ವ್ಯಾಪಿಸಿತೆಂಬುದೂ ಅಪ್ರಕೃತವೆನಿಸಿವೆ. ಹೀಗೆ ಸಮಾ ಸೋಕ್ತಿಯಲ್ಲೂ ಶ್ಲೇಷವು ಗೂಢವಾಗಿದ್ದು ಅದರಿಂದ ಅಪ್ರಕೃತಾರ್ಥವು ತೋರುತ್ತದೆ. ಆದರೆ ಇಲ್ಲಿ ಶ್ಲೇಷದಿಂದ ಅಪ್ರಕೃತಾರ್ಥವು ತೋರಬೇಕಾದರೆ ಪದಗಳನ್ನು ಒಡೆಯ ಬೇಕಾಗಿಲ್ಲ. ಪದಗಳನ್ನು ಹೇಗೆ ಪ್ರಯೋಗಿಸಲಾಗಿದೆಯೋ ಹಾಗೆಯೇ ಅವುಗಳಿಂದ ಬೇರೊಂದು ಅರ್ಥವು ತೋರಿಬರುವ ಪ್ರಯುಕ್ತ ಸಮಾಸೋಕ್ತಿಯಲ್ಲಿ ಅಭಂಗಶ್ಲೇಷ ವಿರುವ ಬಗ್ಗೆ ಎಲ್ಲರಿಗೂ ಸಮ್ಮತಿಯಿದೆ. ಹಾಗೆಯೇ ಬೇರೆ ಅಲಂಕಾರಗಳಲ್ಲಿಯೂ ಗೂಢವಾಗಿ ಶ್ಲೇಷದಿಂದ ಅಪ್ರಕೃತಾರ್ಥವು ತೋರಿದರೂ ಅದನ್ನು ಧ್ವನಿ ಎಂದು ಭಾವಿಸಲಿಕ್ಕೆ ಅವಕಾಶವಿಲ್ಲ. ಈ ಬಗ್ಗೆ ಉದಾಹರಣ ಹೀಗಿದೆ. ಮಾಘಕಾವ್ಯದಲ್ಲಿ ದ್ವಾರಕೆಯನ್ನು ವರ್ಣಿಸುವಾಗ ಕವಿ ಹೀಗೆ ತಿಳಿಸುತ್ತಾನೆ. "ಆ ದ್ವಾರಕೆಯಲ್ಲಿ ಯುವ ಕರು ತಮ್ಮ ಪತ್ನಿಯರೊಡನೆ ಅರಮನೆಯ ತುದಿಯಲ್ಲಿರುವ ಕೋಣೆಗಳನ್ನಾಶ್ರಯಿ ಸಿದರು. ಆ ಕೋಣೆಗಳು ರಮಣೀಯವೆಂದು ಬಿರುದನ್ನು ಪಡೆದಿದ್ದವು. ನಿರ್ಜನ ಪ್ರದೇಶಗಳಾಗಿದ್ದುದರಿಂದ ಅವು ಪ್ರೇಮವನ್ನು ಹೆಚ್ಚಿಸುತ್ತಿದ್ದವು. ಅವುಗಳ ಸುತ್ತಲೂ ಹೊದಿಕೆಯ ಭಾಗಗಳು ಬಾಗಿದ್ದವು. ಅದರಂತೆಯೇ ಹೆಂಡತಿಯರೂ ಸಹ ರಮಣೀಯ ರೆನಿಸಿದ್ದರಿಂದ ಸೌಭಾಗ್ಯವನ್ನು ಹೊಂದಿಯೂ, ಅನುರಾಗವನ್ನು ಹೆಚ್ಚಿಸುತ್ತಲೂ, ಸಾಧ್ವಿಯರಾದ್ದರಿಂದ ಪವಿತ್ರರೆನಿಸಿಯೂ, ಬಗ್ಗಿಕೊಂಡ ತ್ರಿವಳಿಗಳೊಡನೆಯೂ ಶೋಭಿಸುತ್ತಿದ್ದರು. "ಇಲ್ಲಿ ವಲ್ಲಭೀ, ಎಂಬುದಕ್ಕೆ ವಿಶೇಷಣವಾಗಿರುವ ಪ್ರಾಪ್ತಪತೀಃ ವರ್ಧಯಂತೀಃ, ನಮದ್ವಲೀಕಾಃ ಎಂಬ ದ್ವಿತೀಯಾವಿಭಕ್ತಿಯ ಪದಗಳಿಂದ ಬೇರೆ ಅರ್ಥ ಗಳಿಗೆ ಶಬ್ದಬಲದಿಂದಲೇ ವಧೂಶಬ್ದದ ಅರ್ಥವೆನಿಸಿದ ಹೆಂಡತಿಯರೊಡನೆ ಅನ್ವಯವು ಬರುವಂತಿಲ್ಲ. ಏಕೆಂದರೆ ಈ ಪದಗಳಿಗೂ ವಧೂಪದಕ್ಕೂ ವಿಭಕ್ತಿಯಲ್ಲಿ ಭೇದವಿದೆ ಹಾಗೆ ವಿಭಕ್ತಿಯಲ್ಲಿ ಭೇದವಿದ್ದರೂ ಅವಕ್ಕೆ ಪರಸ್ಪರ ಅನ್ವಯವುಂಟೆಂದು ತಿಳಿಯುವಷ್ಟು ಸಾದೃಶ್ಯವನ್ನೂ ಕವಿ ಇಲ್ಲಿ ತಿಳಿಸಿಲ್ಲ. ಆದ್ದರಿಂದ ಈ ಶ್ಲೋಕದಲ್ಲಿ ಗೂಢಶ್ಲೇಷವುಂಟೆ ಅಥವಾ ಆಕ್ಷಿಪ್ತಶ್ಲೇಷವುಂಟೆ ? ಎಂದು ಕೇಳಿದರೆ ಗೂಢಶ್ಲೇಷ ವುಂಟೆಂದು ಹೇಳಬೇಕೇ ಹೊರತು ಆಕ್ಷಿಪ್ತಶ್ಲೇಷವನ್ನು ಹೇಳಬಾರದು. ''ನಮದ್ವಲೀ ಕಾಃ'' ಮೊದಲಾದ ವಿಶೇಷಣಗಳಿಗೆ ವಧೂಭಿಃ ಎಂಬುದರಲ್ಲಿ ಅನ್ವಯವು ಬರಲಿಕ್ಕೆ ಅನುಕೂಲವಾದ ಸನ್ನಿವೇಶವನ್ನೇ ಕವಿಯು ತಿಳಿಸಿಲ್ಲ. ಹಾಗೆ ಅನ್ವಯವುಂಟಾಗಲು

ಸಾಧರ್ಮ್ಯವನ್ನು ತಿಳಿಸಿದ್ದಿದ್ದರೆ ಇಲ್ಲಿ ಶ್ಲೇಷವು ಅರ್ಥದಿಂದಲೇ ಸಿದ್ಧಿಸುತ್ತದೆ ಎಂದು ಭಾವಿಸಬಹುದಾಗಿತ್ತು. ಹೀಗೆ ಅರ್ಥಸಿದ್ಧವಾದ ಶ್ಲೇಷಕ್ಕೆ ಅವಕಾಶವಿಲ್ಲದ್ದರಿಂದ ಇಲ್ಲಿ ಗೂಢಶ್ಲೇಷವನ್ನೇ ಹೇಳಬೇಕು. ಅಂದರೆ ಶ್ಲೇಷವು ಗೂಢವಾಗಿ ತೋರುವುದೇ ಹೊರತು ಅರ್ಥದಿಂದ ಸಿದ್ಧಿಸುವುದಿಲ್ಲ. ಹಾಗಾದರೆ ಅರ್ಥಸಿದ್ಧವಾದ ಶ್ಲೇಷಕ್ಕೆ ಉದಾಹರಣ ಯಾವುದೆಂದು ಕೇಳಿದರೆ ಅದನ್ನು ಈಗ ಉದಾಹರಿಸುತ್ತಾನೆ, ರೈವತಕ ಪರ್ವತವನ್ನು ವರ್ಣಿಸುವಾಗ ಮಾಘಕಾವ್ಯದಲ್ಲಿ ಹೀಗೆ ಹೇಳಿದೆ : ''ಈ ಗಿರಿಯಲ್ಲಿ ದೊಡ್ಡ ಸರೋವರಗಳು ರಾಮಲಕ್ಷ್ಮಣರಿಗೆ ಸಂಬಂಧಿಸಿದಂತೆ ಹೇಳಿರುವ ವಾಲ್ಮೀಕಿ ಮಹರ್ಷಿಯ ಮಾತುಗಳೊಡನೆ ಸಾದೃಶ್ಯವನ್ನು ಹೊಂದಿವೆ. ಅವು ನೀರಿನಿಂದ ಹೆಚ್ಚು ಶೋಭೆಯನ್ನು ಹೊಂದಿದ್ದರೂ ಸಹ ಗಾಳಿಯ ಹೊಡತದ ವೇಗದಿಂದ ವ್ಯಾಕುಲಗೊಂಡಿವೆ. ವಾಲ್ಮೀಕಿಯ ಮಾತುಗಳಾದರೋ ಅನೇಕ ಕಪಿಗಳ ವಿಚಾರವನ್ನು ತಿಳಿಸುತ್ತಲೇ ಆಂಜನೇಯನ ಬಗ್ಗೆ ಹೆಚ್ಚು ವಿವರವನ್ನು ತಿಳಿಸುತ್ತಿವೆ.'' ಇಲ್ಲಿ ಶ್ಲೇಷವು ಗೂಢವೆನಿಸದೆ ಅರ್ಥದಿಂದ ಸಹಜವಾಗಿ ಸಿದ್ಧಿಸುತ್ತದೆ. ಆದ್ದರಿಂದ ಇದು ಆಕ್ಷಿಪ್ತ ಶ್ಲೇಷವೆನಿಸಿದೆ. ಇಲ್ಲಿ ಇರುವಂತೆ 'ರಮ್ಯಾ ಇತಿ' ಎಂಬಲ್ಲಿ ಶ್ಲೇಷವು ಅರ್ಥದಿಂದ ಸಿದ್ಧಿಸುವುದಿಲ್ಲ. ಅಲ್ಲಿ ಸಮಂ ಎಂಬ ಕ್ರಿಯಾವಿಶೇಷಣವನ್ನೂ ಸಹ ಸದೃಶ ಎಂಬ ಅರ್ಥದಲ್ಲಿಯೂ ಅನ್ವಯಿಸಬಹುದು. ಆದರೆ ವಧೂಪದದ ಅರ್ಥದಲ್ಲಿ 'ವರ್ಧಯಂತೀಃ' ಮೊದಲಾದ ಶ್ಲಿಷ್ಟವಿಶೇಷಣಗಳಿಗೆ ಅನ್ವಯವು ಬರುವುದಕ್ಕೆ ಮೊದಲು ಸಾದೃಶ್ಯವೆಂಬ ಅರ್ಥವು ಸಹಪದದಿಂದ ತೋರುವುದಿಲ್ಲ. ಹಾಗೆ ಮೊದಲೇ ತೋರಿದ್ದರೆ ಶ್ಲೇಷವು ಅರ್ಥದಿಂದಲೇ ಸಿದ್ಧಿಸಬಹುದಾಗಿತ್ತು. ಹಾಗೆ ಇಲ್ಲಿ ತೋರದಿರುವುದರಿಂದ ಅದು ಆಕ್ಷಿಪ್ತಶ್ಲೇಷಕ್ಕೆ ಉದಾಹರಣವಾಗಲಾರದು. ಆದ್ದರಿಂದ ವಿಶೇಷಣಗಳಿಗೆ ವಲಭಿಗಳಲ್ಲಿ ಅನ್ವಯವಾಗುವಂತೆ ವಧೂಪದಾರ್ಥದಲ್ಲಿಯೂ ಅನ್ವಯವಾಗುವುದರಲ್ಲಿ ಚಮತ್ಕಾರವುಂಟೆಂಬ ಭಾವನೆ ಇರುವುದರಿಂದ ಸಮಃಶಬ್ದಕ್ಕೆ ಸಾದೃಶ್ಯವೆಂಬ ಅರ್ಥವನ್ನು ಕಲ್ಪಿಸಬಹುದು. ಹಾಗೆ ಅನ್ವಯಿಸುವುದರಿಂದ ಅರ್ಥವು ಸುಂದರವಾಗಿ ಕಾಣುವ ಪ್ರಯುಕ್ತ ಆ ಪದಕ್ಕೆ ಆ ಅರ್ಥವನ್ನು ಕಲ್ಪಿಸಬಹುದು. ಆದ್ದರಿಂದ ಅದು ಗೂಢಶ್ಲೇಷದ ಉದಾಹರಣವೇ ಹೊರತು ಆಕ್ಷಿಪ್ತಶ್ಲೇಷದ ಉದಾಹರಣವಾಗಲಾರದು, ಹಾಗೆ ಗೂಢಶ್ಲೇಷವುಂಟೆಂದು ಭಾವಿಸಿ ಆದರ ಬಲದಿಂದಲೇ ಸಮಶಬ್ದಕ್ಕೆ ಸಾಧರ್ಮ್ಯವೆಂಬ ಅರ್ಥವನ್ನು ಕಲ್ಪಿಸಬೇಕಾದ ಪ್ರಯುಕ್ತ ವಾಚ್ಯವೆನಿಸಿದ ಉಪಮಾಲಂಕಾರಕ್ಕೆ ಶ್ಲೇಷದಿಂದ ತೋರುವ ಅಪ್ರಕೃತಾರ್ಥವು ಪೋಷಕವಾಗಿದೆ. ಎಂದು ಹೇಳುವುದೇ ಯುಕ್ತವೆನಿಸುತ್ತದೆ. ಆದ್ದರಿಂದಲೇ ಪ್ರಕೃತವೂ ಅಪ್ರಕೃತವೂ ಆದ ಎರಡು ಅರ್ಥಗಳು ತೋರುವ ಕಡೆಗಳಲ್ಲಿ ಶಬ್ದಶಕ್ತಿಮೂಲಧ್ವನಿಯನ್ನು ಒಪ್ಪಿಕೊಳ್ಳಬೇಕಾಗಿಲ್ಲ. ಇದರಿಂದ ಶ್ಲೇಷದಲ್ಲಿ ಮೂರು ಬಗೆಗಳುಂಟೆಂಬುದು ಸಿದ್ಧವಾಯಿತು. ಹೀಗೆಯೇ ಬೇರೆ ರೀತಿಯಲ್ಲೂ ಶ್ಲೇಷವು ಎರಡು ಬಗೆ ಎನಿಸುತ್ತದೆ.

ಮೂಲದ ಉದಾಹರಣಗಳಲ್ಲಿ ತಿಳಿಸಿರುವ ಅಬ್ಜ, ಕೀಲಾಲ ಮೊದಲಾದ ಪದಗಳು ವಿಭಾಗವಾಗದೆಯೇ ಅನೇಕಾರ್ಥಗಳನ್ನು ತಿಳಿಸುವ ಪ್ರಯುಕ್ತ ಅವು ಅಭಂಗಶ್ಲೇಷವೆನಿಸಿವೆ. ಸರ್ವದೋ ಮಾಧವಃ, ಯೋ ಗಂಗಾಂ, ಹರಿಣಾಹಿತಶಕ್ತಿನಾ' ಎಂಬಲ್ಲಿ ಪದಗಳನ್ನು ಒಡೆದು ಅನ್ವಯಿಸಿ ಅನೇಕ ಅರ್ಥಗಳನ್ನು ತಿಳಿಸಿದ್ದರಿಂದ ಅವು ಸಭಂಗ ಶ್ಲೇಷವೆನಿಸಿವೆ. ಅವುಗಳಲ್ಲಿ ಸಭಂಗಶ್ಲೇಷವು ಶಬ್ದಾಲಂಕಾರವೂ, ಅಭಂಗಶ್ಲೇಷವು ಅರ್ಥಾಲಂಕಾರವೂ ಆಗುತ್ತವೆ ಎಂದು ಕೆಲವರು ಹೇಳುತ್ತಾರೆ ; ಎರಡೂ ಶಬ್ದಾಲಂಕಾರವೇ ಆಗುತ್ತವೆ ಎಂದೂ ಕೆಲವರು ಹೇಳುತ್ತಾರೆ', ಎರಡೂ ಅರ್ಥಾಲಂಕಾರವೇ ಆಗುವುವೆಂಬುದು ನಮ್ಮ ಮತ. ಇದರ ವಿವೇಚನೆಯನ್ನು ಚಿತ್ರ ಮೀಮಾಂಸೆಯಲ್ಲಿ ನೋಡಬಹುದು.

## ಅಪ್ರಸ್ತುತಪ್ರಶಂಸಾಲಂಕಾರ

ಅಪ್ರಸ್ತುತಪ್ರಶಂಸಾ ಸ್ಯಾತ್ಸಾ ಯತ್ರ ಪ್ರಸ್ತುತಾಶ್ರಯಾ ।
ಏಕಃ ಕೃತೀ ಶಕುಂತೇಷು ಯೋಽನ್ಯಂ ಶಕ್ರಾನ್ನ ಯಾಚತೇ ॥೬೬॥

ಯತ್ರ ಅಪ್ರಸ್ತುತವೃತ್ತಾಂತವರ್ಣನಂ ಪ್ರಸ್ತುತವೃತ್ತಾಂತಾವಗತಿ ಪರ್ಯವಸಾಯಿ ತತ್ರ ಅಪ್ರಸ್ತುತಪ್ರಶಂಸಾಲಂಕಾರಃ. ಅಪ್ರಸ್ತುತವೃತ್ತಾಂತ ವರ್ಣನೇನ ಪ್ರಸ್ತುತಾವಗತಿಶ್ಚ ಪ್ರಸ್ತುತಾಪ್ರಸ್ತುತಯೋಃ ಸಂಬಂಧೇ ಸತಿ ಭವತಿ, ತತ್ರ ಸಂಬಂಧಶ್ಚ ಸಾರೂಪ್ಯಂ, ಸಾಮಾನ್ಯವಿಶೇಷಭಾವಃ, ಕಾರ್ಯಕಾರಣಭಾವೋ ವಾ ಸಂಭವತಿ, ತತ್ರ ಸಾಮಾನ್ಯವಿಶೇಷಭಾವೇ ಸಾಮಾನ್ಯಾದ್ವಿಶೇಷಸ್ಯ ವಿಶೇಷಾದ್ವಾ ಸಾಮಾನ್ಯಸ್ಯಾವಗತೌ ದ್ವೈವಿಧ್ಯಮ್. ಕಾರ್ಯಕಾರಣಭಾವೇಽಪಿ ಕಾರ್ಯಾತ್ಕಾರಣಸ್ಯ ಕಾರಣಾದ್ವಾ ಕಾರ್ಯಸ್ಯಾವಗತೌ ದ್ವೈವಿಧ್ಯಮ್. ಸಾರೂಪ್ಯಾತ್ತು ಏಕೋ ಭೇದ ಇತ್ಯಸ್ಯಾಃ ಪಂಚ ಪ್ರಕಾರಾಃ, ಯದಾಹು :–

ಕಾರ್ಯೇ ನಿಮಿತ್ತೇ ಸಾಮಾನ್ಯೇ ವಿಶೇಷೇ ಪ್ರಸ್ತುತೇ ಸತಿ ।
ತದನ್ಯಸ್ಯ ವಚಸ್ತುಲ್ಯೇ ತುಲ್ಯಸ್ಯೇತಿ ಚ ಪಂಚಧಾ ॥ ಇತಿ

ತತ್ರ ಏಕಃ ಸಾರೂಪ್ಯನಿಬಂಧನಾಽಪ್ರಸ್ತುತಪ್ರಶಂಸೋದಾಹರಣಮ್ ಕೃತೀತಿ. ಅತ್ರ ಅಪ್ರಸ್ತುತಚಾತಕಸ್ಯ ಪ್ರಶಂಸಾ ಪ್ರಶಂಸನೀಯತ್ವೇನ ಪ್ರಸ್ತುತೇ ತತ್ಸರೂಪೇ ಕ್ಷುದ್ರೇಭ್ಯೋ ಯಾಚನಾನ್ನಿವೃತ್ತೇ ಮಾನಿನಿ ಪರ್ಯವಸ್ಯತಿ. ಯಥಾ ವಾ–

ಆಬದ್ಧಕೃತ್ರಿಮಸಟಾಜಟಿಲಾಂಸಭಿತ್ತಿಃ
ಆರೋಪಿತೋ ಮೃಗಪತೇಃ ಪದವೀಂ ಯದಿ ಶ್ವಾ ।
ಮತ್ತೇಭಕುಂಭತಟಿಪಾಟನಲಂಪಟಸ್ಯ
ನಾದಂ ಕರಿಷ್ಯತಿ ಕಥಂ ಹರಿಣಾಧಿಪಸ್ಯ ॥

ಅತ್ರ ಶುನಕಸ್ಯ ನಿಂದಾ ನಿಂದನೀಯತ್ವೇನ ಪ್ರಸ್ತುತೇ ತತ್ಸರೂಪೇ ಕೃತ್ರಿಮವೇಷವ್ಯವಹಾರಾದಿಮಾತ್ರೇಣ ವಿದ್ವತ್ತಾಭಿನಯವತಿ ವೈಧೇಯೇ ಪರ್ಯವಸ್ಯತಿ. ಯಥಾ ವಾ—

ಅಂತಶ್ಛಿದ್ರಾಣಿ ಭೂಯಾಂಸಿ ಕಂಟಕಾ ಬಹವೋ ಬಹಿಃ ॥
ಕಥಂ ಕಮಲನಾಲಸ್ಯ ಮಾ ಭೂವನ್ ಭಂಗುರಾ ಗುಣಾಃ

ಅತ್ರ ಕಮಲನಾಲಕೀರ್ತನಂ ತತ್ಸರೂಪೇ ಬಹಿಃ ಖಲೇಷು ಜಾಗ್ರತ್ಸು ಭ್ರಾತೃಪುತ್ರಾದಿಭಿರಂತಃಕಲಹಂ ಕುರ್ವಾಣೇ ಪುರುಷೇ ಪರ್ಯವಸ್ಯತಿ. ಏವಂ ಚ ಲಕ್ಷ್ಯಲಕ್ಷಣಯೋಃ ಪ್ರಶಂಸಾಶಬ್ದಃ ಸ್ತುತಿನಿಂದಾಸ್ವರೂಪಾಖ್ಯಾನ ಸಾಧಾರಣಕೀರ್ತನ ಮಾತ್ರಪರೋ ದ್ರಷ್ಟವ್ಯಃ

ಸಾಮ್ಯನಿಬಂಧನಾ ಯಥಾ—

ವಿಧಾಯ ವೈರ್ಯಂ ಸಾಮರ್ಷೇ ನರೋಽರೌ ಯ ಉದಾಸತೇ ।
ಪ್ರಕ್ಷಿಪ್ಯೋದರ್ಚಿಷಂ ಕಕ್ಷೇ ಶೇರತೇ ತೇಽಭಿಮಾರುತಮ್ ॥

ಅತ್ರ ಪ್ರಾಗೇವ ಸಾಮರ್ಷೇ ಶಿಶುಪಾಲೇ ರುಕ್ಮಿಣಿಹರಣಾದ್ವೈರಂ ದೃಢೀಕೃತವತಾ ಕೃಷ್ಣೇನ ತಸ್ಮಿನ್ನುದಾಸಿತುಮಯುಕ್ತಮಿತಿ ವಕ್ತವ್ಯೇಽರ್ಥೇ ಪ್ರಸ್ತುತೇ ತತ್ಪ್ರತ್ಯಾಯನಾರ್ಥಂ ಸಾಮಾನ್ಯಮಭಿಹಿತಮ್. ಯಥಾ ವಾ—

ಸೌಹಾರ್ದಸ್ವರ್ಣರೇಖಾಣಾಂ ಉಚ್ಚಾವಚಭಿದಾಜುಷಾಮ್ ।
ಪರೋಕ್ಷಮಿತಿ ಕೋಽಪ್ಯಸ್ತಿ ಪರೀಕ್ಷಾನಿಕಷೋಪಲಃ ॥

ಅತ್ರ ಯದಿ ತ್ವಂ ಪ್ರತ್ಯಕ್ಷಮಿವ ಪರೋಕ್ಷೇಽಪಿ ಮಮ ಹಿತಮಾಚರಸಿ ತದಾ ತ್ವಮುತ್ತಮಃ ಸುಹೃದಿತಿ ವಿಶೇಷೇ ವಕ್ತವ್ಯತ್ವೇನ ಪ್ರಸ್ತುತೇ ಸಾಮಾನ್ಯಮಭಿಹಿತಮ್.
ವಿಶೇಷನಿಬಂಧನಾ ಯಥಾ—

ಅಂಕಾಧಿರೋಪಿತಮೃಗಶ್ಚಂದ್ರಮಾ ಮೃಗಲಾಂಛನಃ ।
ಕೇಸರೀ ನಿಷ್ಠುರಕ್ಷಿಪ್ತಮೃಗಯೂಥೋ ಮೃಗಾಧಿಪಃ ।

ಅತ್ರ ಕೃಷ್ಣಂ ಪ್ರತಿ ಬಲಭದ್ರವಾಕ್ಯೇ ಮಾರ್ದವದೂಷಣಪರೇ ಪೂರ್ವಪ್ರಸ್ತಾವಾನುಸಾರೇಣ ಕ್ರೂರ ಏವ ಖ್ಯಾತಿಭಾಗ್ಭವತಿ ನ ತು ಮೃದುರಿತಿ ಸಾಮಾನ್ಯೇ

ವಕ್ತವ್ಯೇ ತತ್ಪ್ರತ್ಯಾಯನಾರ್ಥಮಪ್ರಸ್ತುತೋ ವಿಶೇಷಃ ಅಭಿಹಿತಃ–ಏವಂ ಬೃಹತ್ಕಥಾದಿಷು ಸಾಮಾನ್ಯತಃ ಕಂಚಿದರ್ಥಂ ಪ್ರಸ್ತುತ್ಯ ತದ್ವಿವರಣಾರ್ಥಂ ಅಪ್ರಸ್ತುತಕಥಾವಿಶೇಷೋದಾಹರಣೇಷು ಇಯಮೇವ ಅಪ್ರಸ್ತುತಪ್ರಶಂಸಾ ದ್ರಷ್ಟವ್ಯಾ.

ಪ್ರಕೃತವೃತ್ತಾಂತವನ್ನು ಆಶ್ರಯಿಸಿಕೊಂಡು ಅಪ್ರಕೃತವೃತ್ತಾಂತ ಒಂದನ್ನು ವರ್ಣಿಸುವುದೇ ಅಪ್ರಕೃತಪ್ರಶಂಸೆ ಎನಿಸುವುದು, "ಪಕ್ಷಿಗಳಲ್ಲಿ ಚಾತಕಪಕ್ಷಿಯೊಂದು ಧನ್ಯವೆನಿಸಿದೆ; ಯಾಕೆಂದರೆ ಅದಕ್ಕೆ ನೀರಡಿಕೆಯಾದರೂ ಅದು ಇಂದ್ರನಲ್ಲದೆ ಬೇರೆ ಯಾರನ್ನೂ ಯಾಚಿಸುವುದಿಲ್ಲ." ಇದು ಅದರ ಉದಾಹರಣವೆನಿಸಿದೆ.

ಎಲ್ಲಿ ಅಪ್ರಕೃತವೃತ್ತಾಂತದ ವರ್ಣನವು ಪ್ರಕೃತವೃತ್ತಾಂತವನ್ನು ತಿಳಿಯಲು ಸಾಧಕವಾಗುವುದೋ ಅಲ್ಲಿ ಅಪ್ರಸ್ತುತಪ್ರಶಂಸಾಲಂಕಾರವಿರುವುದು. ಆದರೆ ಪ್ರಕೃತ ಮತ್ತು ಅಪ್ರಕೃತವೆನಿಸಿದ ವೃತ್ತಾಂತಗಳೆರಡಕ್ಕೂ ಸಂಬಂಧವಿದ್ದರೆ ಮಾತ್ರವೇ ಅಪ್ರಕೃತ ವೃತ್ತಾಂತದ ವರ್ಣನದಿಂದ ಪ್ರಕೃತವೃತ್ತಾಂತವನ್ನು ತಿಳಿಯಲು ಸಾಧ್ಯವಾಗುತ್ತದೆ. ಇಲ್ಲಿ ಸಂಬಂಧವು ಸಾರೂಪ್ಯವೋ ಅಥವಾ ಸಾಮಾನ್ಯವಿಶೇಷಭಾವವೋ ಅಥವಾ ಕಾರ್ಯಕಾರಣಭಾವವೋ ಆಗಬಹುದು. ಸಾಮಾನ್ಯವಿಶೇಷಭಾವದಲ್ಲಿ ಸಾಮಾನ್ಯದಿಂದ ವಿಶೇಷವನ್ನೂ ವಿಶೇಷದಿಂದ ಸಾಮಾನ್ಯವನ್ನೂ ತಿಳಿಯಬಹುದಾದ್ದರಿಂದ ಎರಡು ಬಗೆಗಳಾಗುತ್ತವೆ. ಕಾರ್ಯಕಾರಣಭಾವದಲ್ಲೂ ಸಹ ಕಾರ್ಯದಿಂದ ಕಾರಣವನ್ನೂ, ಕಾರಣದಿಂದ ಕಾರ್ಯವನ್ನೂ ತಿಳಿಯಬಹುದಾದ್ದರಿಂದ ಎರಡು ಬಗೆಗಳಾಗುತ್ತವೆ. ಎರಡು ವೃತ್ತಾಂತಗಳಲ್ಲಿ ಒಂದರ ಸಾದೃಶ್ಯದಿಂದ ಮತ್ತೊಂದನ್ನು ತಿಳಿಯಬಹುದಾದ್ದರಿಂದ ಸಾದೃಶ್ಯದಲ್ಲಿ ಒಂದೇ ಬಗೆಯಾಗುತ್ತದೆ. ಹೀಗೆ ಅಪ್ರಸ್ತುತಪ್ರಶಂಸೆಯಲ್ಲಿ ಒಟ್ಟು ಐದು ಬಗೆಗಳಾಗುತ್ತವೆ.

"ಪ್ರಕೃತವೃತ್ತಾಂತವು ಕಾರ್ಯವೆನಿಸಿದ್ದರೆ ಅಪ್ರಕೃತವು ಕಾರಣವೂ, ಪ್ರಕೃತವು ಕಾರಣವೆನಿಸಿದ್ದರೆ. ಅಪ್ರಕೃತವು ಕಾರ್ಯವೂ, ಪ್ರಕೃತವು ಸಾಮಾನ್ಯವೆನಿಸಿದ್ದರೆ ಅಪ್ರಕೃತವು ವಿಶೇಷವೂ. ಪ್ರಕೃತವು ವಿಶೇಷವೆನಿಸಿದ್ದರೆ ಅಪ್ರಕೃತವು ಸಾಮಾನ್ಯವೂ, ಸದೃಶವೃತ್ತಾಂತವು ಪ್ರಕೃತವೆನಿಸಿದ್ದರೆ ಅದಕ್ಕೆ ಸದೃಶವಾದ ಮತ್ತೊಂದು ವೃತ್ತಾಂತವು ಅಪ್ರಕೃತವೂ ಆಗುವ ಪ್ರಯುಕ್ತ ಇಲ್ಲಿ ಐದು ಬಗೆಗಳಾಗುತ್ತವೆ" ಎಂದು ಪ್ರಾಚೀನರು ತಿಳಿಸಿದ್ದಾರೆ.

ಸಾರೂಪ್ಯವನ್ನವಲಂಬಿಸಿದ ಅಪ್ರಸ್ತುತಪ್ರಶಂಸೆಗೆ ಏಕಃ ಕೃತೀ ಎಂಬ ಉದಾಹರಣವು ಹಿಂದೆಯೇ ಬಂದಿದೆ. ಅಲ್ಲಿ ಅಪ್ರಕೃತವಾದ ಚಾತಕದ ಪ್ರಶಂಸೆಯು ಅದಕ್ಕೆ ಸದೃಶವೆನಿಸಿದೆ. ತನಗೆ ಎಷ್ಟೇ ಕಷ್ಟವಿದ್ದರೂ ನೀಚರನ್ನು ಯಾಚಿಸಲಿಚ್ಛೈಸದಿರುವ ವ್ಯಕ್ತಿಯೊಬ್ಬನ ಪ್ರಶಂಸೆಯಲ್ಲಿ ಕೊನೆಗಾಣುತ್ತದೆ. ಇಂತಹ ವ್ಯಕ್ತಿಯ ಪ್ರಶಂಸೆಯೇ ಇಲ್ಲಿ ಪ್ರಕೃತ ವೃತ್ತಾಂತ. ಹೀಗೆ ಅಪ್ರಕೃತವಾದ ವರ್ಣನೆಯಿಂದ ಯೋಗ್ಯನಾದ ಯಾಚಕನೊಬ್ಬನ ವಿಷಯವು ಇಲ್ಲಿ ತಿಳಿದುಬರುತ್ತದೆ.

ಪ್ರಕೃತವಾದ ಸಾಮಾನ್ಯವನ್ನು ತಿಳಿಸಲಿಕ್ಕಾಗಿ ಅಪ್ರಕೃತವಾದ ವಿಶೇಷವನ್ನು ಪ್ರಶಂಸೆಮಾಡುವುದಕ್ಕೆ ಉದಾಹರಣವು ಹೀಗಿದೆ: "ಕೃತ್ರಿಮವಾದ ಜಡೆಗಳನ್ನು ಹೆಗಲ ಮೇಲೆ ಹಾಕಿಕೊಂಡು ಜೋತಾಡಿಸುತ್ತಿರುವ ನಾಯಿಯನ್ನು ಸಿಂಹದ ಸ್ಥಾನದಲ್ಲಿ ಇರಿಸಿದರೆ ಅದು ಮದಿಸಿದ ಆನೆಗಳ ಕಪೋಲಸ್ಥಲಗಳನ್ನು ಸೀಳಲು ಇಚ್ಛಿಸುವ ಸಿಂಹದ ಗರ್ಜನೆಯನ್ನು ಹೇಗೆ ಮಾಡಬಲ್ಲದು ?" ಇಲ್ಲಿ ಅಪ್ರಕೃತವಾದ ನಾಯಿಯ ನಿಂದೆಯು ಅದಕ್ಕೆ ಸದೃಶವೆನಿಸಿ ನಿಂದಾಯೋಗ್ಯವಾದ ಪ್ರಕೃತವೃತ್ತಾಂತ ದಲ್ಲಿ ಕೊನೆಗಾಣುತ್ತದೆ. ಕೃತ್ರಿಮವಾದ ವೇಷವನ್ನು ಧರಿಸಿ ವ್ಯವಹರಿಸುತ್ತಲೇ ಪಾಂಡಿತ್ಯವನ್ನು ನಟಿಸುವ ಮೂರ್ಖನೇ ಇಲ್ಲಿ ಪ್ರಕೃತವಿಷಯ, ಇವನ ನಿಂದೆಯನ್ನು ಇಲ್ಲಿ ತಿಳಿಸಲಾಗಿದೆ.

"ಒಳಗೆ ಬಹಳ ರಂಧ್ರಗಳೂ ಹಾಗೆಯೇ ಹೊರಗೆ ಮುಳ್ಳುಗಳೂ ಇರುವುದರಿಂದ ತಾವರೆದಂಟಿನ ನೂಲುಗಳು ಹೇಗೆ ಮುರಿಯಲಾರವು ? ಒಳಗೆ ದುಷ್ಟರೂ ಹೊರಗೆ ನೀಚರೂ ಇರುವುದರಿಂದ ಸೌಶೀಲ್ಯಾದಿ ಗುಣಗಳು ಹೇಗೆ ಪ್ರಕಾಶವಾದಾವು ?'' ಇಲ್ಲಿ ಅಪ್ರಕೃತವಾದ ತಾವರೆದಂಟಿನ ವೃತ್ತಾಂತವನ್ನು ತಿಳಿಸಿದ್ದರಿಂದ ಅದಕ್ಕೆ ಸದೃಶವಾದ ಪ್ರಕೃತವೃತ್ತಾಂತ ಒಂದು ತಿಳಿದುಬರುತ್ತದೆ. ಹೊರಗೆ ನೀಚರು ಹೊಂಚು ಕಾಯುತ್ತಿರಲು ಒಳಗೆ ಹೆಂಡತಿ ಮಕ್ಕಳೊಡನೆ ವಿರೋಧಮಾಡಿಕೊಳ್ಳುವ ಪುರುಷನೊಬ್ಬನ ಸಮಾಚಾರವನ್ನು ಇಲ್ಲಿ ತಿಳಿಯಬಹುದು. ಮೊದಲಲ್ಲಿ ಹೇಳಿರುವ ಉದಾಹರಣಗಳಲ್ಲಿಯೂ, ಲಕ್ಷಣದಲ್ಲೂ ಓದಿರುವ ಪ್ರಶಂಸೆ ಎಂಬ ಪದವು ಸ್ತೋತ್ರ ಅಥವಾ ನಿಂದೆ ಇವೆರಡರ ಸ್ವರೂಪವನ್ನು ತಿಳಿಸುವುದಾಗಿ ಭಾವಿಸಬೇಕು. ಪ್ರಶಂಸೆ ಎಂದರೆ ಸ್ತುತಿಯಂತೆ ನಿಂದೆಯನ್ನೂ ಗ್ರಹಿಸಬೇಕು.

ಸಾಮಾನ್ಯ ವಿಶೇಷಭಾವವನ್ನವಲಂಬಿಸಿದ್ದನ್ನು ಈಗ ಉದಾಹರಿಸಲಾಗಿದೆ.

"ಸಿಟ್ಟಿಗೆದ್ದಿರುವ ಶತ್ರುವಿನಲ್ಲಿ ದ್ವೇಷವನ್ನಿಟ್ಟುಕೊಂಡು ಉದಾಸೀನರಾಗಿರು ವವರು ಪಕ್ಕದ ಪೊದರಿನಲ್ಲಿ ಬೆಂಕಿಯನ್ನಿಟ್ಟು ಗಾಳಿಗೆದುರಾಗಿ ಮಲಗುವವರು" ಇಲ್ಲಿ ಹಿಂದಿನಿಂದಲೂ ಸಿಟ್ಟಿಗೆದ್ದಿದ್ದ ಶಿಶುಪಾಲನ ಬಗ್ಗೆ ರುಕ್ಮಿಣಿಯನ್ನು ಅಪಹರಿಸಿದ್ದರಿಂದ ದ್ವೇಷವನ್ನು ಬೆಳೆಸಿಕೊಂಡಿದ್ದ ಕೃಷ್ಣನು ಉದಾಸೀನನಾಗಿರುವುದು ಯುಕ್ತವಲ್ಲ ವೆಂಬುದೇ ಪ್ರಕೃತವಾದ ಅಂಶ. ಈ ವಿಶೇಷವೃತ್ತಾಂತವನ್ನು ತಿಳಿಸಲಿಕ್ಕಾಗಿ ಇಲ್ಲಿ ಸಾಮಾನ್ಯವೃತ್ತಾಂತವನ್ನು ನಿರೂಪಿಸಲಾಗಿದೆ.

''ಸ್ನೇಹಿತರ ಸ್ನೇಹದಲೆಂಬ ಚಿನ್ನದ ಗೆರೆಗಳಲ್ಲಿ ಶುದ್ಧಾಶುದ್ಧಗಳ ಭೇದವನ್ನು ಪರೀಕ್ಷಿಸಲು ಪರೋಕ್ಷವೆಂಬ ಒರೆಗಲ್ಲು ಸಿದ್ಧವಾಗಿದೆ. ಅವರ ಸ್ನೇಹದ ಅಂತಸ್ಸು ಹೇಗಿದೆ ಎಂಬುದನ್ನು ತಿಳಿಯಲು ಹಿಂಭಾಗದ ಅವರ ವರ್ತನೆಯೇ ಒರೆಗಲ್ಲೆನಿಸಿದೆ. ಇಲ್ಲಿ ಒಬ್ಬನು ಎದುರಿಗೆ ಹೇಗೆ ವರ್ತಿಸುವನೋ ಹಿಂದೆಯೂ ಹಾಗೆಯೇ ವರ್ತಿಸು

ವುದಾದರೆ ಆಗಲೇ ಅವನು ಉತ್ತಮ ಸ್ನೇಹಿತನೆನಿಸುವನು ಎಂಬ ವಿಶೇಷವೃತ್ತಾಂ
ವನ್ನು ತಿಳಿಸಬೇಕಾಗಿರುವುದರಿಂದ ಅದೇ ಪ್ರಕೃತವೆನಿಸಿದೆ. ಇದನ್ನು ತಿಳಿಸಲಿಕ್ಕಾ
"ಸ್ನೇಹಿತರಲ್ಲಿ ಯೋಗ್ಯರಾರು ಅಯೋಗ್ಯರಾರು ಎಂಬುದನ್ನು ಪರೀಕ್ಷಿಸಲು ಪರೋ
ವೆಂಬ ಒರೆಗಲ್ಲೊಂದಿದೆ" ಎಂದು ಅಪ್ರಕೃತವಾದ ಸಾಮಾನ್ಯವೃತ್ತಾಂತ ಬಂದಿದೆ.

"ತೊಡೆಯ ಮೇಲೆ ಜಿಂಕೆಯನ್ನು ಕುಳ್ಳಿರಿಸಿಕೊಂಡಿರುವ ಚಂದ್ರನಿಗೆ
ಜಿಂಕೆಯೇ ಒಂದು ಕಳಂಕವಾಗಿ ಉಳಿಯಿತು. ಮೃಗಗಳನ್ನೆಲ್ಲಾ ನಿರ್ದಾಕ್ಷಿಣ್ಯವಾ
ಕಬಳಿಸುವುದರಿಂದ ಸಿಂಹವು ಮೃಗಗಳ ಯಜಮಾನನೆನಿಸಿತು." ಹೀಗೆ ಕೃಷ್ಣ
ಮಾರ್ದವವನ್ನು ಬಲರಾಮನು ಹಿಂದಿನ ಪ್ರಕರಣಕ್ಕನುಗುಣವಾಗಿ ದೂಷಿಸು
ಪ್ರಕರಣವಿದು. "ಕ್ರೂರನಾದವನೇ ಲೋಕದಲ್ಲಿ ಕೀರ್ತಿಯನ್ನು ಹೊಂದಬಲ್ಲ
ಆದರೆ ಮೃದುವಾದವನಿಗೆ ಎಂದಿಗೂ ಕೀರ್ತಿ ದೊರಕದು" ಎಂಬ ಸಾಮಾನ್ಯ
ವೃತ್ತಾಂತವನ್ನು ಇಲ್ಲಿ ತಿಳಿಸಬೇಕಾಗಿದೆ. ಅದಕ್ಕಾಗಿ ಅಪ್ರಕೃತವಾದ ವಿಶೇಷ ವೃತ್ತಾಂ
ವನ್ನು ಇಲ್ಲಿ ತಿಳಿಸಿದೆ. ಹೀಗೆಯೇ ಬೃಹತ್ಕಥೆಯಲ್ಲಿ ಸಾಮಾನ್ಯವಾಗಿ ಒಂದು ವಿಷ
ವನ್ನು ನಿರೂಪಿಸಿ ಅದರ ವಿವರಣಕ್ಕಾಗಿ ಅಪ್ರಕೃತವಾದ ಕಥೆಗಳನ್ನು ಹೇಳಲಾಗಿ
ಅಲ್ಲೆಲ್ಲಾ ಇದೇ ಅಪ್ರಸ್ತುತಪ್ರಶಂಸೆಯೇ ಕಂಡುಬರುತ್ತದೆ.

ಕಾರಣನಿಬಂಧನಾ ಅಪ್ರಸ್ತುತಪ್ರಶಂಸಾ ಯಥಾ—
ಹೃತಸಾರಮಿವೇಂದುಮಂಡಲಂ ದಮಯಂತೀವದನಾಯ ವೇಧಸಾ ।
ಕೃತಮಧ್ಯಬಿಲಂ ವಿಲೋಕ್ಯತೇ ಧೃತಗಂಭೀರಖನೀಖನೀಲಿಮ ॥

ಅತ್ರಾಪ್ರಕರಣಕೇಂದುಮಂಡಲಗತತಯಾ ಉತ್ಪ್ರೇಕ್ಷ್ಯಮಾಣೇನ ದಮಯಂತೀ
ವದನನಿರ್ಮಾಣಾರ್ಥಂ ಸಾರಾಂಶಹರಣೇನ ತತ್ಕಾರ್ಯರೂಪಂ ವರ್ಣನೀಯ
ಪ್ರಸ್ತುತಂ ದಮಯಂತೀವದನಗತಲೋಕೋತ್ತರಂ ಸೌಂದರ್ಯಂ ಪ್ರತೀಯತೇ. ಯಥ
ವಾ ಮದೀಯೇ ವರದರಾಜಸ್ತವೇ.–

ಆಶ್ರಿತ್ಯ ನೂನಮಮೃತದ್ಯುತಯಃ ಪದಂ ತೇ
ದೇಹಕ್ಷಯೋಪನತದಿವ್ಯಪದಾಭಿಮುಖ್ಯಾಃ ।
ಲಾವಣ್ಯಪುಣ್ಯನಿಚಯಂ ಸುಹೃದಿ ತ್ವದಾಸ್ಯೇ
ವಿನ್ಯಸ್ಯ ಯಾಂತಿ ಮಿಹಿರಂ ಪ್ರತಿಮಾಸಭಿನ್ನಾಃ ॥

ಅತ್ರ ಅಪ್ರಾಕರಣಿಕಚಂದ್ರ ಕರ್ತೃಕತಯಾ ಉತ್ಪ್ರೇಕ್ಷ್ಯಮಾಣೇನ ಲಾವಣ್ಯ
ಪುಣ್ಯನಿಚಯವಿನ್ಯಾಸೇನ ಕಾರಣೇನ ತತ್ಕಾರ್ಯಮನಂತಕೋಟಿಚಂದ್ರಲಾವಣ್ಯಶಾಲಿತ್ವ
ಮನನ್ಯಮುಖಸಾಧಾರಣಂ ಭಗವನ್ಮುಖೇ ವರ್ಣನೀಯತಯಾ ಪ್ರಸ್ತುತಂ ಪ್ರತೀ
ಯತೇ. ತಥಾ ಹಿ ಚಂದ್ರಸ್ತಾವತ್ ಮಂತ್ರಲಿಂಗಾತ್, ವೃದ್ಧಿಕ್ಷಯಾಭ್ಯಾಂ

ಅಭೇದೇಽಪಿ ಭೇದಾಧ್ಯವಸಾಯಾದ್ವಾ ಪ್ರತಿಮಾಸಂ ಭಿನ್ನತ್ವೇನ ವರ್ಣಿತಃ. ತೇನ ಅತೀತಾಶ್ಚಂದ್ರಾಃ ಅನಂತಕೋಟಯ ಇತಿ ಲಬ್ಧಮ್. ಕಾಲಸ್ಯ ಅನಾದಿತ್ವಾತ್ಸರ್ವೇಷಾಂ ಚ ತೇಷಾಮಾಕಾಶಸಮಾಶ್ರಯಣಂ ಶ್ಲೇಷಮಹಿಮ್ನಾ ಭಗವಚ್ಚರಣಸಮಾಶ್ರಯತ್ವೇನ ಅಧ್ಯವಸಿತಮ್. ಭಗವಚ್ಚರಣಂ ಪ್ರಪನ್ನಾನಾಂ ಚ ದೇಹಕ್ಷಯೋಪಸ್ಥಿತೌ ಪರಮಪದಪ್ರಾಪ್ತ್ಯಭಿಮುಖ್ಯಂ, ತದಾನೀಮೇವ ಸುಹೃದ್ವರ್ಗೇ ಸ್ವಕೀಯಸುಕೃತಸ್ತೋಮನಿವೇಶನಂ ತತಃ ಸೂರ್ಯಮಂಡಲಪ್ರಾಪ್ತಿಶ್ಚೇತ್ಯೇತತ್ಸರ್ವಂ ಶ್ರುತಿಸಿದ್ಧಮಿತಿ ತದನುರೋಧೇನ ತೇಷಾಂ ದೇಹಕ್ಷಯಕಾಲಸ್ಯ ಅಮಾವಾಸ್ಯಾರೂಪಸ್ಯ ಉಪಸ್ಥಿತೌ ಸೂರ್ಯಮಂಡಲಪ್ರಾಪ್ತೇಃ ಪ್ರಾಕ್ ಪ್ರತ್ಯಕ್ಷಸಿದ್ಧಂ ಪುಣ್ಯತ್ವೇನ ನಿರೂಪಿತಸ್ಯ ಲಾವಣ್ಯಸ್ಯ ಪ್ರಹಾಣಂ ನಿಮಿತ್ತೀಕೃತ್ಯ ತಸ್ಯ ಚಂದ್ರಸಾದೃಶ್ಯಸ್ವರೂಪೋಪಚರಿತತತ್ಸಾರ್ಹಾರ್ದವತಿ ಭಗವನ್ಮುಖೇ ನ್ಯಸನಮುತ್ಪ್ರೇಕ್ಷಿತಮ್. ಯದ್ಯಪಿ ಸುಹೃದಿತ್ಯೇಕವಚನೇನ ಭಗವನ್ಮುಖಮೇವ ಚಂದ್ರಸ್ಯ ಸುಹೃದ್ಭೂತಂ ನ ಮುಖಾಂತರಾಣಿ ಚಂದ್ರಸಾದೃಶ್ಯಗಂಧಸ್ಯಾಪ್ಯಪದಾನೀತಿ ಭಗವನ್ಮುಖಸ್ಯೇತರಮುಖೇಭ್ಯೋ ವ್ಯತಿರೇಕೋಽಪಿ ವ್ಯಂಜಿತಃ. ತತಶ್ಚ ತಸ್ಮಿನ್ನೇವ ಸರ್ವೇಷಾಂ ಸ್ವಸ್ವಯಾವಲ್ಲಾವಣ್ಯವಿನ್ಯಸನೋತ್ಪ್ರೇಕ್ಷಣೇನಪ್ರಾಗ್ವರ್ಣಿತಃ ಪ್ರಸ್ತುತೋಽರ್ಥಃ ಸ್ಪಷ್ಟಮೇವ ಪ್ರತೀಯತೇ ಯದ್ಯಪಿ. ಶ್ರುತೌ ಸೂರ್ಯಮಂಡಲ ಪ್ರಾಪ್ತ್ಯನಂತರಭಾವಿವಿರಜಾನದೀಕ್ರಮಣಾನಂತರಮೇವ ಸುಹೃತ್ಸು ಕೃತ-ಸಂಕ್ರಮಣಂ ಶ್ರೂಯತೇ. ತಥಾಪಿ ಶಾರೀರಕಶಾಸ್ತ್ರೇ ತಸ್ಯಾರ್ಥವಶಾತ್ ಪ್ರಾಗ್ಭಾವಃ ಸ್ಥಾಪಿತ ಇತಿ ತದನುಸಾರೇಣ " ವಿನ್ಯಸ್ಯ ಮಿಹರಂ ಪ್ರತಿಯಾಂತಿ " ಇತ್ಯುಕ್ತಮ್.

ಕಾರ್ಯಕಾರಣಭಾವವನ್ನವಲಂಬಿಸಿದ ಅಪ್ರಸ್ತುತಪ್ರಶಂಸೆಯನ್ನು ಉದಾಹರಿಸಲಾಗುವುದು. " ಬ್ರಹ್ಮನು ದಮಯಂತಿಯ ಮುಖವನ್ನು ನಿರ್ಮಿಸಲಿಕ್ಕಾಗಿ ಚಂದ್ರಮಂಡಲದ ಸಾರವನ್ನು ಅಪಹರಿಸಿದ ಪ್ರಯುಕ್ತ ಅಲ್ಲಿ ಆಕಾಶದ ನೀಲವರ್ಣವನ್ನು ಹೊಂದಿರುವ ದೊಡ್ಡದೊಂದು ಹಳ್ಳವೇ ಕಾಣಬರುತ್ತದೆ." ಇಲ್ಲಿ ಅಪ್ರಕೃತವಾದ ಚಂದ್ರಮಂಡಲದಲ್ಲಿ ಹೇಗೆ ದೊಡ್ಡದೊಂದು ಹಳ್ಳವು ಕಾಣುತ್ತಿದೆ ಎಂಬುದನ್ನು ಉತ್ಪ್ರೇಕ್ಷಿಸಿದೆ. ದಮಯಂತಿಯ ಮುಖವನ್ನು ನಿರ್ಮಿಸಲಿಕ್ಕಾಗಿ ಬ್ರಹ್ಮನು ಚಂದ್ರಮಂಡಲದ ಸಾರಾಂಶವನ್ನು ಅಪಹರಿಸಿದನೆಂಬ ಕಾರಣದಿಂದ ದಮಯಂತಿಯ ಮುಖದಲ್ಲಿ ಲೋಕೋತ್ತರವಾದ ಸೌಂದರ್ಯವು ಕಂಡುಬಂದಿತೆಂದು ಪ್ರಕೃತಾಂಶವು ಕಾರ್ಯರೂಪದಿಂದ ತೋರುತ್ತದೆ. ತಾನೇ ರಚಿಸಿರುವ ವರದರಾಜಸ್ತವದಲ್ಲಿ ಇದರ ಉದಾಹರಣವು ಹೀಗೆ ಬಂದಿದೆ. " ಸ್ವಾಮಿ, ಪ್ರತಿ ತಿಂಗಳಲ್ಲೂ ಬೇರೆ ಬೇರೆಯಾಗಿ ಹುಟ್ಟುವ ಚಂದ್ರರು ಸರ್ವವ್ಯಾಪಕನಾದ ನಿನಗೆ ಪಾದವೆನಿಸಿದ ಆಕಾಶವನ್ನು ಆಶ್ರಯಿಸಿದ್ದು ದೇಹವನ್ನು ತೊರೆಯುವಾಗ ದೊರೆಯುವಂತಹ ದಿವ್ಯಪದವನ್ನು ಹೊಂದಲಿಕ್ಕಾಗಿ ನಿನ್ನ ಮುಖವೆಂಬ ಮಿತ್ರನಲ್ಲಿ ಲಾವಣ್ಯವೆಂಬ ಪುಣ್ಯದ ರಾಶಿಯನ್ನಿ

ರಿಸಿದ್ದು ಸೂರ್ಯಮಂಡಲವನ್ನು ಸೇರುತ್ತಿರುವರು." ಇಲ್ಲಿ ಚಂದ್ರರು ಪ್ರತಿತಿಂಗಳಲ್ಲಿ ತಮ್ಮ ಸೌಂದರ್ಯವೆಂಬ ಪುಣ್ಯದ ರಾಶಿಯನ್ನು ವರದರಾಜನ ಮುಖದಲ್ಲಿ ಇರಿಸು ರೆಂಬ ಅಪ್ರಕೃತ ವೃತ್ತಾಂತವೇ ಕಾರಣವೆನಿಸಿದೆ. ಇದರಿಂದ ಅದರ ಕಾರ್ಯವು ತಿಳಿಯಬೇಕಾಗಿದೆ. ಮುಖದಲ್ಲಿ ಅನಂತಕೋಟಿ ಚಂದ್ರರ ಸೌಂದರ್ಯವು ನೆಲಸಿದ್ದು ರಿಂದ ಮುಖವು ಅಸಾಧಾರಣವಾಗಿತ್ತೆಂದು ತಿಳಿಸುವುದೇ ಇಲ್ಲಿ ಪ್ರಸ್ತುತವೃತ್ತಾಂ ಹೀಗೆ ಅಪ್ರಕೃತವಾದ ಕಾರಣವು ಪ್ರಕೃತವಾದ ಕಾರ್ಯವನ್ನು ತಿಳಿಸುತ್ತದೆ. ಚಂ ನಾದರೋ "ನವೋನವೋ ಭವತಿ ಜಾಯಮಾನಃ" ಪ್ರತಿ ತಿಂಗಳಲ್ಲೂ ಹುಟ್ಟುತ್ತ ಹೊಸಬನಾಗುತ್ತಾನೆ ಎಂದು ತಿಳಿಸುವ ಮಂತ್ರದ ಬಲದಿಂದ ವೃದ್ಧಿಕ್ಷಯಗಳ ಪ್ರತಿ ತಿಂಗಳಲ್ಲೂ ಹೊಂದುವ ಪ್ರಯುಕ್ತ ಅವನು ಒಬ್ಬ ವ್ಯಕ್ತಿಯೇ ಆದರೂ ಬೇರೆಯಾಗುವನೆಂದು ಇಲ್ಲಿ ವರ್ಣಿಸಲಾಗಿದೆ. ಆದ್ದರಿಂದ ಹಿಂದೆ ಕಳೆದಿರುವ ಚಂದ್ರ ಅನಂತಕೋಟಿ ಎಂಬುದು ಸ್ಪಷ್ಟವಾಯಿತು. ಕಾಲವು ಅನಾದಿಯಾದ್ದರಿಂದ ಅ ಎನಿಸಿದ ಆಕಾಶವನ್ನೇ ಚಂದ್ರರೆಲ್ಲರೂ ಆಶ್ರಯಿಸಬೇಕಾಯಿತು. ಇಲ್ಲಿ ಶ್ಲೇಷದ ಆಕಾಶವೆಂದರೆ ಭಗವಂತನ ಪಾದವೆಂದು ಅರ್ಥವಾಗುತ್ತದೆ. ಆಕಾಶವನ್ನಾಶ್ರಯಿ ವುದೆಂದರೆ ಭಗವಂತನ ಪಾದವನ್ನು ಸೇರುವುದೆಂದರ್ಥ. ಭಗವಂತನ ಪಾದವನ್ನಾಶ್ರ ಸಿದವರು ಮೋಕ್ಷವನ್ನು ಹೊಂದಲು ಅನುಕೂಲವಾಗುವಂತೆ ದೇಹವನ್ನು ತೊರೆ ವಾಗ ತಮ್ಮ ಪುಣ್ಯದ ರಾಶಿಯನ್ನು ಮಿತ್ರರಲ್ಲಿರಿಸಿ ಸೂರ್ಯಮಂಡಲಕ್ಕೆ ಹೋ ಬೇಕೆಂದು ಕೌಷೀತಕೀಶ್ರುತಿಯು ತಿಳಿಸಿದೆ. ಇದರಂತೆ ಚಂದ್ರರೆಲ್ಲರೂ ದೇಹವ ತೊರೆಯುವ ಅಮಾವಾಸ್ಯೆಯ ಕಾಲ ಒದಗಿದಾಗ ಸೂರ್ಯಮಂಡಲವನ್ನು ಸೇರು ವುದನ್ನ ತಾವು ಗಳಿಸಿದ್ದ ಪುಣ್ಯದ ರಾಶಿ ಎಂಬ ಸೌಂದರ್ಯವನ್ನು ತೊರೆಯ ಬೇಕಾಯಿತು. ಆದರೆ ಚಂದ್ರರು ತಮ್ಮ ಸೌಂದರ್ಯವನ್ನಿರಿಸಬೇಕಾದರೆ ಭಗವ ಗಿಂತ ಬೇರೆ ಆಪ್ತಮಿತ್ರರು ಎಲ್ಲಿ ದೊರೆಯಬಹುದು? ಅವನ ಮುಖವಾದರೋ ಅನಂತಕೋಟಿ ಚಂದ್ರರಿಗೆ ಸದೃಶವಾಗಿದ್ದುದರಿಂದ ಆ ಮುಖವೆಂಬ ಧರ್ಮಿಯಲ್ಲಿ ಪುಣ್ಯಾರ್ಪಣವೆಂಬ ಧರ್ಮವನ್ನು ಉತ್ಪ್ರೇಕ್ಷಿಸಲಾಗಿದೆ. ಚಂದ್ರರಿಗೂ ಮುಖ ಸಾದೃಶ್ಯದ ಮೂಲಕ ಸೌಹಾರ್ದವಿದ್ದುದರಿಂದ ಅಂತಹ ಮುಖದಲ್ಲಿಯೇ ಚಂ ರೆಲ್ಲರೂ ಪ್ರತಿತಿಂಗಳಲ್ಲೂ ಪುಣ್ಯವೆಂಬ ಸೌಂದರ್ಯವನ್ನು ಇರಿಸುತ್ತಿದ್ದ ಉತ್ಪ್ರೇಕ್ಷಿಸಿರುವುದು ಯುಕ್ತವೇ ಆಗಿದೆ. ಅನೇಕ ಸ್ನೇಹಿತರಲ್ಲಿ ಇರಿಸುವುದ ಒಬ್ಬೊಬ್ಬರಿಗೆ ಸ್ವಲ್ಪಸ್ವಲ್ಪ ಪುಣ್ಯವಷ್ಟೇ ದೊರೆಯುತ್ತಿತ್ತು. ಆದರೆ ಇಲ್ಲಿ ಸುಹೃ ಎಂದು ಏಕವಚನವನ್ನು ತಿಳಿಸಿದ್ದರಿಂದ ಭಗವಂತನ ಮುಖ ಒಂದೇ ಅನೇಕಚಂದ್ರ ಮಿತ್ರನೆನಿಸಿತ್ತು. ಬೇರೆ ಮುಖಗಳಲ್ಲಿ ಚಂದ್ರನ ಸಾದೃಶ್ಯದ ವಾಸನೆಯೇ ಇಲ್ಲ ಭಗವಂತನ ಮುಖದಲ್ಲಿಯೇ ಇತರ ಮುಖಗಳಿಗಿಂತಲೂ ವೈಶಿಷ್ಟ್ಯವು ತೋರು ರಿಂದ ವ್ಯತಿರೇಕವು ವ್ಯಂಗ್ಯವಾಗಿ ತೋರುತ್ತದೆ. ಆದ್ದರಿಂದ ಅವನೊಬ್ಬನಲ್ಲಿ

ಚಂದ್ರರೆಲ್ಲರೂ ತಮ್ಮ ಲಾವಣ್ಯವನ್ನು ನೆಲೆಗೊಳಿಸಿದ್ದರೆಂದು ಉತ್ಪ್ರೇಕ್ಷಿಸಿದ ಪ್ರಯುಕ್ತ ಹಿಂದೆ ತಿಳಿಸಿದ ಪ್ರಕೃತಾರ್ಥವು ಸ್ಪಷ್ಟವಾಗಿ ತೋರುತ್ತದೆ. ಸೂರ್ಯಮಂಡಲಕ್ಕೆ ಹೋಗುವವರು ವಿರಜಾನದಿಯನ್ನು ದಾಟಿದ ಮೇಲೆಯೇ ಸ್ನೇಹಿತರಲ್ಲಿ ತಮ್ಮ ಪುಣ್ಯವನ್ನು ನೆಲೆಗೊಳಿಸುವರೆಂದು ಶ್ರುತಿಯು ತಿಳಿಸಿದೆ. ಆದರೂ ಜೀವರು ಚಂದ್ರ ಮಂಡಲಕ್ಕೆ ಹೋಗುವ ಮುನ್ನವೇ ಪುಣ್ಯಪಾಪಗಳನ್ನು ಮಿತ್ರಶತ್ರುಗಳಲ್ಲಿ ನೆಲ ಗೊಳಿಸುವುದರಿಂದ ಅವರಿಗೆ ಮುಂದಿನ ಪ್ರಯಾಣಕ್ಕೆ ಸೌಕರ್ಯವಿದೆ ಎಂದು ಭಾವಿಸಿ ಬ್ರಹ್ಮಮೀಮಾಂಸಾಶಾಸ್ತ್ರವು ತಿಳಿಸಿರುವುದರಿಂದ ಅದನ್ನು ಅನುಸರಿಸಿ ಇಲ್ಲಿ ಚಂದ್ರರು ಸೂರ್ಯಮಂಡಲಕ್ಕೆ ಸೇರುವರೆಂಬುದನ್ನು ತಿಳಿಸಲಾಗಿದೆ.

ಕಾರ್ಯನಿಬಂಧನಾ ಅಪ್ರಸ್ತುತಪ್ರಶಂಸಾ ಯಥಾ–

ನಾಥ ತ್ವದಂಘ್ರಿನಖಧಾವನತೋಯಲಗ್ನಾಃ ।
ತತ್ಕಾಂತಿಲೇಶಕಣಿಕಾ ಜಲಧಿಂ ಪ್ರವಿಷ್ಟಾಃ ।
ತಾ ಏವ ತಸ್ಯ ಮಥನೇನ ಘನೀಭವಂತ್ಯಃ ।
ನೂನಂ ಸಮುದ್ರನವನೀತಪದಂ ಪ್ರಪನ್ನಾಃ ॥

ಅತ್ರ ಭಗವತ್ಪದಾಂಬುಜಕ್ಷಾಲನತೋಯರೂಪಾಯಾಂ ದಿವ್ಯಸರಿತಿ ಅಲಕ್ತ ಕರಸಾದಿವಲ್ಲಗ್ನಾನಾಂ, ತಯಾ ಸಹ ಸಮುದ್ರಂ ಪ್ರವಿಷ್ಟಾನಾಂ ತನ್ನಖಕಾಂತಿಲೇಶ ಕಣಿಕಾನಾಂ ಪರಿಣಾಮತಯಾ ಸಂಭಾವ್ಯಮಾನೇ ಸಮುದ್ರ ನವನೀತಪದವಾಚ್ಯೇನ ಚಂದ್ರೇಣ ಕಾರ್ಯೇಣ ತನ್ನಖಕಾಂತ್ಯುತ್ಕರ್ಷಃ ಪ್ರತೀಯತೇ. ಯಥಾ ವಾ–

ಅಸ್ಯಾಶ್ಚೇದ್ಗತಿಸೌಕುಮಾರ್ಯಮಧುನಾ ಹಂಸಸ್ಯ ಗರ್ವೈರಲಂ ।
ಸಂಲಾಪೋ ಯದಿ ಧಾರ್ಯತಾಂ ಪರಭೃತೈರ್ವಾಚಂಯಮತ್ವವ್ರತಮ್ ।
ಅಂಗಾನಾಮಕಠೋರತಾ ಯದಿ ದೃಷತ್ಪ್ರಾಯೈವ ಸ ಮಾಲತೀ ।
ಕಾಂತಿಶ್ಚೇತ್ಕಮಲಾ ಕಿಮತ್ರ ಬಹುನಾ ಕಾಷಾಯಮಾಲಂಬತಾಮ್ ।

ಅತ್ರ ನಾಯಿಕಾಗತ ಸೌಕುಮಾರ್ಯಾದಿಷು ವರ್ಣನೀಯತ್ವೇನ ಪ್ರಸ್ತುತೇಷು ಹಂಸಾದಿ ಗತಗರ್ವಶಾಂತ್ಯಾದಿರೂಪಾಣಿ ಔಚಿತ್ಯೇನ ಸಂಭಾವ್ಯಮಾನಾನಿ ಕಾರ್ಯಾಣ್ಯಭಿಹಿತಾನಿ. ಏತಾನಿ ಚ ಪೂರ್ವೋದಾಹರಣ ಇವ ನ ವಸ್ತುಕಾರ್ಯಾಣಿ ; ಕಿಂ ತು ತನ್ನಿರೀಕ್ಷಣಕಾರ್ಯಾಣಿ.

ಲಜ್ಜಾ ತಿರಶ್ಚಾಂ ಯದಿ ಚೇತಸಿ ಸ್ಯಾದಸಂಶಯಂ ಪರ್ವತರಾಜಪುತ್ರ್ಯಾಃ ।
ತಂ ಕೇಶಪಾಶಂ ಪ್ರಸಮೀಕ್ಷ್ಯ ಕುರ್ಯುರ್ವಾಲಪ್ರಿಯತ್ವಂ ಶಿಥಿಲಂ ಚಮರ್ಯಃ ॥

ಇತ್ಯುದಾಹರಣಾಂತರೇ ತಥೈವ ಸ್ಪಷ್ಟಮ್. ಅಂಗಾನಾಮಕಠೋರತೇತಿ

ತೃತೀಯಪಾದೇ ತು ವರ್ಣನೀಯಾಂಗಸೌಕುಮಾರ್ಯಾತಿಶಯನಿರೀಕ್ಷಣಕಾರ್ಯತ್ವಮಪಿ ನುರ್ಥಾಕ್ಷೇಪ್ಯಮಾಲತೀಕಠೋರತ್ವೇ ವಿವಕ್ಷಿತಮ್. ಪ್ರತಿಯೋಗಿವಿಶೇಷಾಪೇಕ್ಷಕಠೋರತ್ವಸ್ಯ ತದಕಾರ್ಯತ್ವಾತ್ ಕಿಂತು ತದ್ಬುದ್ಧೇರೇವ. ಇದಮಪಿ 'ತ್ವದಂಗ ಮಾರ್ದವೇ ದೃಷ್ಟೇ, ಇತ್ಯಾದ್ಯುದಾಹರಣಾಂತರೇ ತಥೈವ ಸ್ಪಷ್ಟಮ್. ಅರ್ಥಸ್ಯ ಕಾರ್ಯತ್ವ ಇವ ಬುದ್ಧೇಃ ಕಾರ್ಯತ್ವೇಽಪಿ ಕಾರ್ಯನಿಬಂಧನತ್ವಂ ನ ಹೀಯತ ಇತಿ ಏತಾದೃಶಾನ್ಯಪಿ ಕಾರ್ಯನಿಬಂಧನಾಪ್ರಸ್ತುತಪ್ರಶಂಸಾಯಾಮುದಾಹೃತಾನಿ ಪ್ರಾಚೀನೈಃ. ವಸ್ತುತಸ್ತು ತದತಿರೇಕೇಽಪಿ ನ ದೋಷಃ. ನ ಪ್ರಸ್ತುತಪ್ರಶಂಸಾಯಾಂ ಪ್ರಸ್ತುತಾಪ್ರಸ್ತುತಯೋಃ ಪಂಚವಿಧ ಏವ ಸಂಬಂಧ ಇತಿ ನಿಯಂತುಂ ಶಕ್ಯತೇ, ಸಂಬಂಧಾಂತರೇಷ್ವಪಿ ದರ್ಶನಾತ್. ಯಥಾ–

> ತಾಪತ್ರಯತಾಪಘವರಸ್ಯ ತವ ಸ್ಮಿತಸ್ಯ
> ನಿಃಶ್ವಾಸಮುದಪುರುತಾ ನಿಬುಸೀಕೃತಸ್ಯ ।
> ಏತೇ ಕಡಂಕರಚಯಾ ಇವ ವಿಪ್ರಕೀರ್ಣಾ
> ಜೈವಾತೃಕಸ್ಯ ಕಿರಣಾ ಜಗತಿ ಭ್ರಮಂತಿ ॥

ಅತ್ರ ಹ್ಯಪ್ರಸ್ತುತಾನಾಂ ಚಂದ್ರಕಿರಣಾನಾಂ ಭಗವನ್ಮಂದಸ್ಮಿತರೂಪ ದಿವ್ಯೌಷಧಾನ್ಯವಿಶೇಷಕಡಂಕರಚಯತ್ವೋತ್ಪ್ರೇಕ್ಷಣೇನ ಭಗವನ್ಮಂದಸ್ಮಿತಸ್ಯ ತತ್ಸಾರತಾರೂಪಕೋಽಪ್ಯುತ್ಕರ್ಷಃ ಪ್ರತೀಯತೇ ನ ಚ ಧಾನ್ಯಕ್ತರಂಕಲಚಯಯೋಃ ಕಾರ್ಯಕಾರಣಭಾವಾದಿಸಂಬಂಧೋಽಸ್ತಿ. ಅತಃ ಸಹೋತ್ಪತ್ತ್ಯಾದಿಕಮಪಿ ಸಂಬಂಧಾಂತರಮಾಶ್ರಯಣೀಯಮೇವ. ಏವಮುಪಮಾನೋಪಮೇಯಾವಾಶ್ರಿತ್ಯ ತತ್ರಕವಿಕಲ್ಪಿತಕಾರ್ಯಕಾರಣಭಾವನಿಬಂಧನೇ ಅಪ್ರಸ್ತುತಪ್ರಶಂಸೇ ದರ್ಶಿತೇ. ತತೋಽನ್ಯತ್ರಾಪಿ ದೃಶ್ಯತೇ.

ಯಥಾ—

> ಕಾಲಿಂದಿ ಬ್ರೂಹಿ ಕುಂಭೋದ್ಭವ ಜಲಧಿರಹಂ ನಾಮ ಗೃಹ್ಣಾಸಿ ಕಸ್ಮಾತ್ ।
> ಶತ್ರೋರ್ಮೇ ನರ್ಮದಾಹಂ ತ್ವಮಪಿ ವದಸಿ ಮೇ ನಾಮ ಕಸ್ಮಾತ್ಸಪತ್ನ್ಯಾಃ ।
> ಮಾಲಿನ್ಯಂ ತರ್ಹಿ ಕಸ್ಮಾದನುಭವಸಿ ಮಿಲತ್ಕಜ್ಜಲೈರ್ಮಾಲತೀನಾಂ
> ನೇತ್ರಾಂಭೋಭಿಃ ಕಿಮಾಸಾಂ ಸಮಜನಿ ಕುಪಿತಃ ಕುಂತಲಕ್ಷೋಣಿಪಾಲಃ ॥

ಅತ್ರ ಕಿಮಾಸಾಂ ಸಮಜನೀತಿ ಮಾಲವೀನಾಂ ತಥಾ ರೋದನಸ್ಯ ನಿಮಿತ್ತೇ ಪೃಷ್ಟೇ ತತ್ಪ್ರಿಯಮರಣರೂಪನಿಮಿತ್ತಮನಾಖ್ಯಾಯ ಕುಪಿತಃ ಕುಂತಲಕ್ಷೋಣಿಪಾಲ ಇತಿ ತತ್ಕಾರಣಮಭಿಹಿತಮಿತಿ ಕಾರಣನಿಬಂಧನಾ. ಮಾಲವಾನ್ಪ್ರತಿ ಪ್ರಸ್ಥಿತಸ್ಯ

ಕುಂತಲೇಶ್ವರೇಣ ಕಿಂ ತೇ ನಾಶಿತಾ ಇತಿ ಪೃಷ್ಟೇ ತದ್ವಧಾನಂತರಭಾವಿಜಲಧಿನರ್ಗ-
ದಾಪ್ರಶ್ನೋತ್ತರರೂಪಂ ಕಾರ್ಯಮಭಿಹಿತಮಿತ್ಯತ್ರೈವ ಕಾರ್ಯನಿಬಂಧನಾಪಿ.
ಪೂರ್ವಸ್ಯಾಂ ಪ್ರಶ್ನಃ ಶಾಬ್ದೋಽಸ್ಯಾಮಾರ್ಥಃ ಇತಿ ಭೇದಃ.

ಕಾರ್ಯದಿಂದ ಕಾರಣವು ತೋರುವುದನ್ನು ಉದಾಹರಿಸುತ್ತಾನೆ. "ಸ್ವಾಮಿ ನಿನ್ನ ಪಾದಗಳ ಉಗುರುಗಳನ್ನು ತೊರೆದ ನೀರಿನಲ್ಲಿ ಅಂಟಿಕೊಂಡಿದ್ದ ಕೆಲವು ಕಾಂತಿಯ ಚೂರುಗಳು ಹಿಂದೆ ಸಮುದ್ರವನ್ನು ಪ್ರವೇಶಿಸಿದ್ದುವು. ಸಮುದ್ರವನ್ನು ಕಡೆದಾಗ ಅವೆಯೇ ಗಟ್ಟಿಗೊಂಡು ಸಮುದ್ರದಿಂದ ಬೆಣ್ಣೆಯ ರೂಪದಲ್ಲಿ ಹೊರಗೆ ಬಂದವು" ಇಲ್ಲಿ ಭಗವಂತನ ಪಾದಕಮಲಗಳನ್ನು ತೊಳೆಯಲು ಉಪಯೋಗಿಸಿದ ನೀರೆನಿಸಿದ ದೇವಗಂಗೆಯಲ್ಲಿ ಅರಗಿನ ರಸವಂತೆ ಅಂಟಿಕೊಂಡಿದ್ದು ಆ ಮೂಲಕ ಸಮುದ್ರವನ್ನು ಪ್ರವೇಶಿಸಿದ್ದ ಉಗುರುಗಳ ಕಾಂತ್ಯಂಶಗಳೇ ಬೆಣ್ಣೆಯಾಗಿ ಪರಿಣಮಿಸಿದವೆಂದು ಉತ್ಪ್ರೇಕ್ಷಿಸಲಾಗಿದೆ. ಈ ಬೆಣ್ಣೆಯ ರೂಪದಿಂದ ಅವೇ ಪ್ರಕಾಶದ ಚಂದ್ರನು ಹೊರ ಬಿದ್ದುದರಿಂದ ಅವನು ಸಮುದ್ರದ ಬೆಣ್ಣೆ ಎನಿಸಿರುವನು. ಹೀಗೆ ಅಪ್ರಕೃತವಾದ ಕಾರ್ಯವನ್ನು ತಿಳಿಸಿದ್ದರಿಂದ ಭಗವಂತನ ಪಾದಗಳ ಉಗುರುಗಳಲ್ಲಿ ಹೆಚ್ಚಿನ ಕಾಂತಿ ನೆಲಸಿತ್ತೆಂಬ ಕಾರಣವು ತೋರುತ್ತದೆ.

"ಈ ಕಾಮಿನಿಯ ಗಮನದ ಸೊಬಗನ್ನು ನಿರೀಕ್ಷಿಸುವುದಾದರೆ ಹಂಸವು ತನ್ನ ಗಮನದ ಬಗ್ಗೆ ಗರ್ವಪಡದಿರುವುದು ಒಳ್ಳೆಯದು. ಆಕೆಯ ಭಾಷಣವನ್ನು ಕೇಳಿದ ಮೇಲೆ ಕೋಗಿಲೆಗಳು ಮೌನವನ್ನಾಚರಿಸುವುದೇ ಮೇಲು. ಆಕೆಯ ಅವಯವಗಳ ಮಾರ್ದವವನ್ನು ಕಂಡಮೇಲೆ ಮಾಲತೀಪುಷ್ಪವು ಕಲ್ಲಿಗೆ ಸದೃಶವೇ ಆದೀತು. ಆಕೆಯ ಕಾಂತಿಯನ್ನು ನೋಡಿದಮೇಲೆ ಲಕ್ಷ್ಮಿಯು ಕಾವಿಯಬಟ್ಟೆಯನ್ನು ಧರಿಸುವುದೇ ಉತ್ತಮ. ಈ ಬಗ್ಗೆ ಹೆಚ್ಚು ಹೇಳಿ ಏನು ಫಲ?" ಇದು ನಾಯಿಕೆಯ ಗಮನ ವೈಶಿಷ್ಟ್ಯ ಮೊದಲಾದವನ್ನು ವರ್ಣಿಸುವ ಸಂದರ್ಭವಾದ್ದರಿಂದ ಇವೇ ಪ್ರಕೃತವೆನಿಸಿರುವಾಗ ಇವುಗಳಿಂದ ಹಂಸ ಮೊದಲಾದವುಗಳ ಗರ್ವಶಮನ ಮೊದಲಾದ ಕಾರ್ಯಗಳನ್ನು ಉತ್ಪ್ರೇಕ್ಷಿಸಲಾಗಿದೆ. ಈ ಕಾರ್ಯಗಳು ಹಿಂದಿನ ಉದಾಹರಣದಂತೆ ವಾಸ್ತವವೆನಿಸಿಲ್ಲ. ಆದರೆ ಗತಿಯ ಸೊಬಗು ಮೊದಲಾದವುಗಳ ನಿರೀಕ್ಷಣೆಯಿಂದ ಸಂಭವಿಸುವಂತಾಗಿವೆ. ಇವು ವಸ್ತುಸ್ಥಿತಿಯಲ್ಲಿ ಸಂಭವಿಸಿದ ಕಾರ್ಯಗಳೆನಿಸವೆ ಕೇವಲ ಜ್ಞಾನದಿಂದ ಸಂಭವಿಸುವಂತಹ ಕಾರ್ಯಗಳೆನಿಸಿವೆ. ಆಕೆಯ ಗತಿಯ ಸೊಬಗನ್ನು ನಿರೀಕ್ಷಿಸುವುದಾದರೆ ಹಂಸವು ಗರ್ವಪಡಬೇಕಾಗಿಲ್ಲ. ಹೀಗೆ ಗರ್ವಶಮನ ಮೊದಲಾದವು ನಿರೀಕ್ಷಣ ರೂಪವಾದ ಜ್ಞಾನದಿಂದ ಸಂಭವಿಸಬಹುದಾದ ಕಾರ್ಯಗಳೆನಿಸಿವೆ. ಇದಕ್ಕೆ ಬೇರೊಂದು ಉದಾಹರಣವನ್ನು ತೋರಿಸಿದ್ದಾನೆ, "ತಿರ್ಯಗ್ಜಾತಿಯ ಪ್ರಾಣಿಗಳ ಮನಸ್ಸಿನಲ್ಲೂ ಲಜ್ಜೆ ಇರುವುದಾದರೆ ಆಗ ಚಮರೀ ಮೃಗಗಳು ಪಾರ್ವತಿಯ ಸುಂದರವಾದ ಕೇಶ

ಪಾಶವನ್ನು ನೋಡಿ ತಮ್ಮ ಕೇಶದ ಮೇಲಿನ ವ್ಯಾಮೋಹವನ್ನು ಸಡಿಲಮಾಡಿ ಕೊಂಡವು'' ಇಲ್ಲಿಯೂ ಹಿಂದೆ ಹೇಳಿದ ನಿರೀಕ್ಷಣಕಾರ್ಯದಂತೆಯೇ ವಾಸ್ತವವಾದ ಕಾರ್ಯವನ್ನು ತಿಳಿಸದೆ ನಿರೀಕ್ಷಣದಿಂದುಂಟಾಗುವ ಕಾರ್ಯವನ್ನೇ ತಿಳಿಸಲಾಗಿದೆ. 'ಅಂಗಾನಾಮಕಠೋರತಾ' ಎಂಬ ಮೂರನೆಯ ಪಾದದಲ್ಲಿ ''ನಾಯಿಕೆಯ ದೇಹದ ಮಾರ್ಧವಾತಿಶಯವನ್ನು ನಿರೀಕ್ಷಿಸುವುದಾದರೆ" ಎಂಬಲ್ಲಿ ಹೇಳಿದ ನಿರೀಕ್ಷಣ ಕಾರ್ಯವಾದರೋ ಅರ್ಥದಿಂದಲೇ ಸಹಜವಾಗಿ ತೋರಿಬರುವ ಮಾಲತೀಪುಷ್ಪದ ಕಠೋರತೆಯನ್ನು ತಿಳಿಸಲಿಕ್ಕೆ ಅವಶ್ಯಕವೆನಿಸಿಲ್ಲ. ಮಾಲತೀಪುಷ್ಪ ಒರಟಾಗಿತ್ತು ಎಂಬ ಜ್ಞಾನವು ಬರಲು ನಾಯಿಕೆಯ ಅವಯವವು ಬಹಳ ಮೃದುವಾಗಿತ್ತು ಎಂಬ ಜ್ಞಾನವು ಹುಟ್ಟಬೇಕು. ಒಂದು ವಸ್ತುವು ಮೃದುವೆಂದು ತಿಳಿದರೆ ಮತ್ತೊಂದು ಕಠಿಣ ವೆಂಬುದು ತಾನಾಗಿಯೇ ತಿಳಿದುಬರುತ್ತದೆ. ಆದ್ದರಿಂದ ಮಾಲತೀಪುಷ್ಪವು ಕಠಿಣ ವಾದ್ದೆಂಬ ಜ್ಞಾನಕ್ಕೆ ಅವಯವಗಳು ಮೃದುವೆಂಬ ಜ್ಞಾನವೇ ಕಾರಣವೆನಿಸಿದ್ದರಿಂದ ಇದು ಬುದ್ಧಿಯ ಕಾರ್ಯವೇ ಹೊರತು ವಾಸ್ತವವಾದ ಕಾರ್ಯಕಾರಣಭಾವಕ್ಕೆ ಇಲ್ಲಿ ಅವಕಾಶವಿಲ್ಲ. ನಾಯಿಕೆಯ ಅಂಗಸೌಕುಮಾರ್ಯವನ್ನು ನಿರೀಕ್ಷಿಸಿದ್ದರಿಂದಲೇ ಮಾಲತೀ ಪುಷ್ಪವು ಕಠೋರವೆನಿಸಿತೆಂಬ ಕಾರ್ಯಕಾರಣಭಾವಕ್ಕೆ ಇಲ್ಲಿ ಪ್ರಸಕ್ತಿ ಇಲ್ಲ. ಮಾಲತೀ ಪುಷ್ಪವು ಕಲ್ಲಾಯಿತೆಂದು ಹೇಳಿದ್ದರಿಂದ ಅದರ ಕಾಠಿಣ್ಯವು ಅರ್ಥದಿಂದಲೇ ಸಿದ್ಧಿಸಿತು. ವಸ್ತುಸ್ಥಿತಿಯಲ್ಲಿ ಕಂಡುಬರುವ ಕಾರ್ಯಕಾರಣಭಾವಕ್ಕಿಂತಲೂ ಬುದ್ಧಿಯಿಂದ ತೋರುವ ಕಾರ್ಯಕಾರಣಭಾವವೂ ಒಂದು ಬಗೆಯ ಸಂಬಂಧವೆನಿಸುವ ಪ್ರಯುಕ್ತ ಇದೇ ಅಪ್ರಸ್ತುತಪ್ರಶಂಸೆಯ ಆರನೆಯ ಬಗೆಯಾಗಲಿಕ್ಕೆ ಅಡ್ಡಿಯಿಲ್ಲ. ಅಪ್ರಸ್ತುತ ಪ್ರಶಂಸೆಯಲ್ಲಿ ಪ್ರಕೃತ ಅಪ್ರಕೃತ ವೃತ್ತಾಂತಗಳಿಗೆ ಹಿಂದೆ ಹೇಳಿದ ಐದು ಸಂಬಂಧ ಗಳಂತೆ ಆರನೆಯದನ್ನು ಹೇಳಿದರೆ ದೋಷವಿಲ್ಲವೆಂದು ಪ್ರಾಚೀನರು ಅಭಿಪ್ರಾಯ ಪಟ್ಟಿರುವರು. ಬೇರೆ ಸಂಬಂಧದಲ್ಲೂ ಈ ಅಲಂಕಾರವು ಬರಬಹುದೆಂಬುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಸ್ವಾಮಿ ಭಕ್ತರ ಮೂರು ಬಗೆಯ ಸಂತಾಪ ಗಳನ್ನು ಪರಿಹರಿಸುವಂತಹ ನಿನ್ನ ಮುಗುಳು ನಗೆ ಎಂಬ ದಿವ್ಯೌಷಧದ ಮೇಲಿನ ಹೊಟ್ಟನ್ನು ನಿನ್ನ ನಿಟ್ಟುಸಿರೆಂಬ ಮಂದಮಾರುತವು ಎಲ್ಲೆಡೆಯಲ್ಲೂ ಚೆಲ್ಲಿದೆ. ಆ ಹೊಟ್ಟಿನ ಚೂರುಗಳೋ ಏನೋ ಎಂಬಂತೆ ಚಂದ್ರನ ಕಿರಣಗಳು ಎಲ್ಲಾ ಕಡೆಗಳಲ್ಲಿ ಸಂಚರಿಸುತ್ತಲಿವೆ. ಅಪ್ರಕೃತವಾದ ಚಂದ್ರಕಿರಣಗಳನ್ನು ಭಗವಂತನ ಮಂದಹಾಸ ವೆಂಬ ದಿವ್ಯೌಷಧದ ಮೇಲಿನ ಹೊಟ್ಟಿನ ರಾಶಿ ಎಂದು ಉತ್ಪ್ರೇಕ್ಷಿಸಲಾಗಿದೆ. ಆದ್ದರಿಂದ ಭಗವಂತನು ಮುಗುಳುನಗೆಯೂ ಗಟ್ಟಿಯೂ ಶ್ರೇಷ್ಠವೂ ಆದ ವಸ್ತುವೆಂದು ಅದರ ಉತ್ಕರ್ಷವು ತೋರುತ್ತದೆ. ಇದರಿಂದ ಚಂದ್ರನ ಕಿರಣಗಳು ಹೊಟ್ಟಿನಂತೆ ಅಪ್ರಯೋ ಜಕವೆಂಬುದು ತಿಳಿದುಬರುತ್ತದೆ. ಇಲ್ಲಿ ಮಂದಸ್ಮಿತಕ್ಕೂ ಹೊಟ್ಟಿನ ರಾಶಿಗೂ ಕಾರ್ಯಕಾರಣಭಾವಸಂಬಂಧವನ್ನು ಕಲ್ಪಿಸಲಾಗುವುದಿಲ್ಲ. ಅವೆರಡೂ ಸಹಜವಾಗಿ

ಒಟ್ಟಿಗೆ ಹುಟ್ಟಿರುವುದರಿಂದ ಸಹೋತ್ಪತ್ತಿ ಎಂಬ ಬೇರೊಂದು ಸಂಬಂಧವನ್ನೇ ಇಲ್ಲಿ ಆಶ್ರಯಿಸಬೇಕು. ಹಾಗೆಯೇ ಉಪಮಾನೋಪಮೇಯಗಳನ್ನಾಶ್ರಯಿಸಿ ಕವಿಯ ಪ್ರತಿಭೆಯಿಂದ ಕಲ್ಪಿಸುವ ಕಾರ್ಯಕಾರಣಭಾವವನ್ನು ಅವಲಂಬಿಸಿಕೊಂಡು ಅಪ್ರಸ್ತುತ ಪ್ರಶಂಸೆ ಬರಬಹುದು. "ಹೃತಸಾರಮಿವೇಂದುಮಂಡಲಂ'' ಎಂಬ ಉದಾಹರಣದಲ್ಲಿ ಉಪಮಾನವೆನಿಸಿದ ಚಂದ್ರನನ್ನೂ, ಉಪಮೇಯವೆನಿಸಿದ ಕಮಲವನ್ನೂ ಆಶ್ರಯಿಸಿ ಕೊಂಡು ಚಂದ್ರನ ಸಾರಾಂಶವನ್ನು ಬ್ರಹ್ಮನು ಅಪಹರಿಸಿದನೆಂದು ಕವಿ ಪ್ರತಿಭೆಯಿಂದ ಹೀಗೆ ಸಾರಾಂಶಾಪಹರಣವನ್ನು ಕಾರಣವೆಂದು ಕಲ್ಪಿಸಿರುವನು. ಹೀಗೆಯೇ ಬೇರೆ ಕಡೆಗಳಲ್ಲೂ ತಿಳಿಯುವುದೆಂಬುದನ್ನು ಈಗ ಉದಾಹರಿಸುತ್ತಾನೆ. ನರ್ಮದಾನದಿಗೂ ಸಮುದ್ರಕ್ಕೂ ನಡೆಯುವ ಸಂಭಾಷಣದಲ್ಲಿ ಇದನ್ನು ಕಾಣಬಹುದು. ''ಯಮುನೆ ಎಂಬ ಭ್ರಾಂತಿಯಿಂದ ನರ್ಮದಾನದಿಯನ್ನು 'ಕಾಳಿಂದಿ' ಎಂದು ಸಮುದ್ರನು ಕರೆದನು. ಆದಕ್ಕೆ ನರ್ಮದೆ ಕೋಪದಿಂದ ''ಅಗಸ್ತ್ಯ ಮುನಿಯೇ, ನಿನಗೆ ನನ್ನಿಂದೇನಾಗ ಬೇಕು ?'' ಎಂದು ಕೇಳಿದಳು. ಅದಕ್ಕೆ ಸಮುದ್ರವು ''ನಾನು ಸಮುದ್ರನಿರುವೆನು. ನನ್ನ ಶತ್ರುವಿನ ಹೆಸರನ್ನು ಏಕೆ ಹೇಳುವೆ ?'' ಎಂದು ಕೇಳಿದನು. ಅದಕ್ಕೆ ಅವಳು ''ನಾನು ನರ್ಮದೆ ಇರುವೆನು. ನೀನಾದರೂ ನನ್ನ ಸವತಿಯ ಹೆಸರನ್ನು ನನ್ನೆದುರಿಗೆ ಏಕೆ ಹೇಳುತ್ತಿರುವೆ ?" ಎಂದು ಕೇಳಿದಳು. ಅದಕ್ಕೆ ಸಮುದ್ರವು "ನೀನು ಯಮುನೆ ಯಲ್ಲದಿದ್ದರೆ ನಿನ್ನಲ್ಲಿ ಈ ಮಾಲಿನ್ಯವು ಏಕೆ ಬಂದಿತು ?" ಎಂದು ಕೇಳಿದನು. ಅದಕ್ಕೆ ಅವಳು ''ಕಾಡಿಗೆಯೊಡಗೂಡಿದ ಮಾಲವದೇಶದ ಸ್ತ್ರೀಯರಕಣ್ಣಿನ ನೀರುಗಳಿಂದ ಹೀಗೆ ಕಪ್ಪು ನನ್ನಲ್ಲಿ ಉಂಟಾಯಿತು'' ಎಂದು ಹೇಳಿದಳು. ''ಅವರಿಗೆ ಹಾಗೆ ಏಕೆ ಆಯಿತು'' ಎಂದು ಅವನು ಕೇಳಲು ''ಕುಂತಲದೇಶದ ರಾಜನು ಕೋಪಿಸಿಕೊಂಡಿರುವನು''ಎಂದು ನರ್ಮದೆ ತಿಳಿಸಿದಳು." ಇಲ್ಲಿ "ಆ ಸ್ತ್ರೀಯರಿಗೆ ಏನಾಯಿತು ?'' ಅಂದರೆ ಮಾಲವ ದೇಶದ ಸ್ತ್ರೀಯರು ಅಳಲಿಕ್ಕೆ ಕಾರಣವೇನೆಂದು ಕೇಳಲು ಅವರಿಗೆ ಪತಿಯ ಮರಣ ವುಂಟಾಯಿತೆಂಬ ಕಾರಣವನ್ನು ಹೇಳದೆ ''ಕುಂತಲದೇಶದ ರಾಜನು ಕೋಪಿಸಿ ಕೊಂಡನು'' ಎಂದು ಆ ಸ್ತ್ರೀಯರ ಪತಿಯರಿಗೆ ಸಂಭವಿಸಿದ ಮರಣದ ಕಾರಣವನ್ನು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ರಾಜನು ಕೋಪಿಸಿಕೊಂಡನೆಂಬ ಕಾರಣದಿಂದ ''ಹೆಂಗಸರು ಅಳಲಾರಂಭಿಸಿದರು" ಎಂಬ ಕಾರ್ಯವು ತೋರುತ್ತದೆ. ಹೀಗೆಯೇ ಮಾಲವದೇಶಕ್ಕೆ ಹೊರಟ ಕುಂತಲದೇಶದ ರಾಜನು ಆ ದೇಶದ ಪತಿಗಳನ್ನು ನಾಶ ಮಾಡಿದನೇ ಎಂದು ಕೇಳಲು ಅವರು ಸತ್ತಮೇಲೆ ಸಂಭವಿಸಿದ ನರ್ಮದೆ ಮತ್ತು ಸಮುದ್ರ ಇವರ ಪ್ರಶ್ನೋತ್ತರರೂಪವಾದ ಕಾರ್ಯವನ್ನು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ಇದು ಕಾರ್ಯವನ್ನು ತಿಳಿಸುವ ಅಪ್ರಸ್ತುತಪ್ರಶಂಸೆ ಎನಿಸಿದೆ. ಹೀಗೆ ಒಂದೇ ಶ್ಲೋಕದಲ್ಲಿ ಕಾರಣವನ್ನೂ ಕಾರ್ಯವನ್ನೂ ತಿಳಿಸಲಾಗಿದೆ. ಕಾರಣವು ಪ್ರಕೃತ ವಾಗಿದ್ದು ಅದರಿಂದ ಪ್ರಶ್ನೋತ್ತರರೂಪವಾದ ಕಾರ್ಯವು ತಿಳಿದುಬರುತ್ತದೆ.

ಮೊದಲನೆಯದರಲ್ಲಿ ಪ್ರಶ್ನೆಯನ್ನು ಶಬ್ದದಿಂದಲೇ ತಿಳಿಸಲಾಗಿದೆ. ಎರಡನೆಯದರಲ್ಲಿ ಅದನ್ನು ಅರ್ಥದಿಂದ ತಿಳಿದುಕೊಳ್ಳಬೇಕು. ಇಷ್ಟೇ ಇವೆರಡಕ್ಕೂ ಇರುವ ಭೇದ.

## ೨೮ ಪ್ರಸ್ತುತಾಂಕುರಾಲಂಕಾರ

ಪ್ರಸ್ತುತೇನ ಪ್ರಸ್ತುತಸ್ಯ ದ್ಯೋತನೇ ಪ್ರಸ್ತುತಾಂಕುರಃ ।
ಕಿಂ ಭೃಂಗ ಸತ್ಯಾಂ ಮಾಲತ್ಯಾಂ ಕೇತಕ್ಯಾ ಕಂಟಕೇದ್ಧಯಾ ॥

ಯತ್ರ ಪ್ರಸ್ತುತೇನ ವರ್ಣ್ಯಮಾನೇನ ಅಭಿಮತಮನ್ಯತ್ಪ್ರಸ್ತುತಂ ದ್ಯೋತ್ಯತೇ ತತ್ರ ಪ್ರಸ್ತುತಾಂಕುರಾಲಂಕಾರಃ. ಉತ್ತರಾರ್ಧಮುದಾಹರಣಮ್. ಇಹ ಪ್ರಿಯ... ಮೇನ ಸಾಕಂ ಉದ್ಯಾನೇ ವಿಹರಂತೀ ಕಾಚಿತ್ ಭೃಂಗಂ ಪ್ರತ್ಯೇವಾಹ... ವಾಚ್ಯಾರ್ಥಸ್ಯ ಪ್ರಸ್ತುತತ್ವಮ್. ನ ಚ ಅನಾಮಂತ್ರಣೀಯಾಮಂತ್ರಣೇನ ವಾ... ಸಂಭವಾದಪ್ರಸ್ತುತಮೇವ ವಾಚ್ಯಮಿಹ ಸ್ವರೂಪಪ್ರಸ್ತುತಾವಗತಯೇ ನಿರ್ದಿಷ್ಟಮಿ... ವಾಚ್ಯಮ್. ಮೌಗ್ಧ್ಯಾದಿನಾ ಭೃಂಗಾದಾವಪ್ಯಾಮಂತ್ರಣಸ್ಯ ಲೋಕೇ ದರ್ಶನಾತ್. ಯಥಾ.

ಕಸ್ತ್ವಂ ಭೋಃ ಕಥಯಾಮಿ ದೈವಹತಕಂ ಮಾಂ ವಿದ್ಧಿ ಶಾಖೋಟಕಂ
ವೈರಾಗ್ಯಾದಿವ ವಕ್ಷಿ ಸಾಧು ವಿದಿತಂ ಕಸ್ಮಾದಿದಂ ಕಥ್ಯತೇ ।
ವಾಮೇನಾತ್ರ ವಟಸ್ತಮಧ್ವಗಜನಃ ಸರ್ವಾತ್ಮನಾ ಸೇವತೇ
ನ ಚ್ಛಾಯಾಪಿ ಪರೋಪಕಾರಕರಿಣೀ ಮಾರ್ಗಸ್ಥಿತಸ್ಯಾಪಿ ಮೇ ॥

ಇತ್ಯತ್ರ ಚೇತನಾಚೇತನಪ್ರಶ್ನೋತ್ತರವತ್ತಿರ್ಯಗಾಮಂತ್ರಣಂ ಅತ್ಯಂತಮ... ಸಂಭಾವಿತತ್ವಾಭಾವಾತ್. ಏವಂ ಪ್ರಸ್ತುತೇನ ವಾಚ್ಯಾರ್ಥೇನ ಭೃಂಗೋಪಾಲಂಭ... ರೂಪೇಣ ವಕ್ತ್ರ್ಯಾಃ ಕುಲವಧ್ವಾಃ ಸೌಂದರ್ಯಾಭಿಮಾನಶಾಲಿನ್ಯಾಃ ಕ್ರೂರ... ವೃತ್ತಿದುಷ್ಪ್ರಧರ್ಷಾಯಾಂ ಪರವನಿತಾಯಾಂ ವಿಟಸರ್ವಸ್ವಾಪಹರಣಸಂಕಲ್ಪದು... ದಾಯಾಂ ವೇಶ್ಯಾಯಾಂ ವಾ ಕಂಟಕಸಂಕುಲಕೇತಕೀಕಲ್ಪಾಯಾಂ ಪ್ರವರ್ತಮಾನ... ಪ್ರಿಯತಮಂ ಪ್ರತ್ಯುಪಾಲಂಭೋ ದ್ಯೋತ್ಯತೇ. ಯಥಾ ವಾ–

ಅನ್ಯಾಸು ತಾವದುಪಮರ್ದಸಹಾಸು ಭೃಂಗ
ಲೋಲಂ ವಿನೋದಯ ಮನಃ ಸುಮನೋಲತಾಸು ।
ಬಾಲಾಮಜಾತರಜಸಂ ಕಲಿಕಾಮಕಾಲೇ
ವ್ಯರ್ಥಂ ಕದರ್ಥಯಸಿ ಕಿಂ ನವಮಲ್ಲಿಕಾಯಾಃ ॥

ಅತ್ರಾಪ್ಯುದ್ಯಾನಮಧ್ಯೇ ಚರಂತಂ ಭೃಂಗಂ ಪ್ರತ್ಯುಪಾಲಂಭ ಇತಿ ವಾಚ್ಯಾರ್ಥಸ್ಯಾಪಿ ಪ್ರಸ್ತುತತ್ವಮ್. ಇದಂ ಚ ಪ್ರೌಢಾಂಗನಾಸು ಸತೀಷು ಬಾಲಿಕಾಂ ರತಯೇ ಕ್ಲೇಶಯತಿ ಕಾಮಿನಿ ಶೃಣ್ವತಿ ಕಸ್ಯಾಶ್ಚಿದ್ವಿದಗ್ಧಾಯಾಃ ವಚನಮಿತಿ ತಂ ಪ್ರತ್ಯುಪಾಲಂಭೋ ದ್ಯೋತ್ಯತೇ. ಯಥಾ ವಾ–

ಕೋಶದ್ವಂದ್ವಮಿಯಂ ದಧಾತಿ ನಲಿನೀ ಕಾದಂಬಚಂಚೂಕ್ಷತಂ.
ಧತ್ತೇ ಚೂತಲತಾ ನವಂ ಕಿಸಲಯಂ ಪುಂಸ್ಕೋಕಿಲಾಸ್ವಾದಿತಮ್।
ಇತ್ಯಾಕರ್ಣ್ಯ ಮಿಥಃ ಸಖೀಜನವಚಃ ಸಾ ದೀರ್ಘಿಕಾಯಾಸ್ತಟೇ
ಚೈಲಾಂತೇನ ತಿರೋದಧೇ ಸ್ತನತಟಂ ಬಿಂಬಾಧರಂ ಪಾಣಿನಾ ॥

ಅತ್ರ ಇಯಮಿತಿ ನಲಿನೀವ್ಯಕ್ತಿವಿಶೇಷನಿರ್ದೇಶೇನ ದೀರ್ಘಿಕಾಯಾಸ್ತಟ ಇತ್ಯನೇನ ಚ ವಾಚ್ಯಾರ್ಥಸ್ಯ ಪ್ರಸ್ತುತತ್ವಂ ಸ್ಪಷ್ಟಮ್. ಪ್ರಸ್ತುತಾಂತರದ್ಯೋತನಂ ಚ ಉತ್ತರಾರ್ಧೇ ಸ್ವಯಮೇವ ಕವಿನಾ ಆವಿಷ್ಕೃತಮ್.

ಸಂದರ್ಭಕ್ಕನುಗುಣವಾಗಿ ವರ್ಣಿಸಬೇಕಾಗಿರುವ ವಸ್ತುವಿನಿಂದ ಬೇರೊಂದು ಪ್ರಕೃತವಸ್ತುವನ್ನು ತಿಳಿಸುವುದೇ ಪ್ರಸ್ತುತಾಂಕುರವೆನಿಸುವುದು. "ದುಂಬಿಯೇ, ಮಾಲತೀಲತೆಯಿರುವಾಗ ಮುಳ್ಳಿರುವ ಕೇದಿಗೆಮರವನ್ನು ಏಕೆ ಆಶ್ರಯಿಸಿರುವೆ?" ಇಲ್ಲಿ ಪ್ರಿಯನೊಡನೆ ಉದ್ಯಾನವನದಲ್ಲಿ ವಿಹರಿಸುತ್ತಿರುವ ನಾಯಿಕೆಯೊಬ್ಬಳು ದುಂಬಿಯನ್ನು ನೋಡಿ ಹೇಳುತ್ತಿರುವುದರಿಂದ ವಾಚ್ಯಾರ್ಥವೇ ಇಲ್ಲಿ ಪ್ರಕೃತವೆನಿಸಿದೆ. 'ಹೇ ಭೃಂಗ' ಎಂದು ಇಲ್ಲಿ ಕರೆಯಲಿಕ್ಕೆ ಯೋಗ್ಯವಲ್ಲದ ದುಂಬಿಯನ್ನು ಕರೆದಿರುವುದರಿಂದ ವಾಚ್ಯಾರ್ಥವೇ ಸಂಭವಿಸದಿರುವ ಪ್ರಯುಕ್ತ ಪ್ರಕೃತವಾಚ್ಯಾರ್ಥವನ್ನು ತಿಳಿಯಲಿಕ್ಕಾಗಿ ಅಪ್ರಕೃತವೃತ್ತಾಂತವನ್ನು ವಾಚ್ಯವಾಗಿ ತಿಳಿಸಿದೆ ಎಂದು ಆಕ್ಷೇಪಿಸುವುದು ಸರಿಯಲ್ಲ ; ಯಾಕೆಂದರೆ ಮೂರ್ಖತನದಿಂದ ಒಬ್ಬನು ದುಂಬಿ ಮೊದಲಾದವನ್ನು ಆಮಂತ್ರಣಮಾಡುವುದಾಗಿ ಲೋಕದಲ್ಲಿ ಕಂಡುಬಂದಿದೆ. ''ಶಾಖೋಟಕವೆಂಬ ಮರವನ್ನು ನೋಡಿ ಪಥಿಕನೊಬ್ಬನು ''ನೀನು ಯಾರು ?" ಎಂದು ಪ್ರಶ್ನಿಸಲು ಅದು ''ಅಯ್ಯಾ, ಕೇಳು. ದೌರ್ಭಾಗ್ಯಶಾಲಿಯಾದ ನನ್ನನ್ನು ಶಾಖೋಟಕವೆಂದು ಕರೆಯುವರು.'' ಎಂದು ಉತ್ತರಿಸಿತು."ವೈರಾಗ್ಯದಿಂದ ಹೀಗೆ ಹೇಳುತ್ತಿರುವಂತೆ ಕಾಣುವುದು'' ಎಂದು ಆವನು ಕೇಳಲು ಅದಕ್ಕೆ ಆ ಮರವು ''ಹೌದು, ಚೆನ್ನಾಗಿ ಆಲೋಚಿಸಿದೆ,'' ಎಂದು ಹೇಳಲು ಆವನು ''ನಿನಗೆ ಏಕೆ ಹೀಗೆ ವೈರಾಗ್ಯ ಬಂದಿತು?" ಎಂದು ಕೇಳುವನು ಅದಕ್ಕೆ ಮರವು ''ಹೇಳುವೆನು ಕೇಳು, ಇಲ್ಲಿಯೇ ಎಡಭಾಗದಲ್ಲಿ ಒಂದು ವಟವೃಕ್ಷವಿದೆ. ಅದನ್ನು ಪಥಿಕರೆಲ್ಲರೂ ಆಶ್ರಯಿಸುತ್ತಾರೆ. ನಾನು ದಾರಿಯಲ್ಲಿಯೇ ಇದ್ದರೂ, ಬೇರೊಬ್ಬರಿಗೆ ಸೇವೆಮಾಡಿ ಸಂತೋಷಪಡಿಸಲು ಇಷ್ಟು ನೆರಳು ಕೂಡ ಇಲ್ಲ'' ಎಂದು ಉತ್ತರಿಸಿತು. ಇಲ್ಲಿ ಚೇತನನಾದ ಪಥಿಕನಿಗೂ ಅಚೇತನವಾದ ಮರಕ್ಕೂ ಪ್ರಶ್ನೋತ್ತರ

ಗಳು ನಡೆದಿರುವಂತೆ ತಿರ್ಯಗ್ಜಾತಿಯ ಪ್ರಾಣಿಗಳನ್ನು ಕರೆಯುವುದು ಅಸಂಭ
ವೇನೂ ಅಲ್ಲ. ಹೀಗೆ ಪ್ರಕೃತವೂ ವಾಚ್ಯವೂ ಆದ ದುಂಬಿಯು ನಿಂದೆಯಿಂದ ಸತ್ಕು
ಪ್ರಸೂತಿಯೂ, ಸೌಂದರ್ಯದ ಅಭಿಮಾನದಿಂದ ಕೂಡಿಯೂ ಇರುವ ಸ್ತ್ರೀಯೊಬ್ಬ
ಮುಳ್ಳುಗಳಿಂದ ಸುತ್ತುವರದ ಕೇದಿಗೆ ಪುಷ್ಪಕ್ಕೆ ಸದೃಶವೆನಿಸಿ, ಕ್ರೂರಜನರು ಮು
ಕೊಂಡದ್ದರಿಂದ ಸುಲಭವಾಗಿ ದೊರೆಯುವಂತಹ ಪರಿಸ್ತ್ರೀಯಲ್ಲಿಯೋ ಅಥ
ವಿಟಪುರುಷರ ಸರ್ವಸ್ವವನ್ನು ಅಪಹರಿಸುವ ಇಚ್ಛೆಯಿಂದ ಸುಲಭವಾಗಿ ದೊರ
ದಿರುವ ವೇಶ್ಯೆಯಲ್ಲೋ ಪ್ರವರ್ತಿಸುತ್ತಿರುವ ಪ್ರಿಯತಮನನ್ನು ನಿಂದಿಸುತ್ತಿರುವುದ
ತೋರುತ್ತದೆ.

"ಎಲೈ ದುಂಬಿಯೇ, ಹಿಂಸೆಯನ್ನು ಸಹಿಸಬಹುದಾದ ಬೇರೆ ಪುಷ್ಪಲತೆಗಳ
ನಿನ್ನ ಮನಸ್ಸನ್ನು ವಿನೋದಪಡಿಸಿಕೋ. ಆದರೆ ಮಲ್ಲಿಗೆಬಳ್ಳಿಯಲ್ಲಿ ಈಗ ತಾನೆ ಹು
ಇನ್ನೂ ಪರಾಗವನ್ನು ಹೊರಗೆಡಹದಿರುವ ಮೊಗ್ಗನ್ನು ಹೀಗೆ ಅಕಾಲದಲ್ಲಿ ಪ
ಪೀಡಿಸುತ್ತಿರವೆ ?" ಇಲ್ಲಿಯೂ ಸಹ ಉದ್ಯಾನದ ನಡುವೆ ಓಡಾಡುತ್ತಿರುವ ದುಂಬಿ
ನಿಂದೆಯೇ ಬಂದಿದೆ, ಇದೇ ಇಲ್ಲಿ ವಾಚ್ಯಾರ್ಥವೆನಿಸಿದ್ದು ಪ್ರಕೃತವೆನಿಸಿದೆ. ಪ್ರೌಢ
ಇರುವಾಗ ಬಾಲಿಕೆಯನ್ನು ಸುರತಕ್ಕಾಗಿ ಕ್ಲೇಶಪಡಿಸುವ ಕಾಮುಕನೊಬ್ಬನು ಕೇ
ವಂತೆ ಒಬ್ಬ ಚತುರೆಯಾದ ಸ್ತ್ರೀಯಳು ಹೇಳುವ ಮಾತಾದ್ದರಿಂದ ಅವನ ಬ
ನಿಂದೆಯು ಇಲ್ಲಿ ತೋರುತ್ತದ. "ಈ ಕನ್ನೈದಿಲೆಯ ಲತೆಯಲ್ಲಿ ಹಂಸದ ಕೊಕ್ಕಿನಿ
ಗಾಯಗೊಂಡ ಎರಡು ಮೊಗ್ಗುಗಳಿವೆ. ಈ ಮಾವಿನ ಮರದಲ್ಲಿ ಕೋಗಿಲೆಗಳು ನೆಕ್ಕಿದ
ಹೊಸಚಿಗುರು ಇದೆ. ಹೀಗೆ ಬಾವಿಯ ದಡದಲ್ಲಿ ಸಖಿಯರು ತಮ್ಮಲ್ಲಿ
ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿಸಿಕೊಂಡು ನಾಯಿಕೆಯು ಸ್ತನಪ್ರದೇಶವ
ಬಟ್ಟೆಯ ಸೆರಗಿನಿಂದಲೂ, ತುಟಿಯನ್ನು ಕೈಯಿಂದಲೂ ಮುಚ್ಚಿಕೊಂಡಳು." ಇ
'ಇಯಂ' ಎಂದು ಕನ್ನೈದಿಲೆಯ ಲತೆಯೊಂದನ್ನು ತಿಳಿಸಿದ್ದರಿಂದಲೂ, 'ಬಾವಿಯದ
ಯಲ್ಲಿ' ಎಂದು ಹೇಳಿದ್ದರಿಂದಲೂ ವಾಚ್ಯಾರ್ಥವೇ ಇಲ್ಲಿ ಪ್ರಕೃತವೆನಿಸಿದೆ. ಇದರಿ
ವ್ಯಂಗ್ಯವಾಗಿ ತೋರಿಬರುವ ನಾಯಿಕೆಗೆ ಸಂಬಂಧಿಸಿ ಪ್ರಕೃತವೃತ್ತಾಂತವನ್ನು ಕವಿಯ
ಉತ್ತರಾರ್ಧದಲ್ಲಿ ತಾನೇ ಪ್ರಕಟಗೊಳಿಸಿರುವನು.

ಅತ್ರ ಆದ್ಯೋದಾಹರಣಯೋಃ ಅನ್ಯಾಪದೇಶಧ್ವನಿಮಾಹ ಲೋಚನಕಾ
ಅಪ್ರಸ್ತುತಪ್ರಶಂಸಾಯಾಂ ವಾಚ್ಯಾರ್ಥೋಽಪ್ರಸ್ತುತತ್ವಾದವರ್ಣನೀಯ ಇತಿ. ತ
ಅಭಿಧಾಯಾಂ ಅಪರ್ಯವಸಿತಾಯಾಂ ತೇನ ಪ್ರಸ್ತುತಾರ್ಥವ್ಯಕ್ತಿರಲಂಕಾರಃ; ಇಹ
ವಾಚ್ಯಸ್ಯ ಪ್ರಸ್ತುತತ್ವೇನ ತತ್ಪ್ರಾಭಿಧಾಯಾಂ ಪರ್ಯವಸಿತಾಯಾಂ ಅರ್ಥಸೌಂದರ್ಯ
ಬಲೇನ ಅರ್ಥವ್ಯಕ್ತಿಃ ಧ್ವನಿರೇವೇತಿ. ವಸ್ತುತಸ್ತ್ವಯಮಪ್ಯಲಂಕಾರ ಏವ ನ ಧ್ವನಿ
ವ್ಯವಸ್ಥಾಪಿತಂ ಚಿತ್ರಮೀಮಾಂಸಾಯಾಮ್. ತೃತೀಯೋದಾಹರಣಸ್ಯ ತ್ವಲಂಕಾರತ್ವ
ಕಸ್ಯಾಪಿ ನ ವಿವಾದಃ. ಉಕ್ತಂ ಹಿ ಧ್ವನಿಕೃತಾ–

ಶಬ್ದಾರ್ಥಶಕ್ತ್ಯಾಕ್ಷಿಪ್ತೋಽಪಿ ವ್ಯಂಗ್ಯೋಽರ್ಥಃ ಕವಿನಾ ಪುನಃ ॥
ಯತ್ರಾವಿಷ್ಕ್ರಿಯತೇ ಸ್ವೋಕ್ತ್ಯಾ ಸಾನ್ಯೈವಾಲಂಕೃತಿರ್ಧ್ವನೇಃ ।

ಏತಾನ್ಯಪಿ ಸಾರೂಪ್ಯನಿಬಂಧನಾನ್ಯುದಾಹರಣಾನಿ, ಸಂಬಂಧಾಂತರನಿಬಂಧನಾನ್ಯಪಿ ಕಥಂಚಿದ್ವಾಚ್ಯವ್ಯಂಗ್ಯಯೋಃ ಪ್ರಸ್ತುತತ್ವನಿಬಂಧನೇನೋದಾಹರೇಯಾನಿ. ದಿಙ್ಮಾತ್ರಮುದಾಹ್ರಿಯತೇ,

ರಾತ್ರಿಃ ಶಿವಾ ಕಾಚನ ಸನ್ನಿಧತ್ತೇ ವಿಲೋಚನೇ ಜಾಗ್ರತಮಪ್ರಮತ್ತೇ ।
ಸಮಾನಧರ್ಮಾಯುವಯೋಃ ಸಕಾಶೇ ಸಖಾ ಭವಿಷ್ಯತ್ಯಚಿರೇಣ ಕಶ್ಚಿತ್ ॥

ಅತ್ರ ಶಿವಸಾರೂಪ್ಯಮಿವ ತದೇಕದೇಶತಯಾ ತದ್ವಾಚ್ಯಂ ಲಲಾಟಲೋಚನಮಪಿ ಶಿವರಾತ್ರಿಮಾಹಾತ್ಮ್ಯಪ್ರಯುಕ್ತತ್ವೇನ ವರ್ಣನೀಯಮಿತಿ ತನ್ಮುಖೇನ ಕೃತ್ಸ್ನಂ ಶಿವಸಾರೂಪ್ಯಂ ಗಮ್ಯಮ್. ಯಥಾವಾ–

ವಹಂತೀ ಸಿಂದೂರಂ ಪ್ರಬಲಕಬರೀಭಾರತಿಮಿರ
ತ್ವಿಷಾಂ ವೃಂದೈರ್ಬಂದೀಕೃತಮಿವ ನವೀನಾರ್ಕಕಿರಣಮ್ ।
ತನೋತು ಕ್ಷೇಮಂ ನಸ್ತವ ವದನಸೌಂದರ್ಯಲಹರೀ-
ಪರೀವಾಹಸ್ರೋತಸ್ಸರಣಿರಿವ ಸೀಮಂತಸರಣಿಃ ॥

ಅತ್ರ ವರ್ಣನೀಯತ್ವೇನ ಪ್ರಸ್ತುತಾಯಾಃ ಸೀಮಂತಸರಣೇರ್ವದನಸೌಂದರ್ಯಪರೀವಾಹತ್ವೋತ್ಪ್ರೇಕ್ಷಣೇನ ಪರಿಪೂರ್ಣತಟಾಕವತ್ಪರೀವಾಹಕಾರಣೀಭೂತಾ ಸ್ವಸ್ಥಾನೇ ಅಮಾಂತೀ ವದನಸೌಂದರ್ಯಸಮೃದ್ಧಿಃ ಪ್ರತೀಯತೇ. ಸಾಪಿ ವರ್ಣನೀಯತ್ವೇನ ಪ್ರಸ್ತುತೈವ. ಯಥಾ ವಾ-

ಅಂಗಾಸಂಗಿಮೃಣಾಲಕಾಂಡಮಯತೇ ಭೃಂಗವಲೀನಾಂ ರುಚಿಂ
ನಾಸಾಮೌಕ್ತಿಕಮಿಂದ್ರನೀಲಸರಣಿಂ ಶ್ವಾಸಾನಿಲಾದ್ಧಾಹತೇ ।
ದತ್ತೇಯಂ ಹಿಮವಾಲುಕಾಪಿ ಕುಚಯೋರ್ಧತ್ತೇ ಕ್ಷಣಂ ದೀಪತಾಂ
ತಪ್ತಾಯಃಪತಿತಾಂಬುವತ್ಕರತಲೇ ಧಾರಾಂಬು ಸಂಲೀಯತೇ ॥

ಅತ್ರ ನಾಯಿಕಾಯಾಃ ವಿರಹಾಸಹತ್ವಾತಿಶಯಪ್ರಕಟನಾಯ ಸಂತಾಪವತ್ಕಾರ್ಯಾಣಿ ಮೃಣಾಲಮಾಲಿನ್ಯಾದೀನ್ಯಪಿ ವರ್ಣನೀಯತ್ವೇನ ವಿವಕ್ಷಿತಾನೀತಿ ತನ್ಮುಖೇನ ಸಂತಾಪೋಽವಗಮ್ಯಃ. ಯತ್ರ ಕಾರ್ಯಮುಖೇನ ಕಾರಣಸ್ಯ ಅವಗತಿರಪಿ ಶ್ಲೋಕೇ ನಿಬದ್ಧಾ ನ ತತ್ರಾಯಮಲಂಕಾರಃ ಕಿಂತ್ವನುಮಾನಮೇವ. ಯಥಾ–

ಪರಿಮ್ಲಾನಂ ಪೀನಸ್ತನಜಘನಸಂಗಾದುಭಯತಃ
ತನೋರ್ಮಧ್ಯಸ್ಯಾಂತಃ ಪರಿಮಿಲನಮಪ್ರಾಪ್ಯ ಹರಿತಮ್ ।

ಇದಂ ವ್ಯಸ್ತನ್ಯಾಸಂ ಪ್ರಶಿಥಿಲಭುಜಾಕ್ಷೇಪವಲನೈಃ

ಕೃಶಾಂಗ್ಯಾಃ ಸಂತಾಪಂ ವದತಿ ನಲಿನೀಪತ್ರಶಯನಮ್ ॥

ಹಿಂದೆ ತಿಳಿಸಿದ ಮೊದಲನೆಯ ಎರಡು ಉದಾಹರಣಗಳಲ್ಲೂ ಬೇರೆಯವ[illegible] ಉದ್ದೇಶಿಸಿ ವ್ಯಂಗ್ಯವಾಗಿ ಬೋಧಿಸಲಾಗಿದೆ. ಧ್ವನ್ಯಾಲೋಕಕ್ಕೆ ಲೋಚನ[illegible] ವ್ಯಾಖ್ಯಾನವನ್ನು ಬರೆದಿರುವ ಅಭಿನವಗುಪ್ತರು ಹೇಳಿದ್ದಾರೆ : "ಅಪ್ರಸ್ತುತಪ್ರ[illegible] ಯಲ್ಲಿ ವ್ಯಾಚ್ಯಾರ್ಥವು ಅಪ್ರಕೃತವಾದ್ದರಿಂದ ಅದನ್ನು ವರ್ಣಿಸಬೇಕಾಗಿಲ್ಲ. ಅ[illegible] ಉದಾಹರಣದಲ್ಲಿಯೇ ಅಭಿಧಾವೃತ್ತಿಯು ವಿವಕ್ಷಿತವಾದ ಅರ್ಥವನ್ನು ಬೋ[illegible] ಮುಗಿಸದೇ ಇರುವಾಗ ಆ ಅರ್ಥದಿಂದ ಪ್ರಕೃತವಾದ ಬೇರೊಂದು ಅರ್ಥವ[illegible] ಪ್ರಕಟಿಸುವುದು ಧ್ವನಿ ಎನಿಸದೆ ಅಲಂಕಾರವೇ ಆಗುತ್ತದೆ. ಇಲ್ಲಿಯಾದ[illegible] ವಾಚ್ಯಾರ್ಥವೇ ಪ್ರಕೃತವೆನಿಸಿದ್ದರಿಂದ ಅಷ್ಟನ್ನು ತಿಳಿಸಿಯೇ ಅಭಿಧಾವೃತ್ತಿ[illegible] ಕೊನೆಗೊಳ್ಳಲು ಅರ್ಥಸೌಂದರ್ಯದ ಮೂಲಕವೇ ನಮಗಿಷ್ಟವಾದ ಬೇರೊ[illegible] ಅರ್ಥವು ತೋರುವ ಪ್ರಯುಕ್ತ ಆ ಅರ್ಥವು ಧ್ವನಿಯೇ ಆಗಬೇಕು." ಹೀಗೆ ಅ[illegible] ಹೇಳುತ್ತಾರೆ. ವಾಸ್ತವವಾಗಿ ವಿಮರ್ಶೆಮಾಡಿದರೆ "ಎರಡು ಉದಾಹರಣಗಳೂ [illegible] ಪ್ರಸ್ತುತಾಂಕುರಾಲಂಕಾರವೇ ಹೊರತು ಧ್ವನಿ ಎನಿಸಲಾರವು" ಎಂದು ಚಿತ್ರ[illegible] ಮಾಂಸೆಯಲ್ಲಿ ಸ್ಪಷ್ಟಪಡಿಸಿದೆ. ಮೂರನೆಯ ಉದಾಹರಣವಂತೂ ಪ್ರಸ್ತುತಾಂಕು[illegible] ಕಾರಕ್ಕೆ ಅನ್ವಯಿಸುವುದೆಂಬಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಧ್ವನಿಕಾರನೇ [illegible] ಹೇಳಿರುವನು, "ಶಬ್ದದ ಅಥವಾ ಅರ್ಥದ ಅಥವಾ ಶಬ್ದ ಅರ್ಥಗಳೆರಡರ [illegible] ಯಿಂದಲೂ ಸಹಜವಾಗಿ ವ್ಯಂಗ್ಯಾರ್ಥವು ತೋರುವುದಾದರೂ ಕವಿಯು ಅದ[illegible] ತನ್ನ ಪ್ರತಿಭೆಯಿಂದ ತನ್ನ ಮಾತಿನಲ್ಲಿಯೇ ಪ್ರಕಾಶಪಡಿಸಿದರೆ ಅದು ಅಲಂಕಾರ[illegible] ಧ್ವನಿಗಿಂತ ಬೇರೆಯೇ ಆಗುವುದು." ಹೀಗೆ ಅವನೇ ಹೇಳಿರುವುದರಿಂದ ಮೂ[illegible] ಉದಾಹರಣದಲ್ಲಿ ವ್ಯಂಗ್ಯಾರ್ಥವು ಕವಿ ಪ್ರತಿಭೆಯಿಂದ ಹೊರಬೀಳುವ ಪ್ರಯು[illegible] ಧ್ವನಿ ಎನಿಸದೆ ಅಲಂಕಾರವೇ ಆಗುತ್ತದೆ. ಪ್ರಕೃತಾರ್ಥದ ಸಾದೃಶ್ಯವು ಬೇರೊ[illegible] ಪ್ರಕೃತಾರ್ಥದಲ್ಲಿ ತೋರುವ ಕಡೆ ಪ್ರಸ್ತುತಾಂಕುರಾಲಂಕಾರವು ಸಂಭವಿಸು[illegible] ಬೇರೆ ಸಂಬಂಧವನ್ನು ಅವಲಂಬಿಸಿಯೂ ಅದು ಸಂಭವಿಸಬಹುದು. [illegible] ವಾಚ್ಯಾರ್ಥ ವ್ಯಂಗ್ಯಾರ್ಥ ಇವೆರಡೂ ಪ್ರಕೃತವೆನಿಸಿರುವ ಕಡೆಯೇ ಈ ಅಲಂಕಾ[illegible] ಸಂಭವಿಸುತ್ತದೆ. ದಿಕ್ಪ್ರದರ್ಶನಕ್ಕಾಗಿ ಒಂದೆರಡು ಉದಾಹರಣಗಳನ್ನು [illegible] ಕೊಡಲಾಗುವುದು.

ಎಲೈ ಕಣ್ಣುಗಳೇ, ಶಿವಮಯವೂ ಪ್ರಭಾವಶಾಲಿಯೂ ಆದ ರಾತ್ರಿಯೊ[illegible] ಸನ್ನಿಹಿತವಾಗಿದೆ. ಆದ್ದರಿಂದ ನೀವು ಎಚ್ಚರದಿಂದಿರಿ ; ಯಾಕೆಂದರೆ ನಿಮಗೆ ಸಮ[illegible]

ವಾದ ಧರ್ಮವುಳ್ಳ ನಿಮ್ಮ ಸ್ನೇಹಿತನೊಬ್ಬನು ಶೀಘ್ರದಲ್ಲಿಯೇ ನಿಮ್ಮ ಹತ್ತಿರಕ್ಕೆ ಬರುವನು." ಇಲ್ಲಿ ಭಕ್ತರು ಶಿವನನ್ನು ಧ್ಯಾನಿಸುತ್ತ ಶಿವನೊಡನೆ ಸಾರೂಪ್ಯವನ್ನು ಹೊಂದುವಂತೆ ಶಿವನ ಏಕದೇಶವೆನಿಸಿ ಈ ಶ್ಲೋಕದಲ್ಲಿ ತಿಳಿಸಿರುವ ಮೂರನೆಯ ಕಣ್ಣು ಇವರ ಮಧ್ಯದಲ್ಲಿಯೇ ನೆಲಸುವುದೆಂದು ಶಿವರಾತ್ರಿಯಲ್ಲಿ ಉಪವಾಸವಿದ್ದು ಜಾಗರಣ ಮಾಡಿದವರಿಗೆ ಶಿವರಾತ್ರಿ ಮಹಿಮೆಯಿಂದ ದೊರಕುವುದೆಂದು ವರ್ಣಿಸಬೇಕಾಗಿರುವ ಪ್ರಯುಕ್ತ ಆ ಮೂಲಕ ಭಕ್ತರೆಲ್ಲರೂ ಶಿವನೊಡನೆ ಸಂಪೂರ್ಣವಾಗಿ ಸಾರೂಪ್ಯವನ್ನು ಹೊಂದುವರೆಂಬ ಅರ್ಥವು ವ್ಯಂಗ್ಯವಾಗಿ ತೋರುವುದು. ಪಾರ್ವತಿಯ ಸೀಮಂತ ವನ್ನು ಹೀಗೆ ವರ್ಣಿಸಿದೆ. "ಮಹಾದೇವಿ, ದಟ್ಟವಾದ ಕೂದಲುಗಳೆಂಬ ಕಗ್ಗತ್ತಲೆಯ ಕಪ್ಪು ಬಣ್ಣದ ಕಾಂತಿಗಳ ಸಮೂಹದಿಂದ ಸೆರೆಸಿಕ್ಕಿದ ಬಾಲಸೂರ್ಯನ ಕಿರಣಗಳೋ ಏನೋ ಎಂಬಂತಿರುವ ಸಿಂಧೂರವನ್ನು ಹಚ್ಚಿಕೊಂಡ ನಿನ್ನ ಮುಖದ ಸೌಂದರ್ಯದ ಅಲೆಗಳನ್ನೊಳಗೊಂಡ ಪ್ರವಾಹಮಾರ್ಗವೋ ಏನೋ ಎಂಬಂತಿರುವ ನಿನ್ನ ಕೂದಲಿನ ನಡುವಿನ ಗೆರೆಯು ನಮಗೆ ಕ್ಷೇಮವನ್ನು ಕೊಡಲಿ," ಇಲ್ಲಿ ಸಂದರ್ಭಕ್ಕನುಗುಣ ವಾಗಿ ವರ್ಣಿಸಬೇಕಾದ್ದರಿಂದ ಪ್ರಕೃತವೆನಿಸಿದ ಸೀಮಂತದ ಗೆರೆಯನ್ನು ಮುಖ ಸೌಂದರ್ಯದ ಅಲೆಗಳನ್ನು ಹೊತ್ತಿರುವ ಪ್ರವಾಹವೆಂದು ಉತ್ಪ್ರೇಕ್ಷಿಸಲಾಗಿದೆ. ತುಂಬಿದ ಕೆರೆಯಂತೆ ನೀರು ಹೊರಗೆ ಬರಲು ಕಾರಣವೆನಿಸಿ ತಾನಿರುವ ಕಡೆಯಲ್ಲಿಯೇ ನಿಲ್ಲಲಾರದಂತಹ ಮುಖಸೌಂದರ್ಯದ ಸಮೃದ್ಧಿಯು ವ್ಯಂಗ್ಯವಾಗಿ ತೋರುತ್ತದೆ. ಅದೂ ಸಹ ಸಂದರ್ಭಕ್ಕನುಗುಣವಾದ್ದರಿಂದ ವರ್ಣಿಸಬೇಕಾದ ಪ್ರಕೃತವಿಷಯವೇ ಆಗಿದೆ. ಇದರಂತೆಯೇ ಬೇರೊಂದು ಉದಾಹರಣವನ್ನು ಈಗ ಕೊಡುತ್ತಾನೆ. ವಿರಹ ಸಂತಾಪವನ್ನು ಇಲ್ಲಿ ವರ್ಣಿಸಲಾಗಿದೆ. "ದೇಹದ ಅವಯವಗಳ ಮೇಲೆ ಇಟ್ಟಿರುವ ತಾವರೆಯ ದಂಟು ಹಚ್ಚು ಸಂತಾಪದಿಂದ ಮಲಿನಗೊಂಡು ದುಂಬಿಯಂತೆ ಕಪ್ಪಗಾಗಿದೆ. ಮೂಗಿನಲ್ಲಿರುವ ಮುತ್ತಿನ ಮಣಿಯು ಅತ್ಯುಷ್ಣವಾದ ನಿಟ್ಟುಸಿರಿನ ಮೂಲಕ ಇಂದ್ರನೀಲಮಣಿಯಂತೆ ಕಪ್ಪಗಾಗಿದೆ. ಹಾಗೆಯೇ ಕುಂಚಗಳಲ್ಲಿ ಇಡುವ ಕರ್ಪೂರವು ಒಂದು ಕ್ಷಣದಲ್ಲಿಯೇ ದೀಪವಾಗಿ ಉರಿಯತೊಡಗಿದೆ. ಹಾಗೆ ಕೈನಲ್ಲಿ ಹಾಕುವ ನೀರು ಕಾದ ಕಬ್ಬಿಣದ ಮೇಲೆ ಬೀಳುವ ನೀರಿನಂತೆ ಹೆಚ್ಚಿನ ತಾಪದಿಂದ ಇಂಗಿ ಹೋಗುತ್ತದೆ" ಇಲ್ಲಿ ನಾಯಿಕೆಯ ವಿರಹವು ಅಸಹ್ಯವಾಗಿತ್ತೆಂಬುದನ್ನು ತಿಳಿಸ ಲಿಕ್ಕಾಗಿ ಸಂತಾಪವನ್ನುಂಟುಮಾಡುವ ತಾವರೆದಂಟಿನ ಮಾಲಿನ್ಯ ಮೊದಲಾದವೂ ಸಹ ವರ್ಣನಾರ್ಹವೆನಿಸಿವೆ. ಅವುಗಳ ಮೂಲಕವೇ ನಾಯಿಕೆಯ ಸಂತಾಪವು ಎಷ್ಟೆಂಬುದನ್ನು ತಿಳಿಯಬೇಕಾಗಿದೆ. ಹೀಗೆ ಇಲ್ಲಿ ಕಾರಣದ ಮೂಲಕ ಕಾರ್ಯವನ್ನು ತಿಳಿಯಬೇಕಾಗಿದೆ. ಎಲ್ಲಿ ಕಾರ್ಯದ ಮೂಲಕ ಕಾರಣವನ್ನು ತಿಳಿಯಬಹುದೋ ಅಲ್ಲಿ ಈ ಅಲಂಕಾರವು ಸಂಭವಿಸುವುದಿಲ್ಲ; ಆದರೆ ಅಲ್ಲಿ ಅನುಮಾನಾಲಂಕಾರವನ್ನೇ ಹೇಳ ಬೇಕು. ರತ್ನಾವಳಿ ನಾಟಿಕೆಯಲ್ಲಿ ವಿರಹಾತುರಳಾದ ಸಾಗರಿಕೆಯ ಹಾಸಿಗೆಯ ಹತ್ತಿರಕ್ಕೆ

ಬಂದ ರಾಜನು ಹೇಳುವ ಮಾತಿದು : "ಕಮಲದ ಎಲೆಗಳ ಮೇಲೆ ಈಕೆ ಮ
ದಪ್ಪವಾದ ಸ್ತನಗಳು ಮತ್ತು ಸೊಂಟದ ಮುಂಭಾಗ ಇವುಗಳ ಸಂಬಂಧದಿಂದ
ಕಡೆಗಳಲ್ಲೂ ಹಾಸಿಗೆ ಬಾಡಿರುವುದು. ಹಾಗೆಯೇ ಕೃಶವಾದ ಸೊಂಟದ
ಒತ್ತಡವನ್ನು ಹೊಂದದೆಯೇ ಹಸುರು ಬಣ್ಣವು ಕಾಣುತ್ತಿರುವುದು. ಹಾಗೆಯೇ
ಕೃಶವಾದ ಸೊಂಟದ ಭುಜಗಳನ್ನು ಆ ಕಡೆಗೂ ಈ ಕಡೆಗೂ ಅಳ್ಳಾಡಿಸಿದ್ದ
ಹಾಸಿಗೆ ವಿರುಪೇರಾಗಿರುವುದು. ಇಂತಹ ಹಾಸಿಗೆಯಲ್ಲಿ ಆ ಕೃಶಾಂಗಿಯು ಮ
ವುದೂ ಅವಳ ವಿರಹಸಂತಾಪವನ್ನು ಊಹಿಸಿಕೊಡುತ್ತದೆ." ಇಲ್ಲಿ ಈ ಕಾ
ಮೂಲಕ ವಿರಹಸಂತಾಪವೆಂಬ ಕಾರಣವನ್ನು ಹೇಳಿರುವುದರಿಂದ ಇದು ಅನು
ಲಂಕಾರವೆನಿಸುವುದೇ ಹೊರತು ಪ್ರಸ್ತುತಾಂಕುರಾಲಂಕಾರವಾಗಲಾರದು.

## ೨೯. ಪರ್ಯಾಯೋಕ್ತಾಲಂಕಾರ

ಪರ್ಯಾಯೋಕ್ತಂ ತು ಗಮ್ಯಸ್ಯ ವಚೋ ಭಂಗ್ಯಂತರಾಶ್ರಯಮ್ ।
ನಮಸ್ತಸ್ಮೈ ಕೃತೌ ಯೇನ ಮುಧಾ ರಾಹುವಧೂಕುಚೌ

ಯದೇವ ಗಮ್ಯಂ ವಿವಕ್ಷಿತಂ ತಸ್ಯೈವ ಭಂಗ್ಯಂತರೇಣ ವಿವಕ್ಷಿತ ರೂ
ಚಾರುತರೇಣ ಕೇನಚಿದ್ರೂಪಾಂತರೇಣ ಅಭಿಧಾನಂ ಪರ್ಯಾಯೋ
ಉತ್ತರಾರ್ಧಮುದಾಹರಣಮ್. ಅತ್ರ ಭಗವಾನ್ವಾಸುದೇವಃ ಸ್ವಾಸಾ
ರೂಪೇಣ ಸ ಏವಾಭಿಹಿತಃ

ಲೋಕಂ ಪಶ್ಯತಿಯಸ್ಯಾಂಘ್ರಿಃ ಸ ಯಸ್ಯಾಂಘ್ರಿಂ ನ ಪಶ್ಯತಿ ।
ತಾಭ್ಯಾಮಪ್ಯಪರಿಚ್ಛೇದ್ಯಾ ವಿದ್ಯಾ ವಿಶ್ವಗುರೋಸ್ತವ ॥

ಅತ್ರ ಗೌತಮಃ ಪತಂಜಲಿಶ್ಚ ಸ್ವಾಸಾಧಾರಣರೂಪಾತಾಭ್ಯಾಂ
ರೂಪಾಂತರಾಭ್ಯಾಮಭಿಹಿತೌ. ಯಥಾ ವಾ–

ನಿವೇದ್ಯತಾಂ ಹಂತ ಸಮಾಪಯಂತೌ ಶಿರೀಶಕೋಶಮ್ರದಿಮಾ
ಸ

ಪಾದೌ ಕಿಯದ್ದೂರಮಿವತಾಕ್ಷಿಪ್ರಯಾಸೇ ನಿಧಿತ್ಸತೇ ತುಚ್ಛದಯಂ
ಮ

ಅತ್ರ ಕಿಯದ್ದೂರಂ ಜಿಗಮಿಷೇತಿ ಗಮ್ಯ ಏವಾರ್ಥೋ ರೂಪಾಂ
ಅಭಿಹಿತಃ. ಯಥಾ ವಾ–

ದೇವಂ ವಂದೇ ಜಲಧಿಶರಧಿಂ ದೇವತಾಸಾರ್ವಭೌಮಂ
ವ್ಯಾಸಪ್ರಷ್ಠಾ ಭುವನವಿದಿತಾ ಯಸ್ಯ ವಾಹಾಧಿವಾಹಾಃ ।
ಭೂಷಾ ಪೇಟೀ ಭುವನಮಧರಂ ಪುಷ್ಕರಂ ಪುಷ್ಪವಾಟೀ
ಶಾಟೀಪಾಲಾಃ ಶತಮುಖಾಶ್ಚಂದನದ್ರುರ್ಮನೋಭೂಃ ॥

ಅತ್ರ ಯಸ್ಯ ವೇದಾ ವಾಹಾಃ ಭುಜಂಗಮಾ ಭೂಷಣಾನೀತ್ಯಾದಿ ತತ್ತದ್ವಾಕ್ಯಾರ್ಥವ್ಯವಸ್ಥಿತೌ ವೇದತ್ವಾದ್ಯಾಕಾರೇಣ ಅವಗಮ್ಯಾ ಏವ ವೇದಾದಯೋ ವ್ಯಾಸಪ್ರಮುಖವಿನೇಯತ್ವಾದ್ಯಾಕಾರೇಣ ಅಭಿಹಿತಾಃ ; ಪರಂ ತು ದೇವತಾ ಸಾರ್ವಭೌಮತ್ವಸ್ಫುಟೀಕರಣಾಯ ವಿಶೇಷಣವಿಶೇಷ್ಯಭಾವವ್ಯತ್ಯಾಸೇನ ಪ್ರತಿ ಪಾದಿತಾಃ.

ತಿಳಿಸಬೇಕಾಗಿರುವ ವ್ಯಂಗ್ಯಾರ್ಥವನ್ನು ಅದಕ್ಕಿಂತ ಬೇರೊಂದು ಸುಂದರವಾದ ರೀತಿಯಲ್ಲಿ ತಿಳಿಸುವುದೇ ಪರ್ಯಾಯೋಕ್ತವೆನಿಸುವುದು. "ಯಾವನು ರಾಹುವಿನ ಹೆಂಡತಿಯ ಕುಚಗಳನ್ನು ವ್ಯರ್ಥಗೊಳಿಸಿದನೋ ಅಂತಹ ವಾಸುದೇವನಿಗೆ ಈ ನಮಸ್ಕಾರವು ಸಲ್ಲಲಿ" ಈ ಉದಾಹರಣದಲ್ಲಿ ಪೂಜ್ಯ ವಾಸುದೇವನು ತನ್ನದೇ ಆದ ಅಸಾಧಾರಣವಾದ ಆಕಾರದಿಂದ ವ್ಯಂಗ್ಯವಾಗಿ ತೋರಬೇಕಾಗಿದೆ. ಆದರೆ ಅದೇ ಅಂಶವನ್ನು "ರಾಹುವಿನ ಹೆಂಡತಿಯ ಕುಚಗಳನ್ನು ವ್ಯರ್ಥಗೊಳಿಸಿದನು" ಎಂಬ ಬೇರೊಂದು ರೀತಿಯಿಂದ ವಾಚ್ಯವಾಗಿ ತಿಳಿಸಿದೆ. "ವಿಶ್ವಕ್ಕೂ ಗುರುವೆನಿಸಿದ ಪರಮಾತ್ಮನ ಜ್ಞಾನವು ಯಾವನ ಪಾದವು ಲೋಕವನ್ನು ನೋಡುತ್ತದೆಯೋ ಯಾವನ ಪಾದವನ್ನು ಲೋಕವು ನೋಡಲಾರದೋ ಅಂತಹ ಅಕ್ಷಪಾದ, ಪತಂಜಲಿ ಎಂಬ ಇಬ್ಬರು ವ್ಯಕ್ತಿಗಳಿಂದಲೂ ತಿಳಿಯಲಿಕ್ಕಾಗದಿರುವಂತಹದು." ಇಲ್ಲಿ ಗೌತಮ ಮತ್ತು ಪತಂಜಲಿ ಈ ಇಬ್ಬರು ಮಹರ್ಷಿಗಳು ತಮ್ಮ ಅಸಾಧಾರಣ ಸ್ಥಿತಿಯಲ್ಲಿ ವ್ಯಂಗ್ಯವೆನಿಸಿದ್ದು ಬೇರೊಂದು ರೀತಿಯಿಂದ ಅವರನ್ನೇ ಇಲ್ಲಿ ವಾಚ್ಯವಾಗಿ ತಿಳಿಸಿದೆ.

ನಳನಿಗೆ ದಮಯಂತಿ ಹೇಳುವ ಮಾತಿದು. "ನಿನ್ನ ನಿರ್ದಯವಾದ ಈ ಮನಸ್ಸು ಪಾದರೀಹೂವಿನ ಮೊಗ್ಗಿಗೆ ಇರುವ ಹೆಮ್ಮೆಯನ್ನೂ ಸಹ ಕೊನೆಗಾಣಿಸು ವಂತಹ ನಿನ್ನ ಪಾದಗಳಿಗೆ ಎಷ್ಟು ದೂರದವರೆಗೆ ಪ್ರಯಾಣಮಾಡಿಸಲು ಇಚ್ಛಿಸಿದೆ ? ಅಯ್ಯೋ ! ಎಂತಹ ಕಷ್ಟ ಪರಿಸ್ಥಿತಿಯುಂಟಾಯಿತು ?" ಇಲ್ಲಿ ನಿನಗೆ ಎಷ್ಟು ದೂರದ ವರೆಗೆ ಹೋಗಲು ಇಚ್ಛೆ ಇದೆ ? ಎಂಬುದೇ ವ್ಯಂಗ್ಯವಾಗಿ ತೋರುವ ಅರ್ಥ. ಇದನ್ನೇ ಬೇರೊಂದು ರೀತಿಯಲ್ಲಿ ತಿಳಿಸಲಾಗಿದೆ. "ಸಮುದ್ರವೇ ಯಾವನಿಗೆ ತ್ರಿಪುರಸಂಹಾರ ಕ್ಕಾಗಿ ಬತ್ತಳಿಕೆಯಾಗಿತ್ತೋ, ಲೋಕವಿಖ್ಯಾತರಾದ ವ್ಯಾಸ ಮೊದಲಾದ ಮಹರ್ಷಿಗಳು ಯಾವನ ವಾಹನವೆನಿಸಿದ್ದ ವೇದಗಳನ್ನು ಹೊತ್ತುಕೊಂಡಿದ್ದರೋ ಹಾಗೆಯೇ ಸರ್ಪ ಭೂಷಣನಾದ್ದರಿಂದ ಯಾವನಿಗೆ ಪಾತಾಳಲೋಕವೇ ಆಭರಣವಾಗಿತ್ತೋ, ಆಕಾಶ ಪುಷ್ಪನೆನಿಸಿದ ಚಂದ್ರನ ಉತ್ಪತ್ತಿಗೆ ಮೂಲಸ್ಥಾನವೆನಿಸಿದ್ದರಿಂದ ಆಕಾಶವೇ ಯಾವನಿಗೆ

ಉದ್ಯಾನವನವಾಗಿತ್ತೋ, ಇಂದ್ರನೇ ಮೊದಲಾದವರು ದಿಗಂಬರನಾದ ಯಾ
ದಿಕ್ಕುಗಳೆಂಬ ವಸ್ತ್ರವನ್ನು ರಕ್ಷಿಸುತ್ತಿದ್ದರೋ ಯಾವನಿಗೆ ಮನ್ಮಥನೇ ಶ್ರೀಗಂ
ಸ್ಥಾನದಲ್ಲಿರುವ ಭಸ್ಮವೆನಿಸಿದ್ದನೋ ಅಂತಹ ಮಹಾದೇವನನ್ನು ವಂದಿಸುತ್ತೇ
ಇಲ್ಲಿ 'ಯಾವನಿಗೆ ವೇದಗಳೇ ವಾಹನಗಳೋ, ಸರ್ಪಗಳೇ ಆಭರಣಗಳೋ'. ಎಂಬ
ಮೊದಲಾದ ಅಂಶಗಳು ಆಯಾಯ ವ್ಯಾಕ್ಯಾರ್ಥಗಳಿಂದ ವಿವಕ್ಷಿತವೆನಿಸಿವೆ. ವ
ಪಾತಾಳ ಆಕಾಶ ಮೊದಲಾದವುಗಳನ್ನು ಆಯಾ ರೂಪಗಳಿಂದಲೇ ತಿಳಿಸಬೇಕಾಗಿದ್ದ
ವ್ಯಾಸಮಹರ್ಷಿಯೇ ಮೊದಲಾದವರು ಅವುಗಳನ್ನು ಶಿರಸ್ಸಿನಿಂದ ವಹಿಸಿದರು
ಬೇರೆ ರೀತಿಯಿಂದ ವಾಚ್ಯವಾಗಿ ತಿಳಿಸಲಾಗಿದೆ. ಆದರೂ ಈಶ್ವರನು ಸರ್ವಶ್ರೇ
ನೆಂಬುದನ್ನು ಸ್ಪಷ್ಟಪಡಿಸಲಿಕ್ಕಾಗಿ ಇಲ್ಲಿ ವಿಶೇಷಣವಿಶೇಷ್ಯಭಾವವನ್ನು ವ್ಯತ್ಯಾಸ
ತಿಳಿಸಲಾಗಿದೆ. ಇಲ್ಲಿ ವ್ಯಾಸಾದಿಗಳನ್ನು ವಿಶೇಷ್ಯವನ್ನಾಗಿಯೂ ವಾಹಾದಿಗಳ
ವಿಶೇಷಣಗಳನ್ನಾಗಿಯೂ ಹೇಳಲಾಗಿದೆ. ವೇದಾದಿಗಳು ವಿಶೇಷ್ಯವೂ ವ್ಯಾಸಾದಿ
ವಿಶೇಷಣವೂ ಆಗಬೇಕಾಗಿತ್ತು. ಆದರೆ ಅದನ್ನು ಇಲ್ಲಿ ವ್ಯತ್ಯಾಸ ಮಾಡಿ ವ್ಯಾಸ
ಮಹರ್ಷಿಗಳು ವೇದಗಳನ್ನು ಹೊತ್ತಿದ್ದರೆಂದು ಹೇಳಿದ್ದರಿಂದ ಶಿವನು ದೇವ
ಸಾರ್ವಭೌಮನೆಂಬುದು ಸ್ಫುಟವಾಯಿತು.

ಅತ್ರ ಅಲಂಕಾರಸರ್ವಸ್ವಕೃತಾಪಿ ಪರ್ಯಾಯೋಕ್ತಸ್ಯ ಸಂಪ್ರದಾಯ
ಸಿದ್ಧಮಿದಮೇವ ಲಕ್ಷಣಂ ಅಂಗೀಕೃತಂ ಗಮ್ಯಸ್ಯಾಪಿ ಭಂಗ್ಯಂತರೇಣಾಭಿಧಾ
ಪರ್ಯಾಯೋಕ್ತಮಿತಿ.

> ಚಕ್ರಾಭಿಘಾತಪ್ರಸಭಾಜ್ಞಯೈವ ಚಕಾರ ಯೋ ರಾಹುವಧೂಜನಸ್ಯ ।
> ಆಲಿಂಗನೋದ್ದಾಮವಿಲಾಸವಂಧ್ಯಂ ರತೋತ್ಸವಂ ಚುಂಬನ ಮಾತ್ರಶೇಷಮ್ ।

ಇತಿ ಪ್ರಾಚೀನಂ ತದುದಾಹರಣಂ ತ್ವನ್ಯಥಾ ಯೋಜಿತಂ. ರಾಹುವಧೂಜನ
ವಿಶಿಷ್ಟೇನ ರತೋತ್ಸವೇನ ರಾಹುಶಿರಶ್ಛೇದಃ ಕಾರಣರೂಪೋ ಗಮ್ಯತ ಇ
ಏವಂ ಚ ಗಮ್ಯಸ್ಯೈವಾಭಿಧಾನಮಿತಿ ಲಕ್ಷಣಸ್ಯಾನುಪಪತ್ತಿಮಾಶಂಕ್ಯಾಹ ಯದ್ಗ
ತಸ್ಯೈವಾಭಿಧಾನಂ ಲಕ್ಷಣೇ ವಿವಕ್ಷಿತಮಿತಿ ಲಕ್ಷಣಂ ಕ್ಲಿಷ್ಟಗತ್ಯಾ ಯೋಜಿತಮ್
ಲೋಚನಕೃತಾ ಪರ್ಯಾಯೋಕ್ತಂ ಯದನ್ಯೇನ ಪ್ರಕಾರೇಣಾಭಿಧೀಯ
ಇತೀದಮೇವ ಲಕ್ಷಣಮಂಗೀಕೃತ್ಯ ತದುದಾಹರಣೇ ಚ ಕಾರ್ಯೇಣ ಶಬ್ದಾಭಿ
ಕಾರಣಂ ವ್ಯಂಗ್ಯಂ ಪ್ರದರ್ಶ್ಯ ತತ್ರ ಲಕ್ಷಣಂ ಲಕ್ಷ್ಯನಾಮ ಚ ಕ್ಲಿಷ್ಟ
ಯೋಜಿತಮ್. ವಾಚ್ಯಾದನ್ಯೇನ ಪ್ರಕಾರೇಣ ವ್ಯಂಗ್ಯೇನೋಪಲಕ್ಷಿತಂ ಸ
ಧೀಯತೇ ತತ್ಪರ್ಯಾಯೇಣ ಪ್ರಕಾರಾಂತರೇಣ ವ್ಯಂಗ್ಯೇನೋಪಲಕ್ಷಿತಂ ಉಕ್ತ
ಸರ್ವೋಽಯಂ ಕ್ಲೇಶಃ ಕಿಮರ್ಥ ಇತಿ ನ ವಿದ್ಮಃ. ಪ್ರದರ್ಶಿತಾನಿ
ಗಮ್ಯಸ್ಯೈವ ರೂಪಾಂತರೇಣಾಭಿಧಾನೇ ಬಹೂನ್ಯುದಾಹರಣಾನಿ,

ಘಾತಪ್ರಸಭಾಜ್ಞಯೈವೇತಿ ಪ್ರಾಚೀನೋದಾಹರಣಮಪಿ ಸ್ವರೂಪೇಣ ಗಮ್ಯಂ ಭಗವತೋ ರೂಪಾಂತರೇಣಾಭಿಧಾನಸತ್ತ್ವಾಸ್ಸುಯೋಜಮೇವ. ಯತ್ತು ತತ್ರ ರಾಹುಶಿರಶ್ಛೇದಾವಗಮನಂ ತತ್ರ ಪ್ರಾಗುಕ್ತರೀತ್ಯಾ ಪ್ರಸ್ತುತಾಂಕುರ ಏವ. ಪ್ರಸ್ತುತೇನ ಚ ರಾಹೋಃ ಶಿರೋಮಾತ್ರಾವಶೇಷೇಣ ಆಲಿಂಗನವಂಧ್ಯತ್ವಾದ್ಯಾಪಾದನರೂಪೇ ವಾಚ್ಯೇ ಭಗವತೋ ರೂಪಾಂತರೇ ಉಪಪಾದಿತೇ ತೇನ ಭಗವತಃ ಸ್ವರೂಪೇಣ ಅವಗಮನಂ ಪರ್ಯಾಯೋಕ್ತಸ್ಯ ವಿಷಯಃ.

ಪರ್ಯಾಯೋಕ್ತಂ ತದಪ್ಯಾಹುರ್ಯದ್ವ್ಯಾಜೇನೇಷ್ಟಸಾಧನಂ ।
ಯಾಮಿ ಚೂತಲತಾಂ ದ್ರಷ್ಟುಂ ಯುವಾಭ್ಯಾಮಾಸ್ಯತಾಮಿಹ ॥೬೮॥

ಅತ್ರ ನಾಯಿಕಾಂ ನಾಯಕೇನ ಸಂಗಮಯ್ಯ ಚೂತಲತಾದರ್ಶನವ್ಯಾಜೇನ ನಿರ್ಗಚ್ಛಂತ್ಯಾ ಸಖ್ಯಾ ತತ್ಸ್ವಾಚ್ಛಂದ್ಯಸಂಪಾದನರೂಪೇಷ್ಟಸಾಧನಂ ಪರ್ಯಾಯೋಕ್ತಂ. ಯಥಾ ವಾ–

ದೇಹಿ ಮತ್ಕಂದುಕಂ ರಾಧೇ ಪರಿಧಾ ನನಿಗೂಹಿತಮ್ ।
ಇತಿ ವಿಸ್ರಂಸಯನ್ನೀವೀಂ ತಸ್ಯಾಃ ಕೃಷ್ಣೋ ಮುದೇಽಸ್ತು ವಃ ॥

ಪೂರ್ವತ್ರ ಪರೇಷ್ಟಸಾಧನಮತ್ರ ಕಂದುಕಶೋಧನಾರ್ಥಂ ನೀವೀವಿಸ್ರಂಸನ ವ್ಯಾಜೇನ ಸ್ವೇಷ್ಟಸಾಧನಮಿತಿ ಭೇದಃ.

ಇಲ್ಲಿ ಅಲಂಕಾರಸರ್ವಸ್ವಕಾರನೂ ಸಹ ಪರ್ಯಾಯೋಕ್ತಾಲಂಕಾರಕ್ಕೆ ಹಿಂದಿನ ಪರಂಪರೆಯಿಂದ ಬಂದಿರುವ ಈ ಲಕ್ಷಣವನ್ನೇ ಅಂಗೀಕರಿಸಿ "ವ್ಯಂಗ್ಯಾರ್ಥವನ್ನೂ ಸಹ ಬೇರೊಂದು ರೀತಿಯಿಂದ ವಾಚ್ಯವಾಗಿ ತಿಳಿಸುವುದೇ ಪರ್ಯಾಯೋಕ್ತ"ವೆಂದು ತಿಳಿಸಿದ್ದಾನೆ. ಆದರೆ ಪರ್ಯಾಯೋಕ್ತಕ್ಕೆ ಪ್ರಾಚೀನರು ಕೊಟ್ಟಿರುವ ಉದಾಹರಣವನ್ನು ಮಾತ್ರ ಅವನು ಬೇರೆ ರೀತಿಯಲ್ಲಿ ಅನ್ವಯಿಸಿಕೊಂಡಿರುವನು. ಆ ಉದಾಹರಣವು ಹೀಗಿದೆ—''ಯಾವನು ಸುದರ್ಶನ ಚಕ್ರಕ್ಕೆ ಬಲಾತ್ಕಾರವಾದ ಆಜ್ಞೆಯನ್ನಿತ್ತು ಅ ಮೂಲಕ ರಾಹುವಿನ ಹೆಂಡತಿಗೆ ಸುರತೋತ್ಸವವನ್ನು ಆಲಿಂಗನದ ವಿಶೇಷ ವಿನೋದವಿಲ್ಲದೆ ಚುಂಬನವಷ್ಟರಲ್ಲಿಯೇ ಉಳಿಯುವಂತೆ ಮಾಡಿದನೋ" ಎಂಬಲ್ಲಿ ರಾಹುವಿನ ಹೆಂಡತಿಗೆ ಆಲಿಂಗನಕ್ಕೆ ಅವಕಾಶವಿಲ್ಲದೆ, ಚುಂಬನವಷ್ಟರಲ್ಲಿಯೇ ರತೋತ್ಸವವನ್ನು ಅನುಭವಿಸುವಂತೆ ಮಾಡಿದನೆಂದು ಹೇಳಿದ್ದರಿಂದ ಇದಕ್ಕೆ ಕಾರಣ ವೆನಿಸಿದ ರಾಹುವಿನ ಶಿರಚ್ಛೇದವು ವ್ಯಂಗ್ಯವಾಗಿ ತೋರುತ್ತದೆ ಎಂದು ಪ್ರಾಚೀನರ ಉದಾಹರಣವನ್ನು ಅನ್ವಯಿಸಿಕೊಂಡಿರುವನು. ಹೀಗೆ ಅನ್ವಯಿಸಿದ್ದರಿಂದ ಪರ್ಯಾಯೋಕ್ತಕ್ಕೆ ಅವನು ಹೇಳಿರುವ ಲಕ್ಷಣವೇ ಇಲ್ಲಿ ಹೊಂದದೇ ಹೋದೀತೆಂದು ಆಶಂಕಿಸಿ ''ಯಾವುದು ವ್ಯಂಗ್ಯವೋ ಅದನ್ನೇ ಇಲ್ಲಿ ತಿಳಿಸಬೇಕು'' ಎಂಬ ಅಂಶವೇ ಲಕ್ಷಣದಲ್ಲಿ ವಿವಕ್ಷಿತವಾಗಿದೆ ಎಂದು ಸಮಾಧಾನಮಾಡಿ ಆ ಲಕ್ಷಣವನ್ನು ಬಹಳ ಕ್ಲೇಶದಿಂದ ಹೊಂದಿಸಿಕೊಂಡಿರುವನು. ಲೋಚನಕಾರನೂ ಸಹ "ಬೇರೆ ರೀತಿ

ಯಿಂದ ವ್ಯಂಗ್ಯವನ್ನು ತಿಳಿಸುವುದೇ ಪರ್ಯಾಯೋಕ್ತ''ವೆಂದು ಇದರ ಲಕ್ಷಣವನ್ನು ಅಂಗೀಕರಿಸಿ ಅದರ ಉದಾಹರಣದಲ್ಲಿಯಾದರೋ "ಶಬ್ದದಿಂದ ವಾಚ್ಯವಾಗಿ ತಿಳಿಸಿರುವ ಕಾರ್ಯದಿಂದ ಕಾರಣವು ವ್ಯಂಗ್ಯವಾಗಿ ತೋರುವುದೆಂದು ತಿಳಿ ಅಲ್ಲಿ ಲಕ್ಷ್ಯಲಕ್ಷಣಸಮನ್ವಯವನ್ನು ಬಹಳ ಕ್ಲೇಶದಿಂದ ಸಾಧಿಸಿರುವನು. ವಾಚ್ಯ ಕ್ಕಿಂತಲೂ ಬೇರೆ ರೀತಿ ಎನಿಸಿದ ವ್ಯಂಗ್ಯವಾದ ಅರ್ಥದಿಂದ ಕೂಡಿಕೊಂಡಿರು ಯಾವುದನ್ನು ಶಬ್ದದಿಂದ ತಿಳಿಸಬೇಕೋ ಅದನ್ನೇ ಬೇರೊಂದು ವ್ಯಂಗ್ಯವಾ ರೀತಿಯಿಂದ ತಿಳಿಸುವುದೇ ಪರ್ಯಾಯೋಕ್ತವೆಂದು ಲೋಚನಕಾರನು ಲಕ್ಷಣವನ್ನು ಅನ್ವಯಿಸಿಕೊಂಡಿರುವನು. ಇಷ್ಟೆಲ್ಲಾ ಕ್ಲೇಶವನ್ನು ಅವನು ಏಕೆ ಅನುಭವಿಸಿದನು ತಿಳಿಯದಾಗಿದೆ. ವ್ಯಂಗ್ಯವಾದ ಅರ್ಥವನ್ನೇ ಬೇರೆ ರೀತಿಯಲ್ಲಿ ವಾಚ್ಯವಾಗಿ ತಿಳಿ ವುದಕ್ಕೆ ಅನೇಕ ಉದಾಹರಣಗಳನ್ನು ಈಗಾಗಲೇ ತೋರಿಸಿಯಾಗಿದೆ. 'ಚಕ್ರಾಭಿಘಾ ಎಂಬ ಪ್ರಾಚೀನೋದಾಹರಣದಲ್ಲೂ ಸಹ ಅಲಂಕಾರಸರ್ವಸ್ವಕಾರನು ಭಾವಿಸು ಲಕ್ಷಣವನ್ನು ಹೊಂದಿಸಲು ಯಾವ ಕ್ಲೇಶವೂ ಬೇಕಾಗಿಲ್ಲ. ಅಲ್ಲಿ ಕೃಷ್ಣ ಭಗವಂತನೆಂಬ ರೂಪದಲ್ಲಿ ವ್ಯಂಗ್ಯವೆನಿಸಿದ್ದು ರಾಹುವಿನ ಹೆಂಡತಿಗೆ ಆಲಿಂಗ ಅವಕಾಶವಿಲ್ಲದಂತೆ ಮಾಡಿದನೆಂಬ ರೂಪದಿಂದ ಅವನನ್ನೇ ಅಲ್ಲಿ ವಾಚ್ಯವಾ ತಿಳಿಸಿರುವುದರಿಂದ ಅಲ್ಲಿ ಲಕ್ಷಣಸಮನ್ವಯಕ್ಕೆ ಕ್ಲೇಶಪಡಬೇಕಾಗಿಯೇ ಇಲ್ಲ. ಹಾಗೆ ತಿಳಿಸಿದ್ದರಿಂದ ರಾಹುವಿನ ವಧವಾಯಿತೆಂದು ತಿಳಿಯುವುದೇ ಪ್ರಸ್ತುತಾ ವೆನಿಸುತ್ತದೆ. ರಾಹುವಿಗೆ ಶಿರಸ್ಸಷ್ಟೇ ಉಳಿದಿದ್ದರಿಂದ ಅವನ ಹೆಂಡತಿಗೆ ಆಲಿಂಗ ವ್ಯರ್ಥವಾಯಿತೆಂಬ ವಾಚ್ಯಾರ್ಥವನ್ನು ಭಗವಂತನಿಗೆ ಸಂಬಂಧಿಸಿದಂತೆ ಬೇರೆ ರೀತಿ ತಿಳಿಸಿರಲು ಅದರಿಂದ ವಾಸುದೇವನನ್ನು ಭಗವಂತನೆಂಬ ರೂಪದಿಂದ ತಿಳಿಯು ಪರ್ಯಾಯೋಕ್ತವೆನಿಸುತ್ತದೆ.

ಯಾವುದೋ ನೆಪದಿಂದ ಇಷ್ಟವಾದ ಕಾರ್ಯವನ್ನು ಸಾಧಿಸುವುದೂ ಪರ್ಯಾಯೋಕ್ತವೆನಿಸುತ್ತದೆ. "ನಾನು ಎಳೆ ಮಾವಿನ ಸಸಿಯನ್ನು ನೋಡ ಹೋಗುವೆನು. ನೀವು ಇಲ್ಲಿಯೇ ಇರಿ'' ಎಂದು ಹೇಳುತ್ತ ನಾಯಿಕೆಯನ್ನು ನಾಯಕನೊಡನೆ ಸೇರಿಸಿ ಆ ಮಾವಿನ ಸಸಿಯನ್ನು ನೋಡುವ ನೆಪದಿಂದ ಹೊ ಸಖಿಯು ಅವರಿಗೆ ಸ್ವತಂತ್ರವಾಗಿ ವಿನೋದಿಸಲು ಅವಕಾಶವನ್ನು ಕಲ್ಪಿಸಿ ಅ ಇಷ್ಟಾರ್ಥವನ್ನು ನೆರವೇರಿಸಿದಳು. ಹೀಗೆ ತಿಳಿಸುವುದರಲ್ಲೂ ಒಂದು ಬಗೆ ಸ್ವಾರಸ್ಯವಿರುವುದರಿಂದ ಇದೂ ಪರ್ಯಾಯೋಕ್ತವೆನಿಸಿದೆ. "ಎಲೈ ರಾಧೆ, ನೀ ಉಟ್ಟಿರುವ ಬಟ್ಟೆಯಿಂದ ಮುಚ್ಚಿಕೊಂಡಿರುವ ನನ್ನ ಚೆಂಡನ್ನು ಕೊಡು. ಎಂ ಹೇಳುತ್ತ ಆಕೆಯ ಸೀರೆಯ ಗಂಟನ್ನು ಬಿಚ್ಚುವ ಕೃಷ್ಣನು ನಿಮ್ಮನ್ನು ಸಂತೋ ಪಡಿಸಲಿ.'' ಚೆಂಡನ್ನು ಹುಡುಕುವ ನೆಪದಿಂದ ಕೃಷ್ಣನು ಇಲ್ಲಿ ಸೀರೆಯ ಗಂಟ ಬಿಚ್ಚುವನು. ಹಿಂದಿನದರಲ್ಲಿ ಬೇರೆಯವರ ಇಷ್ಟವನ್ನು ಸಲ್ಲಿಸುವ ಬಗೆಯ

ತಿಳಿಸಿದೆ. ಇಲ್ಲಿಯಾದರೋ ಚೆಂಡನ್ನು ಹುಡಕಲಿಕ್ಕಾಗಿ ಸೀರೆಯ ಗಂಟನ್ನು ಬಿಚ್ಚುವ ನೆಪದಿಂದ ಕೃಷ್ಣನು ತನ್ನ ಇಷ್ಟವನ್ನೇ ಸಾಧಿಸಿಕೊಂಡನೆಂಬುದಾಗಿ ತಿಂಸಲಾಗಿದೆ.

## ೩೦. ವ್ಯಾಜಸ್ತುತ್ಯಲಂಕಾರ

ಉಕ್ತಿರ್ವ್ಯಾಜಸ್ತುತಿರ್ನಿಂದಾಸ್ತುತಿಭ್ಯಾಂ ಸ್ತುತಿನಿಂದಯೋಃ
ಕಃ ಸ್ವರ್ಧುನಿ ವಿವೇಕಸ್ತೇ ಪಾಪಿನೋ ನಯಸೇ ದಿವಮ್ ॥೬೯॥

ಸಾಧು ದೂತಿ ಪುನಃ ಸಾಧು ಸಾಧು ಕರ್ತವ್ಯಂ ಕಿಮತಃ ಪರಮ್ ।
ಯನ್ಮದರ್ಥೇ ವಿಲೂನಾಸಿ ದಂತೈರಪಿ ನಖೈರಪಿ ॥೭೦॥

ನಿಂದಯಾ ಸ್ತುತೇಃ ಸ್ತುತ್ಯಾ ನಿಂದಾಯಾ ವಾ ಅವಗಮನಂ ವ್ಯಾಜಸ್ತುತಿಃ. ಕಃ ಸ್ವರ್ಧುನೀತ್ಯುದಾಹರಣೇ ವಿವೇಕೋನಾಸ್ತೀತಿ ನಿಂದಾವ್ಯಾಜೇನ ಗಂಗಾ ಸುಕೃತಿವದೇವ ಮಹಾಪಾತಕಾದಿಕೃತವತೋಽಪಿ ಸ್ವರ್ಗಂ ನಯತೀತಿ ವ್ಯಾಜರೂಪಯಾ ನಿಂದಯಾ ತತ್ಪ್ರಭಾವಾತಿಶಯಸ್ತುತಿಃ. ಸಾಧು ದೂತೀತ್ಯುದಾಹರಣೇ ಮದರ್ಥೇ ಮಹಾಂತಂ ಕ್ಲೇಶಮನುಭೂತವತ್ಯಸೀತಿ ವ್ಯಾಜರೂಪಯಾ ಸ್ತುತ್ಯಾ "ಮದರ್ಥಂ ನ ಗತಾಸಿ ; ಕಿಂ ತು ರಂತುಮೇವ ಗತಾಸಿ, ಧಿಕ್ತ್ವಾಂ ದೂತಿಕಾಧರ್ಮವಿರುದ್ಧಕಾರಿಣೀಮ್'' ಇತಿ ನಿಂದಾ ಅವಗಮ್ಯತೇ. ಯಥಾ ವಾ—

ಕಸ್ತೇ ಶೌರ್ಯಮದೋ ಯೋದ್ಧುಂ ತ್ವಯ್ಯೇಕಂ ಸಪ್ತಿಮಾಸ್ಥಿತೇ ।
ಸಪ್ತಸಪ್ತಿಸಮಾರೂಢಾ ಭವಂತಿ ಪರಿಪಂಥಿನಃ ॥

ಅರ್ಧಂ ದಾನವವೈರಿಣಾ ಗಿರಿಜಯಾಪ್ಯರ್ಧಂ ಶಿವಸ್ಯಾಹೃತಂ
ದೇವೇತ್ಥಂ ಜಗತೀತಲೇ ಸ್ಮರಹರಾಭಾವೇ ಸಮುನ್ಮೀಲತಿ ।
ಗಂಗಾ ಸಾಗರಮಂಬರಂ ಶಶಿಕಲಾ ನಾಗಾಧಿಪಃ ಕ್ಷ್ಮಾತಲಂ
ಸರ್ವಜ್ಞತ್ವಮಧೀಶ್ವರತ್ವಮಗಮತ್ತ್ವಾಂ ಮಾಂ ಚ ಭಿಕ್ಷಾಟನಮ್॥

ಅತ್ರಾದ್ಯೋದಾಹರಣೇ ಸಪ್ತಸಪ್ತಿಪದಗತಶ್ಲೇಷಮೂಲನಿಂದಾವ್ಯಾಜೇನ ಸ್ತುತಿರ್ವ್ಯಜ್ಯತೇ. ದ್ವಿತೀಯೋದಾಹರಣೇ ಸರ್ವಜ್ಞಃ ಸರ್ವೇಶ್ವರೋಽಸೀತಿ ರಾಜ್ಞಃ ಸ್ತುತ್ಯಾ ವ್ಯಾಜರೂಪಯಾ ಮದೀಯಮೈದುಷ್ಯಾದಿದಾರಿದ್ರ್ಯಾದಿ ಸರ್ವಂ ಜಾನನ್ನಪಿ ಒಹಂಪ್ರದಾನೇನ ರಕ್ಷಿತುಂ ಶಕ್ತೋಽಪಿ ಮಹ್ಯಂ ಕಿಮಪಿ ನ ದದಾಸೀತಿ ನಿಂದಾ ವ್ಯಜ್ಯತೇ. ಸರ್ವಮಿದಂ ನಿಂದಾಸ್ತುತ್ಯೋಃ ಏಕವಿಷಯತ್ವೇ ಉದಾಹರಣಮ್ ಭಿನ್ನವಿಷಯತ್ವೇ ನಿಂದಯಾ ಸ್ತುತ್ಯಭಿವ್ಯಕ್ತಿರ್ಯಥಾ—

ಕಸ್ತ್ವಂ ವಾನರ ರಾಮರಾಜ್ಯಭವನೇ ಲೇಖಾರ್ಥಸಂವಾಹಕೋ
ಯಾತಃ ಕುತ್ರ ಪುರಾಗತಃ ಸ ಹನುಮಾನ್ನಿರ್ದಗ್ಧಲಂಕಾಪುರಃ ।

ಬದ್ಧೋ ರಾಕ್ಷಸಸೂನುನೇತಿ ಕಪಿಭಿಃ ಸಂತಾಡಿತೋ ಭರ್ತ್ಸಿತಃ
ಸ ವ್ರೀಡಾತ್ತಪರಾಭವೋ ವನಮೃಗಃ ಕುತ್ರೇತಿ ನ ಜ್ಞಾಯತೇ ॥

ಅತ್ರ ಹನುಮನ್ನಿಂದಯಾ ಇತರವಾನರಸ್ತುತ್ಯಭಿವ್ಯಕ್ತಿಃ.

ನಿಂದೆಯಿಂದ ಸ್ತುತಿಯನ್ನೂ ಸ್ತುತಿಯಿಂದ ನಿಂದೆಯನ್ನೂ ತಿಳಿಸುವದೇ ವ್ಯಾ[illegible] ಸ್ತುತಿ ಎನಿಸುವುದು. "ದೇವಗಂಗೆಯೇ, ನಿನ್ನ ವಿವೇಕವೆಂತಹುದು ? ಯಾ[illegible] ಪಾಪಿಗಳನ್ನೂ ನೀನು ಸ್ವರ್ಗಕ್ಕೆ ಒಯ್ಯುವೆ.'' "ಎಲೈ ಸೇವಕಿಯೇ. ನೀನು ಒಳ್ಳೆ[illegible] ಕೆಲಸವನ್ನೇ ಮಾಡಿದೆ ? ಇದಕ್ಕಿಂತ ಬೇರೆ ಮಾಡಬೇಕಾದ್ದು ಏನಿದೆ ? ನೀ[illegible] ನನಗಾಗಿ ಹಲ್ಲುಗಳಿಂದಲೂ ಉಗುರುಗಳಿಂದಲೂ ಕಡಿಸಿಕೊಂಡಿರುವೆ ?'' ಮೊ[illegible] ನೆಯ ಉದಾಹರಣದಲ್ಲಿ ಗಂಗೆಗೆ ವಿವೇಕವಿಲ್ಲವೆಂದು ಹೇಳುತ್ತ 'ಆಕೆಯು ಪುಣ್ಯ[illegible] ರಂತೆ ಮಹಾಪಾಪಿಗಳನ್ನೂ ಸಹ ಸ್ವರ್ಗಕ್ಕೆ ಒಯ್ಯುವಳು' ಎಂದು ನಿಂದಿಸುವ [illegible] ದಿಂದ ಪಾಪಿಗಳನ್ನೂ ಸಹ ಉದ್ಧರಿಸುವ ಆಕೆಯ ಪ್ರಭಾವ ಎಷ್ಟು ಹೆಚ್ಚಿನ[illegible] ಸ್ತುತಿಯು ತಿಳಿದುಬರುತ್ತದೆ. ಎರಡನೆಯ ಉದಾಹರಣದಲ್ಲಿ "ನನಗಾಗಿ [illegible] ಬಹಳ ಕ್ಲೇಶವನ್ನು ಅನುಭವಿಸಿದೆ" ಎಂದು ಸ್ತುತಿಸುವ ನೆಪದಿಂದ "ನೀನು ನನಗೋಸ್ಕ[illegible] ಅವನ ಬಳಿಗೆ ಹೋಗಲಿಲ್ಲ : ಆದರೆ ಅವನೊಡನೆ ರಮಿಸಲಿಕ್ಕಾಗಿಯೇ ಅ[illegible] ಹೋಗಿದ್ದೆ. ನೀನು ಸೇವಕಿ ಎನಿಸಲರ್ಹಳಲ್ಲ, ನಿನ್ನ ಧರ್ಮಕ್ಕೆ ವಿರುದ್ಧವಾಗ[illegible] ಚರಿಸಿರುವೆ" ಎಂಬ ನಿಂದೆಯು ತಿಳಿದುಬರುತ್ತದೆ.

ರಾಜನಿಗೆ ಕವಿಯು ಹೇಳುವ ಮಾತಿದು. ''ನೀನು ಯುದ್ಧದಲ್ಲಿ ಒಂದು ಕುದು[illegible] ಯನ್ನು ಏರಿದರೆ ನಿನ್ನ ಶತ್ರುಗಳು ಏಳು ಕುದುರೆಗಳನ್ನು ಏರುವರು ? [illegible] ಶೌರ್ಯದ ಮದವೆಂತಹುದು." ಒಬ್ಬ ರಾಜನಿಗೆ ಭಿಕ್ಷುಕನೊಬ್ಬನು ಹೇಳುವ ಮಾತು[illegible] "ಸ್ವಾಮಿ, ಶಿವನ ಅರ್ಧದೇಹವನ್ನು ವಿಷ್ಣುವೂ ಮತ್ತೆ ಅರ್ಧವನ್ನು ಪಾರ್ವತಿಯು[illegible] ಅಪಹರಿಸಿದರು. ಹೀಗೆ ಜಗತ್ತಿನಲ್ಲಿ ಶಿವನೇ ಇಲ್ಲದಂತಾಗಲು ಅವನನ್ನು ಆಶ್ರಯಿಸಿ[illegible] ಗಂಗೆಯು ಸಾಗರಕ್ಕೂ, ಚಂದ್ರಕಲೆಯು ಆಕಾಶಕ್ಕೂ ಸರ್ಪರಾಜನು ಪಾತಾಳ[illegible] ಹೋಗಿ ಸೇರಿಕೊಂಡರು. ಅದರಂತೆಯೇ ಅವನಲ್ಲಿದ್ದ ಸರ್ವಜ್ಞತ್ವ. ಈಶ್ವರತ್ವ [illegible] ನಿನ್ನಲ್ಲಿ ಸೇರಿಕೊಂಡವು. ಆದರೆ ಭಿಕ್ಷಾಟನ ಲೀಲೆಯು ನನ್ನಲ್ಲಿಗೆ ಬಂದು ಸೇರಿ[illegible] ಮೊದಲನೆಯ ಉದಾಹರಣದಲ್ಲಿ ಸಪ್ತಸಪ್ತಿ ಎಂಬ ಪದದಲ್ಲಿ ಪ್ರಯೋಗಿಸ[illegible] ಶ್ಲೇಷದ ಮೂಲಕ ತೋರುವ ರಾಜನ ನಿಂದೆಯು ನೆಪದಿಂದ ಅವನ ಸ್ತೋತ್ರವು [illegible] ವಾಗುತ್ತದೆ. "ನೀನು ಒಂದು ಕುದುರೆಯನ್ನೇರಿ ಯುದ್ಧ ಮಾಡಿದರೆ ಶತ್ರು[illegible] ಏಳು ಕುದುರೆಗಳನ್ನೇರಿ ಯುದ್ಧವನ್ನು ಮಾಡುವರು. ಇದರಲ್ಲಿ ನಿನ್ನ ಶೌರ್[illegible] ವೇನಿದೆ ?" ಎಂದು ಹೇಳಿದ್ದರಿಂದ ರಾಜನ ನಿಂದೆಯು ತೋರುತ್ತದೆ. ಆದರೆ [illegible] ಯುದ್ಧಕ್ಕೆ ನಿಂತಾಗ ನಿನ್ನ ಶತ್ರುಗಳೆಲ್ಲರೂ ಸೂರ್ಯಮಂಡಲವನ್ನು ಭೇದಿಸಿಕೊಂ[illegible]

ಸ್ವರ್ಗಕ್ಕೆ ಹೋಗುತ್ತಾರೆ ಎಂಬ ಎರಡನೆಯ ಅರ್ಥವು ತೋರಿ ಅದರಿಂದ ರಾಜನ ಪರಾಕ್ರಮ ಅದ್ಭುತವಾದ್ದೆಂಡು ಅವನ ಸ್ತುತಿಯೇ ತಿಳಿದುಬರುತ್ತದೆ. ಎರಡನೆಯ ಉದಾಹರಣದಲ್ಲಿ "ನೀನು ಸರ್ವಜ್ಞನೂ ಸರ್ವೇಶ್ವರನೂ ಆಗಿರುವೆ" ಎಂದು ರಾಜನ ಸ್ತುತಿಯ ನೆಪದಿಂದ "ನನ್ನ ಪಾಂಡಿತ್ಯ, ದಾರಿದ್ರ್ಯ ಮೊದಲಾದವೆಲ್ಲವನ್ನೂ ನೀನು ತಿಳಿದಿದ್ದರೂ, ಹೆಚ್ಚು ಹಣವನ್ನು ಕೊಟ್ಟು ನನ್ನನ್ನು ಸಂರಕ್ಷಿಸಲು ಶಕ್ತನಾಗಿದ್ದರೂ ನನಗೆ ಏನನ್ನೂ ಕೊಡುತ್ತಿಲ್ಲ"ವೆಂದು ರಾಜನ ನಿಂದೆಯು ತೋರಿಬರುತ್ತದೆ. ಇವೆಲ್ಲ ಉದಾಹರಣಗಳಲ್ಲೂ ನಿಂದೆ ಮತ್ತು ಸ್ತುತಿ ಇವೆರಡೂ ಒಬ್ಬ ವ್ಯಕ್ತಿಗೇ ಅನ್ವಯಿಸುತ್ತವೆ. ಒಬ್ಬನ ನಿಂದೆಯಿಂದ ಅವನ ಸ್ತುತಿಯೇ ತಿಳಿಯುತ್ತದೆ. ಒಬ್ಬನ ನಿಂದೆಯಿಂದ ಬೇರೊಬ್ಬನ ಸ್ತುತಿಯು ತಿಳಿದು ಬರುವುದಾದರೂ ಇದೇ ವ್ಯಾಜಸ್ತುತಿಯನ್ನೇ ಹೇಳಬಹುದು. ಅದನ್ನು ಹೀಗೆ ಉದಾಹರಿಸಬಹುದು : "ಕೋತಿಯೇ ನೀನು ಯಾರು ?" ಎಂದು ಅಂಗದನನ್ನು ರಾಕ್ಷಸನೊಬ್ಬನು ಕೇಳಿದನು. "ರಾಮನೆಂಬ ರಾಜನ ಮನೆಯ ದೂತನು ನಾನು" ಎಂದು ಅವನು ಉತ್ತರಿಸಿದನು. "ಹಿಂದೆ ಬಂದು ಲಂಕೆಯನ್ನು ನಾಶಮಾಡಿ ಹೋದ ಹನುಮಂತನು ಎಲ್ಲಿ ಹೋದನು ? ಎಂದು ಮತ್ತೆ ರಾಕ್ಷಸನು ಕೇಳಿದನು. "ರಾಕ್ಷಸನ ಮಗನಾದ ಇಂದ್ರಜಿತ್ತುವಿನ ಕೈಗೆ ಅವನು ಸಿಕ್ಕಿಬಿದ್ದಿದ್ದನೆಂಬ ಕಾರಣದಿಂದ ಕಪಿಗಳು ಅವನನ್ನು ಗದರಿಸಿ ಬೆದರಿಸಿದರು. ಆ ನಾಚಿಕೆಯಿಂದ ಅವಮಾನಗೊಂಡು ಆ ಕೋತಿಯು ಎಲ್ಲಿಗೆ ಹೋಯಿತೋ ತಿಳಿಯದಾಗಿದೆ" ಇಲ್ಲಿ ಹನುಮಂತನ ನಿಂದೆಯಿಂದ ಬೇರೆ ಕೋತಿಗಳ ಸ್ತುತಿಯು ತಿಳಿದುಬರುತ್ತದೆ.

ಸ್ತುತ್ಯಾ ನಿಂದಾಭಿವ್ಯಕ್ತಿರ್ಯಥಾ—

ಯದ್ವಕ್ತ್ರಂ ಮುಹುರೀಕ್ಷಸೇನ ಧನಿನಾಂ ಬ್ರೂಷೇ ನ ಚಾಟೂನ್ಮೃಷಾ
ನೈಷಾಂ ಗರ್ವವಚಃ ಶೃಣೋಷಿ ನ ಚ ತಾನ್ಪ್ರತ್ಯಾಶಯಾ ಧಾವಸಿ ।
ಕಾಲೇ ಬಾಲತೃಣಾನಿ ಖಾದಸಿ ಪರಂ ನಿದ್ರಾಸಿ ನಿದ್ರಾಗಮೇ
ತನ್ಮೇ ಬ್ರೂಹಿ ಕುರಂಗ ಕುತ್ರ ಭವತಾ ಕಿಂ ನಾಮ ತಪ್ತಂ ತಪಃ ॥

ಅತ್ರ ಹರಿಣಸ್ತುತ್ಯಾ ರಾಜಸೇವಾನಿರ್ವಿಣ್ಣಸ್ಯ ಆತ್ಮನೋ ನಿಂದಾ ಅಭಿವ್ಯಜ್ಯತೇ. ಅಯಮಪ್ರಸ್ತುತಪ್ರಶಂಸಾವಿಷಯ ಇತ್ಯಲಂಕಾರಸರ್ವಸ್ವಕಾರಃ.ತೇನ ಹಿ ಸಾರೂಪ್ಯನಿಬಂಧನಾಪ್ರಸ್ತುತಪ್ರಶಂಸೋದಾಹರಣಾಂತರಂ ವೈಧರ್ಮ್ಯೇಣಾಪಿ ದೃಶ್ಯತೇ. ಯಥಾ—

ಧನ್ಯಾಃ ಖಲು ವನೇ ವಾತಾಃ ಕಾಲ್ಹಾರಾಃ ಸುಖಶೀತಲಾಃ ।
ರಾಮಮಿಂದೀವರಶ್ಯಾಮಂ ಯೇ ಸ್ಪೃಶಂತ್ಯನಿವಾರಿತಾಃ ॥

ಅತ್ರ ವಾತಾ ಧನ್ಯಾ ಇತ್ಯಪ್ರಸ್ತುತಾರ್ಥಾದಹಮಧನ್ಯ ಇತಿ ವೈಧರ್ಮ್ಯೇಣ ಪ್ರಸ್ತುತೋಽರ್ಥಃ ಪ್ರತೀಯತ ಇತಿ ವ್ಯುತ್ಪಾದಿತಮ್. ಇಯಮೇವ ಅಪ್ರಸ್ತುತ

ಪ್ರಶಂಸಾನ ಕಾರ್ಯಕಾರಣನಿಬಂಧನೇತಿ ದಂಡೀಯದಾಹ—

ಅಪ್ರಸ್ತುತಪ್ರಶಂಸಾ ಸ್ಯಾದಪ್ರಕಾಂಡೇ ತು ಯಾ ಸ್ತುತಿಃ ಃ |
ಸುಖಂ ಜೀವಂತಿ ಹರಿಣಾ ವನೇಷ್ವಪರಸೇವಿನಃ ||

ಅರ್ಥೈರಯತ್ನಸುಲಭೈರ್ಜಲದರ್ಭಾಂಕುರಾದಿಭಿಃ |
ಸೇಯಮಪ್ರಸ್ತುತೈವಾತ್ರ ಮೃಗವೃತ್ತಿಃ ಪ್ರಶಸ್ಯತೇ ||

ರಾಜಾನುವರ್ತನಕ್ಲೇಶನಿರ್ವಿಣ್ಣೇನ ಮನಸ್ವಿನಾ | ಇತಿ.

ವಸ್ತುತಸ್ತ್ವತ್ರ ವ್ಯಾಜಸ್ತುತಿರಿತ್ಯೇವ ಯುಕ್ತಂ, ಸ್ತುತ್ಯಾ ನಿಂದಾಭಿವ್ಯಕ್ತಿ ಪ್ರಸ್ತುತಪ್ರಶಂಸಾತೋ ವೈಚಿತ್ರ್ಯವಿಶೇಷಸದ್ಭಾವಾತ್. ಅನ್ಯಥಾ ಪ್ರಸಿದ್ಧ ಸ್ತುತ್ಯುದಾಹರಣೇಷ್ವಪ್ರಸ್ತುತಾಭ್ಯಾಂ ನಿಂದಾಸ್ತುತಿಭ್ಯಾಂ ಪ್ರಸ್ತುತೇ ಸ್ತುತಿ ಗಮ್ಯೇತೇ ಇತ್ಯೇತಾವತಾ ವ್ಯಾಜಸ್ತುತಿಮಾತ್ರಂ ಅಪ್ರಸ್ತುತಪ್ರಶಂಸಾ ಸ್ಯಾತ್. ಚ ಅನಯಾ ಪ್ರಕ್ರಿಯಯಾ ಯತ್ರ ಅನ್ಯಗತಸ್ತುತಿವಿವಕ್ಷಯಾ ಅನ್ಯಸ್ತುತಿಃ ಕ್ರಿ ತತ್ರಾಪಿ ವ್ಯಾಜಸ್ತುತಿರೇವ. ಅನ್ಯಸ್ತುತಿವ್ಯಾಜೇನ ತದನ್ಯಸ್ತುತಿರಿತ್ಯರ್ಥಾನು ಸದ್ಭಾವಾತ್. ಯಥಾ—

ಶಿಖರಿಣಿ ಕ್ವ ನು ನಾಮ ಕಿಯಚ್ಚಿರಂ ಕಿಮಾಭಿಧಾನಮಸಾವಕರೋತ್ತಪಃ |
ತರುಣಿ ಯೇನ ತವಾಧರಪಾಟಲಂ ದಶತಿ ಬಿಂಬಫಲಂ ಶುಕಶಾವಕಃ ||

ಅತ್ರ ಶುಕಶಾವಕಸ್ತುತ್ಯಾ ನಾಯಿಕಾಧರಸೌಭಾಗ್ಯಾತಿಶಯಸ್ತುತಿರ್ವ್ಯಜ್ಯತೇ

ಒಬ್ಬನ ಸ್ತುತಿಯಿಂದ ಬೇರೊಬ್ಬನ ನಿಂದೆಯು ತೋರುವುದನ್ನು ಉದಾಹರಿಸು "ಎಲೈ ಜಿಂಕೆಯೇ, ನೀನು ಧನಿಕರ ಮುಖಗಳನ್ನು ಪದೇಪದೇ ನೋಡುತ್ತಿಲ್ಲ. ಬಳಿಗೆ ಆಸೆಯಿಂದ ಓಡುತ್ತಿಲ್ಲ. ಆಯಾ ಕಾಲದಲ್ಲಿ ಸಿಕ್ಕುವ ಎಳೆಯ ಚಿಗುರು ತಿನ್ನುತ್ತಿರುವೆ. ನಿದ್ದೆ ಬಂದಾಗ ಮಲಗುವೆ, ಇಷ್ಟೊಂದು ನಿಯಮಬದ್ಧ ಜೀವನಕ್ಕಾಗಿ ನೀನು ಯಾವ ತಪಸ್ಸಾಚರಿಸುವೆ. ಅದನ್ನು ನನಗೆ ಹೇಳು" ಜಿಂಕೆಯ ಸ್ತುತಿಯಿಂದ ರಾಜನ ಸೇವೆಯಲ್ಲಿ ನೊಂದಿದವನೊಬ್ಬನ ನಿಂದೆಯು ಬರುತ್ತದೆ. ಇದೇ ಅಪ್ರಸ್ತುತಪ್ರಶಂಸೆಯ ಉದಾಹರಣವೆನಿಸುವುದೆಂದು ಸರ್ವಸ್ವಕಾರನು ಹೇಳುತ್ತಾನೆ. ಆದ್ದರಿಂದ ಸಾರೂಪ್ಯಮೂಲಕವಾದ ಪ್ರಶಂಸೆಗೆ ವೈಧರ್ಮ್ಯದಿಂದ ಉದಾಹರಣವುಂಟೆಂಬುದು ಕಂಡುಬರುತ್ತದೆ. ಕಲ್ಹಾರಪುಷ್ಪದ ಮೇಲೆ ಬೀಸಿ ಬಂದು ನಮ್ಮನ್ನು ಸುಖಪಡಿಸುವ ಗಾಳಿಗಳೇ ಧನ್ಯವಾದವು ; ಯಾಕೆಂದರೆ ಅವು ಕನ್ನೈದಿಲೆಯಂತೆ ವರ್ಣವುಳ್ಳ ರಾಮನಿಗೆ ಯಾರ ಹಂಗೂ ಇಲ್ಲದೆ ನೇರವಾಗಿ ಮುಟ್ಟುತ್ತ ಇಲ್ಲಿ 'ಗಾಳಿಗಳೇ ಧನ್ಯವೆನಿಸಿವೆ' ಎಂಬ ಅಪ್ರಕೃತಾರ್ಥದಿಂದ ನಾನು ನೆಂಬ ಪ್ರಕೃತಾರ್ಥವು ವೈಧರ್ಮ್ಯದಿಂದ ತೋರುವುದಾಗಿ ಅಲಂಕಾರಸರ್ವಸ್ವ

ವಿವರಿಸಿರುವನು. ಇದೇ ಅಪ್ರಸ್ತುತಪ್ರಶಂಸೆಯು ಕಾರ್ಯಕಾರಣಭಾವವನ್ನವಲಂಬಿ ಸದೆಯೇ ಬರುವುದೆಂದು ದಂಡಿಯು ಹೇಳಿದ್ದಾನೆ. "ಸಮುಚಿತವಾದ ಪ್ರಕರಣವಿಲ್ಲ ದಿದ್ದರೂ ಎಲ್ಲಿ ಸ್ತುತಿಯು ತೋರುವುದೋ ಅಲ್ಲಿ ಅಪ್ರಸ್ತುತಪ್ರಶಂಸೆ ಇರುವುದು: ಕಾಡಿನಲ್ಲಿ ಬೇರೆಯವರನ್ನಾಶ್ರಯಿಸದಿರುವ ಜಿಂಕೆಗಳು ಸುಖವಾಗಿ ಬದುಕುವುವು; ಯಾಕೆಂದರೆ ಅಲ್ಲಿ ಅನಾಯಾಸವಾಗಿ ನೀರು, ದರ್ಭೆ, ಚಿಗುರು ಮೊದಲಾದವನ್ನು ತಿಂದು ಅವು ಸುಖವಾಗಿರುವುವು. ಹೀಗೆ ರಾಜನನ್ನು ಅನುಸರಿಸುವ ಕ್ಲೇಶದಿಂದ ದುಃಖಕ್ಕೀಡಾಗಿರುವ ಧೀರನೊಬ್ಬನು ಅಪ್ರಕೃತವಾದ ಮೃಗಜೀವನವನ್ನು ಪ್ರಶಂಸಿಸು ತ್ತಾನೆ''. ಹೀಗೆ ದಂಡಿಯು ಅಪ್ರಸ್ತುತಪ್ರಶಂಸೆಗೆ ಲಕ್ಷಣವನ್ನು ಕೊಟ್ಟು ಉದಾ ಹರಿಸಿರುವನು. ಇಲ್ಲಿ ಜಿಂಕೆಯನ್ನು ಸ್ತುತಿಸುವುದರಲ್ಲಿ ಆರಂಭಿಸಿದ ಅರ್ಥವು ಅಪ್ರಕೃತವಾದ್ದರಿಂದ ಅದು ಪ್ರಕೃತಕ್ಕನ್ವಯಿಸುವಂತೆ ರಾಜಸೇವೆಯಲ್ಲಿ ನೊಂದಿರುವ ಧೀರನೊಬ್ಬನ ನಿಂದೆಯಲ್ಲಿ ಕೊನೆಯಾಗುತ್ತದೆ. ಹೀಗೆ ದಂಡಿಯು ಹೇಳಿದ್ದರೂ ಸಹ ವಾಸ್ತವವಾಗಿ ವಿಚಾರಮಾಡಿ ನೋಡಿದರೆ ಇಲ್ಲಿ ವ್ಯಾಜಸ್ತುತಿಯನ್ನು ಹೇಳುವುದೇ ಯುಕ್ತವಾಗಿ ಕಾಣುತ್ತದೆ : ಯಾಕೆಂದರೆ ಇಲ್ಲಿ ನಿಂದೆಯಿಂದ ಸ್ತುತಿ ತೋರುವಂತೆ ಸ್ತುತಿಯಿಂದ ನಿಂದೆ ತೋರುವುದೆಂಬುದೊಂದು ಹೆಚ್ಚಿನ ವೈಚಿತ್ರ್ಯವನ್ನು ನಾವು ಕಾಣಬಹುದಾಗಿದೆ. ಅಪ್ರಸ್ತುತ ಪ್ರಶಂಸೆಯಲ್ಲಿ ಹೀಗೆ ಇರುವುದಿಲ್ಲ. ಅಲ್ಲಿ ಕೇವಲ ಅಪ್ರಕೃತವಾದ ಅರ್ಥದಿಂದ ಪ್ರಕೃತಾರ್ಥವು ತೋರಿಬರುತ್ತದೆ. ವ್ಯಾಜಸ್ತುತಿಯಲ್ಲಾ ದರೋ ಅಪ್ರಕೃತವಾದ ವಸ್ತುವಿನ ಸ್ತುತಿಯಿಂದ ಪ್ರಕೃತ ವಸ್ತುವಿನ ನಿಂದೆಯೂ ಹಾಗೆಯೇ ಅಂತಹ ವಸ್ತುವಿನ ನಿಂದೆಯಿಂದ ಪ್ರಕೃತವಸ್ತುವಿನ ಸ್ತುತಿಯೂ ತಿಳಿದು ಬರುವುದೆಂಬ ವಿಶೇಷವಿದೆ. ಇಂತಹ ವಿಶೇಷವಿರುವಲ್ಲೇ ವ್ಯಾಜಸ್ತುತಿಯನ್ನು ಹೇಳ ಬೇಕು. ಹಾಗೆ ಹೇಳದೆ ದಂಡಿಯ ಅಭಿಪ್ರಾಯವನ್ನು ಒಪ್ಪಿ ಸ್ತುತಿಯಿಂದ ನಿಂದೆ ಯಾಗಲೀ ನಿಂದೆಯಿಂದ ಸ್ತುತಿಯಾಗಲೀ ತೋರುವ ಉದಾಹರಣಗಳಲ್ಲೂ ಅಪ್ರಸ್ತುತ ಪ್ರಶಂಸೆಯನ್ನೇ ಹೇಳುವುದಾದರೆ ಅಲಂಕಾರಸರ್ವಸ್ವಕಾರನಿಗೂ ಸಮ್ಮತವೆನಿಸಿದ ವ್ಯಾಜಸ್ತುತಿಯ ಉದಾಹರಣದಲ್ಲೂ ಸಹ ಅಪ್ರಸ್ತುತಪ್ರಶಂಸೆಯನ್ನೇ ಹೇಳ ಬೇಕಾದೀತು. ಇವೆರಡು ಅಲಂಕಾರಗಳಿಗೂ ವಿಶೇಷವಿದ್ದರೂ ಸಹ ವ್ಯಾಜಸ್ತುತಿ ಯನ್ನು ಅಪ್ರಸ್ತುತ ಪ್ರಶಂಸೆಯಲ್ಲಿಯೇ ಸೇರಿಸುವುದಾದರೆ ಇದರಿಂದ ವ್ಯಾಜಸ್ತುತಿಗೆ ಉದಾಹರಣವೇ ಇಲ್ಲದೇ ಹೋದೀತು. ಒಬ್ಬನ ಸ್ತುತಿನಿಂದೆಗಳಿಂದ ಮತ್ತೊಬ್ಬನ ನಿಂದಾಸ್ತುತಿಗಳು ತೋರಿದರೂ ವ್ಯಾಜಸ್ತುತಿಯೇ ಎಂದು ಹೇಳುವ ಪ್ರಯುಕ್ತ, ಒಬ್ಬನ ಸ್ತುತಿಯನ್ನು ತಿಳಿಸುವ ಇಚ್ಛೆಯಿಂದ ಬೇರೊಬ್ಬನನ್ನು ಸ್ತೋತ್ರಮಾಡಿದರೂ ಆಗಲೂ ವ್ಯಾಜಸ್ತುತಿಯನ್ನೇ ಹೇಳಬೇಕಾಗುತ್ತದೆ. ಯಾಕೆಂದರೆ ಒಬ್ಬನನ್ನು ಸ್ತುತಿಸುವ ನೆಪದಿಂದ ಬೇರೊಬ್ಬನ ಸ್ತುತಿಯನ್ನು ತಿಳಿಸಬೇಕೆಂಬ ಅಂಶವು ಇದರಲ್ಲೂ ಸಂಭವಿಸು ತ್ತದೆ. ಇದನ್ನು ಉದಾಹರಿಸುತ್ತಾನೆ.

"ಎಲೈ ತರುಣಿಯೇ, ಈ ಗಿಳಿಮರಿಯು ಯಾವ ಪರ್ವತದಲ್ಲಿ ಎಷ್ಟು ಕಾ
ಯಾವ ಬಗೆಯ ತಪಸ್ಸನ್ನಾಚರಿಸಿರಬೇಕು ? ಯಾಕೆಂದರೆ ಇದು ನಿನ್ನ ತುಟಿಯ
ಕೆಂಪಗಿರುವ ತೊಂಡೆಯ ಹಣ್ಣನ್ನು ಕಚ್ಚುತ್ತಿದೆ" ಇಲ್ಲಿ ಗಿಳಿಯ ಮರಿಯ ಸ್ತುತಿಯಿ
ನಾಯಿಕೆಯ ಕೆಳತುಟಿಯಲ್ಲಿ ಹೆಚ್ಚಿನ ಸೌಭಾಗ್ಯವಿತ್ತೆಂದು ಆದರ ಸ್ತುತಿಯು ವ್ಯಂಗ್ಯ
ತೋರುತ್ತದೆ.

## ೩೧. ವ್ಯಾಜನಿಂದಾಲಂಕಾರ

ನಿಂದಾಯಾ ನಿಂದಯಾ ವ್ಯಕ್ತಿರ್ವ್ಯಾಜನಿಂದೇತಿ ಗೀಯತೇ ।
ವಿಧೇ ಸ ನಿಂದ್ಯೋ ಯಸ್ತೇ ಪ್ರಾಗೇಕಮೇವಾಹರಚ್ಛಿರಃ ॥೭೧॥

ಅತ್ರ ಹರನಿಂದಯಾ ವಿಷಮವಿಪಾಕಂ ಸಂಸಾರಂ ಪ್ರವರ್ತಯತೋ ವಿಧೇ
ವ್ಯಂಗ್ಯಾ ನಿಂದಾ ವ್ಯಾಜನಿಂದಾ. ಯಥಾ ವಾ–

ವಿಧಿರೇವ ವಿಶೇಷಗರ್ಹಣೀಯಃ ಕರಟ ತ್ವಂ ರಟ ಕಸ್ತವಾಪರಾಧಃ ।
ಸಹಕಾರತರೌ ಚಕಾರ ಯಸ್ತೇ ಸಹವಾಸಂ ಸರಲೇನ ಕೋಕಿಲೇನ॥

ಅನ್ಯಸ್ತುತ್ಯಾ ಅನ್ಯಸ್ತುತ್ಯಭಿವ್ಯಕ್ತಿರಪಿ ಪಂಚಮಪ್ರಕಾರವಾಜ್ಯಸ್ತುತಿಪ್ರ
ಬಂದೀಭೂತೇಯಂ ವ್ಯಾಜನಿಂದಾ. ನನು ಯತ್ರ ಅನ್ಯಸ್ತುತ್ಯಾ ಅನ್ಯಸ್ತುತಿ
ಅನ್ಯನಿಂದಯಾ ಅನ್ಯನಿಂದಾಯಾಶ್ಚ ಪ್ರತೀತಿಸ್ತತ್ರ ವ್ಯಾಜಸ್ತುತಿ ವ್ಯಾಜನಿಂದಾಲಂಕಾ
ಯೋರಭ್ಯುಪಗಮೇ ಸ್ತುತಿನಿಂದಾರೂಪಾಪ್ರಸ್ತುತಪ್ರಶಂಸೋದಾಹರಣೇಷು
ಅಪ್ರಸ್ತುತಪ್ರಶಂಸಾ ನ ವ್ಯಕ್ತವ್ಯಾ. ತೇಷಾಮಪಿ ವ್ಯಾಜಸ್ತುತಿವ್ಯಾಜನಿಂದಾಭ್ಯಾ
ಕ್ರೋಡೀಕಾರಸಂಭವಾದಿತಿ ಚೇದುಚ್ಯತೇ. ಯತ್ರ ಅಪ್ರಸ್ತುತವೃತ್ತಾಂತಾತ್
ಸ್ತುತಿನಿಂದಾರೂಪಾತ್ ತತ್ಸರೂಪಃ ಪ್ರಸ್ತುತವೃತ್ತಾಂತಃ ಪ್ರತೀಯತೇ "ಅಂತ್ಯ
ದ್ರಾಣಿ ಭೂಯಾಂಸಿ" ಇತ್ಯಾದೌ ತತ್ರ ಲಬ್ಧಾವಕಾಶಾ ಸಾರೂಪ್ಯನಿಬಂಧನಾ
ಅಪ್ರಸ್ತುತಪ್ರಶಂಸಾ ಅತ್ರಾಪಿ ವರ್ತಮಾನಾ ನ ನಿವಾರಯಿತುಂ, ಶಕ್ಯಾ. ಅನ್ಯಸ್ತುತ್ಯಾ
ಅನ್ಯಸ್ತುತಿರನ್ಯನಿಂದಯಾಽನ್ಯನಿಂದೇತ್ಯೇವಂ ವ್ಯಾಜಸ್ತುತಿವ್ಯಾಜನಿಂದೇ ಅಪಿ ಸಂಭವ
ತಶ್ಚೇತ್ಯಾಮಂ ತೇ ಅಪಿ ಸಂಭವೇತಾಮ್. ನ ತ್ವಸ್ಯಾಃ ಪರಿತ್ಯಾಗಃ ಯದ್ಯಪಿ
ವಿಧಿರೇವ ವಿಶೇಷಗರ್ಹಣೀಯಃ ಇತಿ ಶ್ಲೋಕೇ ವಿಧಿನಿಂದಯಾ ತನ್ಮೂಲ
ಕಾಕನಿಂದಯಾ ಚ ಅವಿಶೇಷಜ್ಞಸ್ಯ ಪ್ರಭೋಸ್ತೇನ ಚ ವಿದ್ವತ್ಸಮತಯಾ ಸ್ಥಾಪಿತಸ್ಯ
ಮೂರ್ಖಸ್ಯ ಚ ನಿಂದಾ ಪ್ರತೀಯತ ಇತಿ ತತ್ರ ಸಾರೂಪ್ಯನಿಬಂಧನಾ ಅಪ್ರಸ್ತು
ತಪ್ರಶಂಸಾಪ್ಯಸ್ತಿ. ತಥಾಪಿ ಸೈವ ವ್ಯಾಜನಿಂದಾಮೂಲೇತಿ ಪ್ರಥಮೋಪಸ್ಥಿತಾ
ಸಾಪಿ ತತ್ರ ದುರ್ವಾರಾ. ಏವಂ ವ್ಯಾಜನಿಂದಾಮೂಲಕವ್ಯಾಜನಿಂದಾರೂಪೇಯ

ಅಪ್ರಸ್ತುತಪ್ರಶಂಸೇತಿ ಚಮತ್ಕಾರಾತಿಶಯಃ. ಏವಮೇವ ವ್ಯಾಜಸ್ತುತಿಮೂಲಕ ವ್ಯಾಜಸ್ತುತಿರೂಪಾಪ್ಯಪ್ರಸ್ತುತಪ್ರಶಂಸಾ ದೃಶ್ಯತೇ. ಯಥಾ ವಾ—

ಲಾವಣ್ಯದ್ರವಿಣವ್ಯಯೋ ನ ಗಣಿತಃ ಕ್ಲೇಶೋ ಮಹಾನಾರ್ಜಿತಃ
ಸ್ವಚ್ಛಂದಂ ಚರತೋ ಜನಸ್ಯ ಹೃದಯೇ ಚಿಂತಾಜ್ವರೋ ನಿರ್ಮಿತಃ ।

ಏಷಾಪಿ ಸ್ವಗುಣಾನುರೂಪರಮಣಾಭಾವಾದ್ವರಾಕೀ ಹತಾ
ಕೋಽರ್ಥಶ್ಚೇತಸಿ ಸಂಸ್ಕೃತೋಽತ್ರ ವಿಧಿನಾ ತನ್ವೀಮಿಮಾಂ ತನ್ವತಾ ॥

ಅತ್ರಾಪ್ರಸ್ತುತಾಯಾಸ್ತರುಣ್ಯಾಃ ಸೃಷ್ಟಿನಿಂದಾವ್ಯಾಜೇನ ತನ್ನಿಂದಾವ್ಯಾಜೇನ ಚ ತತ್ಸೌಂದರ್ಯಪ್ರಶಂಸಾ ಪ್ರಸಂಸನೀಯತ್ವೇನ ಕವಿವಿವಕ್ಷಿತಾಯಾಃ ಸ್ವಕವಿತಾಯಾಃ ಸೃಷ್ಟಿನಿಂದಾವ್ಯಾಜೇನ ತನ್ನಿಂದಾವ್ಯಾಜೇನ ಚ ಶಬ್ದಾರ್ಥ ಚಮತ್ಕಾರಾತಿಶಯ ಪ್ರಶಂಸಾಯಾಂ ಪರ್ಯವಸ್ಯತಿ. ಅಸ್ಯ ಶ್ಲೋಕಸ್ಯ ವಾಚ್ಯಾರ್ಥವಿಷಯೇ ಯದ್ಯಪಿ ನಾತ್ಯಂತಸಾಮಂಜಸ್ಯಂ. ನ ಹಿಮೇ ವಿಕಲ್ಪಾ ವೀತರಾಗಸ್ಯೇತಿ ಕಲ್ಪಯಿತುಂ ಶಕ್ಯಮ್. ರಸಾನನುಗುಣತ್ವಾತ್ ವೀತರಾಗಹೃದಯಸ್ಯಾಪ್ಯೇವಂವಿಧವಿಷಯೇಷ್ವಪ್ರವೃತ್ತೇಶ್ಚ. ನಾಪಿ ರಾಗಿಣ ಇತಿ ಯುಜ್ಯತೇ ತದೀಯವಿಕಲ್ಪೇಷು ವರಾಕೀತಿ ಕೃಪಣತಾಲಿಂಗಿತಸ್ಯ ಹತೇತ್ಯ ಮಂಗಳೋಪಹಿತಸ್ಯ ಚ ವಚಸೋಽನುಚಿತತ್ವಾತ್ ತುಲ್ಯರಮಣಾಭಾವಾದಿತ್ಯಸ್ಯ ಅತ್ಯಂತಮನುಚಿತತ್ವಾಚ್ಚ. ಸ್ವಾತ್ಮನಿ ತದನುರೂಪತಾಸಂಭಾವನಾಯಾಮಪಿ ರಾಗಿತ್ವೇ ಹಿ ಪಶುಪ್ರಾಯತಾ ಸ್ಯಾತ್. ತಥಾಪಿ ವಿವಕ್ಷಿತಪ್ರಸ್ತುತಾರ್ಥತಾಯಾಂ ನ ಕಿಂಚಿದ ಸಾಮಂಜಸ್ಯಮ್. ಅತ ಏವಾಸ್ಯ ಶ್ಲೋಕಸ್ಯ ಅಪ್ರಸ್ತುತಪ್ರಶಂಸಾಪರತ್ವಮುಕ್ತಂ ಪ್ರಾಚೀನೈಃ ವಾಚ್ಯಾಽಸಂಭವೇಽಪ್ಯಪ್ರಸ್ತುತಪ್ರಶಂಸೋಪಪತ್ತೇರಿತಿ.

ಒಬ್ಬನ ನಿಂದೆಯಿಂದ ಮತ್ತೊಬ್ಬನ ನಿಂದೆಯು ವ್ಯಂಗ್ಯವಾಗಿ ತೋರುವುದೇ ವ್ಯಾಜನಿಂದೆ ಎನಿಸುವುದು. "ಎಲೈ ವಿಧಿಯೇ, ನಿನ್ನ ತಲೆಗಳಲ್ಲೊಂದನ್ನು ಕತ್ತರಿಸಿದ ಆ ಹರನೇ ನಿಂದಾರ್ಹನೆನಿಸಿರುವನು. ಐದೂ ತಲೆಗಳನ್ನು ಅವನು ಆಗಲೇ ಕತ್ತರಿಸಿದ್ದರೆ ನಿನಗೆ ಈ ಚೇಷ್ಟೆ ಮಾಡಲು ಅವಕಾಶವೇ ಇರುತ್ತಿರಲಿಲ್ಲ. ಆದ್ದರಿಂದ ಒಂದೇ ತಲೆಯನ್ನು ಕತ್ತರಿಸಿದ್ದೇ ತಪ್ಪಾಯಿತು." ಇಲ್ಲಿ ಹರನ ನಿಂದೆಯಿಂದ ಆರಂಭದಲ್ಲಿ ಸುಖವೂ ಕೊನೆಯಲ್ಲಿ ವಿಷಮವೂ ಎನಿಸಿದ ಈ ಸಂಸಾರವನ್ನು ನಡೆಸುತ್ತಿರುವ ವಿಧಿಯ ನಿಂದೆಯು ವ್ಯಂಗ್ಯವಾಗಿ ತೋರುವುದು. ಹೀಗೆ ಒಬ್ಬನ ನಿಂದೆಯಿಂದ ಮತ್ತೊಬ್ಬನ ನಿಂದೆಯನ್ನು ತಿಳಿಸುವುದರಲ್ಲೂ ಒಂದು ಬಗೆಯ ಚಮತ್ಕಾರವಿರುವುದರಿಂದ ಇದು ವ್ಯಾಜನಿಂದೆ ಎನಿಸುವುದು. "ವಿಧಿಯೇ ವಿಶೇಷವಾಗಿ ನಿಂದೆಗೆ ಯೋಗ್ಯನೆನಿಸಿರುವನು. ಎಲೈ ಕಾಗೆಯೇ, ನೀನು ಯಥೇಚ್ಛವಾಗಿ ಕೂಗಿಕೋ. ಈ ಬಗ್ಗೆ ನಿನ್ನ ಅಪರಾಧವೇನಿದೆ ! ಯಾವ ಆ ವಿಧಿಯೇ ನಿನಗೆ ಮಾವಿನ ಮರದಲ್ಲಿ

ಸರಳವಾದ ಕೋಗಿಲೆಯೊಡನೆ ಸಹವಾಸವನ್ನು ಕಲ್ಪಿಸಿರುವನು". ಬೇರೊಂದು
ಸ್ತೋತ್ರದಿಂದ ಮತ್ತೊಂದರ ಸ್ತೋತ್ರವನ್ನು ಸೂಚಿಸುವುದೇ ವ್ಯಾಜಸ್ತುತಿಯ
ಐದನೆಯ ಬಗೆ ಎಂದು ಹಿಂದೆ ತಿಳಿಸಿದೆ. ಆದಕ್ಕೆ ವ್ಯಾಜನಿಂದಾಲಂಕಾರವು ವಿರುದ್ಧ
ವಾಗಿದ್ದು ಸಮಾನವೆನಿಸಿದೆ. ಹೀಗೆ ಒಂದು ವಸ್ತುವಿನ ಅಥವಾ ಒಬ್ಬ ವ್ಯಕ್ತಿಯ
ಸ್ತುತಿಯಿಂದ ಬೇರೊಂದು ವಸ್ತುವಿನ ಅಥವಾ ಬೇರೊಬ್ಬ ವ್ಯಕ್ತಿಯ ಸ್ತುತಿಯೂ
ಹಾಗೆಯೇ ಅನ್ಯನಿಂದೆಯಿಂದ ಅನ್ಯನಿಂದೆಯೂ ಎಲ್ಲಿ ತೋರುತ್ತವೆಯೋ ಅಲ್ಲಿ
ಕ್ರಮವಾಗಿ ವ್ಯಾಜಸ್ತುತಿ ಮತ್ತು ವ್ಯಾಜನಿಂದೆ ಇವನ್ನು ಒಪ್ಪಿಕೊಂಡರೆ ಒಂದರ
ಸ್ತುತಿಯಿಂದ ಮತ್ತೊಂದರ ನಿಂದೆಯೂ, ಒಂದರ ನಿಂದೆಯಿಂದ ಮತ್ತೊಂದರ
ಸ್ತುತಿಯೂ ತೋರುವಂತಹ ಅಪ್ರಸ್ತುತಪ್ರಶಂಸೆಯ ಉದಾಹರಣಗಳಲ್ಲಿ ಅಪ್ರಸ್ತುತ
ಪ್ರಶಂಸೆಯನ್ನು ಹೇಳಲಿಕ್ಕಾಗದೇ ಹೋಗುತ್ತದೆ. ಅವನ್ನೂ ಸಹ ವ್ಯಾಜಸ್ತುತಿ
ಮತ್ತು ವ್ಯಾಜನಿಂದೆಗಳಲ್ಲಿಯೇ ಸೇರಿಸಬೇಕಾಗುತ್ತದೆ. ಹೀಗೆ ಆಕ್ಷೇಪವು ಬಂದು
ಆದಕ್ಕೆ ಸಮಾಧಾನವನ್ನು ಈಗ ತಿಳಿಸಲಾಗುವುದು. "ಅಂತಶ್ಛಿದ್ರಾಣಿ ಭೂಯಾಂಸಿ"
ಎಂಬಲ್ಲಿರುವಂತೆ ಎಲ್ಲಿ ಸ್ತುತಿ ಅಥವಾ ನಿಂದೆ ಎನಿಸಿದ ಅಪ್ರಕೃತವೃತ್ತಾಂತದಿಂದ
ಆದಕ್ಕೆ ಸದೃಶವಾದ ಪ್ರಕೃತವೃತ್ತಾಂತವು ತೋರುವುದೋ ಅಲ್ಲಿಗೆ ಅನ್ವಯಿಸ
ಬಹುದಾದ ಸಾರೂಪ್ಯಮೂಲಕವಾದ ಅಪ್ರಸ್ತುತಪ್ರಶಂಸಾಲಂಕಾರವು ಇಲ್ಲಿಯೂ
ಸಂಭವಿಸಲಿಕ್ಕೆ ಯಾವ ತಡೆಯೂ ಇಲ್ಲ. ಒಂದರ ಸ್ತುತಿಯಿಂದ ಮತ್ತೊಂದರ
ಸ್ತುತಿಯೂ, ಒಂದರ ನಿಂದೆಯಿಂದ ಮತ್ತೊಂದರ ನಿಂದೆಯೂ ಎಲ್ಲಿ ಇರುತ್ತವೆಯೋ
ಅಲ್ಲಿ ವ್ಯಾಜಸ್ತುತಿ ವ್ಯಾಜನಿಂದೆ ಇವೂ ಸಹ ಸಂಭವಿಸುವುದಾದರೆ ಸಂಭವಿಸಲಿ.
ಇದರಿಂದ ಅಪ್ರಸ್ತುತಪ್ರಶಂಸೆಯನ್ನು ಬಿಡಬೇಕಾಗಿಲ್ಲ. "ವಿಧಿರೇವ ವಿಶೇಷ
ಗರ್ಹಣೀಯಃ" ಎಂಬ ಪದ್ಯದಲ್ಲಿ ವಿಧಿಯ ನಿಂದೆಯಿಂದಲೂ ಆದನ್ನು ಅವಲಂಬಿಸಿ
ಕಾಗೆಯ ನಿಂದೆಯಿಂದಲೂ ಹೆಚ್ಚು ತಿಳಿವಳಿಕೆಯಿಲ್ಲದ ಪ್ರಭುವಿನ ಮತ್ತು ಅವನಿಂದ
ವಿದ್ವಾಂಸನಿಗೆ ಸಮವಾಗಿ ಸ್ಥಾಪಿತವಾಗಿರುವ ಮೂರ್ಖನ ನಿಂದೆಯೂ ತೋರು
ತ್ತದೆ. ಆದ ಪ್ರಯುಕ್ತ ಅಲ್ಲಿ ಸಾರೂಪ್ಯಮೂಲಕವಾದ ಅಪ್ರಸ್ತುತಪ್ರಶಂಸೆಯೂ
ಸಹ ಇದೆ. ಆದರೂ ಆದಕ್ಕೆ ವ್ಯಾಜನಿಂದೆಯೇ ಮೂಲವಾದ್ದರಿಂದ ಮೊದಲು
ತೋರುವ ವ್ಯಾಜನಿಂದೆಯನ್ನೂ ಸಹ ತಡೆಯಲಿಕ್ಕಾಗುವುದಿಲ್ಲ. ಹೀಗೆ ವ್ಯಾಜನಿಂದೆ
ಯನ್ನು ಅವಲಂಬಿಸಿ ಮತ್ತೊಂದು ವ್ಯಾಜನಿಂದೆಯು ತೋರುವುದರಿಂದ ಅಪ್ರಸ್ತುತ
ಪ್ರಶಂಸೆಯಲ್ಲಿ ಹೆಚ್ಚಿನ ಚಮತ್ಕಾರವು ತೋರುತ್ತದೆ. ಹೀಗೆಯೇ ವ್ಯಾಜಸ್ತುತಿ
ಯನ್ನು ಅವಲಂಬಿಸಿ ಮತ್ತೊಂದು ವ್ಯಾಜಸ್ತುತಿಯು ತೋರುವ ಕಡೆಯಲ್ಲಿಯೂ
ಅಪ್ರಸ್ತುತಪ್ರಶಂಸೆ ಇರುತ್ತದೆ. ಮೊದಲು ತೋರುವ ವ್ಯಾಜಸ್ತುತಿಯು ವ್ಯಾಜ
ಸ್ತುತ್ಯಲಂಕಾರಕ್ಕೆ ವಿಷಯವೆನಿಸಿದ್ದು ಆದರ ಮೂಲಕ ತೋರುವ ವ್ಯಾಜಸ್ತುತಿಯು
ಅಪ್ರಸ್ತುತಪ್ರಶಂಸೆಗೆ ವಿಷಯವೆನಿಸುತ್ತದೆ.

"ಈ ತರುಣಿಯನ್ನು ಸೃಷ್ಟಿಸಿದ ಬ್ರಹ್ಮನಿಗೆ ಮನಸ್ಸಿನಲ್ಲಿ ಯಾವ ಅಭಿಪ್ರಾಯ ವಿತ್ತೋ ? ಯಾಕೆಂದರೆ ಅವನು ಇಲ್ಲಿ ಉಪಯೋಗಿಸಿರುವ ಸೌಂದರ್ಯವಸ್ತುವು ಅಷ್ಟಿಷ್ಟೆಂದು ಅವನು ಗಮನಿಸಿಯೇ ಇಲ್ಲ. ಇದೂ ಅಲ್ಲದೆ ಈಕೆಯನ್ನು ಸೃಷ್ಟಿಸು ವಾಗ ಅವನಿಗೆ ಹೆಚ್ಚು ಕ್ಲೇಶವೇ ಆಗಿದೆ. ಸ್ವಚ್ಛಂದವಾಗಿ ವ್ಯವಹರಿಸುವವರಿಗಂತೂ ಈಕೆಯನ್ನು ನೋಡಿದ್ದರಿಂದ ಹೃದಯದಲ್ಲಿ ಚಿಂತಾಜ್ವರವು ಕಾಣಿಸಿಕೊಂಡಿವೆ. ದೀನಳಾದ ಈಕೆಯಾದರೋ ತನಗೆ ಅನುಗುಣವಾದ ವರನಿಲ್ಲದ್ದರಿಂದ ನಿರಾಶಳಾಗಿರು ವಳು." ಇಲ್ಲಿ ಅಪ್ರಕೃತವಾದ ತರುಣಿಯ ಸೃಷ್ಟಿಯನ್ನೂ, ಆಕೆಯನ್ನು ನಿಂದಿಸುವ ನೆಪದಿಂದ ಆಕೆಯ ಸೌಂದರ್ಯದ ಪ್ರಶಂಸೆ ತೋರುತ್ತದೆ. ಈ ಪ್ರಶಂಸೆಯು ಪ್ರಶಂಸಾರ್ಹವೆಂದು ಕವಿಗೆ ಇಷ್ಟವಾಗಿರುವ ತನ್ನ ಕವಿತೆಯ ಸೃಷ್ಟಿಯನ್ನೂ, ಅಂತಹ ಕವಿಯನ್ನೂ ನಿಂದಿಸುವ ನೆಪದಿಂದ ಶಬ್ದಾರ್ಥಗಳಲ್ಲಿ ಅಡಗಿರುವ ಹೆಚ್ಚಿನ ಚಮತ್ಕಾರ ವನ್ನು ಪ್ರಶಂಸಿಸುವುದರಲ್ಲಿ ಕೊನೆಗಾಣುತ್ತದೆ. ಕವಿಯನ್ನು ನಿಂದಿಸುವ ನೆಪದಿಂದ ಕಾವ್ಯನಿಂದೆಯೂ ಮೊದಲು ತೋರಿ ಇವೆರಡರಿಂದಲೂ ಶಬ್ದಾರ್ಥಗಳ ಚಮತ್ಕಾರಾತಿ ಶಯದ ಪ್ರಶಂಸೆಯು ತೋರುತ್ತದೆ. ಈ ಶ್ಲೋಕದ ವಾಚ್ಯಾರ್ಥವು ಹೆಚ್ಚು ಸಮಂಜಸವಾಗಿ ಕಾಣುವುದಿಲ್ಲ : ಯಾಕೆಂದರೆ ಇಲ್ಲಿ ತೋರುವ ವಿಕಲ್ಪಗಳು ವೈರಾಗ್ಯ ಶೀಲನಿಗೆ ಸಂಭವಿಸುವುದಿಲ್ಲ. "ಬ್ರಹ್ಮನು ಈಕೆಯನ್ನು ಏಕೆ ಸೃಷ್ಟಿಸಿದನು ? ಅವನು ಇಷ್ಟೊಂದು ಕ್ಲೇಶವನ್ನು ಏಕೆ ಅನುಭವಿಸಿದನು ?" ಇಂತಹ ವಿಕಲ್ಪಗಳು ವಿರಕ್ತನಿಗೆ ಸಂಭವಿಸುತ್ತವೆ ಎಂಪರೆ ಹೊಂದುವುದಿಲ್ಲ : ಯಾಕೆಂದರೆ ಅವನಿಗೆ ಇಂತಹ ವಿಷಯಗಳಲ್ಲಿ ಪ್ರವೃತ್ತಿಯೇ ಹುಟ್ಟುವುದಿಲ್ಲ. ಹೀಗೆ ವಿಕಲ್ಪಗಳನ್ನು ತಿಳಿಸಿರುವುದು ಶೃಂಗಾರರಸಕ್ಕೆ ಹೊಂದುವುದೂ ಇಲ್ಲ. ಈ ಬಗೆಯ ವಿಕಲ್ಪಗಳು ಅನುರಾಗಿ ಯಾದವನೊಬ್ಬನಿಗೆ ಸಂಭವಿಸಿವೆ ಎಂದು ಹೇಳಲಿಕ್ಕೂ ಬರುವುದಿಲ್ಲ ! ಯಾಕೆಂದರೆ ಈ ವಿಕಲ್ಪಗಳಲ್ಲಿ ದೈನ್ಯಾವಸ್ಥೆಯನ್ನು ತಿಳಿಸುವ 'ವರಾಕೀ' ಎಂಬ ಪದವನ್ನೂ ಅಮಂಗಳಬೋಧಕವಾದ 'ಹತಾ' ಎಂಬ ಪದವನ್ನೂ ಉಪಯೋಗಿಸಿದ್ದು ಅಯುಕ್ತ ವೆನಿಸಿದೆ. "ಆಕೆಗೆ ಸಮಾನವಾದ ಪತಿಯೇ ಇಲ್ಲ" ವೆಂದು ತಿಳಿಸಿದ್ದಂತೂ ಅತ್ಯಂತ ಅಯುಕ್ತವೆನಿಸಿದೆ. ಆಕೆ ತನಗೆ ಅನುರೂಪಳಲ್ಲವೆಂದು ತಿಳಿದ ಮೇಲೆಯೂ ಆಕೆಯಲ್ಲಿ ಅನುರಾಗವನ್ನಿಡುವವನು ವಿವೇಕವಿಲ್ಲದ ಪಶುವೆನಿಸಬೇಕಾಗುತ್ತದೆ. ಹೀಗೆ ವಾಚ್ಯಾರ್ಥದ ವಿಷಯದಲ್ಲಿ ಹೆಚ್ಚು ಔಚಿತ್ಯವಿಲ್ಲದಿದ್ದರೂ ಕವಿಗೆ ವಿವಕ್ಷಿತವೆನಿಸಿರುವ ಕವಿತೆಯ ಶಬ್ದಾರ್ಥಗಳ ಚಮತ್ಕಾರವನ್ನು ಪ್ರಶಂಸಿಸುವ ವಿಷಯದಲ್ಲಿ ಯಾವ ಅನೌಚಿತ್ಯವೂ ಕಾಣುವುದಿಲ್ಲ. ಇಲ್ಲಿ ವಾಚ್ಯಾರ್ಥವೆನಿಸಿದ ತರುಣಿಯ ಸೃಷ್ಟಿ ಮತ್ತು ಆಕೆಯ ನಿಂದೆ ಹಾಗೆಯೇ ಅದರ ನೆಪದಿಂದ ತೋರುವ ಆಕೆಯ ಸೌಂದರ್ಯ ಪ್ರಶಂಸೆ ಇವುಗಳ ಬಗ್ಗೆ ಅನೌಚಿತ್ಯವಿರಬಹುದು. ಇಷ್ಟರಲ್ಲಿಯೇ ಕವಿಗೆ ತಾತ್ಪರ್ಯ

ವಿದ್ದಿದ್ದರೆ ಈ ವಾಚ್ಯಾರ್ಥವು ಅಸಮಂಜಸವೆನಿಸುತ್ತಿತ್ತು. ಆದರೆ ಕವಿಗೆ ಇಷ್ಟರಲ್ಲಿಯ ತಾತ್ಪರ್ಯವಿಲ್ಲ. ಕವಿಗೆ ಇಷ್ಟವಾದ ಅರ್ಥವು ಕೊನೆಯಲ್ಲಿ ತೋರುವ ಪ್ರಯುಕ್ತ ಅದರ ಬಗ್ಗೆ ಯಾವ ಅನೌಚಿತ್ಯವೂ ಕಾಣುವುದಿಲ್ಲ. ಆದ್ದರಿಂದಲೇ ಈ ಶ್ಲೋಕವನ್ನು ಪ್ರಾಚೀನರು ಅಪ್ರಸ್ತುತಪ್ರಶಂಸೆಗೆ ಉದಾಹರಣವಾಗಿ ತಿಳಿಸಿದರು. ವಾಚ್ಯಾರ್ಥವು ಇಲ್ಲಿ ಸಮಂಜಸವಾಗಿಲ್ಲದಿದ್ದರೂ ಕವಿಗೆ ವಿವಕ್ಷಿತವಾದ ಅರ್ಥವು ಕೊನೆಯಲ್ಲಿ ತೋರುವುದರಿಂದ ಇದಕ್ಕೆ ಅಪ್ರಸ್ತುತಪ್ರಶಂಸೆಯಾಗಲಿಕ್ಕೆ ಯಾವ ಅಡ್ಡಿಯೂ ಇಲ್ಲ.

## ೩೨. ಆಕ್ಷೇಪಾಲಂಕಾರ

ಆಕ್ಷೇಪಃ ಸ್ವಯಮುಕ್ತಸ್ಯ ಪ್ರತಿಷೇಧೋ ವಿಚಾರಣಾತ್ ।
ಚಂದ್ರ ಸಂದರ್ಶಯಾತ್ಮಾನಂ ಅಥವಾಸ್ತಿ ಪ್ರಿಯಾಮುಖಮ್ ॥೭೨॥

ಅತ್ರ ಪ್ರಾರ್ಥಿತಸ್ಯ ಚಂದ್ರದರ್ಶನಸ್ಯ ಪ್ರಿಯಾಮುಖಸತ್ತ್ವೇನ ಅನರ್ಥಕ್ಯ ವಿಚಾರ್ಯ ಅಥವೇತ್ಯಾದಿಸೂಚಿತಃ ಪ್ರತಿಷೇಧ ಆಕ್ಷೇಪಃ. ಯಥಾ ವಾ-

ಸಾಹಿತ್ಯಪಾಥೋನಿಧಿಮಂಥನೋತ್ಥಂ
ಕರ್ಣಾಮೃತಂ ರಕ್ಷತ ಹೇ ಕವೀಂದ್ರಾಃ ।
ಯತ್ತಸ್ಯ ದೈತ್ಯಾ ಇವ ಲುಂಠನಾಯ
ಕಾವ್ಯಾರ್ಥಚೋರಾಃ ಪ್ರಗುಣೀಭವಂತಿ ॥
ಗೃಹ್ಣಂತಿ ಸರ್ವೇ ಯದಿ ವಾ ಯಥೇಚ್ಛಂ
ನಾಸ್ತಿ ಕ್ಷತಿಃ ಕ್ವಾಪಿ ಕವೀಶ್ವರಾಣಾಮ್ ।
ರತ್ನೇಷು ಲುಪ್ತೇಷು ಬಹುಷ್ವಮರ್ತ್ಯೈಃ
ಅದ್ಯಾಪಿ ರತ್ನಾಕರ ಏವ ಸಿಂಧುಃ ॥

ಅತ್ರ ಪ್ರಥಮಶ್ಲೋಕೇನ ಪ್ರಾರ್ಥಿತಸ್ಯ ಕಾವ್ಯಾರ್ಥಚೋರೇಭ್ಯೋ ರಕ್ಷಣಸ್ಯ ವಿಚಿತ್ರ ಸ್ವೋಲ್ಲಿಖಿತವೈಚಿತ್ರ್ಯಾಣಾಂ ಸಮುದ್ರಗತರತ್ನಜಾಲವದಕ್ಷಯತ್ವಂ ಪ್ರತಿಷೇಧ ಆಕ್ಷೇಪಃ ।

ನಿಷೇಧಾಭಾಸಮಾಕ್ಷೇಪಂ ಬುಧಾಃ ಕೇಚನ ಮನ್ವತೇ ।
ನಾಹಂ ದೂತೀ ತನೋಸ್ತಾಪಸ್ತಸ್ಯಾಃ ಕಾಲಾನಲೋಪಮಃ ॥೭೩॥

ಕೇಚಿದಲಂಕಾರಸರ್ವಸ್ವಕಾರಾದಯ ಇತ್ಥಮಾಹುಃ. ನ ನಿಷೇಧಮಾತ್ರಮಾ ಕ್ಷೇಪಃ ; ಕಿಂ ತು ಯೋ ನಿಷೇಧೋ ಬಾಧಿತಸ್ಸನ್ ಅರ್ಥಾಂತರಪರ್ಯವಸಿತ

ಕಂಚಿದ್ವಿಶೇಷಮಾಕ್ಷಿಪತಿ ಸ ಆಕ್ಷೇಪಃ. ಯಥಾ ದೂತ್ಯಾ ಉಕ್ತೌ ನಾಹಂ ದೂತೀ ಇತಿ ನಿಷೇಧೋ ಬಾಧಿತತ್ವಾತ್ ಆಭಾಸರೂಪಃ ಸಂಘಟನಾಕಾಲೋಚಿತಕೃತವವಚನ ಪರಿಹಾರೇಣ ಯಥಾರ್ಥವಾದಿತ್ವೇ ಪರ್ಯವಸ್ಯನ್ನಿದಾನೀಮೇವಾಗತ್ಯ ನಾಯಿ ಕೋಜ್ಜೀವನೀಯೇತಿ ವಿಶೇಷಮಾಕ್ಷಿಪತಿ. ಯಥಾ ವಾ–

ನರೇಂದ್ರಮೌಲೇ ನ ವಯಂ ರಾಜಸಂದೇಶಹಾರಿಣಃ |
ಜಗತ್ಕುಟುಂಬಿನಸ್ತೇಽದ್ಯ ನ ಶತ್ರುಃ ಕಶ್ಚಿದೀಕ್ಷ್ಯತೇ ||

ಅತ್ರ ಸಂದೇಶಹಾರಿಣಾವುಕ್ತೌ ನ ವಯಂ ಸಂದೇಶಹಾರಿಣಃ ಇತಿ ನಿಷೇಧೋಽನುಪಪನ್ನಃ ಸಂಧಿಕಾಲೋಚಿತಕೃತವವಚನಪರಿಹಾರೇಣ ಯಥಾರ್ಥ ವಾದಿತ್ವೇ ಪರ್ಯವಸ್ಯನ್ ಸರ್ವಜಗತೀಪಾಲಕಸ್ಯ ತವ ನ ಕಶ್ಚಿದಪಿ ಶತ್ರುಭಾವೇನ ಅವಲೋಕನೀಯಃ. ಕಿಂತು ಸರ್ವೇಽಪಿ ರಾಜಾನೋ ಭೃತ್ಯಭಾವೇನ ಸಂರಕ್ಷಣೀಯಾ ಇತಿ ವಿಶೇಷಮಾಕ್ಷಿಪತಿ.

ಆಕ್ಷೇಪೋಽನ್ಯೋ ವಿಧೌ ವ್ಯಕ್ತೇ ನಿಷೇಧೇ ಚ ತಿರೋಹಿತೇ |
ಗಚ್ಛ ಗಚ್ಛಸಿ ಚೇತ್ಕಾಂತ ತತ್ರೈವ ಸ್ಯಾಜ್ಜನಿರ್ಮಮ ||೭೪||

ಅತ್ರ ಗಚ್ಛೇತಿ ವಿಧಿರ್ವ್ಯಕ್ತಃ ಮಾ ಗಾ ಇತಿ ನಿಷೇಧಸ್ತಿರೋಹಿತಃ ಕಾಂತೋದ್ದೇಶ್ಯದೇಶೇ ನಿಜಜನ್ಮಪ್ರಾರ್ಥನಯಾ ಆತ್ಮಮರಣಸಂಸೂಚನೇನ ಗರ್ಭೀಕೃತಃ. ಯಥಾ ವಾ–

ನ ಚಿರಂ ಮಮ ತಾಪಾಯ ತವ ಯಾತ್ರಾ ಭವಿಷ್ಯತಿ |
ಯದಿ ಯಾಸ್ಯಸಿ ಯಾತವ್ಯಂ ಅಲಮಾಶಂಕಯಾಪಿ ತೇ ||

ಅತ್ರಾಪಿ ನ ಚಿರಂ ಮಮ ತಾಪಾಯೇತಿ ಸ್ವಮರಣಸಂಸೂಚನೇನ ಗಮನ ನಿಷೇಧೋ ಗರ್ಭೀಕೃತಃ.

ತಾನೇ ಮೊದಲು ಒಂದು ಅರ್ಥವನ್ನು ತಿಳಿಸಿ ಆಮೇಲೆ ವಿಚಾರಮಾಡಿ ಅದನ್ನು ನಿಷೇಧಿಸುವುದೇ ಆಕ್ಷೇಪವೆನಿಸುತ್ತದೆ. ''ಎಲೈ ಚಂದ್ರನೇ, ನೀನು ಸ್ವರೂಪ ದಿಂದಲೇ ಕಾಣಿಸಿಕೋ, ಹಾಗೆ ನೀನು ಕಾಣಿಸಿಕೊಳ್ಳದೇ ಇದ್ದರೆ ಪ್ರೇಯಸಿಯ ಮುಖವಿದ್ದೇ ಇದೆ.'' ಇಲ್ಲಿ ಪ್ರಾರ್ಥಿಸಿರುವ ಚಂದ್ರದರ್ಶನವನ್ನು ಪ್ರೇಯಸಿಯ ಮುಖ ವಿರುವುದರಿಂದ ನಿರರ್ಥಕವೆಂದು ವಿಚಾರಿಸಿ 'ಅಥವಾ' ಎಂಬ ಪದದಿಂದ ನಿಷೇಧ ವನ್ನು ಸೂಚಿಸಲಾಗಿದೆ. ''ಎಲೈ ಕವಿಶ್ರೇಷ್ಠರೇ. ಸಾಹಿತ್ಯಸಮುದ್ರವೆನಿಸಿದ ಭಾರತ ಮೊದಲಾದವುಗಳನ್ನು ಪರಿಶೀಲಿಸಿದ್ದರಿಂದ ಹುಟ್ಟಿ ಕರ್ಣಾಮೃತವೆನಿಸಿದ ಕಾವ್ಯವನ್ನು ರಕ್ಷಿಸಿಕೊಳ್ಳಿರಿ ; ಯಾಕೆಂದರೆ ಅದನ್ನು ಅಪಹರಿಸಲು ದೈತ್ಯರಂತೆ ಕಾವ್ಯಾರ್ಥವನ್ನು ಕದಿಯುವವರು ಬಹುಮಂದಿ ಕಾದಿರುವರು. ಅಥವಾ ಎಲ್ಲರೂ ಯಥೇಚ್ಛವಾಗಿ ಅಪಹರಿಸಲಿ. ಇದರಿಂದ ಕವಿಶ್ರೇಷ್ಠರಿಗೆ ಎಂದಿಗೂ ಹಾನಿಯಾಗಲಾರದು. ದೇವತೆ

ಗಳು ಅನೇಕ ರತ್ನಗಳನ್ನು ಅಪಹರಿಸಿದ್ದರೂ ಸಹ ಈಗಲೂ ಸಮುದ್ರವು ರತ್ನಾಕ ವೆನಿಸಿದೆ." ಇಲ್ಲಿ ಮೊದಲನೆಯ ಶ್ಲೋಕದಲ್ಲಿ ಕಾವ್ಯಾರ್ಥ-ಚೋರರಿಂದ ಕಾವ್ಯವ ರಕ್ಷಿಸಬೇಕೆಂದು ಕವಿಶ್ರೇಷ್ಠರನ್ನು ಪ್ರಾರ್ಥಿಸಲಾಗಿದೆ. ಇದನ್ನು ಎರಡನೆಯ ಶ್ಲೋ ದಲ್ಲಿ ಕವಿಯು ವಿಚಾರಪೂರ್ವಕವಾಗಿ ನಿಷೇಧಿಸಿದ್ದಾನೆ. ತಾವು ಕಾವ್ಯಗಳಲ್ಲಿ ಬ ರುವ ವೈಚಿತ್ರ್ಯಗಳು ಸಮುದ್ರದಲ್ಲಿರುವ ರತ್ನಗಳಂತೆ ನಾಶರಹಿತವಾದವು ವಿಚಾರಿಸಿ ಕವಿಯು ತಾನು ಹಿಂದೆ ಹೇಳಿದ್ದನ್ನು ನಿಷೇಧಿಸುತ್ತಾನೆ. ಆದ್ದರಿಂದ ಇ ಆಕ್ಷೇಪವೆನಿಸಿದೆ.

ಒಮ್ಮೆ ತಿಳಿಸಿದ ಅಂಶವನ್ನು ನಿಷೇಧಿಸುವುದಷ್ಟೇ ಅಲ್ಲದೆ ಆ ನಿಷೇಧ ತೋರಿಕೆಗೆ ಬಾಧಿತವಾಗಿದ್ದು ಅರ್ಥಾಂತರದಲ್ಲಿ ಕೊನೆಗೊಂಡು ಯಾವುದೇ ಒ ವಿಶೇಷವನ್ನು ಊಹೆಯಿಂದ ತೋರಿಸಿಕೊಡುವುದಾದರೆ ಅದೂ ಆಕ್ಷೇಪವೇ ಆಗುತ್ತ "ನಾನು ದೂತಿಯಲ್ಲ : ಆದರೂ ಆಕೆಯ ತಾಪವು ಕಾಲಾಗ್ನಿಗೆ ಸದೃಶವಾದುದು ತಿಳಿಸಲು ಬಂದಿರುವೆನು" ಇಲ್ಲಿ ದೂತಿಯ ಮಾತಿನಲ್ಲಿ "ನಾನು ದೂತಿಯಲ್ಲ" ಎ ನಿಷೇಧವು ಬಾಧಿತವಾದ್ದರಿಂದ ತೋರಿಕೆ ಎನಿಸಿ "ಸಾಮಾನ್ಯದೂತಿಯಂತೆ ಸ ಯಕ್ಕೆ ತಕ್ಕಂತೆ ಸುಳ್ಳನ್ನು ಹೇಳುವವಳಲ್ಲ ; ಆದರೆ ನಿಜಾಂಶವನ್ನಷ್ಟೇ ಹೇಳುವವ ಎಂಬ ಯಥಾರ್ಥವನ್ನು ತಿಳಿಸುವುದರಲ್ಲಿ ಕೊನೆಗಾಣುತ್ತದೆ. "ನೀನು ಈ ಬಂದು ಪ್ರೇಯಸಿಯನ್ನು ಬದುಕಿಸಬೇಕು, ಆಕೆಯ ಸ್ಥಿತಿ ವಿಷಮವಾಗಿದೆ" ಎ ವಿಶೇಷಾರ್ಥವನ್ನು ಪ್ರಿಯನಿಗೆ ಆಕೆ ಇಲ್ಲಿ ತಿಳಿಸುತ್ತಾಳೆ. ಹೀಗೆ ನಿಷೇಧವು ವಿಶೇಷಾ ವನ್ನು ತಿಳಿಸುವುದರಿಂದ ಇದು ಆಕ್ಷೇಪದ ಎರಡನೆಯ ಬಗೆ ಎನಿಸಿದೆ. "ರಾ ಶ್ರೇಷ್ಠನೇ, ನಾವು ರಾಜನ ಸಂದೇಶವನ್ನು ಒಯ್ಯುವವರಲ್ಲ. ಆದರೂ ವಿಶ್ವಪ್ರ ಎನಿಸಿದ ನಿನಗೆ ಶತ್ರುವೇ ಎಲ್ಲಿಯೂ ಕಾಣಿಸುತ್ತಿಲ್ಲ.'' ಇಲ್ಲಿ ದೂತರೇ ಹೇ ಮಾತಿನಲ್ಲಿ "ನಾವು ಸಂದೇಶವನ್ನು ಒಯ್ಯುವವರಲ್ಲ'' ಎಂಬ ನಿಷೇಧವು ಹೊಂದ ವುದಿಲ್ಲ. "ನಿನ್ನೊಡನೆ ಸಂಧಿಯನ್ನು ಮಾಡುವ ಕಾಲದಲ್ಲಿ ಸುಳ್ಳನ್ನು ಹೇಳುವ ದೂ ರಂತೆ ನಾವು ನಿನಗೆ ಹೇಳಲಿಕ್ಕೆ ಬಂದಿಲ್ಲ ; ಆದರೆ ನಿಜಾಂಶವನ್ನು ತಿಳಿಸಲಿಕ್ಕಾಗಿ ಇಲ್ಲಿಗೆ ಬಂದಿರುವೆವು. ಪ್ರಪಂಚವೆಲ್ಲವನ್ನೂ ಸಮದೃಷ್ಟಿಯಿಂದ ಪ್ರೀತಿಸುವ ನಿ ಎಲ್ಲಿಯೂ ಶತ್ರುವೇ ಇಲ್ಲ. ಆದರೆ ರಾಜರೆಲ್ಲರೂ ಸೇವಕರಂತೆ ನಿನಗೆ ರಕ್ಷಣಾ ರೆನಿಸಿರುವರು" ಎಂಬ ವಿಶೇಷಾರ್ಥವನ್ನು ತಿಳಿಸುವುದರಲ್ಲಿ ನಿಷೇಧವು ಕೊನೆಗಾಣುತ್ತ ಆದ್ದರಿಂದ ಇದು ಆಕ್ಷೇಪದ ಎರಡನೆಯ ಬಗೆ ಎನಿಸಿದೆ.

ಇಂತಹ ಕಾರ್ಯವನ್ನು ಮಾಡಬೇಕು ಎಂಬ ವಿಧಿಯು ಎಲ್ಲಿ ವಾಚ್ಯವಾಗಿದ್ದು ಅದರ ನಿಷೇಧವು ಶಬ್ದದಿಂದ ಸ್ಪಷ್ಟವಾಗಿ ತೋರದೆ ಇರುವುದೋ ಅದೇ ಆಕ್ಷೇ ಮೂರನೆಯ ಬಗೆ ಎನಿಸುತ್ತದೆ. "ಸ್ವಾಮಿ, ನೀನು ಹೋಗು. ಹೋದರೆ ಅಲ್ಲಿ ನಾನೂ ಹುಟ್ಟುವೆನು''. ಇಲ್ಲಿ "ಹೋಗು" ಎಂದು ವಿಧಿಯು ಸ್ಪಷ್ಟವಾಗಿ ಶಬ್ದದಿಂ

ತೋರುತ್ತದೆ. ಹೋಗಬೇಡವೆಂಬ ನಿಷೇಧವು ಗೋಪ್ಯವಾಗಿದ್ದು "ನೀನು ಹೋದೆಡೆಯಲ್ಲಿಯೇ ನಾನೂ ಹುಟ್ಟುವೆನು" ಎಂದು ತಾನೂ ಅಲ್ಲಿಯೇ ಹುಟ್ಟುವನೆಂಬ ಪ್ರಾರ್ಥನೆಯಿಂದ ತನ್ನ ಮರಣದ ಸೂಚನೆಯೂ ಸೇರಿಕೊಂಡಿದೆ. "ಸ್ವಾಮಿ, ನನ್ನ ಪ್ರವಾಸವು ಬಹಳ ಕಾಲದವರೆಗೆ ನನಗೆ ತಾಪವನ್ನು ಕೊಡಲಾರದು. ನೀನು ಹೊರಡುವುದಾದರೆ ಹೊರಡಬಹುದು. ನಿನಗೆ ನನ್ನ ಬಗ್ಗೆ ಸಂದೇಹಪಡುವ ಆವಶ್ಯಕತೆ ಏನೂ ಇಲ್ಲ." ಇಲ್ಲಿಯೂ "ಹೊರಡಬಹುದು" "ಎಂಬ ವಿಧಿಯು ಸ್ಪಷ್ಟವಾಗಿ ಕಂಡುಬಂದಿದ್ದು "ನಿನ್ನ ಸಂಚಾರದಿಂದ ಬಹುಕಾಲ ನನಗೆ ಸಂತಾಪವಾಗುವುದಿಲ್ಲ," ಎಂದು ತಿಳಿಸಿ ತನ್ನ ಮರಣವನ್ನು ಸೂಚಿಸಿದ್ದರಿಂದ ಇದರಲ್ಲಿ 'ಪತಿಯು ಪ್ರಯಾಣ ಮಾಡಕೂಡದು' ಎಂಬ ನಿಷೇಧವು ಗೋಪ್ಯವಾಗಿ ಸೇರಿಕೊಂಡಿದೆ.

## ೩೩. ವಿರೋಧಾಭಾಸಾಲಂಕಾರ

ಆಭಾಸತ್ವೇ ವಿರೋಧಸ್ಯ ವಿರೋಧಾಭಾಸ ಇಷ್ಯತೇ ।
ವಿನಾಪಿ ತನ್ವಿ ಹಾರೇಣ ವಕ್ಷೋಜೌ ತವ ಹಾರಿಣೌ ॥೭೫॥

ಅತ್ರ ಹಾರರಹಿತಾವಪಿ ಹಾರಿಣೌ ಹೃದ್ಯಾವಿತಿ ಶ್ಲೇಷಮೂಲಕೋ ವಿರೋಧಾಭಾಸಃ ಯಥಾ ವಾ–

ಪ್ರತೀಪಭೂಪೈರಿವ ಕಿಂ ತತೋ ಭಿಯಾ
ವಿರುದ್ಧಧರ್ಮೈರಪಿ ಭೇತ್ತೃತೋಜ್ಝಿತಾ ।
ಅಮಿತ್ರಜಿನ್ಮಿತ್ರಜಿದೋಜಸಾ ಸ ಯತ್
ವಿಚಾರದೃಕ್ಚಾರದೃಗಪ್ಯವರ್ತತ ॥

ಅತ್ರ ವಿರೋಧಸಮಾಧಾನೋತ್ಪ್ರೇಕ್ಷಾಶಿರಸ್ಕೋ ವಿರೋಧಾಭಾಸ ಇತಿ ಪೂರ್ವಸ್ಮಾದ್ಭೇದಃ.

ವಿರೋಧವು ಒಂದು ಅರ್ಥದಿಂದ ಕೇವಲ ತೋರಿಕೆಗಾಗಿ ಕಂಡುಬಂದು ಕೊನೆಗೆ ಬೇರೊಂದು ಅರ್ಥದಿಂದ ಪರಿಹಾರವಾಗುವುದಾದರೆ ಅದು ವಿರೋಧಾಭಾಸವೆನಿಸುತ್ತದೆ. "ಎಲೈ ಮಂಗಳಾಂಗಿ, ಹಾಲವಿಲ್ಲದಿದ್ದರೂ ನಿನ್ನ ಸ್ತನಗಳು (ಹಾರಿ) ಹಾರದೊಡಗೂಡಿ, ಮನೋಹರವಾಗಿವೆ. ಹಾರವಿಲ್ಲದಿದ್ದರೂ ಸ್ತನಗಳು ಹಾರದಿಂದ ಕೂಡಿವೆ, ಎಂಬಲ್ಲಿ ವಿರೋಧವು ತೋರುತ್ತದೆ. "ಮನೋಹರವಾಗಿವೆ" ಎಂದು ಶ್ಲೇಷದ ಮೂಲಕ ತೋರುವ ಎರಡನೆಯ ಅರ್ಥವನ್ನು ಇಟ್ಟುಕೊಂಡು ವಿರೋಧವನ್ನು ಪರಿಹರಿಸಲಾಗಿದೆ. "ಶತ್ರುರಾಜರಂತೆ ಪರಸ್ಪರ ವಿರುದ್ಧವಾದ ಧರ್ಮಗಳೂ ಸಹ ನಳನ ಮೇಲಿನ ಭಯದಿಂದಲೋ ಏನೋ ಎಂಬಂತೆ ಭೇದದೃಷ್ಟಿಯನ್ನು ತೊರೆದಿದ್ದವು. ಯಾಕೆಂದರೆ ನಳನು ಮಿತ್ರರನ್ನು ಜಯಿಸದಿದ್ದರೂ (ಶತ್ರುಗಳನ್ನು ಜಯಿಸಿ

ದ್ದರೂ) ತೇಜಸ್ಸಿನಿಂದ (ಮಿತ್ರ)-ಸೂರ್ಯನನ್ನೂ ಜಯಿಸಿದ್ದನು. ಹಾಗೆಯೇ ಅ-
ಚಾರದೃಕ್ ಆಗಿದ್ದರೂ ಸಹ ಗೂಢಚಾರರ ಮೂಲಕ ನೋಡುವವನಾ-
ವಿಚಾರದೃಕ್ ಗೂಢಚಾರರಿಲ್ಲದೆಯೇ ನೋಡುವವನಾಗಿದ್ದನು (ವಿಚಾ-
ಕಾರ್ಯವನ್ನು ಮಾಡುತ್ತಿದ್ದನು). "ಮಿತ್ರಜಿತ್ ಅಲ್ಲದಿದ್ದರೂ ಮಿತ್ರಜಿತ್ ಆಗಿದ್ದ-
ಎಂಬಲ್ಲಿ ವಿರೋಧವಿದೆ. ವಿಚಾರದೃಷ್ಟಿಯುಳ್ಳವನೆಂಬ ಅರ್ಥದಿಂದ ವಿರೋ-
ಪರಿಹಾರವಾಗುತ್ತದೆ. ಅಮಿಂತ್ರಜಿತ್—ಶತ್ರುಗಳನ್ನು ಜಯಿಸಿದ್ದನೆಂದು ಹೇ-
ವಿರೋಧವು ಪರಿಹಾರವಾಗುವುದು. ಹಾಗೆಯೇ ಚಾರದೃಕ್ ಆದರೂ ವಿ-
ದೃಕ್ ಆಗಿದ್ದನೆಂಬಲ್ಲಿ ವಿರೋಧವಿದೆ. ಇಲ್ಲಿ ವಿರೋಧವನ್ನು ಪರಿಹರಿಸುವ-
ಹೇಳುವ ಸಮಾಧಾನವು ಉತ್ಪ್ರೇಕ್ಷೆ ಎನಿಸಿದೆ. ಇದನ್ನು ಇಲ್ಲಿ ವಿರೋಧಾಭಾ-
ಅವಲಂಬಿಸಿದೆ. ಹಿಂದಿನ ಉದಾಹರಣಕ್ಕೂ ಇದಕ್ಕೂ ಇಷ್ಟೇ ವಿಶೇಷ.

## ೩೪. ವಿಭಾವನಾಲಂಕಾರ

ವಿಭಾವನಾ ವಿನಾಪಿ ಸ್ಯಾತ್ಕಾರಣಂ ಕಾರ್ಯಜನ್ಮ ಚೇತ್ ।
ಅಪ್ಯಲಾಕ್ಷಾರಸಾಸಿಕ್ತಂ ರಕ್ತಂ ತಚ್ಚರಣದ್ವಯಮ್ ॥

ಅತ್ರ ಲಾಕ್ಷಾರಸಾಸೇಕರೂಪಕಾರಣಾಭಾವೇಽಪಿ ರಕ್ತಿಮಾ ಕಥಿತಃ. ಸ್ವಾಭಾ-
ತ್ವೇನ ವಿರೋಧಪರಿಹಾರಃ. ಯಥಾ ವಾ—

ಅಪೀತಕ್ಷೀಬಕಾದಂಬಮಸಂಮೃಷ್ಟಾಮಲಾಂಬರಮ್ ।
ಅಪ್ರಸಾದಿತಸೂಕ್ಷ್ಮಾಂಬು ಜಗದಾಸೀನ್ಮನೋರಮಮ್ ॥

ಅತ್ರ ಪಾನಾದಿಪ್ರಸಿದ್ಧಹೇತ್ವಭಾವೇಽಪಿ ಕ್ಷೀಬತ್ವಾದಿ ನಿಬದ್ಧಮ್ ವಿಭಾ-
ಮಾನಶರತ್ಸಮಯಹೇತುಕತ್ವೇನ ವಿರೋಧಪರಿಹಾರಃ. ಯಥಾ ವಾ—

ವರತನುಕಬರೀವಿಧಾಯಿನಾ ಸುರಭಿನಖೇನ ನರೇಂದ್ರಪಾಣಿನಾ ।
ಅವಚಿತಕುಸುಮಾಪಿ ವಲ್ಲರೀ ಸಮಜನಿ ವೃಂತನಿಲೀನಷಟ್ಪದಾ ॥

ಅತ್ರ ವಲ್ಲರ್ಯಾಂ ಪುಷ್ಪಾಭಾವೇಽಪಿ ಭೃಂಗಾಲಿಂಗನಂ ನಿಬದ್ಧಂ ತತ್ರ ವರತ-
ಕಬರೀಸಂಕ್ರಾಂತಸೌರಭನರಪತಿನಖಸಂಸರ್ಗರೂಪಂ ಹೇತ್ವಂತರಂ ವಿಶೇಷಣಮು-
ದರ್ಶಿತಮಿತಿ ವಿರೋಧಪರಿಹಾರಃ

ಒಂದು ಕಾರ್ಯವು ಹುಟ್ಟಲಿಕ್ಕೆ ಆವಶ್ಯಕವೆನಿಸಿದ ಕಾರಣವಿಲ್ಲದೆಯೇ
ಕಾರ್ಯವು ಹುಟ್ಟುವುದೆಂದು ವರ್ಣಿಸುವುದೇ ವಿಭಾವನೆ ಎನಿಸುವುದು. "ಲಾಕ್ಷಾ-
ರಸವನ್ನು ಹಚ್ಚದೆ ಇದ್ದರೂ ಅವಳ ಪಾದಗಳು ಕೆಂಪಾಗಿವೆ ? ಲೋಕದಲ್ಲಿ ಅರಗ-
ದ್ರವವನ್ನು ಹಚ್ಚುವುದೇ ಕಾಲುಗಳ ಕೆಂಪಿಗೆ ಕಾರಣವೆನಿಸಿದೆ. ಆದರೆ
ಅದಿಲ್ಲದೆಯೇ ಕಾಲುಗಳು ಕೆಂಪಾಗಿವೆ ಎಂದು ತಿಳಿಸಿದೆ. ಹಾಗೆ ಕಾರಣವಿಲ್ಲದಿದ್ದರೂ
ಕಾರ್ಯವು ಹುಟ್ಟಿರುವ ಪ್ರಯುಕ್ತ ಇದು ವಿಭಾವನೆ ಎನಿಸಿದೆ. ಕಾಲುಗಳು ಸಹಜ-
ವಾಗಿ ಕೆಂಪಾಗಿದ್ದುದರಿಂದ ವಿರೋಧವು ಪರಿಹಾರವಾಗಿದೆ.

"ಮಧುವನ್ನು ಕುಡಿಯದೆಯೇ ಮದಿಸಿದ ಕಲಹಂಸಪಕ್ಷಿಗಳಿಂದಲೂ, ಗುಡಿಸದೆಯೇ ನಿರ್ಮಲವಾದ ಆಕಾಶದಿಂದಲೂ, ಬಟ್ಟೆಯಿಂದ ಶೋಧಿಸದೆಯೇ ಸ್ವಚ್ಛವಾದ ನೀರಿನಿಂದಲೂ ತುಂಬಿರುವ ಈ ಜಗತ್ತು ಮನೋಹರವಾಗಿದೆ." ಇಲ್ಲಿ ಮಧುಪಾನವೇ ಮೊದಲಾದ ಪ್ರಸಿದ್ಧವಾದ ಕಾರಣಗಳಿಲ್ಲದಿದ್ದರೂ ಮದಿಸುವಿಕೆ ಮೊದಲಾದ ಕಾರ್ಯಗಳು ಹುಟ್ಟಿರುವುದಾಗಿ ತಿಳಿಸಿದೆ. ಆದರೆ ಇಲ್ಲಿ ವರ್ಣಿಸ ಬೇಕಾಗಿರುವ ಶರತ್ಕಾಲದ ಸನ್ನಿವೇಶವಿರುವ ಪ್ರಯುಕ್ತ ಆ ಕಾಲದಲ್ಲಿ ಸಹಜ ವಾಗಿಯೇ ಕಲಹಂಸಗಳು ಮದಿಸಿದ್ದು, ಆಕಾಶವು ನಿರ್ಮಲವಾಗಿದ್ದು, ನೀರು ಶುದ್ಧ ವಾಗಿಯೂ ಇರುವುದರಿಂದ ವಿರೋಧವು ಪರಿಹಾರವಾಗುತ್ತದೆ. ನಾಯಿಕೆಯ ಕೇಶಪಾಶವನ್ನು ಸಜ್ಜಾಗಿ ನೆಲೆಗೊಳಿಸಿದ್ದರಿಂದ ಸುಗಂಧಮಯವಾಗಿದ್ದ ಉಗುರು ಗಳಿಂದ ಕೂಡಿದ ಹಸ್ತದಿಂದ ರಾಜನು ಹೂವುಗಳನ್ನು ಕೊಯ್ದಿದ್ದರೂ ಸಹ ಲತೆಯಲ್ಲಿ ದುಂಬಿಗಳು ಅಂಟಿಕೊಂಡಿದ್ದವು." ಲತೆಯಲ್ಲಿ ಹೂವುಗಳಿಲ್ಲದಿದ್ದರೂ ದುಂಬಿಗಳು ಸೇರಿಕೊಂಡಿದ್ದವೆಂದು ಇಲ್ಲಿ ತಿಳಿಸಿದೆ. ರಾಜನು ತನ್ನ ಉಗುರುಗಳಿಂದ ಪ್ರೇಯಸಿಯ ಕೇಶಪಾಶವನ್ನು ಸಜ್ಜುಮಾಡಿದ್ದುದರಿಂದ ಅಲ್ಲಿಯ ಸುಗಂಧವು ಬೆರಳುಗಳಿಗೆ ಅಂಟಿತ್ತು. ಆ ಬೆರಳುಗಳಿಂದ ಅವನು ಹೂವುಗಳನ್ನು ಕೊಯ್ದಿರುವನು. ಆಗ ಬೆರಳುಗಳ ಸುಗಂಧವು ವೃಂತಗಳಿಗೆ ಅಂಟಿಕೊಂಡಿತ್ತು. ಆ ಸುಗಂಧದ ಮೇಲಿನ ಆಶೆಯಿಂದ ದುಂಬಿಗಳು ಅಲ್ಲಿ ಮುತ್ತಿದ್ದವು. ಹೀಗೆ ಲತೆಗಳಲ್ಲಿ ಪುಷ್ಪಗಳಿಲ್ಲ ದಿದ್ದರೂ ಉಗುರುಗಳ ಸುಗಂಧವು ಅಂಟಿದ್ದುದರಿಂದ ಅಲ್ಲಿ ದುಂಬಿಗಳಿರಲಿಕ್ಕೆ ಅವಕಾಶ ವಾಯಿತು. ಹೀಗೆ ಬೇರೆಂದು ಕಾರಣವನ್ನು ವಿಶೇಷಣದ ಮೂಲಕ ಇಲ್ಲಿ ತಿಳಿಸಿದ ಪ್ರಯುಕ್ತ ವಿರೋಧವು ಪರಿಹಾರವಾಯಿತು.

ಹೇತೂನಾಮಸಮಗ್ರತ್ವೇ ಕಾರ್ಯೋತ್ಪತ್ತಿಶ್ಚ ಸಾ ಮತಾ ।
ಅಸ್ತ್ರೈರತೀಕ್ಷ್ಣಕಠಿನೈರ್ಜಗಜ್ಜಯತಿ ಮನ್ಮಥಃ ॥೭೭॥

ಅತ್ರ ಜಗಜ್ಜಯೇ ಸಾಧ್ಯೇ ಹೇತೂನಾಮಸ್ತ್ರಾಣಾಂ ಅಸಮಗ್ರತ್ವಂ ತೀಕ್ಷ್ಣತ್ವಾದಿ ಗುಣವೈಕಲ್ಯಮ್. ಯಥಾ ವಾ–

ಉದ್ಯಾನಮಾರುತೋದ್ಧೂತಾಶ್ಚೂತಚಂಪಕರೇಣವಃ ।
ಉದಸ್ರಯಂತಿ ಪಾಂಥಾನಾಂ ಅಸ್ಪೃಶಂತೋ ವಿಲೋಚನೇ ॥

ಅತ್ರ ಬಾಷ್ಪೋದ್ಗಮನಹೇತೂನಾಂ ಅಸಮಗ್ರತ್ವಂ ಸ್ಪರ್ಶನಕ್ರಿಯಾ ವೈಕಲ್ಯಮ್. ಇಮಾಂ ವಿಶೇಷೋಕ್ತಿರಿತಿ ದಂಡೀ ವ್ಯಾಜಹಾರ—ಯತಸ್ತತ್ರ ಪ್ರಥಮೋದಾಹರಣೇ ಮನ್ಮಥಸ್ಯ ಮಹಿಮಾತಿಶಯರೂಪೇ ದ್ವಿತೀಯೋದಾಹರಣೇ ಚಂಪಕರೇಣೂನಾಂ ಉದ್ದೀಪಕತ್ವಾತಿಶಯರೂಪವಿಶೇಷಃ ಖ್ಯಾಪ್ಯತ ಇತಿ. ಅಸ್ಮಾಭಿಸ್ತು

ತೀಕ್ಷ್ಣತ್ವಾದಿವೈಕಲ್ಯಮಪಿ ಕಾರಣವಿಶೇಷಾಭಾವರೂಪಮಿತಿ ವಿಭಾವ... ಪ್ರದರ್ಶಿತಾ.

ಒಂದು ಕಾರ್ಯವು ಹುಟ್ಟಲಿಕ್ಕೆ ಬೇಕಾಗುವಷ್ಟು ಕಾರಣಸಾಮಗ್ರಿಗಳು ... ದಿದ್ದರೂ ಕಾರ್ಯವು ಹುಟ್ಟುವುದೆಂದು ವರ್ಣಿಸುವುದೇ ವಿಭಾವನೆ ಎನಿಸು... "ತೀಕ್ಷ್ಣವೂ ಕಠಿನವೂ ಅಲ್ಲದ ಅಸ್ತ್ರಗಳಿಂದಲೇ ಮನ್ಮಥನು ಜಗತ್ತೆಲ್ಲವನ್ನೂ ... ವನು." ಇಲ್ಲಿ ಜಗತ್ತನ್ನು ಜಯಿಸಲು ಬೇಕಾಗಿರುವ ಕಾರಣಗಳೆಂದರೆ ತೀಕ್ಷ್ಣ... ಕಠಿನವೂ ಆದ ಬಾಣಗಳೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಇಲ್ಲಿ ಅಂತಹ ಕಾ... ವಿಲ್ಲದಿದ್ದರೂ ಜಗದ್ವಿಜಯವೆಂಬ ಕಾರ್ಯವು ನಡೆದಿರುವುದಾಗಿ ತಿಳಿಸಿದೆ. ... ಕಾರಣವು ಸಾಕಷ್ಟು ಪ್ರಮಾಣದಲ್ಲಿ ಇಲ್ಲದೇ ಇದ್ದರೂ ಕಾರ್ಯವು ಹುಟ್ಟಿರು... ರಿಂದ ಕಾರಣದಲ್ಲಿ ಗುಣವೈಕಲ್ಯವು ಕಂಡುಬಂದಿದೆ. "ಉದ್ಯಾನವನದಲ್ಲಿ ಬೀಸು... ಗಾಳಿಯಿಂದ ಅಳ್ಳಾಡುತ್ತಿರುವ ಮಾವು ಸಂಪಿಗೆ ಹೂವುಗಳ ಧೂಳು ದಾ... ಕಣ್ಣುಗಳನ್ನು ಮುಟ್ಟದೆಯೇ ಅವುಗಳಿಂದ ನೀರನ್ನು ಸುರಿಸುತ್ತಿವೆ ?" ಧೂಳು ಕಣ್ಣ... ಬಿದ್ದಿದ್ದರೆ ಅಲ್ಲಿಂದ ನೀರು ಸುರಿಯುಬಹುದಾಗಿತ್ತು ಆದರೆ ಕಣ್ಣನ್ನು ಮು... ದೆಯೇ ಅವು ಅಲ್ಲಿಂದ ನೀರನ್ನು ಹೊರಹೊಮ್ಮಿಸಿದವೆಂದು ಇಲ್ಲಿ ಹೇಳಿದ್ದ... ಸ್ಪರ್ಶನಕ್ರಿಯೆಯಲ್ಲದೆ ಕಾರಣದಲ್ಲಿ ಒಂದು ಬಗೆಯ ನ್ಯೂನತೆಯಾಯಿ... ಇದನ್ನು ವಿಶೇಷೋಕ್ತಿ ಎಂದು ದಂಡಿಯು ಕರೆದಿರುವನು. ಮೊದಲ... ಉದಾಹರಣದಲ್ಲಿ ಮನ್ಮಥನ ಮಹಿಮಾತಿಶಯವೆಂಬ ವಿಶೇಷವನ್ನೂ, ಎರಡ... ದರಲ್ಲಿ ಸಂಪಿಗೆ ಹೂವುಗಳ ಧೂಳುಗಳು ದಾರಿಗರ ಮನಸ್ಸಿನಲ್ಲಿ ಭಾವವಿಕಾರ... ಹೆಚ್ಚಿಸಿದವೆಂಬ ವಿಶೇಷವನ್ನೂ ತಿಳಿಸಿದೆ ಎಂಬುದು ಅವನ ಅಭಿಪ್ರಾಯ. ನಾ... ದರೋ ಕಾರಣದಲ್ಲಿ ತೀಕ್ಷ್ಣತ್ವ ಮೊದಲಾದ ಗುಣಗಳಿಲ್ಲದ್ದನ್ನು ಕಾರಣ... ವಿಲ್ಲವೆಂದೇ ಭಾವಿಸಿ ಇದನ್ನು ವಿಭಾವನೆ ಎಂದೇ ಕರೆದಿದ್ದೇವೆ.

> ಕಾರ್ಯೋತ್ಪತ್ತಿಸ್ತೃತೀಯಾ ಸ್ಯಾತ ತ್ಸಪಿ ಪ್ರತಿಬಂಧಕೇ।
> ನರೇಂದ್ರಾನೇವ ತೇ ರಾಜನ್ ದಶತ್ಯಸಿಭುಜಂಗಮಃ ॥೭೮॥

ಅತ್ರ ನರೇಂದ್ರಾಃ ವಿಷವೈದ್ಯಾಃ ಸರ್ಪದಂಶಪ್ರತಿಬಂಧಕಮಂತ್ರೌಷಧಿ... ಶ್ಲೇಷೇಣ ಗೃಹೀತಾಃ ಇತಿ ಸತ್ಯೇವ ಪ್ರತಿಬಂಧಕೇ ಕಾರ್ಯೋತ್ಪತ್ತಿಃ. ಯಥಾ ವಾ-

> ಚಿತ್ರಂ ತಪತಿ ರಾಜೇಂದ್ರ ಪ್ರತಾಪತಪನಸ್ತವ ।
> ಅನಾತಪತ್ರಮುತ್ಸೃಜ್ಯ ಸಾತಪತ್ರಂ ದ್ವಿಷದ್ಗಣಮ್ ॥

ಕಾರ್ಯವು ಹುಟ್ಟಲಿಕ್ಕೆ ಸಾಕಷ್ಟು ತಡೆಯಿದ್ದರೂ ಸಹ ಎಲ್ಲಿ ಕಾರ್ಯ... ಹುಟ್ಟುವುದೆಂದು ಹೇಳಿದೆಯೋ ಅದು ವಿಭಾವನೆಯ ಮೂರನೆಯ ಬಗೆ ಎನಿಸು... "ಮಹಾರಾಜನೇ, ನಿನ್ನ ಕತ್ತಿ ಎಂಬ ಸರ್ಪವು ವಿಷವೈದ್ಯರನ್ನೇ ಕಚ್ಚುತ್ತದೆ."

"ನರೇಂದ್ರ" ಎಂಬ ಪದವು ಹಾವು ಕಚ್ಚಿದರೆ ಆಗರ ಪ್ರಭಾವವನ್ನು ತಡೆಯುವಂತಹ ಮಂತ್ರೌಷಧಗಳನ್ನು ತಿಳಿದಿರುವ ವಿಷವೈದ್ಯರನ್ನು ಶ್ಲೇಷದಿಂದ ಬೋಧಿಸುತ್ತದೆ. ಹೀಗೆ ಮಂತ್ರೌಷಧವೆಂಬ ಪ್ರತಿಬಂಧಕವಿದ್ದರೂ ಹಾವು ಕಚ್ಚಿತೆಂದು ಇಲ್ಲಿ ಹೇಳಿದೆ. "ಮಹಾರಾಜನೇ" ನಿನ್ನ ಪ್ರತಾಪವೆಂಬ ಸೂರ್ಯನು ಛತ್ರವಿಲ್ಲದವರನ್ನು ಬಿಟ್ಟು ಛತ್ರ ದೊಡಗೂಡಿದ ಶತ್ರುವೃಂದವನ್ನು ಸುಡುತ್ತದೆ." ಸೂರ್ಯನ ತಾಪವು ಅಂಟಲಿಕ್ಕೆ ಕೊಡೆ ಪ್ರತಿಬಂಧಕವೆನಿಸಿದ್ದರೂ ತಾಪದ ಕಾರ್ಯವು ಇಲ್ಲಿ ನಡೆದಿದೆ.

ಅಕಾರಣಾತ್ಕಾರ್ಯಜನ್ಮ ಚತುರ್ಥೀ ಸ್ಯಾದ್ವಿಭಾವನಾ ।
ಶಂಖಾದ್ವೀಣಾನಿನಾದೋಽಯಮುದೇತಿ ಮಹದದ್ಭುತಮ್ ॥

ಅತ್ರ ಶಂಖಶಬ್ದೇನ ಕಮನೀಯಃ ಕಾಮಿನೀಕಂಠಃ, ತಂತ್ರೀನಿನಾದತ್ವೇನ ತದ್ಗೀತಂ ಚ ಅಧ್ಯವಸೀಯತ ಇತ್ಯಕಾರಣಾತ್ಕಾರ್ಯಜನ್ಮ. ಯಥಾ ವಾ–

ತಿಲಪುಷ್ಪಾತ್ಸಮಾಯಾತಿ ವಾಯುಃಶ್ಚಂದನಸೌರಭಃ ।
ಇಂದೀವರಯುಗಾಚ್ಚಿತ್ರಂ ನಿಸ್ಸರಂತಿ ಶಿಲೀಮುಖಾಃ ॥

ಕಾರಣವಲ್ಲದ ವಸ್ತುವಿನಿಂದ ಕಾರ್ಯವು ಹುಟ್ಟುವುದೇ ವಿಭಾವನೆಯ ನಾಲ್ಕನೆಯ ಬಗೆ ಎನಿಸಿದೆ. ಶಂಖದಿಂದ ವೀಣಾಧ್ವನಿ ಹೊರಡುತ್ತಿದೆ ಎಂಬುದೇ ಒಂದು ಹೆಚ್ಚಿನ ಆಶ್ಚರ್ಯವೆನಿಸಿದೆ. ಇಲ್ಲಿ ಶಂಖವೆಂದರೆ ಸುಂದರವಾದ ಸ್ತ್ರೀಕಂಠ ವೆಂದೂ, ವೀಣೆಯ ನಾದವೆಂದರೆ ಆಕೆಯ ಹಾಡೆಂದೂ ನಿಶ್ಚಯಿಸಲಾಗಿದೆ. ವೀಣಾ ನಾದ ಶಂಖದಿಂದ ಹೊರಡಲಾರದು. ಆದರೂ ಅದರಿಂದ ವೀಣಾನಾದವು ಹುಟ್ಟಿತೆಂದು ಇಲ್ಲಿ ವರ್ಣಿಸಿದ ಪ್ರಯುಕ್ತ ಕಾರಣವಲ್ಲದ ವಿಸ್ತುವಿನಿಂದ ಕಾರ್ಯವು ಹುಟ್ಟಿದೆ ಎಂದು ತಿಳಿಸಲಾಗಿದೆ.

"ಎಳ್ಳಿನ ಹೂವಿನಿಂದ ಶ್ರೀಗಂಧದ ಸುಗಂಧವನ್ನೊಳಗೊಂಡ ಗಾಳಿ ಬೀಸುತ್ತದೆ. ಕನ್ನೈದಿಲೆಗಳೆರಡರಿಂದ ಬಾಣಗಳು ಹೊರಗೆ ಬರುತ್ತವೆ. ಇದು ವಿಚಿತ್ರವೇ ಸರಿ." ಶ್ರೀಗಂಧದ ಸುಗಂಧವು ಎಳ್ಳಿನ ಹೂವಿನಿಂದ ಬರುವುದೆಂದರೆ ಕಾರಣವಲ್ಲದ ವಸ್ತು ವನಿಂದ ಕಾರ್ಯವು ಹುಟ್ಟಿದಂತಾಯಿತು.

ವಿರುದ್ಧಾತ್ಕಾರ್ಯಸಂಪತ್ತಿಃ ದೃಷ್ಟಾ ಕಾಚಿದ್ವಿಭಾವನಾ ।
ಶೀತಾಂಶುಕಿರಣಾಸ್ತನ್ವೀಂ ಹಂತ ಸಂತಾಪಯಂತಿ ತಾಮ್ ।

ಅತ್ರ ತಾಪನಿವರ್ತಕತಯಾ ತಾಪವಿರುದ್ಧೈಃ ಇಂದುಕಾರಣೈಃ ತಾಪಜನಿರುಕ್ತಾ. ಯಥಾ ವಾ–

ಉದಿತೇ ಕುಮಾರಸೂರ್ಯೇ ಕುವಲಯಮುಲ್ಲಸತಿ ಭಾತಿ ನಕ್ಷತ್ರಮ್।
ಮುಕುಲೀಭವಂತಿ ಚಿತ್ರಂ ಪರರಾಜಕುಮಾರಪಾಣಿಪದ್ಮಾನಿ ॥

ಯಥಾ ವಾ–

ಅವಿವೇಕಿ ಕುಚದ್ವಂದ್ವಂ ಹಂತು ನಾಮ ಜಗತ್ತ್ರಯಮ್ ।
ಶ್ರುತಿಪ್ರಣಯಿನೋರಕ್ಷ್ಣೋರಯುಕ್ತಂ ಜನಮಾರಣಮ್ ॥

ಪೂರ್ವೋದಾಹರಣಯೋಃ ಕಾರಣಸ್ಯ ಕಾರ್ಯವಿರೋಧಿತ್ವಮ್ ; ಇಹ ತು
ಶ್ರುತಿಪ್ರಣಯಿತ್ವರೂಪಾಗಂತುಕಗುಣಪ್ರಯುಕ್ತಮಿತಿ ಭೇದಃ.

ಯಾವ ಕಾರ್ಯಕ್ಕೆ ಯಾವುದರ ಸಂಪರ್ಕದಿಂದ ತಡೆಯುಂಟೋ ಅಂತಹ
ವಿರುದ್ಧವಾದ ಕಾರಣದಿಂದ ಕಾರ್ಯವು ಹುಟ್ಟುವುದಾಗಿ ವರ್ಣಿಸುವುದೇ ವಿಭಾವ
ನೆಯ ಐದನೆಯ ಬಗೆ ಎನಿಸುತ್ತದೆ. ''ಚಂದ್ರನ ಕಿರಣಗಳು ಕೃಶಾಂಗಿಯನ್ನು
ಸುಡುತ್ತಿವೆ.'' ಸಂತಾಪವನ್ನು ಪರಿಹರಿಸಬಹುದಾದ ಚಂದ್ರಕಿರಣಗಳು ಸಂತಾಪ
ವನ್ನುಂಟುಮಾಡುತ್ತವೆ ಎಂದು ಹೇಳಿದ್ದರಿಂದ ವಿರುದ್ಧವಾದ ವಸ್ತುವಿನಿಂದ
ಕಾರ್ಯವು ಹುಟ್ಟಿದ ಪ್ರಯುಕ್ತ ಇದು ವಿಭಾವನೆ ಎನಿಸಿದೆ. "ರಾಜಕುಮಾರನೆಂಬ
ಸೂರ್ಯನು ಉದಯಿಸಲು ಕನ್ನೈದಿಲೆಯು ವಿಲಾಸವನ್ನು ಹೊಂದುತ್ತದೆ ; ನಕ್ಷತ್ರ
ಶೋಭಿಸುತ್ತದೆ. ಶತ್ರುರಾಜರ ಮಕ್ಕಳ ಹಸ್ತಕಮಲಗಳು ಮುದುರಿಕೊಳ್ಳುತ್ತವೆ"
ಇಲ್ಲಿ ಸೂರ್ಯನು ಕನ್ನೈದಿಲೆಗಳ ವಿಕಾಸಕ್ಕೂ ನಕ್ಷತ್ರಗಳ ಪ್ರಕಾಶಕ್ಕೂ ಪ್ರತಿಬಂಧಕ.
ಹಾಗೆ ಪ್ರತಿಬಂಧಕವಿದ್ದರೂ ಕಾರ್ಯವು ಹುಟ್ಟಿದುದಾಗಿ ಇಲ್ಲಿ ತಿಳಿಸಿದೆ. ಆದರೆ
ಇಲ್ಲಿ ವಿರೋಧವಿದ್ದರೂ ಕುವಲಯವೆಂದರೆ ಭೂಮಂಡಲವೆಂದೂ, ನಕ್ಷತ್ರವೆಂದರೆ
ಕ್ಷತ್ರಿಯ ಕುಲವು ಶೋಭಿಸಲಿಲ್ಲವೆಂದೂ ಶ್ಲೇಷದಿಂದ ಅರ್ಥವನ್ನು ಹೇಳಿದರೆ
ವಿರೋಧವು ತೊಲಗುತ್ತದೆ.

"ಒಂದಕ್ಕೊಂದು ಕೂಡಿಕೊಂಡು ಅಗಲದೇ ಇರುವ ಕುಚಗಳೆರಡು ಪ್ರಪಂಚ
ವನ್ನು ಹಾಳುಮಾಡಲಿ ; ಆದರೆ ಕಿವಿಯ ಸಂಪರ್ಕವೆಂಬ ವೇದಾರ್ಥಜ್ಞಾನವನ್ನು
ಹೊಂದಿರುವ ಕಣ್ಣುಗಳೆರಡು ಜನರನ್ನು ಕೊಲ್ಲುತ್ತವೆ ಎಂಬುದು ಯುಕ್ತವಲ್ಲ"
ಶಾಸ್ತ್ರಜ್ಞಾನಸಂಪತ್ತು ಮತ್ತು ಜನಮಾರಣ ಇವೆರಡಕ್ಕೂ ಕಾರ್ಯಕಾರಣಭಾವ
ಹೊಂದುವುದಿಲ್ಲ. ಶಾಸ್ತ್ರಜ್ಞಾನವುಳ್ಳವನು ಜನರನ್ನು ಕೊಲೆ ಮಾಡಲಾರನು. ಹೀಗೆ
ಇವೆರಡಕ್ಕೂ ದೈಶಿಕವಿರೋಧವಿದೆ. ಜನರ ಕೊಲೆಗೆ ವಿರುದ್ಧವಾದ ವಸ್ತುವಿನಿಂದ
ಅದು ಆಗಿರುವ ಪ್ರಯುಕ್ತ ಇದು ವಿಭಾವನೆ ಎನಿಸಿದೆ. ಹಿಂದಿನ ಉದಾಹರಣೆಗಳಲ್ಲಿ
ಕಾರಣವು ಕಾರ್ಯವನ್ನು ವಿರೋಧಿಸುವುದೆಂಬುದೇ ಸಹಜ. ಇಲ್ಲಿಯಾದರೂ ಶಾಸ್ತ್ರ
ಜ್ಞಾನಸಂಪತ್ತಿ ಎಂಬ ಗುಣವು ಒಬ್ಬನಲ್ಲಿ ಆಗಂತುಕವಾಗಿ ಬಂದಿದ್ದು ಅದಿದ್ದರೂ
ಜನರ ಕೊಲೆಯಾಯಿತೆಂದು ವಿರುದ್ಧವಸ್ತುವಿನಿಂದ ಕಾರ್ಯೋತ್ಪತ್ತಿಯನ್ನು ತಿಳಿಸಿದೆ.

ಕಾರ್ಯಾತ್ಕಾರಣಜನ್ಮಾಪಿ ದೃಷ್ಟಾ ಕಾಚಿದ್ವಿಭಾವನಾ।
ಯಶಃ ಪಯೋರಾಶಿರಭೂತ್ಕರಕಲ್ಪತರೋರಿವ ॥೮೧॥

ಜಾತಾ ಲತಾ ಹಿ ಶೈಲೇ ಜಾತು ಲತಾಯಾಂ ನ ಜಾಯತೇ ಶೈಲಃ ।
ಸಂಪ್ರತಿ ತದ್ವಿಪರೀತಂ ಕನಕಲತಾಯಾಂ ಗಿರಿದ್ವಯಂ ಜಾತಮ್ ॥

ಕಾರ್ಯದಿಂದ ಕಾರಣವು ಹುಟ್ಟುವುದೂ ಸಹ ವಿಭಾವನೆಯೇ. "ನಿನ್ನ ಹಸ್ತವೆಂಬ ಕಲ್ಪವೃಕ್ಷದಿಂದ ಕೀರ್ತಿ ಎಂಬ ಸಮುದ್ರವು ಹುಟ್ಟಿತು". ಸಮುದ್ರದಲ್ಲಿ ಕಲ್ಪವೃಕ್ಷವು ಹುಟ್ಟುತ್ತದೆ ಎಂಬುದೇ ಲೋಕದಲ್ಲಿ ಪ್ರಸಿದ್ಧವಾಗಿದೆ. ಆದರೆ ಕಲ್ಪ ವೃಕ್ಷದಿಂದ ಸಮುದ್ರವು ಹುಟ್ಟಿದ್ದಾಗಿ ಇಲ್ಲಿ ವರ್ಣಿಸಿದೆ. ಸಮುದ್ರದ ಕಾರ್ಯ ವೆನಿಸಿದ ಕಲ್ಪವೃಕ್ಷವು ಇಲ್ಲಿ ಸಮುದ್ರಕ್ಕೆ ಕಾರಣವೆನಿಸಿದ್ದಾಗಿ ಹೇಳಿದ್ದರಿಂದ ಇದು ವಿಭಾವನೆಯ ಆರನೆಯ ಬಗೆ ಎನಿಸಿದೆ. ರಾಜನ ಹಸ್ತವು ಯಥೇಚ್ಛವಾಗಿ ದಾನ ಮಾಡಿ ಹೆಚ್ಚಿನ ಕಾರ್ಯವನ್ನು ಗಳಿಸಿತ್ತೆಂದು ಹೇಳಿದರೆ ವಿರೋಧವು ತೊಲಗು ವುದು. "ಬೆಟ್ಟವಲ್ಲಿ ಲತೆ ಹುಟ್ಟುತ್ತದೆ ; ಆದರೆ ಲತೆಯಲ್ಲಿ ಬೆಟ್ಟವು ಎಂದಿಗೂ ಹುಟ್ಟುವುದಿಲ್ಲ. ಆದರೆ ಈಗ ಅದಕ್ಕೆ ವಿರುದ್ಧವಾಗಿ ಕನಕಲತೆಯಲ್ಲಿ ಬೆಟ್ಟಗಳೆರಡು ಹುಟ್ಟಿವೆ." ಇಲ್ಲಿ ಕನಕಲತೆಯೇ ಕಾರ್ಯ, ಇದರಿಂದ ಕಾರಣವೆನಿಸಿದ ಬೆಟ್ಟಗಳೆರಡು ಹುಟ್ಟಿವೆ ಎಂದು ಹೇಳಿದ್ದರಿಂದ ವಿರೋಧವು ತೋರುತ್ತದೆ. ಕನಕಲತೆ ಎನಿಸಿದ ನಾಯಿಕೆಯಲ್ಲಿ ಸ್ತನಗಳೆರಡು ಹುಟ್ಟಿದವೆಂದು ಹೇಳಿದರೆ ವಿರೋಧವು ತೊಲಗುತ್ತದೆ.

ಕಾರ್ಯಾಜನಿರ್ವಿಶೇಷೋಕ್ತಿಃ ಸತಿ ಪುಷ್ಕಲಕಾರಣೇ ।
ಹೃದಿ ಸ್ನೇಹಕ್ಷಯೋ ನಾಭೂತ್ ಸ್ಮರದೀಪೇ ಜ್ವಲತ್ಯಪಿ ॥೮೨॥

ಯಥಾ ವಾ-

ಅನುರಾಗವತೀ ಸಂಧ್ಯಾ ದಿವಸಸ್ತತ್ಪುರಸ್ಸರಃ ।
ಅಹೋ ದೈವಗತಿಶ್ಚಿತ್ರಾ ತಥಾಪಿ ನ ಸಮಾಗಮಃ ॥

ಸಮಗ್ರವಾದ ಕಾರಣವಿದ್ದರೂ ಕಾರ್ಯವು ಹುಟ್ಟದಿರುವುದೇ ವಿಶೇಷೋಕ್ತಿ ಎನಿಸುವುದು. "ಹೃದಯದಲ್ಲಿ ಕಾಮದೀಪವು ಉರಿಯುತ್ತಿದ್ದರೂ ಸಹ ಸ್ನೇಹವು ಕಡಮೆಯಾಗಲಿಲ್ಲ" "ಅನುರಾಗ (ಕೆಂಪುಬಣ್ಣ)ವುಳ್ಳ ಸಂಧ್ಯಾಕಾಲವಿದೆ : ಅದನ್ನು ಅನುಸರಿಸುವ ಹಗಲಿದೆ. ಇಷ್ಟೆಲ್ಲ ಇದ್ದರೂ ಸಹ ಸಮಾಗಮವಾಗಲಿಲ್ಲ. ವಿಧಿ ವಿಲಾಸವು ವಿಚಿತ್ರವಾದುದು." ಇಲ್ಲಿ ಮೊದಲನೆಯ ಉದಾಹರಣದಲ್ಲಿ ದೀಪ ಉರಿಯುತ್ತಿರುವುದೇ ಕಾರಣಸಾಮಗ್ರಿ. ಆದಿದ್ದರೂ ಎಣ್ಣೆ ಮುಗಿಯಲಿಲ್ಲ. ದೀಪವು ಉರಿಯುತ್ತಿರುವಾಗ ಎಣ್ಣೆ ಮುಗಿಯಬೇಕಾಗಿತ್ತು. ಇಲ್ಲಿ ಮುಗಿಯಲಿಲ್ಲ. ಕಾಮವು ಹೆಚ್ಚಿದಂತೆಲ್ಲಾ ಸ್ನೇಹವು ಬೆಳೆಯುತ್ತದೆಯಾದ್ದರಿಂದ ವಿರೋಧ ಪರಿಹಾರ ವೆಂದು ವರ್ಣಿಸಿರುವುದರಿಂದ ಇದು ವಿಶೇಷೋಕ್ತಿ ಎನಿಸದೆ. ಕಾಮವು ಹೆಚ್ಚಿದಂತೆಲ್ಲಾ ಸ್ನೇಹವು ಬೆಳೆಯುತ್ತದೆಯಾದ್ದರಿಂದ ವಿರೋಧವು ಪರಿಹಾರವಾಗಿದೆ. ಎರಡನೆಯ ಉದಾಹರಣದಲ್ಲಿ ನಾಯಕನಾಯಿಕೆಯರ ಸಮಾಗಮವೇ ಕಾರ್ಯ.

ಸಂಧ್ಯಾನುರಾಗ ಮೊದಲಾದ ಕಾರಣವಿದ್ದರೂ ಕಾರ್ಯವು ಹುಟ್ಟಲಿಲ್ಲವೆಂದು ಇಲ್ಲಿ ತಿಳಿಸಿದ್ದು ವಿಶೇಷೋಕ್ತಿ ಎನಿಸಿದೆ.

## ೩೬. ಅಸಂಭವಾಲಂಕಾರ

ಅಸಂಭವೋಽರ್ಥನಿಷ್ಪತ್ತೇರಸಂಭಾವ್ಯತ್ವವರ್ಣನಮ್ ।
ಕೋ ವೇದ ಗೋಪಶಿಶುಕಃ ಶೈಲಮುತ್ಪಾಟಯೇದಿತಿ ॥೮೩॥

ಯಥಾ–

ಅಯಂ ವಾರಾಮೇಕೋ ನಿಲಯ ಇತಿ ರತ್ನಾಕರ ಇತಿ
ಶ್ರಿತೋಽಸ್ಮಾಭಿಸ್ತೃಷ್ಣಾತರಲಿತಮನೋಭಿರ್ಜಲನಿಧಿಃ ।
ಕ ಏವಂ ಜಾನೀತೇ ನಿಜಕರಪುಟೀಕೋಟರಗತಂ
ಕ್ಷಣಾದೇನಂ ತಾಮ್ಯತ್ತಿಮಿಮಕರಮಾಪಾಸ್ಯತಿ ಮುನಿಃ॥

ಯಾವುದೋ ಒಂದು ಪದಾರ್ಥವು ಹುಟ್ಟುವುದೆಂಬುದನ್ನೇ ಊಹಿಸಲಿಕ್ಕಾಗದೆಂದು ವರ್ಣಿಸುವುದೇ ಅಸಂಭವವೆನಿಸುವುದು. ಹೀಗೆ ಒಂದು ಕೆಲಸವನ್ನು ದುಷ್ಕರವೆಂದು ಭಾವಿಸಿದ್ದರೂ ಅದು ನೆರವೇರುವುದೆಂದು ವರ್ಣಿಸುವುದೇ ಅಸಂಭವವೆಂದು ಹೇಳಿದಂತಾಯಿತು. "ಗೊಲ್ಲರ ಹುಡುಗನು ಬೆಟ್ಟವನ್ನು ಬುಡಸಹಿತ ಮೇಲಕ್ಕೆ ಎತ್ತುವನೆಂಬುದನ್ನು ಯಾರು ತಿಳಿಸಿದ್ದರು ?"

"ಈ ಸಮುದ್ರವು ನೀರಿಗೆ ಆಶ್ರಯಸ್ಥಾನವೆಂದೂ, ರತ್ನಗಳ ಗಣಿ ಎಂದೂ ಆಶೆಯಿಂದ ಮನಸ್ಸನ್ನು ಚಂಚಲಗೊಳಿಸಿಕೊಂಡು ನಾವು ಇದನ್ನಾಶ್ರಯಿಸಿದೆವು. ಮುನಿಯು ಇದನ್ನು ತನ್ನ ಕೈಬೊಗಸೆಯೊಳಗೆ ಅಡಗಿಸಿಕೊಂಡು ಏಡಿ ಮೊಸಳೆಗಳನ್ನು ಅಳ್ಳಾಡಿಸುವಂತೆ ಒಂದು ನಿಮಿಷದಲ್ಲಿ ಸಂಪೂರ್ಣವಾಗಿ ಪಾನಮಾಡುವನೆಂದು ಯಾರು ತಿಳಿದಿದ್ದರು ?" ಸಮುದ್ರಪಾನವೇ ಕಾರ್ಯ, ಅದು ಸಂಭವಿಸುವುದೇ ಅಸಾಧ್ಯವೆನಿಸಿದ್ದರೂ ನಡೆಯಿತೆಂದು ಇಲ್ಲಿ ವರ್ಣಿಸಿರುವುದರಿಂದ ಇದು ಅಸಂಭವಾಲಂಕಾರವೆನಿಸಿದೆ.

## ೩೭. ಅಸಂಗತ್ಯಲಂಕಾರ

ವಿರುದ್ಧಂ ಭಿನ್ನದೇಶತ್ವಂ ಕಾರ್ಯಹೇತ್ವೋರಸಂಗತಿಃ ।
ವಿಷಂ ಜಲಧರೈಃ ಪೀತಂ ಮೂರ್ಛಿತಾಃ ಪಥಿಕಾಂಗನಾಃ ॥೮೪॥

ಯಯೋಃ ಕಾರ್ಯಹೇತ್ವೋರ್ಭಿನ್ನದೇಶತ್ವಂ ವಿರುದ್ಧಂ ತಯೋಸ್ಸನ್ನಿಬಧ್ಯ

ಮಾನಮಸಂಗತ್ಯಲಂಕಾರಃ ಯಥಾತ್ರ ವಿಷಪಾನಮೂರ್ಛಯೋಃ ಭಿನ್ನದೇಶತ್ವಮ್.
ಯಥಾ ವಾ–

ಅಹೋಃ ಬಲಭುಜಂಗಸ್ಯ ವಿಚಿತ್ರೋsಯಂ ವಧಕ್ರಮಃ ।
ಅನ್ಯಸ್ಯ ದಶತಿ ಶ್ರೋತ್ರಂ ಅನ್ಯಃ ಪ್ರಾಣೈರ್ವಿಯುಜ್ಯತೇ ॥
ಕ್ವಚಿದಸಂಗತಿಸಮಾಧಾನನಿಬಂಧನೇನ ಚಾರುತಾತಿಶಯಃ. ಯಥಾ ವಾ–

ಅಜಸ್ರಮಾರೋಹಸಿ ದೂರದೀರ್ಘಾಂ
ಸಂಕಲ್ಪಸೋಪಾನತತಿಂ ತದೀಯಾಮ್ ।
ಶ್ವಾಸಾನ್ಸ ವರ್ಷತ್ಯಧಿಕಂ ಪುನರ್ಯತ್ ಧ್ಯಾನಾತ್ತವ
ತ್ವನ್ಮಯತಾಮವಾಪ್ಯ ॥

ವಿರುದ್ಧಮಿತಿ ವಿಶೇಷಣಾತ್ ಯತ್ರ ಕಾರ್ಯಹೇತ್ವೋರ್ಭಿನ್ನದೇಶತ್ವಂ
ನ ವಿರುದ್ಧಂ ತತ್ರ ನಾಸಂಗತಿಃ. ಯಥಾ–

ಭ್ರೂಚಾಪವಲ್ಲೀಂ ಸುಮುಖೀ ಯಾವನ್ನಯತಿ ವಕ್ರತಾಮ್ ।
ತಾವತ್ಕಟಾಕ್ಷವಿಶಿಖೈಃ ಭಿದ್ಯತೇ ಹೃದಯಂ ಮಮ ॥

ಕಾರಣವಿರುವೆಡೆಯಲ್ಲಿಯೇ ಕಾರ್ಯವಿರುವುದೆಂದು ಲೋಕದಲ್ಲಿ ರೂಢಿಯಲ್ಲಿದೆ. ಆದರೆ ಇದಕ್ಕೆ ವಿರುದ್ಧವಾಗಿ ಕಾರ್ಯಕಾರಣಗಳೆರಡೂ ಬೇರೆ ಬೇರೆ ಸ್ಥಳದಲ್ಲಿರುವುದಾಗಿ ವರ್ಣಿಸುವುದೇ ಅಸಂಗತಿ ಎನಿಸುವುದು. "ಮೇಘಗಳು ವಿಷವನ್ನು ಕುಡಿದವು. ದಾರಿಗರ ಹೆಂಡತಿಯರು ಮೂರ್ಛೆಗೊಂಡರು." ವಿಷ ಪಾನವೇ ಮೂರ್ಛೆಗೆ ಕಾರಣ. ಕಾರಣವಿರುವ ಕಡೆ ಮೂರ್ಛೆ ಇರುವುದರ ಬದಲು ಬೇರೆಕಡೆ ಇರುವುದಾಗಿ ಇಲ್ಲಿ ತಿಳಿಸಿದೆ.

"ನೀಚನೆಂಬ ಸರ್ಪವು ಜನರನ್ನು ಕೊಲ್ಲುವ ಕ್ರಮವು ವಿಚಿತ್ರವಾದುದು. ಒಬ್ಬನ ಕಿವಿಯನ್ನು ಕಚ್ಚುತ್ತದೆ, ಬೇರೊಬ್ಬನಿಗೆ ಪ್ರಾಣವು ಹೋಗುತ್ತದೆ." ಹಾವು ಕಚ್ಚುವುದಕ್ಕೂ ಪ್ರಾಣ ಹೋಗುವುದಕ್ಕೂ ಸಾಮಾನಾಧಿಕರಣ್ಯವಿಲ್ಲ. ಹಾವು ಕಚ್ಚುವುದು ಒಬ್ಬನನ್ನು ; ಪ್ರಾಣಹೋಗುವುದು ಮತ್ತೊಬ್ಬನಿಗೆ. ಹೀಗೆ ಬೇರೆ ಬೇರೆ ಕಡೆಗಳಲ್ಲಿ ಕಾರ್ಯಕಾರಣಗಳು ಇರುವುದಾಗಿ ಹೇಳಿದ್ದರಲ್ಲೂ ಒಂದು ಬಗೆಯ ಸ್ವಾರಸ್ಯವಿರುವುದರಿಂದ ಇದು ಅಸಂಗತಿ ಎನಿಸಿದೆ. ಕೆಲವು ವೇಳೆ ಹೀಗೆ ಅಸಂಗತಿಯನ್ನು ತಿಳಿಸಿ ಅದಕ್ಕೆ ಸಮಾಧಾನವನ್ನೂ ಹೇಳಿದ್ದರೆ ಹೆಚ್ಚಿನ ಸೌಂದರ್ಯವೇ ತೋರುತ್ತದೆ. ಅದನ್ನು ಇಲ್ಲಿ ಉದಾಹರಿಸಿದೆ. ;ದಮಯಂತಿಗೆ ಹಂಸವು ಹೇಳುವ ಮಾತಿನಲ್ಲಿ ಇದನ್ನು ಕಾಣಬಹುದು. "ಎಲೈ ದಮಯಂತಿಯೇ, ನೀನೇನೋ ಆ ನಳನಿಗೆ ಸಂಬಂಧಿಸಿದ ಬಹಳ ದೀರ್ಘವಾದ ಸೋಪಾನಪಂಕ್ತಿಯನ್ನು ಹತ್ತಿಹೋಗುವೆ ;

ಆದರೆ ಅವನು ಹೆಚ್ಚು ನಿಟ್ಟುಸಿರನ್ನು ಬಿಡುತ್ತಿರುವನು. ಇದಕ್ಕೆ ನಿನ್ನಧ್ಯಾನದಿಂದ ನಿನ್ನ ಸ್ವರೂಪವನ್ನು ಅವನು ಹೊಂದಿರುವುದೇ ಕಾರಣವೆನಿಸಿದೆ'' ಸೋಪಾನವನ್ನು ಹತ್ತುತ್ತಿರುವವಳು ದಮಯಂತಿ. ಇದರಿಂದ ಆಯಾಸಗೊಂಡು ಆಕೆಯೇ ನಿಟ್ಟುಸಿರನ್ನು ಬಿಡಬೇಕಾಗಿತ್ತು. ಆದರೆ ಇವಳ ಬದಲು ನಳನು ನಿಟ್ಟುಸಿರು ಬಿಡುತ್ತಿರುವನು. ಇದೇ ಅಸಂಗತಿ. ಇದಕ್ಕೆ ಇಲ್ಲಿ ಸಮಾಧಾನವೂ ಇದೆ. ಅವನು ಯಾವಾಗಲೂ ದಮಯಂತಿಯನ್ನೇ ನೆನೆಯುತ್ತಿರುವುದರಿಂದ ಅವಳ ರೂಪವನ್ನೇ ಅವನು ಹೊಂದಿರುವನು. ಈಕೆ ಸೋಪಾನವನ್ನು ಹತ್ತಿದಂತೆಲ್ಲ ಅವನೂ ಹತ್ತಿ ಹೋಗುತ್ತಿರುವುದರಿಂದ ಅವನು ಉಸಿರುಬಿಡುತ್ತಿರುವುದು ಯುಕ್ತವಾಗಿದೆ.

ಲಕ್ಷಣದಲ್ಲಿ 'ವಿರುದ್ಧಂ' ಎಂಬ ವಿಶೇಷಣವನ್ನು ಕೊಟ್ಟಿದ್ದರಿಂದ ಎಲ್ಲಿ ಕಾರ್ಯ ಕಾರಣಗಳು ಬೇರೆಬೇರೆ ಪ್ರದೇಶಗಳಲ್ಲಿಯೇ ಇರುವುದಕ್ಕೆ ಯಾವ ವಿರೋಧವೂ ಇಲ್ಲವೋ ಅಲ್ಲಿ ಅಸಂಗತಿಗೆ ಅವಕಾಶವೇ ಇರುವುದಿಲ್ಲ. ಅವು ಬೇರೆಬೇರೆ ಕಡೆ ಇರುವುದು ಉಚಿತವೇ ಆಗುವ ಪ್ರಯುಕ್ತ ಅಲ್ಲಿ ಅಸಂಗತ್ಯಲಂಕಾರಕ್ಕೆ ಅವಕಾಶವಿಲ್ಲ. ''ಶೋಭನಾಂಗಿಯು ಎಷ್ಟರೊಳಗೆ ಹುಬ್ಬನ್ನು ಗಂಟುಹಾಕುವಳೋ ಅಷ್ಟರೊಳಗೆ ಓರೆನೋಟಗಳೆಂಬ ಬಾಣಗಳಿಂದ ನನ್ನ ಹೃದಯವೇ ಒಡೆದು ಹೋಗುತ್ತದೆ.'' ಇಲ್ಲಿ ಹೃದಯಭೇದವೇ ಕಾರ್ಯ. ಧನುರಾಕರ್ಷಣವೇ ಕಾರಣ. ಇವು ಬೇರೆ ಬೇರೆ ಕಡೆ ಇರುವುದು ಸಹಜ. ಆದ್ದರಿಂದ ಇಲ್ಲಿ ಅಸಂಗತಿಯನ್ನು ಹೇಳುವುದು ಸರಿಯಲ್ಲ.

ಅನ್ಯತ್ರ ಕರಣೀಯಸ್ಯ ತತೋಽನ್ಯತ್ರ ಕೃತಿಶ್ಚ ಸಾ ।
ಅನ್ಯತ್ಕರ್ತುಂ ಪ್ರವೃತ್ತಸ್ಯ ತದ್ವಿರುದ್ಧಕೃತಿಸ್ತಥಾ ॥
ಅಪಾರಿಜಾತಾಂ ವಸುಧಾಂ ಚಿಕೀರ್ಷನ್ ದ್ಯಾಂ ತಥಾಽಕೃಥಾಃ ।
ಗೋತ್ರೋದ್ಧಾರಪ್ರವೃತ್ತೋಽಪಿಗೋತ್ರೋದ್ಭೇದಂ ಪುರಾಽಕರೋಃ ॥

ಅತ್ರ ಕೃಷ್ಣಂ ಪ್ರತಿ ಶಕ್ರಸ್ಯ ಸೋಪಾಲಂಭವಚನೇ ಭುವಿ ಚಿಕೀರ್ಷಿ ತತಯಾ ತತ್ರ ಕರಣೀಯಮಪಾರಿಜಾತತ್ವಂ ದಿವಿ ಕೃತಮಿತ್ಯೇಕಾ ಅಸಂಗತಿಃ ಸ್ವದ ಗೋತ್ರಾಯಾಃ ಉದ್ಧಾರೇ ಪ್ರವೃತ್ತೇನ ವರಾಹರೂಪಿಣಾ ತದ್ವಿರುದ್ಧ ಗೋತ್ರಾಣಾಂದಲನಂ ಖುರಕುಟ್ಟನೈಃ ಕೃತಮಿತಿ ದ್ವಿತೀಯಾ ಶ್ಲೋಕೋತ್ಥಾಪಿತಾ ಯಥಾ ವಾ—

ತ್ವತ್ಖಡ್ಗಖಂಡಿತಸಪತ್ನವಿಲಾಸಿನೀನಾಂ
ಭೂಷಾ ಭವಂತ್ಯಭಿನವಾ ಭುವನೈಕವೀರ ।
ನೇತ್ರೇಷು ಕಂಕಣಮಥೋರುಷು ಪತ್ರವಲ್ಲೀ
ಚೋಳೇಂದ್ರಸಿಂಹ ತಿಲಕಂ ಕರಪಲ್ಲವೇಷು ॥

ಮೋಹಂ ಜಗತ್ತ್ರಯಭುವಾಮುಪನೇತುಮೇತತ್
ಆದಾಯ ರೂಪಮಖಿಲೇಶ್ವರದೇಹಭಾಜಾಮ್ ।
ನಿಸ್ಸೀಮಕಾಂತಿರಸನೀರಧಿನಾಮುನೈವ
ಮೋಹಂ ಪ್ರವರ್ಧಯಸಿ ಮುಗ್ಧವಿಲಾಸಿನೀನಾಮ್ ॥

ಅತ್ರ ಆದ್ಯೋದಾಹರಣೇ ಕಂಕಣಾದೀನಾಮನ್ಯತ್ರ ಕರ್ತವ್ಯತ್ವಂ ಪ್ರಸಿದ್ಧಮಿತಿ ನೋಪನ್ಯಸ್ತಮ್, ಭವತಿನಾ ಭಾವನಾರೂಪಾ ಅನ್ಯತ್ರಕೃತಿರಾಕ್ಷಿಪ್ಯತ ಇತಿ ಲಕ್ಷಣಾನುಗತಿಃ.

ಒಂದು ಕಡೆ ಮಾಡಬೇಕಾದ ಕಾರ್ಯವನ್ನು ಅಲ್ಲಿಂದ ಬಿಟ್ಟು ಬೇರೆ ಕಡೆ ಮಾಡುವುದಾಗಿ ವರ್ಣಿಸುವುದೇ ಬೇರೊಂದು ಬಗೆಯ ಅಸಂಗತಿ ಎನಿಸುವುದು. ಬೇರೊಂದು ಕಾರ್ಯವನ್ನು ಮಾಡಲು ಪ್ರವರ್ತಿಸಿದ ವಸ್ತು ಅದನ್ನು ಬಿಟ್ಟು ಅದಕ್ಕೆ ವಿರುದ್ಧವಾದ್ದನ್ನು ಆಚರಿಸುವುದು ಮತ್ತೊಂದು ಬಗೆಯ ಅಸಂಗತಿ ಎನಿಸುವುದು. ಭೂಮಿಯಲ್ಲಿ ಪಾರಿಜಾತವಿಲ್ಲದಂತೆ (ಶತ್ರುಸಮೂಹವಿಲ್ಲದಂತೆ) ಮಾಡಲು ಇಚ್ಛಿಸಿ ಸ್ವರ್ಗದಲ್ಲಿ ಹಾಗೆ ಪಾರಿಜಾತವೃಕ್ಷವಿಲ್ಲದಂತೆ ಮಾಡಿದೆ. ಭೂಮಿಯನ್ನು ಉದ್ಧರಿಸಲು ನೀನು ಪ್ರವರ್ತಿಸಿದರೂ ಸಹ ನೀನು ಹಿಂದೆ ಬೆಟ್ಟವನ್ನೇ ನಾಶಪಡಿಸಿದೆ." ಇಲ್ಲಿ ಕೃಷ್ಣನಿಗೆ ಇಂದ್ರನು ನಿಂದಿಸಿ ಮಾತನಾಡುವಾಗ "ಭೂಮಿಯಲ್ಲಿ ಪಾರಿಜಾತವಿಲ್ಲದಂತೆ ಮಾಡಲು ಬಯಸಿದ್ದು ಸ್ವರ್ಗದಲ್ಲಿ ಅದಿಲ್ಲದಂತೆ ಮಾಡಿದೆ" ಎಂದು ಹೇಳಿದ್ದು ಒಂದು ಬಗೆಯ ಅಸಂಗತಿ. ಹಿಂದೆ ಭೂಮಿಯನ್ನು ಉದ್ಧರಿಸಲು ಪ್ರವರ್ತಿಸಿದ ವರಾಹರೂಪಿ ವಿಷ್ಣುವು ಅದಕ್ಕೆ ವಿರುದ್ಧವಾಗಿ ಗೊರಸಿನ ಹೊಡೆತದಿಂದ ಪರ್ವತಗಳನ್ನು ಮೂಲೋತ್ಪಾಟನಮಾಡಿದನೆಂದು ಹೇಳಿದ್ದು ಅಸಂಗತಿಯ ಎರಡನೆಯ ಬಗೆ ಎನಿಸಿದೆ. ಇಲ್ಲಿ ಎರಡು ಕಡೆಗಳಲ್ಲೂ ಅಪಾರಿಜಾತ, ಗೋತ್ರ ಎಂಬ ಪದಗಳಲ್ಲಿರುವ ಶ್ಲೇಷದಿಂದ ಎರಡು ಅರ್ಥಗಳಿಗೂ ಅಭೇದವನ್ನು ನಿಶ್ಚಯಿಸಿ ಆ ಮೂಲಕ ಅಸಂಗತಿಯನ್ನು ತಿಳಿಸಲಾಗಿದೆ. ಭೂಮಿಯಲ್ಲಿ ಅಪಾರಿಜಾತ ಶತ್ರುಸಮೂಹವಿಲ್ಲದಂತೆಯೂ, ಸ್ವರ್ಗದಲ್ಲಿ ಪಾರಿಜಾತವೃಕ್ಷವಿಲ್ಲದಂತೆಯೂ ಮಾಡಿದೆ ಎಂದು ಹೇಳಿದರೆ ವಿರೋಧವು ಪರಿಹಾರವಾಗುತ್ತದೆ. ಗೋತ್ರಪದಕ್ಕೆ ಭೂಮಿ ಬೆಟ್ಟ ಎಂದು ಎರಡು ಅರ್ಥಗಳನ್ನು ಶ್ಲೇಷದಿಂದಲೇ ಹೇಳಿದರೆ ವಿರೋಧಕ್ಕವಕಾಶವಿಲ್ಲ.

"ಲೋಕವಿಖ್ಯಾತನಾದ ವೀರನೇ, ನಿನ್ನ ಖಡ್ಗದಿಂದ ಕತ್ತರಿಸಲ್ಪಟ್ಟ ಶತ್ರುಗಳ ಸ್ತ್ರೀಯರಿಗೆ ಹಿಂದೆ ಇಲ್ಲದೇ ಇದ್ದ ಹೊಸ ಆಭರಣಗಳಾಗಿವೆ. ಕಣ್ಣೀರಿನ ಹನಿಗಳು ಕಣ್ಣಿಗೆ ಒಡವೆ ಎನಿಸಿದವು. ಕೈಯಲ್ಲಿರಬೇಕಾದ ಕಂಕಣ (ಬಳೆ)ಗಳು ಕಣ್ಣಿಗೆ ಬಂದವು. ಕೆನ್ನೆಯ ಮೇಲೆ ಬರೆಸಿಕೊಳ್ಳುವ ಪತ್ರರಚನೆಯು ತೊಡೆಗಳಿಗೆ ಆಭರಣವಾಯಿತು. ಎಳ್ಳಿನೊಡನೆ ಕೂಡಿದ ನೀರು (ತಿಲಕವು) ಕೈಗಳಿಗೆ ಆಭರಣವಾಯಿತು. ಹಣೆಯಲ್ಲಿರಬೇಕಾದ್ದು ಕೈಗೆ ಬಂದಿತು. ಎಲೈ ವಿಶ್ವಪತಿಯೇ, ಮೂರುಲೋಕಗಳ

ಜನರ ಮೋಹವನ್ನು ತೊಲಗಿಸಲು ಈ ಕೃಷ್ಣರೂಪವಾದ ಶರೀರವನ್ನು ಸ್ವೀಕರಿಸಿ ಎಲ್ಲೆ ಮೀರಿದ ಕಾಂತಿ ಎಂಬ ರಸಕ್ಕೆ ಸಮುದ್ರವೆನಿಸಿದ ಈ ರೂಪದಿಂದ ಸುಂದರ ಸ್ತ್ರೀಯರಿಗೆ ಮೋಹವನ್ನು ಹೆಚ್ಚಿಸಿರುವೆ. ನೀನು ಜನರ ಮೋಹವನ್ನು ತೊಲಗಿಸಲು ಕೃಷ್ಣರೂಪವನ್ನು ಪಡೆದೆ; ಆದರೆ ಅದರಿಂದಲೇ ಮೋಹವನ್ನು ಹೆಚ್ಚಿಸುತ್ತಿರುವೆ." ಇಲ್ಲಿ ಮೊದಲನೆಯ ಉದಾಹರಣದಲ್ಲಿ ಒಂದು ಕಡೆ ಏರ್ಪಡಿಸ ಬೇಕಾಗಿದ್ದ ಕಂಕಣ ಮೊದಲಾದವನ್ನು ಬೇರೆ ಕಡೆಗಳಲ್ಲಿ ಏರ್ಪಡಿಸಿದ ಅಂಶವು ಪ್ರಸಿದ್ಧವೆನಿಸಿದ್ದರಿಂದ ಅದನ್ನು ಇಲ್ಲಿ ತಿಳಿಸಿಲ್ಲ. "ಭವತಿ" ಎಂಬ ಕ್ರಿಯಾಪದದಿಂದ ಒಂದೆಡೆ ಇರಬೇಕಾದ ಆಭರಣವನ್ನು ಬೇರೆ ಕಡೆಗೆ ಆಭರಣವಾಗಿ ಪರಿಣಮಿಸಿತೆಂಬ ಭಾವನೆಯು ಅರ್ಥದಿಂದಲೇ ಸಹಜವಾಗಿ ಸಿದ್ಧಿಸುತ್ತದೆ. ಆದ್ದರಿಂದ ಇಲ್ಲಿ ಲಕ್ಷಣ ವನ್ನು ಹೊಂದಿಸಬಹುದು.

## ೩೮. ವಿಷಮಾಲಂಕಾರ

ವಿಷಮಂ ವರ್ಣ್ಯತೇ ಯತ್ರ ಘಟನಾsನನುರೂಪಯೋಃ।
ಕ್ವೇಯಂ ಶಿರೀಷಮೃದ್ವಂಗೀ ಕ್ವ ತಾವನ್ಮದನಜ್ವರಃ ॥೮೭॥

ಅತ್ರಾಪಿ ಮೃದುತ್ವೇನಾತಿದುಸ್ಸಹತ್ವೇನ ಚ ಅನನುರೂಪಯೋಃ ಅಂಗನಾತಿ ಮದನಜ್ವರಯೋರ್ಘಟನಾ. ಯಥಾ ವಾ–

ಅಭಿಲಷಸಿ ಯದೀಂದೋಃ ವಕ್ತ್ರಲಕ್ಷ್ಮೀಂ ಮೃಗಾಕ್ಷ್ಯಾಃ
ಪುನರಪಿ ಸಕೃದಬ್ಧೌ ಮಜ್ಜ ಸಂಕ್ಷಾಲಯಾಂಕಮ್ ।
ಸುವಿಮಲಮಥ ಬಿಂಬಂ ಪಾರಿಜಾತಪ್ರಸೂನೈಃ
ಸುರಭಯ ವದ ನೋ ಚೇತ್ತ್ವಂ ಕ್ವ ತಸ್ಯಾ ಮುಖಂ ಕ್ವ ॥

ಪೂರ್ವತ್ರ ವಸ್ತುಸತೀ ಘಟನಾ, ಅತ್ರ ಚ ಚಂದ್ರವದನಲಕ್ಷ್ಮ್ಯೋಸ್ಸಂಕಲ್ಪಿತಾ ಘಟನೇತಿ ಭೇದಃ.

ವಿರೂಪಕಾರ್ಯಸ್ಯೋತ್ಪತ್ತಿರಪರಂ ವಿಷಮಂ ಮತಮ್ ।
ಕೀರ್ತಿಂ ಪ್ರಸೂತೇ ಧವಳಾಂ ಶ್ಯಾಮಾ ತವ ಕೃಪಾಣಿಕಾ ॥೮೮॥

ಅತ್ರ ಕಾರಣಗುಣಪ್ರಕ್ರಮೇಣ ವಿರುದ್ಧಾತ್ ಶ್ಯಾಮಾದ್ಧವಳೋತ್ಪತ್ತಿಃ. ಕಾರ್ಯಕಾರಣಯೋರ್ನಿರ್ವರ್ತ್ಯನಿರ್ವರ್ತಕತ್ವೇ ಪಂಚಮೀ ವಿಭಾವನಾ. ವಿಲಕ್ಷಣ ಗುಣಶಾಲಿತ್ವೇ ತು ಅಯಂ ನಿಯಮ ಇತಿ ಭೇದಃ ॥

ಅನಿಷ್ಟಸ್ಯಾಪ್ಯವಾಪ್ತಿಶ್ಚ ತದಿಷ್ಟಾರ್ಥಸಮುದ್ಯಮಾತ್ ।
ಭಕ್ಷ್ಯಾಶಯಾಹಿಮಂಜೂಷಾಂ ದೃಷ್ಟ್ವಾಖುಸ್ತೇನ ಭಕ್ಷಿತಃ ॥೮೯॥

ಇಷ್ಟಾರ್ಥಮುದ್ದಿಶ್ಯ ಕಿಂಚಿತ್ಕರ್ಮಾರಬ್ಧವತೋ ನ ಕೇವಲಮಿಷ್ಟಸ್ಯಾನವಾಪ್ತಿಃ ಕಿಂ ತು ತತೋಽನಿಷ್ಟಸ್ಯಾಪಿ ಪ್ರತಿಲಂಭಶ್ಚೇತ್ತದಪಿ ವಿಷಮಮ್. ಯಥಾ ಭಕ್ಷ್ಯಪ್ರೇಪ್ಸಯಾ ಸರ್ಪಪೇಟಿಕಾಂ ದೃಷ್ಟ್ವಾ ಪ್ರವಿಷ್ಟಸ್ಯ ಮೂಷಕಸ್ಯ ನ ಕೇವಲಂ ಭಕ್ಷ್ಯಾಲಾಭಃ; ಕಿಂ ತು ಸ್ವರೂಪಹಾನಿರಪೀತಿ. ಯಥಾ ವಾ–

ಗೋಪಾಲ ಇತಿ ಕೃಷ್ಣ ತ್ವಂ ಪ್ರಚುರಕ್ಷೀರವಾಂಛಯಾ ।
ಶ್ರಿತೋ ಮಾತೃಸ್ತನಕ್ಷೀರಮಪ್ಯಲಭ್ಯಂ ತ್ವಯಾ ಕೃತಮ್ ॥

ಇದಮರ್ಥಾವಾಪ್ತಿರೂಪೇಽರ್ಥಪಾಸಮುದ್ಯಮಾದಿಷ್ಟಾನವಾಪ್ತೌ ಅನಿಷ್ಟಪ್ರಲಂಭೇ ಚ ಉದಾಹರಣಮ್.

ಅನರ್ಥಪರಿಹಾರಾಽರ್ಥರೂಪೇಷ್ಟಾರ್ಥಸಮುದ್ಯಮಾತ್ತದುಭಯಂ ಯಥಾ—

ದಿವಿ ಶ್ರಿತವತಶ್ಚಂದ್ರಂ ಸೈಂಹಿಕೇಯಭಯಾದ್ಭುವಿ ।
ಶಶಸ್ಯ ಪಶ್ಯ ತನ್ವಂಗಿ ಸಾಶ್ರಯಸ್ಯ ತತೋ ಭಯಮ್ ॥

ಅತ್ರ ನ ಕೇವಲಂ ಶಶಸ್ಯ ಸ್ವಾನರ್ಥಪರಿಹಾರಾನವಾಪ್ತಿಃ ಕಿಂತು ಸ್ವಾಶ್ರಯಸ್ಯಾಪಿ ಅನರ್ಥಾವಾಪ್ತಿರಿತಿ ದರ್ಶಿತಮ್.

ಪರಾನಿಷ್ಟಪ್ರಾಪಣರೂಪೇಷ್ಟಾರ್ಥಸಮುದ್ಯಮಾತ್ತದುಭಯಮ್.

ಯಥಾ–

ದಿಧಕ್ಷನ್ಮಾರುತೇರ್ವಾಲಂ ತಮಾದೀಪ್ಯದ್ದಶಾನನಃ ।
ಆತ್ಮೀಯಸ್ಯ ಪುರಸ್ಯೈವ ಸದ್ಯೋ ದಹನಮನ್ವಭೂತ್ ॥

ಪರಾನಿಷ್ಟಪ್ರಾಪಣಾಭಾವೋ ದರ್ಶಿತಃ. ಅನಿಷ್ಟ ಪುರಸ್ಯೈವೇತ್ಯೇವಕಾರೇಣ ಪರಾನಿಷ್ಟಪ್ರಾಪಣಾಭಾವೋ ದರ್ಶಿತಃ. ಅಪಿಶಬ ಸಂಗೃಹೀತಾಯಾಃ ಸ್ಯಾಪ್ಯವಾಪ್ತಿಶ್ಚೇತಿ ಶ್ಲೋಕೇ ಅನಿಷ್ಟಾವಾಪ್ತೇಃ ಅಪಿಶಬ ಸಂಗೃಹೀತಾಯಾಃ ಇಷ್ಟಾನವಾಪ್ತೇಶ್ಚ ಪ್ರತ್ಯೇಕಮಪಿ ವಿಷಮಪದೇನ ಅನ್ವಯಃ. ತತಶ್ಚ ಕೇವಲಾನಿಷ್ಟಪ್ರತಿಲಂಭಃ ಕೇವಲೇಷ್ಟಾನವಾಪ್ತಿಶ್ಚೇತ್ಯೇತನ್ಯದಪಿ ವಿಷಮದ್ವಯಂ ಲಕ್ಷಿತಂ ಭವತಿ.

ಒಂದಕ್ಕೊಂದು ಹೊಂದಿಕೆಯಿಲ್ಲದಂತಹ ಎರಡು ವಸ್ತುಗಳು ಒಂದು ಕಡೆಯಲ್ಲಿ ಸೇರುವುದಾಗಿ ವರ್ಣಿಸುವುದೇ ವಿಷಮವೆನಿಸುವುದು. "ಪಾದರೀಹೂವಿನಂತೆ ಅನುಭವಿಸುತ್ತಿರುವ ಮೃದುವಾದ ಅವಯವವುಳ್ಳ ಈ ಪ್ರೇಯಸಿ ಎಲ್ಲಿ? ಈಕೆ ಅನುಭವಿಸುತ್ತಿರುವ ಕಾಮಜ್ವರವೆಲ್ಲಿ?" ಇಲ್ಲಿ ಪ್ರೇಯಸಿಯ ಶರೀರವು ಮೃದುವಾದ್ದರಿಂದಲೂ ಕಾಮಜ್ವರವನ್ನು ಸಹಿಸುವುದು ಆಕೆಗೆ ಅಸಾಧ್ಯವಾದ್ದರಿಂದಲೂ ಅಂತಹ ಅಂಗನೆಯಲ್ಲಿ ಕಾಮಜ್ವರವಿತ್ತೆಂದು ವರ್ಣಿಸಿದ್ದು ವಿಷಮವೆನಿಸಿದೆ. ಅನನುಗುಣವಾದ ಈ ಎರಡೂ ಓಂದೆಡೆ ಸೇರಿದ್ದರಲ್ಲಿ ಒಂದು ಬಗೆಯ ಚಮತ್ಕಾರವಿರುವುದರಿಂದ ಇದು

ಅಲಂಕಾರವೆನಿಸಿದೆ. "ಎಲೈ ಚಂದ್ರನೇ, ಜಿಂಕೆಯಂತೆ ಕಣ್ಣುಗಳುಳ್ಳ ಆಕೆಯ ಮು
ಲಕ್ಷ್ಮಿಯನ್ನು ನೀನು ಹೊಂದಲು ಅಪೇಕ್ಷಿಸಿದರೆ ಮತ್ತೊಂದು ವೇಳೆ, ಸಮುದ್ರ
ಮುಳುಗಿ ನಿನ್ನ ಕಳಂಕವನ್ನು ತೊಳೆದುಕೋ, ನಿರ್ಮಲವಾದ ನಿನ್ನ ಬಿಂಬ
ಪಾರಿಜಾತಪುಷ್ಪಗಳಿಂದ ಸುಗಂಧಗೊಳಿಸಿಕೋ. ಇಲ್ಲವಾದರೆ ನೀನೆಲ್ಲಿ? ಆ
ಮುಖವೆಲ್ಲಿ?" ಹಿಂದಿನದರಲ್ಲಿ ಕಾಮಜ್ವರಕ್ಕೂ ನಾಯಿಕೆಯ ಶರೀರಕ್ಕೂ ಸಂಘ
ವಾಸ್ತವವೆನಿಸಿದೆ. ಇಲ್ಲಿ ಚಂದ್ರನಿಗೂ ಮುಖಲಕ್ಷ್ಮಿಗೂ ಸಂಘಟನೆಯನ್ನು ಕವಿ
ಪ್ರತಿಭೆಯಿಂದ ಕಲ್ಪಿಸಿರುವನು.

ಕಾರಣದಲ್ಲಿರುವ ಗುಣಕ್ಕೆ ವಿರುದ್ಧವಾದ ಗುಣಗಳಿಂದ ಕೂಡಿದ ಕಾರ್ಯ
ಹುಟ್ಟುವುದಾಗಿ ತಿಳಿಸುವುದೇ ವಿಷಮಾಲಂಕಾರದ ಎರಡನೆಯ ಬಗೆ ಎ
''ಕಪ್ಪಾದ ನಿನ್ನ ಕತ್ತಿಯು ಬಿಳಿಯ ಬಣ್ಣದ ಕೀರ್ತಿಯನ್ನು ಎಲ್ಲೆಡೆಯ
ಹರಡುತ್ತಿದೆ.'' ಕಪ್ಪಿನಿಂದ ಬಿಳುಪು ಹೊರಡುವುದು ವಿರುದ್ಧ. ಇಂತಹ ವಿರು
ಕಾರಣದಿಂದಲೂ ಕಾರ್ಯವು ಹುಟ್ಟುವುದೆಂದು ವರ್ಣಿಸುವುದೇ ವಿಭಾವ
ಐದನೆಯ ಬಗೆ ಎಂದು ಹಿಂದೆ ತಿಳಿಸಿವೆ. ಅದರಂತೆಯೇ ವಿಷಮಾಲಂಕಾ
ಇರುವುದರಿಂದ ಇವೆರಡಕ್ಕೂ ಭೇದವೇನೆಂದರೆ, ವಿಭಾವನೆಯಲ್ಲಿ ಕಾರ್ಯಕಾ
ಭಾವವುಳ್ಳ ವಸ್ತುಗಳಲ್ಲಿ ಒಂದು ಮತ್ತೊಂದರ ಸ್ಥಿತಿಯನ್ನು ಪಡೆಯುವ
ಇರುತ್ತದೆ, ಚಂದ್ರಕಿರಣಕ್ಕೆ ತಾಪವನ್ನು ತಡೆಯುವ ಶಕ್ತಿ ಇದ್ದರೂ ತಾಪವನ್ನು
ಮಾಡುತ್ತದೆ. ವಿಷಮದಲ್ಲಾದರೋ ಕಾರಣವು ಕಾರ್ಯದ ಸ್ಥಿತಿಯನ್ನು ಪಡೆ
ಬೇಕಾಗಿಲ್ಲ. ಖಡ್ಗದಲ್ಲಿ ಕಪ್ಪುಬಣ್ಣವಿದ್ದರೂ ಅದು ಅದಕ್ಕೆ ವಿರುದ್ಧವಾದ ಬಿಳು
ಕೀರ್ತಿಯನ್ನು ಹುಟ್ಟಿಸುತ್ತದೆ. ಕಾರಣವು ವಿಲಕ್ಷಣವಾದ ಗುಣವಿರುವ
ಕಾರ್ಯವನ್ನು ಹುಟ್ಟಿಸುತ್ತದೆ.

ಇಷ್ಟಾರ್ಥವನ್ನು ಪಡೆಯಲು ಪ್ರಯತ್ನಮಾಡಿ ಅದನ್ನು ಪಡೆಯದೆ ಅ
ಬದಲಾಗಿ ಅನಿಷ್ಟವನ್ನು ಪಡೆಯುವುದು ವಿಷಮಾಲಂಕಾರದ ಮೂರನೆಯ ಪ
ವಿನಿಸಿದೆ. ''ಆಹಾರದ ಇಚ್ಛೆಯಿಂದ ಹಾವಿನ ಬುಟ್ಟಿಯನ್ನು ನೋಡಿ ಇಲಿಯೊ
ಅದರಲ್ಲಿ ನುಗ್ಗಿ ಆಹಾರವನ್ನು ಪಡೆಯುವ ಬದಲು ತಾನೇ ಆಹಾರವಾಯಿತು.''
ತನಗೆ ಬೇಕಾದ ಫಲವನ್ನು ಉದ್ದೇಶಿಸಿ ಯಾವುದೋ ಒಂದು ಕರ್ಮವನ್ನು
ಆರಂಭಿಸಿದವನಿಗೆ ಆ ಇಷ್ಟಾರ್ಥವು ದೊರೆಯದಿರುವುದಷ್ಟೇ ಅಲ್ಲದೆ ಅದಕ್ಕೆ ವಿರುದ್ಧ
ವಾಗಿ ಅನಿಷ್ಟವಾದ ಫಲವು ದೊರಕುವುದೇ ವಿಷಮವೆಂದು ಹೇಳಿದಂತಾಯಿತು
ತಿಂಡಿಗಾಗಿ ಹಾವಿನ ಬುಟ್ಟಿಯನ್ನು ಪ್ರವೇಶಿಸಿದ ಇಲಿಗೆ ತಿಂಡಿ ಸಿಕ್ಕದೆ ಇದ್ದುದಷ್ಟೇ
ಅಲ್ಲದೆ ತಾನೇ ಹಾವಿಗೆ ಆಹಾರವಾಗಬೇಕಾಯಿತು. ಈ ಬಗೆಯ ವೈಷಮ್ಯದ
ಸ್ವಾರಸ್ಯವಿರುವುದರಿಂದ ಇದು ಅಲಂಕಾರವೆನಿಸಿದೆ.

"ಕೃಷ್ಣನೇ ನೀನು ಗೋಪಾಲನೆಂಬ ಕಾರಣದಿಂದ ಹೆಚ್ಚು ಹಾಲು ದೊರಕುವು ದೆಂದು ಬಯಸಿ ನಿನ್ನನ್ನು ಆಶ್ರಯಿಸಿದೆನು ; ಆದರೆ ನೀನು ನನಗೆ ತಾಯಿಯ ಮೊಲೆ ಹಾಲೂ ಸಹ ಸಿಕ್ಕದಂತೆ ಮಾಡಿದೆ ; ಅಂದರೆ ಮುಕ್ತಿಯನ್ನು ಕೊಟ್ಟೆ ಎಂದರ್ಥ,

ಒಂದು ಫಲವನ್ನು ಪಡೆಯಲಿಕ್ಕಾಗಿ ಮಾಡಿದ ಪ್ರಯತ್ನದಿಂದ ಇಷ್ಟಫಲವು ದೊರೆಯದೆ ಅನಿಷ್ಟವು ಸಂಭವಿಸುವುದಕ್ಕೆ ಇದು ಉದಾಹರಣವೆನಿಸುತ್ತದೆ. ಎಲ್ಲಿ ಅನಿಷ್ಟಪರಿಹಾರವೇ ಇಷ್ಟಪ್ರಾಪ್ತಿ ಎನಿಸುವುದೋ ಅದಕ್ಕಾಗಿ ಮಾಡುವ ಪ್ರಯತ್ನದಿಂದ ಅವೆರಡೂ ಸಂಭವಿಸದೇ ಇರುವುದಕ್ಕೆ ಉದಾಹರಣ ಹೀಗೆದೆ. "ಭೂಮಿಯಲ್ಲಿ ಸಿಂಹಿಕೆಯ (ಹೆಣ್ಣು ಸಿಂಹ) ಮಗನಿಂದ (ಸಿಂಹ) ಭಯವುಂಟೆಂದು ಆಕಾಶದಲ್ಲಿ ಚಂದ್ರನನ್ನಾಶ್ರಯಿಸಿದ ಮೊಲಕ್ಕೆ ಆಶ್ರಯವೆನಿಸಿದ ಆ ಚಂದ್ರನಿಗೆ ಸಿಂಹಿಕೆಯ ಮಗನಿಂದಲೇ (ರಾಹು) ಅಲ್ಲಿಯೂ ಭಯವುಂಟಾಯಿತು. ಇದನ್ನು ನೋಡು. ಕೋಮಲಾಂಗಿ.'' ಇಲ್ಲಿ ಮೊಲಕ್ಕೆ ಮೊದಲು ಇದ್ದ ಸಿಂಹದ ಭಯವೆಂಬ ಅನರ್ಥವೂ ಪರಿಹಾರವಾಗಲಿಲ್ಲ. ಅಷ್ಟೇ ಅಲ್ಲದೆ, ತನಗಾಶ್ರಯವನ್ನು ಕೊಟ್ಟಿದ್ದ ಚಂದ್ರನಿಗೂ ಅನರ್ಥವುಂಟಾಯಿತೆಂದು ತಿಳಿಸಿವೆ. ಅನರ್ಥಪರಿಹಾರವೇ ಇಲ್ಲಿ ಮೊಲಕ್ಕೆ ಇಷ್ಟಪ್ರಾಪ್ತಿಯಾಯಿತು. ಅದಕ್ಕಾಗಿ ಅದು ಇಲ್ಲಿಂದ ಚಂದ್ರನಲ್ಲಿಗೆ ಹೋಯಿತು. ಅಲ್ಲಿಯೂ ಅದಕ್ಕೆ ಅನರ್ಥವೇ ದೊರೆಯಿತು.

ಬೇರೆಯವರಿಗೆ ಅನಿಷ್ಟವಾಗಲೆಂಬುದೇ ಎಲ್ಲಿ ಇಷ್ಟಾರ್ಥವೆನಿಸಿದೆಯೋ ಅದಕ್ಕಾಗಿ ಮಾಡುವ ಪ್ರಯತ್ನದಿಂದ ಬೇರೆಯವರಿಗೂ ಅನಿಷ್ಟವಾಗದೆ ತನಗೂ ಇಷ್ಟಾರ್ಥವು ಈಡೇರದಿರುವುದಕ್ಕೆ ಉದಾಹರಣವನ್ನು ಇಲ್ಲಿ ಕೊಡಲಾಗಿದೆ. "ರಾವಣನು ಹನುಮಂತನ ಬಾಲವನ್ನು ಸುಡಲಿಚ್ಛಿಸಿ ಅವನ ಬಾಲಕ್ಕೆ ಬೆಂಕಿಯನ್ನು ಹಚ್ಚಿದನು. ಇದರಿಂದ ತನ್ನ ಪಟ್ಟಣವನ್ನೇ ಆ ಬೆಂಕಿಯು ಕೂಡಲೆ ಸುಟ್ಟಿತು.'' ಇಲ್ಲಿ ತನ್ನ ಪಟ್ಟಣಕ್ಕೆ ಮಾತ್ರವೇ ಎಂದು ಹೇಳಿದ್ದರಿಂದ ಹನುಮಂತನಿಗೆ ಯಾವ ಅನಿಷ್ಟವೂ ಆಗಲಿಲ್ಲವೆಂಬುದನ್ನು ತಿಳಿಸಿದಂತಾಯಿತು. ಆದರೆ ಲಕ್ಷಣವಾಕ್ಯದಲ್ಲಿ ಹೇಳಿರುವ 'ಅನಿಷ್ಟಸ್ಯಾಪ್ಯವಾಪ್ತಿಶ್ಚ' ಎಂಬುದರಿಂದ ಅನಿಷ್ಟಪ್ರಾಪ್ತಿಯಂತೆಯೇ ಅಪಿಶಬ್ದದಿಂದ ತಿಳಿದುಬರುವ ಇಷ್ಟಾನವಾಪ್ತಿಯನ್ನೂ ಪ್ರತ್ಯೇಕವಾಗಿ ವಿಷಮಾಲಂಕಾರ ವೆಂದು ತಿಳಿಯಬೇಕು. ಆದ್ದರಿಂದ ಇಷ್ಟಾರ್ಥವು ದೊರಕದೆ ಕೇವಲ ಅನಿಷ್ಟವು ಸಂಭವಿಸುವುದೊಂದು ಬಗೆ ; ಹಾಗೆಯೇ ಅನಿಷ್ಟವು ಸಂಭವಿಸದೆ ಕೇವಲ ಇಷ್ಟಾರ್ಥ ವಷ್ಟೇ ದೊರಕದಿರುವುದೊಂದು ಬಗೆ; ಹೀಗೆ ಇವೆರಡೂ ಸಹ ವಿಷಮವೆನಿಸಿವೆ.

ತತ್ರ ಕೇವಲಾನಿಷ್ಟಪ್ರತಿಲಂಭೋ ಯಥಾ-
ಪದ್ಮಾಮೃತಪತ್ರರಸಿಕೇ ಸರಸೀರುಹಸ್ಯ
ಕಿಂ ಬೀಜಮರ್ಪಯಿತುಮಿಚ್ಛಸಿ ವಾಪಿಕಾಯಾಂ।

ಕಾಲಃ ಕಲಿರ್ಜಗದಿದಂ ನ ಕೃತಜ್ಞಮಜ್ಞೇ
ಸ್ಥಿತ್ವಾ ಹರಿಷ್ಯತಿ ಮುಖಸ್ಯ ತವೈವ ಲಕ್ಷ್ಮೀಮ್ ॥

ಅತ್ರ ಪದ್ಮಾತಪತ್ರಲಿಪ್ಸಯಾ ಪದ್ಮಬೀಜಾವಾಪಂ ಕೃತವತ್ಯಾಸ್ತ
ಭೋಽಸ್ತ್ಯೇವ ; ಕಿಂತು ಮುಖಶೋಭಾಪಹರಣರೂಪೋತ್ಕಟಾನಿಷ್ಟ ಪ್ರತಿ
ಕೇವಲೇಷ್ಟಾನವಾಪ್ತಿರ್ಯಥಾ—

ಖಿನ್ನೋಽಸಿ ಮುಂಚ ಶೈಲಂ ಬಿಭೃಮೋ ವಯಮಿತಿ ವದತ್ಸು ಶಿಥಿಲಭುಜ
ಭರಭುಗ್ನವಿತತಬಾಹುಷು ಗೋಪೇಷು ಹಸನ್ಹರಿರ್ಜಯತಿ ॥

ಅತ್ರ ಯದ್ಯಪಿ ಶೈಲಸ್ಯೋಪರಿಪತನರೂಪಾನಿಷ್ಟಾವಾಪ್ತಿರಪಿ ಪ್ರಸಕ್ತಾ
ತಥಾಪಿ ಭಗವತ್ಕರಾಂಬುಜಸಂಸರ್ಗಮಹಿಮ್ನಾ ಸಾನ ಜಾತೇತಿ ಶೈಲಧಾರಣಜ
ಷ್ಟಾನವಾಪ್ತಿಮಾತ್ರಮ್. ಯಥಾ ವಾ—

ಲೋಕೇ ಕಳಂಕಮುಪಹಾತುಮಯಂ ಮೃಗಾಂಕೋ
ಜಾತೋ ಮುಖಂ ತವ ಪುನಸ್ತಿಲಕಚ್ಛಲೇನ ।
ತತ್ರಾಪಿ ಕಲ್ಪಯಸಿ ತನ್ವಿ ಕಳಂಕರೇಖಾಂ
ನಾರ್ಯಃ ಸಮಾಶ್ರಿತಜನಂ ಹಿ ಕಳಂಕಯಂತಿ ॥

ಅತ್ರ ಅನಿಷ್ಟಪರಿಹಾರರೂಪೇಷ್ಟಾನವಾಪ್ತಿಃ ಯಥಾ ವಾ—

ಶಾಪೋಽಪ್ಯದೃಷ್ಟತನಯಾನನಪದ್ಮಶೋಭೇ
ಸಾನುಗ್ರಹೋ ಭಗವತಾ ಮಯಿ ಪಾತಿತೋಽಯಮ್ ।
ಕೃಷ್ಯಾಂ ದಹನ್ನಪಿ ಖಲು ಕ್ಷಿತಿಮಿಂಧನೇದ್ಧೋ
ಬೀಜಪ್ರರೋಹಜನನೀಂ ದಹನಃ ಕರೋತಿ ॥

ಅತ್ರ ಪರಾನಿಷ್ಟಪ್ರಾಪಣರೂಪೇಷ್ಟಾನವಾಪ್ತಿಃ. ಸ್ವತೋಽನಿಷ್ಟಸ್ಯಾ
ಮುನಿಶಾಪಸ್ಯ ಮಹಾಪುರುಷಾರ್ಥಪುತ್ರಲಾಭಾವಶ್ಯಂಭಾವಗರ್ಭತಯಾ ದಶರ
ನೇಷ್ಟತ್ವೇನ ಸಮರ್ಥಿತತ್ವಾತ್. ಯತ್ರ ಕೇನಚಿತ್ ಸ್ವೇಷ್ಟಸಿದ್ಧ್ಯರ್ಥಂ
ನಿಯುಕ್ತೇನಾನ್ಯೇನ ನಿಯೋಕ್ತುರಿಷ್ಟಮುಪೇಕ್ಷ್ಯ ಸ್ವಸ್ಯೈವೇಷ್ಟಂ ಸಾಧ್ಯತೇ ತತ್ರಾ
ಇಷ್ಟಾನವಾಪ್ತಿರೂಪಮೇವ ವಿಷಮಮ್. ಯಥಾ ವಾ—

ಯಂ ಪ್ರತಿ ಪ್ರೇಷಿತಾ ದೂತೀ ತಸ್ಮಿನ್ನೇವ ಲಯಂ ಗತಾ ।
ಸಖ್ಯಃ ! ಪಶ್ಯತ ಮೌಢ್ಯಂ ಮೇ. ವಿಪಾಕಂ ವಾ ವಿಧೇರಮುಮ್ ॥

ತಸ್ಮಿನ್ನೇವ ಲಯಂ ಗತೇತಿ ನಾಯಕೇ ದೂತ್ಯಾಃ ಸ್ವಾಚ್ಛಂದ್ಯಂ ದರ್ಶಿತಮ್
ಯಥಾ ವಾ—

ನಪುಂಸಕಮಿತಿ ಜ್ಞಾತ್ವಾ ಪ್ರಿಯಾಯೈ ಪ್ರೇಷಿತಂ ಮನಃ |
ತತ್ತು ತತ್ರೈವ ರಮತೇ ಹತಾಃ ಪಾಣಿನಿನಾ ವಯಮ್ ||

ಕೇವಲ ಅನಿಷ್ಟವಷ್ಟೇ ಸಂಭವಿಸುವುದನ್ನು ಉದಾಹರಿಸುತ್ತಾನೆ. ಪ್ರೇಯಸಿಗೆ ನಾಯಕನು ಹೇಳುವ ಮಾತಿದು. ಕಮಲವೆಂಬ ಕೊಡೆಯನ್ನು ಪಡೆಯಲು ಇಚ್ಛಿಸುವ ಪ್ರೇಯಸಿಯೇ, ನೀನೇನೋ ಕಮಲದ ಬೀಜವನ್ನು ಬಾವಿಯಲ್ಲಿ ನೆಡಲಿಚ್ಛಿಸುವೆ. ಎಲೈ ಮೂಢೆ, ಕಾಲವೂ ಕಲಿಯುಗವೆನಿಸಿದೆ. ಈ ಜಗತ್ತೂ ಸಹ ಉಪಕಾರವನ್ನು ಸ್ಮರಿಸುವಂತದಲ್ಲ. ಇಲ್ಲಿ ನೀನು ನೆಡುವ ಈ ಕಮಲವೇ ನಿನ್ನ ಮುಖದ ಕಾಂತಿಯನ್ನು ಮುಂದೆ ಅಪಹರಿಸುತ್ತದೆ. ಇಲ್ಲಿ ಕಮಲವೆಂಬ ಕೊಡೆಯನ್ನು ಹೊಂದುವ ಇಚ್ಛೆಯಿಂದ ಪದ್ಮಬೀಜವನ್ನು ನೆಡುವ ಸ್ತ್ರೀಗೆ ಅದೇನೋ ದೊರೆಯುವುದು ನಿಜ ಆದರೆ ಅದು ಮುಂದೆ ಮುಖದ ಕಾಂತಿಯನ್ನೇ ಅಪಹರಿಸುವ ಪ್ರಯುಕ್ತ ಉತ್ಕಟವಾದ ಅನಿಷ್ಟವೇ ಸಂಭವಿಸುತ್ತದೆ.

ಅನಿಷ್ಟಪ್ರಾಪ್ತಿಯಿಲ್ಲದೆ ಕೇವಲ ಇಷ್ಟಫಲವೂ ದೊರೆಯದಿರುವುದಕ್ಕೆ ಉದಾಹರಣ ಹೀಗಿದೆ. " 'ನೀನು ಬಹಳ ಆಯಾಸಗೊಂಡಿರುವೆ. ಬೆಟ್ಟವನ್ನು ನಾವು ಕೊಂಚಹೊತ್ತು ಹೊರುವೆವು. ನೀನು ಇದನ್ನು ಬಿಡು.' ಹೀಗೆ ಬೆಟ್ಟದ ಭಾರದಿಂದ ತೋಳನ್ನು ಮುರಿದುಕೊಂಡ ಗೊಲ್ಲರು ಹೇಳುತ್ತಿರಲು ಭುಜವನ್ನು ಸಡಿಲಗೊಳಿಸಿಕೊಂಡು ನಗುತ್ತಿದ್ದ ಕೃಷ್ಣನು ಶೋಭಿಸುತ್ತಾನೆ." ಇಲ್ಲಿ ಗೋವರ್ಧನ ಪರ್ವತವು ಮೇಲೆಬಿದ್ದು ಅನಿಷ್ಟವೇ ಒದಗಬೇಕಾಗಿತ್ತು. ಆದರೂ ಭಗವಂತನ ಹಸ್ತಕಮಲದ ಸಂಪರ್ಕದಿಂದ ಅದು ತಪ್ಪಿತು. ಅದರಂತೆಯೇ ಬೆಟ್ಟವನ್ನು ಹಿಡಿದುಕೊಳ್ಳಬೇಕೆಂಬ ಗೊಲ್ಲರ ಇಷ್ಟಾರ್ಥವೂ ನೆರವೇರಲಿಲ್ಲ. "ಎಲೈ ಕೋಮಲಾಂಗಿ, ಲೋಕದಲ್ಲಿ ಹರಡಿರುವ ಕಳಂಕವನ್ನು ತೊಲಗಿಸಿಕೊಳ್ಳಲು ಚಂದ್ರನು ನಿನ್ನ ಮುಖವಾಗಿ ಪರಿಣಮಿಸಿದನು. ಆದರೂ ಹಣೆಯಲ್ಲಿ ತಿಲಕವಿಡುವ ನೆಪದಿಂದ ನೀನು ಅವನಿಗೆ ಕಳಂಕವನ್ನೇ ಕಲ್ಪಿಸಿದೆ. ಹೀಗೆ ಸ್ತ್ರೀಯರು ತಮ್ಮನ್ನು ಆಶ್ರಯಿಸಿದವರಿಗೆ ಕಳಂಕವನ್ನೇ ಉಂಟುಮಾಡುವರು." ಚಂದ್ರನು ಅನಿಷ್ಟಪರಿಹಾರಕ್ಕಾಗಿ ಪ್ರೇಯಸಿಯ ಮುಖರೂಪವನ್ನು ತಾಳಿದನು. ಆದರೆ ಅದು ಸಫಲವಾಗಲಿಲ್ಲ. ಅವನಿಗೆ ಅಲ್ಲಿಯೂ ಕಳಂಕವು ತೊಲಗದೆ ಹಾಗೆಯೇ ಉಳಿಯಿತು. ಇಲ್ಲಿ ಅನಿಷ್ಟ ಪರಿಹಾರವೆಂಬ ಇಷ್ಟಾರ್ಥವು ದೊರಕಲಿಲ್ಲವೆಂದು ತಿಳಿಸಿದೆ. "ದಶರಥನು ಬೇಟೆಯಾಡುತ್ತಿದ್ದಾಗ ಪ್ರಮಾದದಿಂದ ಅವನ ಬಾಣಕ್ಕೆ ತುತ್ತಾಗಿ ಶ್ರಮಣಕುಮಾರನು ಸಾಯಲು ಅವನ ತಂದೆಯಾದ ಅಂಧತಪಸ್ವಿಯು ದಶರಥನಿಗೆ "ನೀನೂ ಸಹ ಪುತ್ರಶೋಕದಿಂದ ಸಾಯುವೆ" ಎಂದು ಶಾಪವನ್ನಿಡಲು ಅವನಿಗೆ ಆಗ ದಶರಥನು ಹೇಳುವನು. ಮಗನ ಮುಖವನ್ನೇ ನೋಡದಿರುವ ನನಗೆ ನೀನು ಕೊಟ್ಟ ಶಾಪವೂ ಸಹ ಒಂದು ಅನುಗ್ರಹವೇ ಆಯಿತು, ಕಟ್ಟಿಗೆಗಳಿಂದ ಪ್ರಜ್ವಲಿಸಿದ ಬೆಂಕಿಯು

ಕೃಷಿಗೆ ಯೋಗ್ಯವಾದ ಭೂಮಿಯನ್ನು ಸುಟ್ಟರೂ ಸಹ ಅಲ್ಲಿ ಬೀಜವು ವ್ಯರ್ಥ ಯಾಗಿ ಬೆಳೆಯುವಂತೆ ಮಾಡುತ್ತದೆ.'' ಇಲ್ಲಿ ದಶರಥನಿಗೆ ಅನಿಷ್ಟವುಂಟಾಗಲೆಂದು ತಪಸ್ವಿಯು ಬಯಸಿದರೂ ಅದು ಆಗುವುದಿಲ್ಲ. 'ನೀನು ಪುತ್ರಶೋಕದಿಂದ ಸಾಯುವೆ' ಎಂದು ತಿಳಿಸಿದ ಮುನಿಯ ಶಾಪವು ತನಗೆ ವಾಸ್ತವವಾಗಿ ಅನಿಷ್ಟವೇ ಆಗಿದ್ದರೂ ಅದರಿಂದ ತನಗೆ ಮಹಾಪುರುಷಾರ್ಥವೆನಿಸಿದ ಪುತ್ರಲಾಭವುಂಟಾಗುವ ಪ್ರಯುಕ್ತ ದಶರಥನು ಅದನ್ನು ತನಗೆ ಇಷ್ಟವೆಂದೇ ಸಮರ್ಥಿಸುವನು.

ಒಬ್ಬನು ತನ್ನ ಇಷ್ಟವನ್ನು ಸಾಧಿಸಬೇಕೆಂದು ಬೇರೊಬ್ಬನನ್ನು ಪ್ರೇರಿಸಲು ಅವನು ಪ್ರೇರಕನ ಇಷ್ಟವನ್ನು ಉಪೇಕ್ಷಿಸಿ ತನ್ನ ಇಷ್ಟವನ್ನೇ ಸಾಧಿಸಿಕೊಂಡರೆ ಅಲ್ಲಿಯೂ ಸಹ ಇಷ್ಟಾರ್ಥವು ದೊರೆಯದೇ ಇದ್ದುದರಿಂದ ಅದೂ ವಿಷಮವೇ ಆಗುತ್ತದೆ. "ಯಾವನ ಬಳಿಗೆ ದೂತಿಯನ್ನು ಕಳುಹಿಸಲಾಯಿತೋ ಅವನಲ್ಲಿಯೇ ಆಕೆ ಅಡಗಿಹೋದಳು. ಸಖಿಯರೇ, ಇದೇನು ನನ್ನ ಮೂಢತನವೋ ಅಥವಾ ವಿಧಿಯ ದುರ್ವಿಪಾಕವೋ ; ನೀವೇ ನೋಡಿ." ಇಲ್ಲಿ ಆಕೆ ಅವನಲ್ಲಿಯೇ ಅಡಗಿ ಹೋದಳೆಂದು ಹೇಳಿದ್ದರಿಂದ ನಾಯಕನಲ್ಲಿ ದೂತಿಯು ಸ್ವಚ್ಛಂದವಾಗಿ ವಿಹರಿಸಿದಳು ಎಂದು ತಿಳಿಸಲಾಗಿದೆ. "ನಪುಂಸಕಲಿಂಗವೆಂದು ತಿಳಿದು ಮನಸ್ಸನ್ನು ಪ್ರಿಯೆಯ ಬಳಿಗೆ ಕಳುಹಿಸಿದ್ದಾಯಿತು. ಅದಾದರೋ ಅಲ್ಲಿಯೇ ರಮಿಸತೊಡಗಿತು. ಆ ಪದವನ್ನು ನಪುಂಸಕವೆಂದು ಹೇಳಿದ ಪಾಣಿನಿಯಿಂದ ನಾವು ಕೆಟ್ಟೆವು,''

ಏತಾನಿ ಸರ್ವಥೈವ ಇಷ್ಟಾನವಾಪ್ತೇರುದಾಹರಣಾನಿ ಕದಾಚಿದಿಷ್ಟಾವಾಪ್ತಿ ಪೂರ್ವಕತದನವಾಪ್ತಿರ್ಯಥಾ ಮದೀಯೇ ವರದರಾಜಸ್ತವೇ—

ಭಾನುರ್ನಿಶಾಸು ಭವದಂಘ್ರಿಮಯೂಖಶೋಭಾ
ಲೋಭಾತ್ಪ್ರತಾಪ್ಯ ಕಿರಣೋತ್ಕರಮಾಪ್ರಭಾತಮ್ ।
ತತ್ಪ್ರೋದ್ಧೃತೇ ಹುತವಹಾತ್ ಕ್ಷಣಲುಪ್ತರಾಗೇ
ತಾಪಂ ಭಜತ್ಯನುದಿನಂ ಸ ಹಿ ಮಂದತಾಪಃ ॥

ತ್ವದ್ವಕ್ತ್ರಸಾಮ್ಯಮಯಮಂಬುಜಕೋಶಮುದ್ರಾ
ಭಂಗಾತ್ತತತ್ಸುಷಮಮಿತ್ರಕರೋಪಕ್ಲೃಪ್ತ್ಯಾ ।
ಲಬ್ಧ್ವಾಪಿ ಪರ್ವಣಿ ವಿಧುಃ ಕ್ಷಯೋಹೇಯಮಾನಃ
ಶಂಸತ್ಯನೀತ್ಯುಪಚಿತಾಂ ಶ್ರಿಯಮಾಶುನಾಶಾಮ್ ॥

ಅತ್ರಾದ್ಯಶ್ಲೋಕೇ ಸೂರ್ಯಕಿರಣಾನಾಂ ರಾತ್ರಿಷ್ವಗ್ನಿಪ್ರವೇಶನಮಾಗಮ ಸಿದ್ಧಮ್. ಸೂರ್ಯಸ್ಯ ನಿಜಕಿರಣೇಷು ಭಗವಚ್ಚರಣಾರುಣಿಮಪ್ರೇಪ್ಸಯಾ ತತ್ಕೃತಂ ತೇಷಾಮಗ್ನೌ ಪ್ರತಾಪನಂ ಪರಿಕಲ್ಪ್ಯ ತೇಷಾಮುದಯಕಾಲದೃಷ್ಟ ಮರುಣಿಮಾನಂ ಚ ತಪ್ತೋದ್ಧೃತನಾರಾಚಾನಾಮಿವ ಅಗ್ನಿ ಸಂತಾಪನಪ್ರಯುಕ್ತ

ರುಣಿಮಾನುವೃತ್ತಿಂ ಪರಿಕಲ್ಪ್ಯ ಸೂರ್ಯಸ್ಯ ಮಹತಾಪಿ ಪ್ರಯತ್ನೇನ ತಾತ್ಕಾಲಿಕೇಷ್ಟಾವಾಪ್ತಿರೇವ ಜಾಯತೇ ನ ಸಾರ್ವಕಾಲಿಕೇಷ್ಟಾವಾಪ್ತಿರಿತಿ ದರ್ಶಿತಮ್. ದ್ವಿತೀಯಶ್ಲೋಕೇ ಚಂದ್ರಸ್ಯ ಭಗವನ್ಮುಖಲಕ್ಷ್ಮೀಂ ಲಿಪ್ಸಮಾನಸ್ಯ ಸುಹೃತ್ವೇನ ಮಿತ್ರಶಬ್ದಶ್ಲೇಷವಶಾತ್ಸೂರ್ಯಂ ಪರಿಕಲ್ಪ್ಯ ತತ್ಕಿರಣಸ್ಯ ಕಮಲಮುಕುಲವಿಕಾಸನಂ ಚಂದ್ರಾನುಪ್ರವೇಶನಂ ಚ ಸುಹೃತ್ಪ್ರಾಣೇರ್ಭಗವನ್ಮುಖಲಕ್ಷ್ಮೀನಿಧಾನಕೋಶಗೃಹಮುದ್ರಾಮೋಚನಪೂರ್ವಕಂ ತತೋ ಗೃಹೀತಭಗವನ್ಮುಖಲಕ್ಷ್ಮೀಕಸ್ಯ ತಯಾ ಭಗವನ್ಮುಖಲಕ್ಷ್ಮ್ಯಾ ಚಂದ್ರಪ್ರಸಾದನಾರ್ಥಂ ಚಂದ್ರಸ್ಪರ್ಶರೂಪಂ ಚ ಪರಿಕಲ್ಪ್ಯ ತಾವತಾಪಿ ಪ್ರಯತ್ನೇನ ಪೌರ್ಣಮಾಸ್ಯಾಮೇವ ಭಗವನ್ಮುಖಸಾಮ್ಯರೂಪೇಷ್ಟಪ್ರಾಪ್ತಿರ್ಜಾಯತೇ ನ ಸಾರ್ವಕಾಲಿಕೇತಿ ದರ್ಶಿತಮ್. ಕ್ವಚಿದಿಷ್ಟಾನವಾಪ್ತಾವಪಿ ತದವಾಪ್ತಿಭ್ರಮನಿಬಂಧನಾದ್ವಿಚ್ಛಿತ್ತಿವಿಶೇಷಃ.

ಯಥಾ ವಾ–

> ಬಲ್ಲಾಳಕ್ಷೋಣಿಪಾಲ ತ್ವದಹಿತನಗರೇ ಸಂಚರಂತೀ ಕಿರಾತೀ
> ರತ್ನಾನ್ಯಾದಾಯ ಕೀರ್ಣಾನ್ಯುರುತರಖದಿರಾಂಗಾರಶಂಕಾಕುಲಾಂಗಿ
> ಕ್ಷಿಪ್ತ್ವಾ ಶ್ರೀಖಂಡಖಂಡಂ ತದುಪರಿ ಮುಕುಲೀಭೂತನೇತ್ರಾ ಧಮಂತೀ ।
> ಶ್ವಾಸಾಮೋದಪ್ರಸಕ್ತೈರ್ಮಧುಕರಪಟಲೈರ್ಧೂಮಶಂಕಾಂ ಕರೋತಿ ॥

ಅತ್ರ ಪ್ರಭೂತಾಗ್ನಿಸಂಪಾದನೋದ್ಯೋಗಾತ್ ತತ್ಸಂಪಾದನಾಲಾಭೇಽಪಿ ತಲ್ಲಾಭೋಃ ಭ್ರಮೋಪನ್ಯಾಸಮುಖೇನ ನಿಬದ್ಧಃ.

ಹಿಂದೆ ಹೇಳಿದ ಉದಾಹರಣಗಳೆಲ್ಲವೂ ಪೂರ್ತಿಯಾಗಿ ಒಬ್ಬನ ಇಷ್ಟಾರ್ಥವು ದೊರೆಯಲಿಲ್ಲವೆಂಬುದಕ್ಕೇ ಅನ್ವಯಿಸುತ್ತವೆ. ಕೆಲವು ವೇಳೆ ಇಷ್ಟಾರ್ಥವು ತಾತ್ಕಾಲಿಕವಾಗಿ ದೊರೆತು ಸಾರ್ವತ್ರಿಕವಾಗಿ ದೊರೆಯದೇ ಇರುವುದಕ್ಕೆ ಉದಾಹರಣವನ್ನು ತಿಳಿಸುತ್ತಾನೆ: "ಸ್ವಾಮಿ, ಸೂರ್ಯನು ನಿನ್ನ ಪಾದಕಿರಣಗಳ ಕಾಂತಿಯನ್ನು ಹೊಂದುವ ವ್ಯಾಮೋಹದಿಂದ ತನ್ನ ಕಿರಣಗಳ ಸಮೂಹವನ್ನು ರಾತ್ರಿಯಿಂದ ಬೆಳಗಿನವರೆಗೂ ಬೆಂಕಿಯಲ್ಲಿ ಕಾಯಿಸಿ ಕೆಂಪಗೆ ಮಾಡಿಕೊಳ್ಳುವನು. ಬೆಂಕಿಯಿಂದ ಕಾದಿದ್ದ ಆ ಕಿರಣಗಳನ್ನು ಅರುಣೋದಯಕಾಲದಲ್ಲಿ ಮೇಲಕ್ಕೆ ಎತ್ತಿದ್ದರಿಂದ ಆಗ ಅವು ಒಂದು ಕ್ಷಣ ಕಾಲ ಕೆಂಪಾಗಿದ್ದು ಅನಂತರ ಆ ಕೆಂಪು ತೊಲಗಿದ್ದರಿಂದ ಆವನು ಸಂತಾಪವನ್ನು ಹೊಂದುವನು." "ಸ್ವಾಮಿ, ಈ ಚಂದ್ರನು ಹಗಲಿನಲ್ಲೆಲ್ಲಾ ಮತ್ತೆ ಸಂತಾಪವನ್ನು ಹೊಂದುವನು." "ಸ್ವಾಮಿ, ಈ ಚಂದ್ರನು ಹುಣ್ಣಿಮೆಯಲ್ಲಿ ಕಮಲದ ಮೊಗ್ಗೆಂಬ ಭಂಡಾರದ ಮುದ್ರೆಯನ್ನು ಹೊಡೆದದ್ದರಿಂದ ಹೊರಹೊಮ್ಮಿದ ಕಾಂತಿಯನ್ನು ಹೊಂದಿದ್ದ ಸೂರ್ಯನ ಕಿರಣಗಳ ಲಾಭದಿಂದ ನಿನ್ನ ಮುಖದ ಕಾಂತಿಯನ್ನು ಹೊಂದಿದ್ದರೂ ಕ್ರಮವಾಗಿ ಕ್ಷೀಣಸ್ಥಿತಿಯನ್ನು ಹೊಂದಿ ಅನೀತಿಯಿಂದ ಪಡೆದ ಐಶ್ವರ್ಯವು ಬೇಗನೆ ನಾಶವಾಗುವುದೆಂದು

ತಿಳಿಸುತ್ತಾನೆ'' ಇಲ್ಲಿ, ಮೊದಲನೆಯದರಲ್ಲಿ ಸೂರ್ಯನ ಕಿರಣಗಳು ರಾತ್ರಿಯಲ್ಲಿ ಅಗ್ನಿಯನ್ನು ಪ್ರವೇಶಿಸುತ್ತವೆ ಎಂಬುದು ಆಗಮಪ್ರಸಿದ್ಧವೆನಿಸಿದೆ. ಸೂರ್ಯನು ಭಗವಂತನ ಪಾದಗಳಲ್ಲಿರುವ ಕೆಂಪುಬಣ್ಣವನ್ನು ಹೊಂದುವ ಇಚ್ಛೆಯಿಂದ ಅಗ್ನಿಯಲ್ಲಿ ತನ್ನ ಕಿರಣಗಳನ್ನು ಕಾಯಿಸಿದನೆಂದು ಅಲ್ಲಿ ಹೇಳಿದೆ. ಅವನು ಹುಟ್ಟುವಾಗ ಅವನಲ್ಲಿ ಕಾಣುವ ಕೆಂಪನ್ನು ಬೆಂಕಿಯಲ್ಲಿ ಬಹಳ ಹೊತ್ತು ಕಾಯಿಸಿದ ಬಾಣದಂತೆ ತಾತ್ಕಾಲಿಕ ವಾಗಿ ಕೆಂಪಗಿದ್ದು ಆಮೇಲೆ ಆರುವಂತೆ ಇಲ್ಲಿ ಕಲ್ಪಿಸಿದೆ. ಸೂರ್ಯನು ಇಷ್ಟೊಂದು ಆಗ ಪ್ರಯತ್ನಪಟ್ಟರೂ ಅರುಣೋದಯಕಾಲದಲ್ಲಿ ಕೆಂಪೇರಿದ್ದರಿಂದ ಆಗ ಭಗವಂತನ ಪಾದಗಳ ಕೆಂಪಿನ ಸಾಮ್ಯವು ಬಂದಿತೇ ಹೊರತು ದಿನವೆಲ್ಲಾ ಬರಲಿಲ್ಲವೆಂದು ಇಲ್ಲಿ ತಿಳಿಸಿದೆ. ಹಾಗೆ ಇಷ್ಟಾರ್ಥವು ದೊರೆತರೂ ತಾತ್ಕಾಲಿಕವೇ ಹೊರತು ಸಾರ್ವತ್ರಿಕ ವಾಗಲಿಲ್ಲ. ಎರಡನೆಯ ಶ್ಲೋಕದಲ್ಲಿ ಭಗವಂತನ ಮುಖದ ಕಾಂತಿಯನ್ನು ಹೊಂದ ಲಿಚ್ಛಿಸಿದ ಚಂದ್ರನು ಮಿತ್ರಶಬ್ದದ ಶ್ಲೇಷದಿಂದ ತಿಳಿದುಬರುವ ಸೂರ್ಯನನ್ನು ಮಿತ್ರನೆಂದು ಭಾವಿಸಿ ಅವನ ಕಿರಣದಿಂದ ಕಮಲದ ಮೊಗ್ಗು ಅರಳುವುದೆಂದೂ, ಚಂದ್ರನಲ್ಲಿ ಅವನು ಪ್ರವೇಶಿಸುವನೆಂದೂ ಮಿತ್ರನ ಕೈಯಿಂದ ಭಗವಂತನ ಮುಖ ಸೌಂದರ್ಯದ ನಿಧಿ ಎನಿಸಿದ ಕೋಶಮುದ್ರೆಯನ್ನು ಒಡೆಸಿ ಅದರೊಳಗೆ ಅಡಗಿದ್ದ ಭಗವನ್ಮುಖಸೌಂದರ್ಯವನ್ನು ಚಂದ್ರನು ಕದ್ದುಕೊಂಡನೆಂದೂ ಇಲ್ಲಿ ಕಲ್ಪಿಸಲಾಗಿದೆ. ಆ ಸೌಂದರ್ಯದಿಂದ ಚಂದ್ರನನ್ನು ಅಲಂಕರಿಸಲಿಕ್ಕಾಗಿ ಸೂರ್ಯನಿಗೆ ಚಂದ್ರನ ಸ್ಪರ್ಶ ವಾಯಿತೆಂದೂ ಕಲ್ಪಿಸಲಾಗಿದೆ. ಇಷ್ಟೆಲ್ಲಾ ಪ್ರಯತ್ನವನ್ನು ಮಾಡಿದರೂ ಸಹ ಹುಣ್ಣಿಮೆಯಲ್ಲಿ ಮಾತ್ರವೇ ಚಂದ್ರನಿಗೆ ಭಗವಂತನ ಮುಖಸಾಮ್ಯವೆಂಬ ಇಷ್ಟಾರ್ಥವು ದೊರಕಿತೆಂದೂ, ಆದರೆ ಶಾಶ್ವತವಾದ ಫಲವು ದೊರಕಲಿಲ್ಲವೆಂದೂ ತಿಳಿಸಲಾಗಿದೆ.

ಇಷ್ಟಾರ್ಥವು ದೊರಕದಿದ್ದರೂ ಅದು ದೊರಕಿದೆ ಎಂಬ ಭ್ರಾಂತಿಯಿಂದ ಎಲ್ಲಿ ಚಮತ್ಕಾರವು ತೋರುವುದೋ ಅಲ್ಲಿಯೂ ಇದೇ ಅಲಂಕಾರವಿರುತ್ತದೆ. "ಬಲ್ಲಾಳ ಮಹಾರಾಜನೇ, ನಿನ್ನ ಶತ್ರುಗಳ ರಾಜ್ಯದಲ್ಲಿ ಸಂಚರಿಸುವ ಬೇಡರ ಹೆಂಗಸು ಅಲ್ಲೆಲ್ಲಾ ಬಿದ್ದಿದ್ದ ರತ್ನಗಳನ್ನು ಆಯ್ದುಕೊಂಡು ಅವನ್ನು ದಪ್ಪದಪ್ಪನಾದ ಕಗ್ಗಲಿಯ ಕೆಂಡವೆಂಬ ಭ್ರಾಂತಿಯಿಂದ ಅದರ ಮೇಲೆ ಶ್ರೀಗಂಧದ ಕಟ್ಟಿಗೆಯ ಚೂರು ಗಳನ್ನು ಎಸೆದು ಕಣ್ಣನ್ನು ಮುಚ್ಚಿಕೊಂಡು ಫೂ ಎಂದು ಶಬ್ದವನ್ನು ಮಾಡುತ್ತಿರಲು ಆಕೆಯ ನಿಟ್ಟುಸಿರಿನ ಸುಗಂಧದ ಆಶೆಯಿಂದ ಹೊರಗೆ ಬಂದು ಅಲೆಯುತ್ತಿದ್ದ ದುಂಬಿಗಳ ಸಮೂಹದಿಂದ ಹೊಗೆ ಮೇಲೆ ಹೊರಡುತ್ತಿದೆಯೋ ಎಂಬ ಸಂಶಯ ವನ್ನು ಜನರಿಗೆ ಹುಟ್ಟಿಸುತ್ತಿರುವಳು.'' ಇಲ್ಲಿ ಹೆಚ್ಚು ಬೆಂಕಿಯನ್ನು ಶೇಖರಿಸಬೇಕೆಂಬ ಇಚ್ಛೆಯಿಂದ ರತ್ನಗಳನ್ನು ಆಕೆ ಸಂಗ್ರಹಿಸಿದಳು. ಆದರೆ ಆಕೆಗೆ ಬೆಂಕಿ ದೊರೆಯ ದಿದ್ದರೂ ರತ್ನವೇ ಬೆಂಕಿ ಎಂಬ ಭ್ರಾಂತಿಯುಂಟಾಯಿತು. ಹೊರಗಡೆ ಓಡಾಡುವ ದುಂಬಿಗಳನ್ನು ಬೆಂಕಿಯ ಮೇಲೆ ಶ್ರೀಗಂಧದ ಕಡ್ಡಿಯನ್ನು ಹಾಕಿದ್ದರಿಂದ ಹೊರಟ

ಹೊಗೆ ಎಂದು ಭ್ರಮಿಸುವುದರ ಮೂಲಕ ರತ್ನದಲ್ಲಿ ಬೆಂಕಿ ಎಂಬ ಭ್ರಾಂತಿ ಉಂಟಾಯಿತೆಂದು ಇಲ್ಲಿ ತಿಳಿಸಿದೆ.

## ೩೯. ಸಮಾಲಂಕಾರ

ಸಮಂ ಸ್ಯಾದ್ವರ್ಣನಂ ಯತ್ರ ದ್ವಯೋರಪ್ಯನುರೂಪಯೋಃ ।
ಸ್ವಾನುರೂಪಂ ಕೃತಂ ಸದ್ಮ ಹಾರೇಣ ಕುಚಮಂಡಲಮ್ ॥

ಪ್ರಥಮವಿಷಮಪ್ರತಿದ್ವಂದ್ವೀದಂ ಸಮಮ್. ಯಥಾ ವಾ—
ಕೌಮುದೀವ ತುಹಿನಾಂಶುಮಂಡಲಂ ಜಾಹ್ನವೀವ ಶಶಿಖಂಡಮಂಡನಮ್ ।
ಪಶ್ಯ ಕೀರ್ತಿರನುರೂಪಮಾಶ್ರಿತಾ ತ್ವಾಂ ವಿಭಾತಿ ನರಸಿಂಹಭೂಪತೇ ॥

ಚಿತ್ರಂ ಚಿತ್ರಂ ಬತ ಬತ ಮಹಚ್ಚಿತ್ರಮೇತದ್ವಿಚಿತ್ರಂ ।
ಜಾತೋ ದೈವಾದುಚಿತಘಟನಾಸಂವಿಧಾತಾ ವಿಧಾತಾ ॥
ಯನ್ನಿಂಬಾನಾಂ ಪರಿಣತಫಲಸ್ಫೀತಿರಸ್ವಾದನೀಯಾ ।
ಯಚ್ಚೈತಸ್ಯಾಃ ಕವಲನಕಲಾಕೋವಿದಃ ಕಾಕಲೋಕಃ ॥

ಪೂರ್ವಂ ಸ್ತುತಿಪರ್ಯವಸಾಯಿ ; ಇದಂ ನಿಂದಾಪರ್ಯವಸಾಯೀತಿ ಭೇದಃ.
ಸಾರೂಪ್ಯಮಪಿ ಕಾರ್ಯಸ್ಯ ಕಾರಣೇನ ಸಮಂ ವಿದುಃ ।
ನೀಚಪ್ರವಣತಾ ಲಕ್ಷ್ಮೀರ್ಜಲಜಾಯಾಸ್ತವೋಚಿತಾ ॥

ಇದಂ ದ್ವಿತೀಯಂ ವಿಷಮಪ್ರತಿದ್ವಂದ್ವಿ ಸಮಂ. ಯಥಾ ವಾ—
ದವದಹನಾದುತ್ಪನ್ನೋ ಧೂಮೋ ಘನತಾಮವಾಪ್ಯ ವರ್ಷೈಸ್ತಮ್ ।
ಯಚ್ಛಮಯತಿ ತದ್ಯುಕ್ತಂ ಸೋಽಪಿ ಚ ದವಮೇವ ನಿರ್ದಹತಿ ॥

ಯಥಾ ವಾ—
ಆದೌ ಹಾಲಾಹಲಹುತಭುಜಾ ದತ್ತಹಸ್ತಾವಲಂಬೋ
ಬಾಲ್ಯೇ ಶಂಭೋರ್ನಿಟಿಲಮಹಸಾ ಬದ್ಧಮೈತ್ರೀನಿರೂಢಃ ।
ಪ್ರೌಢೋ ರಾಹೋರಪಿ ಮುಖವಿಷೇಣಾಂತರಂಗೀಕೃತೋ ಯಃ
ಸೋಽಯಂ ಚಂದ್ರಸ್ತಪತಿ ಕರಣೈರ್ಮಾಮಿತಿ ಪ್ರಾಪ್ತಮೇತತ್ ॥

ಅತ್ರ ಆಗಂತುಕತದೀಯ ಪೂರ್ವತ್ರ ಕಾರಣಸ್ವಭಾವಾನುರೂಪ್ಯಂ ಕಾರ್ಯಸ್ಯ, ಅತ್ರ ಆಗಂತುಕತದೀಯ ದುಷ್ಟಸಂಸರ್ಗಾನುರೂಪ್ಯಮಿತಿ ಭೇದಃ.

ಪರಸ್ಪರ ಹೊಂದಿಕೆಯಾಗುವಂತಹ ಎರಡು ವಸ್ತುಗಳ ಸಂಬಂಧವನ್ನು ವರ್ಣಿಸುವುದೇ ಸಮಾಲಂಕಾರವೆನಿಸುತ್ತದೆ. "ಮುಕ್ತಾಹಾರವು ಕುಚಗಳನ್ನು ತನಗೆ

ಅನುಗುಣವಾದ ಸ್ಥಾನವನ್ನಾಗಿ ಮಾಡಿಕೊಂಡಿತು.'' ಮುಕ್ತಾಹಾರಕ್ಕೆ ಕಂಚವನ್ನು ವನ್ನು ಅರ್ಹವಾದ ಸ್ಥಾನವೆಂದು ಇಲ್ಲಿ ವರ್ಣಿಸಿರುವುದರಿಂದ ಇದು ಸಮಾಲಂಕಾರ ವೆನಿಸಿದೆ. ಇದು ವಿಷಮಾಲಂಕಾರದ ಮೊದಲನೆಯ ಬಗೆಗೆ ಎದುರಾಳಿ ಎನಿಸಿದೆ ಬೇರೆ ಉದಾಹರಣಗಳನ್ನು ಕೊಡುತ್ತಾನೆ. ''ನರಸಿಂಹಮಹಾರಾಜನೇ, ಚಂದ್ರ ಮಂಡಲವನ್ನು ಬೆಳದಿಂಗಳು ಆಶ್ರಯಿಸಿದಂತೆ, ಶಿವನನ್ನು ಗಂಗೆ ಆಶ್ರಯಿಸಿದಂತೆ ಕೀರ್ತಿಯು ತನಗನುಗುಣವಾದ ನಿನ್ನನ್ನು ಆಶ್ರಯಿಸಿದೆ.'' ಇಲ್ಲಿ ಕೀರ್ತಿಗೆ ರಾಜ ನನ್ನು ಅನುಗುಣವಾದ ಆಶ್ರಯವೆಂದು ವರ್ಣಿಸಿದೆ. "ಬೇವಿನ ಮರದ ಪಕ್ವ ಫಲದ ಸಮೃದ್ಧಿಯು ಕಹಿಯಾಗಿದ್ದರೂ ಆಸ್ವಾದ್ಯವಾಗುವಂತೆಯೂ, ಅದನ್ನು ಭೋಗಿಸಲು ಕಾಗೆಗಳು ನಿಪುಣವೆನಿಸುವಂತೆಯೂ ಸೃಷ್ಟಿಮಾಡಿರುವ ಬ್ರಹ್ಮನು ಅಕಸ್ಮಾತ್ತಾಗಿ ಇಂತಹ ಯೋಗ್ಯಸಂಘಟನೆಯನ್ನು ಏರ್ಪಡಿಸಿರುವನೆಂಬುದು ಬಹಳ ವಿಚಿತ್ರವೆನಿಸಿದೆ.'' ಯಾವತ್ತೂ ಯೋಗ್ಯವಾದ ಘಟನೆಯನ್ನು ಕಲ್ಪಿಸದಿರುವ ಬ್ರಹ್ಮನು ಆಕಸ್ಮಿಕವಾಗಿ ನಿಂಬಫಲಕ್ಕೂ ಕಾಗೆಗೂ ಯೋಗ್ಯವಾದ ಘಟನೆಯನ್ನು ಕಲ್ಪಿಸಿರುವುದು ಆಶ್ಚರ್ಯ. ಎಲ್ಲಾ ಮರಗಳಲ್ಲೂ ಹೆಚ್ಚು ಹಣ್ಣುಗಳಿರುವುದಿಲ್ಲ: ಆದರೆ ಬೇವಿನ ಮರದಲ್ಲಿ ಹಣ್ಣುಗಳು ಹೆಚ್ಚಾಗಿರುತ್ತವೆ. ಹೀಗೆ ಮಾಡಿದವನೂ ಅವನೇ. ಇವು ಯಾರಿಗೂ ಆಸ್ವಾದ್ಯವಾಗದಿದ್ದರೂ ಅವನ್ನು ಆಸ್ವಾದಿಸಲು ಕಾಗೆ ಗಳನ್ನು ಸೃಷ್ಟಿಮಾಡಿದವನೂ ಅವನೇ. ಆದ್ದರಿಂದ ಈ ಬಗೆಯು ಸೃಷ್ಟಿಯಲ್ಲಿ ಅನುರೂಪ್ಯವಿದೆ. ಹಿಂದಿನ ಪದ್ಯದಲ್ಲಿ ರಾಜನ ಕೀರ್ತಿಯು ಲೋಕಕ್ಕೆಲ್ಲಾ ಮಾನ್ಯ ವಾಗಿತ್ತೆಂದು ಅವನ ಸ್ತೋತ್ರವನ್ನು ತಿಳಿಸಲಾಗಿದೆ. ಇಲ್ಲಿಯಾದರೋ ಬೇವಿನ ಹಣ್ಣು ಕಹಿಯಾದ್ದರಿಂದ ,ಯಾರಿಗೂ ತಿನ್ನಲಿಕ್ಕೆ ಯೋಗ್ಯವಲ್ಲವೋ ಹಾಗೆಯೇ ಅವನ್ನು ತಿನ್ನುವ ಕಾಗೆಗಳೂ ಪಕ್ಷಿಗಳಲ್ಲೆಲ್ಲಾ ಹೀನವಾದವು ಎಂದು ಅವುಗಳ ನಿಂದೆ ಬಂದಿದೆ.

ಕಾರ್ಯವು ಕಾರಣಕ್ಕಿಂತ ಬೇರೆಯಾಗದೆ ಅದಕ್ಕೆ ಸದೃಶವಾಗಿದೆ ಎಂದು ವರ್ಣಿಸುವುದು ಸಮಾಲಾಂಕಾರವೆನಿಸುತ್ತದೆ. ಲಕ್ಷ್ಮಿಯೇ, ನೀರಿನಲ್ಲಿ ಹುಟ್ಟಿದ ನಿನಗೆ ನೀಚರಲ್ಲಿ ಅಂಟಿಕೊಳ್ಳುವ ಸ್ವಭಾವ ಸಹಜವೆನಿಸಿದೆ. ಲಕ್ಷ್ಮಿಯು ನೀಚರನ್ನಾ ಶ್ರಯಿಸಿರುವುದೇ ಕಾರ್ಯ. ಆಕೆ ನೀರಿನಲ್ಲಿ ಹುಟ್ಟಿದ್ದೇ ಕಾರಣ. ನೀರು ಕೆಳಕ್ಕೆ ಅಂದರೆ ಹಳ್ಳದ ಕಡೆಗೆ ಹರಿಯುವುದೇ ಸ್ವಭಾವ. ಅಲ್ಲಿ ಹುಟ್ಟಿದ್ದರಿಂದ ಲಕ್ಷ್ಮಿಗೂ ಅದೇ ಸ್ವಭಾವವು ಬಂದಿದೆ. ಹೀಗೆ ಕಾರ್ಯಕಾರಣಗಳಿಗೆ ಸಾದೃಶ್ಯವನ್ನು ವರ್ಣಿಸಿದ ರಿಂದ ಇದು ಸಮವೆನಿಸುತ್ತದೆ. ಇದು ವಿಷಮಾಲಂಕಾರದ ಎರಡನೆಯ ಬಗೆಗೆ ಎದುರಾಳಿ ಎನಿಸಿದೆ. ಕಾಡುಗಿಚ್ಚಿನಿಂದ ಹುಟ್ಟಿದ ಹೊಗೆ ಗಟ್ಟಿಗೊಂಡು ಮೋಡವಾಗಿ ಪರಿಣಮಿಸಿ ಕೆಳಗೆ ಮಳೆಯಾಗಿ ಸುರಿದು ಆ ಬೆಂಕಿಯನ್ನೇ ಆರಿಸುತ್ತದೆ. ಆ ಕಾಡ್ಗಿಚ್ಚು ಸಹ ತನಗೆ ಆಶ್ರಯವನ್ನು ಕೊಟ್ಟ ಕಾಡನ್ನೇ ಪೂರ್ತಿಯಾಗಿ

ಸುಡುತ್ತದೆ. ಧೂಮವು ಮಳೆಯಾಗಿ ಸುರಿದು ಕಾಡುಗಿಚ್ಚನ್ನು ಹಾಳುಮಾಡುವುದೇ ಇಲ್ಲಿ ಕಾರ್ಯ. ಧೂಮಕ್ಕೆ ಕಾರಣವೆನಿಸಿದ ಕಿಚ್ಚು ಕಾಡನ್ನು ಹಾಳುಮಾಡುವಂತೆ ಧೂಮವು ಕಿಚ್ಚನ್ನು ಹಾಳುಮಾಡುವುದು ಯುಕ್ತ. ಕಾರಣದ ಸ್ವಭಾವವು ಕಾರ್ಯದಲ್ಲೂ ಅಂಟಿಕೊಳ್ಳುವುದು. ವಿರಹಿಣಿಯೊಬ್ಬಳು ಹೇಳುವ ಮಾತಿದು. "ಈ ಚಂದ್ರನು ತನ್ನ ಕಿರಣಗಳಿಂದ ನನ್ನನ್ನು ಸುಡುತ್ತಿರುವುದು ಯುಕ್ತ. ಯಾಕೆಂದರೆ ಅವನು ಅಮೃತಕಿರಣನಾದರೂ ಮೊದಲು ಹಾಲಾಹಲವಿಷವೆಂಬ ಬೆಂಕಿಯ ಆಶ್ರಯದಲ್ಲಿ ಬೆಳೆದನು. ಬಾಲ್ಯದಲ್ಲಿ ಶಂಭುವಿನ ಹಣೆಗಣ್ಣಿನೊಡನೆ ಸ್ನೇಹವನ್ನು ಬೆಳೆಸಿದನು. ಯೌವನ ಕಾಲದಲ್ಲಿ ರಾಹುವಿನ ಬಾಯಿಯ ವಿಷದೊಡನೆ ಬೆರೆತಿದ್ದನು. ಆದ್ದರಿಂದ ಜನರನ್ನು ಸಂತಾಪಗೊಳಿಸುವ ಸ್ಥಿತಿ ಅವನಲ್ಲಿ ಸಹಜವೆನಿಸಿದೆ. ಅವನಿಗೆ ಮೊದಲಿಂದಲೂ ವಿಷದ ಸಂಪರ್ಕವೇ ಇದೆ. ಆದ್ದರಿಂದ ಅವನು ನನ್ನನ್ನು ಸುಡುತ್ತಿರುವುದು ಯುಕ್ತ." ಇಲ್ಲಿ ಹಾಲಾಹಲ ವಿಷ, ಹಣೆಗಣ್ಣಿನ ಬೆಂಕಿ ರಾಹುವಿನ ಮುಖದ ವಿಷ ಇವುಗಳ ಸಹವಾಸವೇ ಚಂದ್ರನು ಜನರನ್ನು ಸಂತಾಪಗೊಳಿಸಲು ಕಾರಣವೆನಿಸಿವೆ. ಹಿಂದಿನ ಪದ್ಯದಲ್ಲಿ ಕಾರಣದ ಸ್ವಭಾವಕ್ಕೆ 'ಅನುಗುಣವಾದ ಸನ್ನಿವೇಶವನ್ನು ಕಾರ್ಯದಲ್ಲಿ ತಿಳಿಸಿದೆ. ಕಾರಣದ ಸ್ವಭಾವವು ಕಾರ್ಯಕ್ಕೆ ಸಹಜವಾಗಿ ಅಂಟಿಕೊಂಡಿದೆ. ಎರಡನೆಯದರಲ್ಲಾದರೂ ಆಕಸ್ಮಾತ್ತಾಗಿ ಬಂದೊದಗಿದ ದುಷ್ಟ ಪದಾರ್ಥಗಳ ಸಂಸರ್ಗವನ್ನು ಚಂದ್ರನಲ್ಲಿರುವ ತೀಕ್ಷ್ಣತೆಗೆ ಅನುರೂಪವೆಂದು ವರ್ಣಿಸಲಾಗಿದೆ.

ವಿನಾನಿಷ್ಟಂ ಚ ತತ್ಸಿದ್ಧಿರ್ಯದರ್ಥಂ ಕರ್ತುಮುದ್ಯತಃ।
ಯುಕ್ತೋ ವಾರಣಲಾಭೋಽಯಂ ಜಾತಸ್ತೇ ವಾರಣಾರ್ಥಿನಃ ॥೯೨॥

ಇದಂ ಸಮಮನಿಷ್ಟಸ್ಯಾವಾಪ್ತಿಶ್ಚೇತ್ಯರ್ಥಸಂಗ್ರಹೀತಸ್ಯ ತ್ರಿವಿಧಸ್ಯಾಪಿ ವಿಷಮಸ್ಯ ಪ್ರತಿದ್ವಂದ್ವಿ, ಇಷ್ಟಾವಾಪ್ತೇರನಿಷ್ಟಸ್ಯಾಪ್ರಸಂಗಾಚ್ಚ. ಅತ್ರ ಗಜಾರ್ಥಿತಯಾ ರಾಜಾನಮುಪಸರ್ಪಂತಂ ತದ್ದ್ವಾರಿಕೈರ್ವಾರ್ಯಮಾಣಂ ಪ್ರತಿ ನರ್ಮವಚನಮುದಾಹರಣಮ್. ನ ಚಾತ್ರ ನಿವಾರಣಮನಿಷ್ಟಮಾಪನ್ನಮಿತ್ಯನುದಾಹರಣತ್ವಂ ಶಂಕನೀಯಮ್. ರಾಜದ್ವಾರಿ ಕ್ಷಣನಿವಾರಣಂ ಸಂಭಾವಿತಮಿತಿ ತದಂಗೀಕೃತ್ಯ ಪ್ರವೃತ್ತಸ್ಯ ವಿಷಮಾಲಂಕಾರೋದಾಹರಣೇಷ್ವೇವ ಅತರ್ಕಿತೋತ್ಕಟಾನಿಷ್ಟಾಪತ್ತ್ಯಭಾವಾತ್. ಕಿಂ ಚ ಯತ್ರ ಅತರ್ಕಿತೋತ್ಕಟಾನಿಷ್ಟಸತ್ತ್ವೇ ಶ್ಲೇಷಮಹಿಮ್ನಾ ಇಷ್ಟಾರ್ಥತ್ವಪ್ರತೀತಿಃ ತತ್ರಾಪಿ ಸಮಾಲಂಕಾರೋಽಪ್ರತಿಹತ ಏವ.

ಉಚ್ಚೈರ್ಗಜೈರಟನಮರ್ಥಯಮಾನ ಏವ
ತ್ವಾಮಾಶ್ರಯನ್ನಿಹ ಚಿರಾದುಷಿತೋಽಸ್ಮಿ ರಾಜನ್ ।
ಉಚ್ಚಾಟನಂ ತ್ವಮಪಿ ಲಂಭಯಸೇ ತದೈವ
ಮಾಮದ್ಯ ನೈವ ವಿಫಲಾ ಮಹತಾಂ ಹಿ ಸೇವಾ ॥

ಅತ್ರ ಯದ್ಯಪಿ ವ್ಯಾಜಸ್ತುತೌ ಸ್ತುತ್ಯಾ ನಿಂದಾಭಿವ್ಯಕ್ತಿವಿವಕ್ಷಾಯಾಂ ವಿಷಮಾಲಂಕಾರಃ, ತಥಾಪಿ ಪ್ರಾಥಮಿಕಸ್ತುತಿರೂಪವಾಚ್ಯವಿವಕ್ಷಾಯಾಂ ಸಮಾಲಂಕಾರೋ; ನ ನಿವಾರ್ಯತೇ. ಏವಂ ಯತ್ರೇಷ್ಟಾರ್ಥಾವಾಪ್ತಿಸ್ತತ್ರ ಶ್ಲೇಷವಶಾದಸತೋಽನಿಷ್ಟಾರ್ಥಸ್ಯ ಪ್ರತೀತಿಸ್ತತ್ರಾಪಿ ಸಮಾಲಂಕಾರಸ್ಯ ನ ಕ್ಷತಿಃ. ಯಥಾ–

ಶಸ್ತ್ರಂ ನ ಖಲು ಕರ್ತವ್ಯಮಿತಿ ಪಿತ್ರಾ ನಿಯೋಜಿತಃ ।
ತದೇವ ಶಸ್ತ್ರಂ ಕೃತವಾನ್ ಪಿತುರಾಜ್ಞಾ ನ ಲಂಘಿತಾ ॥

ಅತ್ರ ಪಿತುರಾಜ್ಞಾ ನ ಲಂಘಿತೇತ್ಯನೇನ ವಿರೋಧಾಲಂಕಾರರಾಭಿವ್ಯಕ್ತ್ಯರ್ಥಃ ನ ಖಲ್ವಿತ್ಯತ್ರ ಪದದ್ವಯವಿಭಾಗಾತ್ಮರೂಪಾಂತರಸ್ಯಾಪಿ ವಿವಕ್ಷಾಯಾಃ ಸತ್ತ್ವೇಽಪಿ ನಖಂ ಲುನಾತೀತಿ ನಖಲು ಇತ್ಯೇಕಪದೇನ ವಸ್ತು ಸದರ್ಥಾಂತರರೂಪಾಂತರ ಮಾದಾಯ ಸಮಾಲಂಕಾರೋಽಪ್ಯಸ್ತ್ಯೇವ. ಶ್ಲೇಷಲಬ್ಧಾಸದಿಷ್ಟಾವಾಪ್ತಿಪ್ರತೀತಿ ಮಾತ್ರೇಣಾಪಿ ಅನಿಷ್ಟವಿರಹಿತಂ ಉದಾಹರಣಮ್. ಯಥಾ–

ಸತ್ಯಂ ತಪಃ ಸುಗತ್ಯೈ ಯತ್ತಪ್ತ್ವಾಂಬುಷು ರವಿಪ್ರತೀಕ್ಷಂ ಸತ್ ।
ಅನಂಭವತಿ ಸುಗತಿಮಬ್ಜಂ ತ್ವತ್ಪದಜನ್ಮನಿ ಸಮಸ್ತಕಮನೀಯಮ್ ॥

ಯಾವುದೋ ಒಂದು ಕಾರ್ಯವನ್ನು ನೆರವೇರಿಸಲು ಉದ್ಯುಕ್ತನಾದವನಿಗೆ ಯಾವ ಅನಿಷ್ಟವೂ ಇಲ್ಲದೆ ಅದು ಸಿದ್ಧಿಸಿತೆಂಬುದು ಒಂದು ಬಗೆಯ ಸಮಾಲಂಕಾರವು ಆಗುತ್ತದೆ. [(ಆನೆ) ವಾರಣವನ್ನು ಪಡೆಯಲಿಚ್ಛೆಯಿಂದ ಅರಮನೆಗೆ ಹೋದವನಿಗೆ ದ್ವಾರಪಾಲಕರಿಂದ ಅರ್ಧಚಂದ್ರಪ್ರಯೋಗವು (ಕತ್ತು ಹಿಡಿದು ಹೊರಕ್ಕೆ ದಬ್ಬಿಸಿ ಕೊಳ್ಳುವಿಕೆ-ವಾರಣ) ದೊರೆತದ್ದು ಯುಕ್ತವೇ ಆಗಿದೆ.'' ಇಲ್ಲಿ ಆನೆಯನ್ನು ಕೊಡು ಮತೆ ಕೇಳಲಿಕ್ಕಾಗಿ ರಾಜನ ಬಳಿಗೆ ಹೋಗುವವನನ್ನು ದ್ವಾರಪಾಲಕರು ತಡೆಯುವರು ವಾರಣವನ್ನು ಬಯಸಿ ಅಲ್ಲಿಗೆ ಹೋದವನಿಗೆ ವಾರಣವೇ ದೊರೆತದ್ದು ಯುಕ್ತವೆಂದು ಇಲ್ಲಿ ತಿಳಿಸಿದೆ. "ಅನಿಷ್ಟಸ್ಯಾಪ್ಯವಾಪ್ತಿಶ್ಚ'' ಎಂಬಲ್ಲಿ ಸಂಗ್ರಹಿಸಿರುವ ಮೂರು ಬಗೆಯ ವಿಷಮಾಲಂಕಾರಕ್ಕೂ ಇದು ಎದುರಾಳಿ ಎನಿಸಿವೆ. ಇಲ್ಲಿ ಬಯಸಿದವನಿಗೆ ಬಯಸಿದ್ದು ಸಿಕ್ಕಿದ್ದರಿಂದ ಇಷ್ಟಫಲವೇ ದೊರೆತಂತಾಗಿದೆ. ಅನಿಷ್ಟವಾದದ್ದು ಸಂಭವಿಸುವ ಪ್ರಸಂಗವೂ ಇಲ್ಲ. ಇಲ್ಲಿ ಶ್ಲೇಷದಿಂದ ವಾರಣವೆಂದರೆ ಆನೆ ಮತ್ತು ತಡೆ ಎಂದು ಎರಡರ್ಥಗಳಾಗುತ್ತವೆ. ಆನೆಯನ್ನು ಬಯಸಿದವನಿಗೆ ದ್ವಾರಪಾಲಕರಿಂದ ತಡೆ ಯುಂಟಾದ ಪ್ರಯುಕ್ತ ಅನಿಷ್ಟವು ಒದಗಿದ್ದರಿಂದ ಇದು ಸಮಾಲಂಕಾರಕ್ಕೆ ಉದಾಹರಣವಾಗದೆಂದು ಆಶಂಕೆ ಮಾಡಬಾರದು ; ಯಾಕೆಂದರೆ ಆನೆಯನ್ನು ಕೇಳಲಿಕ್ಕೆ ರಾಜನ ಬಳಿಗೆ ಹೋದವನಿಗೆ ಅರಮನೆಯ ಬಾಗಿಲಿನಲ್ಲಿ ಒಂದು ಕ್ಷಣಕಾಲ ತಡೆಯುಂಟಾಗುವುದು ಸಂಭಾವಿತವಾದ್ದರಿಂದ ಆದನ್ನು ತಿಳಿದುಕೊಂಡೇ ಆ

ಕಾರ್ಯದಲ್ಲಿ ಒಬ್ಬನು ತೊಡಗಿದ್ದುದರಿಂದ ವಿಷಮಾಲಂಕಾರ ಉದಾಹರಣಗಳಲ್ಲಿರುವಂತೆ ಅನಿರೀಕ್ಷಿತವೂ ಅತ್ಯುತ್ಕಟವೂ ಆದ ಅನಿಷ್ಟವು ಇಲ್ಲಿ ಬರುವ ಸಂಭವವಿಲ್ಲ. ದ್ವಾರಪಾಲಕರಿಂದ ಇಲ್ಲಿ ಅವನಿಗೆ ಸಂಭವಿಸುವ ತಡೆಯೂ ಸಹ ಇಷ್ಟವೇ ಆದ ಪ್ರಯುಕ್ತ ಇದು ಸಮಾಲಂಕಾರಕ್ಕೆ ಉದಾಹರಣವಾಗಲು ಅಡ್ಡಿಯಿಲ್ಲ.

ಆಕಸ್ಮಿಕವಾಗಿ ಹೆಚ್ಚು ಅನಿಷ್ಟವಿರುವ ಕಡೆ ಶ್ಲೇಷದ ಬಲದಿಂದ ಎಲ್ಲಿ ಇಷ್ಟಾರ್ಥವು ದೊರಕುವುದಾಗಿ ತೋರುವುದೋ ಅಲ್ಲಿಯೂ ಸಮಾಲಂಕಾರಕ್ಕೆ ಯಾವ ತಡೆಯೂ ಇರಲಾರದು. "ಮಹಾರಾಜನೇ. ಎತ್ತರವಾದ ಆನೆಯ ಮೇಲೆ ತಿರುಗುವುದನ್ನು ಅಪೇಕ್ಷಿಸುತ್ತಲೇ ನಿನ್ನನ್ನು ಆಶ್ರಯಿಸುತ್ತ ಬಹುಕಾಲದಿಂದಲೂ ನಿನ್ನಲ್ಲಿ ನೆಲಸಿರುವೆನು. ನೀನೂ ಸಹ ಆಗಲೇ ನನಗೆ ಉಚ್ಚಾಟನವನ್ನು ದೊರಕಿಸಿರುವೆ. ದೊಡ್ಡವರ ಸೇವೆ ಎಂದಿಗೂ ವ್ಯರ್ಥವಾಗಲಾರದು." ಇಲ್ಲಿ ರಾಜನನ್ನು ಇಷ್ಟುಕಾಲ ನಾನು ಸೇವೆಮಾಡಿದ್ದು ಸಾರ್ಥಕವಾಯಿತೆಂದು ಸ್ತುತಿ ಮೊದಲು ಬಂದಿದೆ. ಇಂತಹ ವ್ಯಾಜಸ್ತುತಿಯಲ್ಲಿ ಸ್ತುತಿಯಿಂದ ಮುಂದೆ ರಾಜನ ನಿಂದೆಯು ತೋರುವುದೆಂದು ತಿಳಿಸುವಾಗ : ಇದು ವಿಷಮಾಲಂಕಾರವೇ ಆಗುತ್ತದೆ. "ಉನ್ನತ ಸ್ಥಾನಪ್ರಾಪ್ತಿಗಾಗಿ ನಾನು ನಿನ್ನನ್ನು ಆಶ್ರಯಿಸಿದರೂ ನೀನು ಸ್ಥಾನಚಲನೆಯನ್ನೇ ಮಾಡಿಸಿದೆ" ಎಂಬ ನಿಂದೆ ಇಲ್ಲಿ ತೋರುತ್ತದೆಯಾದರೂ ಮೊದಲಿಗೆ ತೋರುವ ಸ್ತುತಿರೂಪವಾದ ವಾಚ್ಯಾರ್ಥವನ್ನು ತಿಳಿಸುವಾಗ ಸಮಾಲಂಕಾರವಿದ್ದೇ ಇರುತ್ತದೆ. ಅದನ್ನು ಯಾರಿಗೂ ತಡೆಯಲಿಕ್ಕಾಗುವುದಿಲ್ಲ. ಎಲ್ಲಿ ಇಷ್ಟಾರ್ಥವು ದೊರೆಯುವುದಾದರೂ ಅಲ್ಲಿ ಇಲ್ಲದ ಅನಿಷ್ಟಾರ್ಥವು ಶ್ಲೇಷದ ಬಲದಿಂದ ತೋರುವುದಾದರೆ ಅಲ್ಲಿಯೂ ಸಮಾಲಂಕಾರಕ್ಕೆ ಯಾವ ಹಾನಿಯೂ ಇಲ್ಲ. ''ಶಸ್ತ್ರವನ್ನು ತಯಾರಿಸಬಾರದೆಂದು ತಂದೆಯೂ. ತಿಳಿಸಿದ್ದನು. ಅವನೂ, ಅದರಂತೆಯೇ ಮಾಡಿದನು ಆದ್ದರಿಂದ ತಂದೆಯ ಆಜ್ಞೆಯನ್ನು ಎಂದಿಗೂ ಮೀರಲಿಲ್ಲ.'' ಇಲ್ಲಿ ತಂದೆಯ ಆಜ್ಞೆಯನ್ನು ಮೀರಲಿಲ್ಲವೆಂದು ಹೇಳಿದ್ದರಿಂದ ವಿರೋಧಾಲಂಕಾರವನ್ನು ಸೂಚಿಸಲಿಕ್ಕಾಗಿ 'ನ ಖಲು' ಎಂಬ ಎರಡು ಪದಗಳಿಂದ ಕೂಡಿದ 'ನಖಲು' ಎಂಬ ಬೇರೊಂದು ರೂಪವನ್ನು ತಿಳಿಸುವ ಇಚ್ಛೆಯಿದ್ದರೂ (ನಖಂ+ಲುನಾತಿ=ನಖಲು) ಎಂಬ ಒಂದೇ ಪದದಿಂದ ನಖವನ್ನು ಕತ್ತರಿಸಿಹಾಕುವಷ್ಟು ತೀಕ್ಷ್ಣವಾಗಿಯೇ ಶಸ್ತ್ರವನ್ನು ತಯಾರಿಸಬೇಕೆಂದು ತಂದೆಯ ಆಜ್ಞೆಯಾಗಿತ್ತೆಂದೂ, ಅದರಂತೆಯೇ ತೀಕ್ಷ್ಣವಾದ ಆಯುಧವನ್ನು ಅವನು ತಯಾರಿಸಿದನೆಂದೂ ಸದ್ರೂಪವಾದ ಬೇರೊಂದು ವಾಸ್ತವವಾದ ಅರ್ಥವನ್ನಿಟ್ಟುಕೊಂಡು ಇದನ್ನು ಸಮಾಲಂಕರಕ್ಕೆ ಉದಾಹರಿಸಲಾಗಿದೆ. ಶ್ಲೇಷದಿಂದ ದೊರಕುವ ಅಸದ್ರೂಪವಾದ ಇಷ್ಟಾರ್ಥವು ತೋರದೆ ಇರುವುದೂ ಸಹ ಸಮಾಲಂಕಾರವೇ ಆಗುತ್ತದೆ ಎಂಬುದಕ್ಕೆ ಉದಾಹರಣವನ್ನು ಈಗ ಕೊಡುತ್ತಾನೆ.

"ಎಲೈ ಕೃಶಾಂಗಿ, ತಪಸ್ಸಿನಿಂದ ಒಳ್ಳೆಯ ಗತಿ ಸಿಕ್ಕುತ್ತದೆ ಎಂಬುದು ಸತ್ಯ, ಯಾಕೆಂದರೆ ಕಮಲವು ನೀರಿನಲ್ಲಿ ಸೂರ್ಯನನ್ನು ನಿರೀಕ್ಷಿಸುತ್ತಿದ್ದು ತಪಸ್ಸನ್ನಾಚರಿಸಿ ನಿನ್ನ ಪಾದವಾಗಿ ಹುಟ್ಟಿ ಕಮಲಗಳೆಲ್ಲಕ್ಕೂ ಸುಂದರವಾದ ಸದ್ಗತಿ (ಶೋಭನಗತಿ)ಯನ್ನು ಅನುಭವಿಸುತ್ತಲಿದೆ." ಕಮಲಕ್ಕೆ ಉತ್ತಮಗತಿ ದೊರೆಯಲಿಲ್ಲವಾದರೂ ಕಾಮಿನಿಯ ಪಾದರೂಪವನ್ನು ತಾಳಿದ್ದರಿಂದ ಅದಕ್ಕೆ ಸುಗತಿಯೇ ದೊರೆತಂತಾಯಿತು. ಸುಗತಿ ಎಂಬಲ್ಲಿ ಶ್ಲೇಷದಿಂದ ಅಸದ್ರೂಪವಾದ ಇಷ್ಟಾಪ್ರಾಪ್ತಿಯೇ ತೋರುತ್ತದೆ. ಕಾಮಿನಿಯ ಚರಣಸಾಯುಜ್ಯವೇ ಕಮಲಕ್ಕೆ ಇಷ್ಟಪ್ರಾಪ್ತಿ ಎನಿಸಿದೆ. ಉತ್ತಮಗತಿಗಾಗಿ ಅದು ನೀರಿನಲ್ಲಿ ತಪಸ್ಸನ್ನಾಚರಿಸಿದರೂ ಅದು ದೊರಕದೆ ಕಾಮಿನಿಯ ಪಾದವಾಗಿ ಪರಿಣಮಿಸುವಂತಾಯಿತೆಂದು ಹೇಳಿದ್ದರಿಂದ ಇಲ್ಲಿ ಅನಿಷ್ಟನಿವಾರಣವೂ ಇಷ್ಟ ಪ್ರಾಪ್ತಿಯೂ ಆಗಿರುವುದನ್ನು ಕಾಣಬಹುದು.

## ೪೦. ವಿಚಿತ್ರಾಲಂಕಾರ

ವಿಚಿತ್ರಂ ತತ್ಪ್ರಯತ್ನಶ್ಚೇದ್ವಿಪರೀತಫಲೇಚ್ಛಯಾ ।
ನಮಂತಿ ಸಂತಸ್ತ್ರೈಲೋಕ್ಯಾದಪಿ ಲಬ್ಧುಂ ಸಮುನ್ನತಿಮ್ ॥೯೩॥

ಯಥಾ ವಾ–

ಮಲಿನಯಿತುಂ ಖಲವದನಂ ವಿಮಲಯತಿ ಜಗಂತಿ ದೇವ ಕೀರ್ತಿಸ್ತೇ ।
ಮಿತ್ರಾಹ್ಲಾದಂ ಕರ್ತುಂ ಮಿತ್ರಾಯ ದ್ರುಹ್ಯತಿ ಪ್ರತಾಪೋಽಪಿ ॥

ಫಲವನ್ನು ಹೊಂದುವ ಇಚ್ಛೆಯಿಂದ ತನ್ನ ಇಷ್ಟಕ್ಕೆ ವಿಪರೀತವಾಗಿ ಪ್ರಯತ್ನವನ್ನು ನಡೆಸುವುದೇ ವಿಚಿತ್ರವೆನಿಸುತ್ತದೆ. ಸತ್ಪುರುಷರು ಮೂರು ಲೋಕಗಳಿಂದಲೂ ಉನ್ನತಿಯನ್ನು ಹೊಂದಲಿಕ್ಕಾಗಿ ಬಾಗುವರು. ಲೋಕದಲ್ಲಿ ಯಾವ ಕಾರಣದಿಂದ ಯಾವ ಫಲವು ದೊರಕುವುದೆಂದು ಪ್ರಸಿದ್ಧವಾಗಿದೆಯೋ ಅದಕ್ಕೆ ವಿರುದ್ಧವಾದ ಫಲವನ್ನು ತಿಳಿಸುವುದರಿಂದ ಇದು ವಿಚಿತ್ರವೆನಿಸಿದೆ. ಬಾಗುವುದು ಅವನತಿಗೆ ಕಾರಣವೆಂದು ಲೋಕದಲ್ಲಿ ಪ್ರಸಿದ್ಧವಾಗಿದೆ. ಆದರೆ ಸತ್ಪುರುಷರು ಬಾಗುವುದರಿಂದ ಉನ್ನತಿಯೇ ಫಲವೆನಿಸಿದೆ. "ಸ್ವಾಮಿ, ನಿನ್ನ ಕೀರ್ತಿಯೂ ನೀಚರ ಮುಖವನ್ನು ಮಲಿನಗೊಳಿಸಲು ಜಗತ್ತೆಲ್ಲವನ್ನೂ ನಿರ್ಮಲಗೊಳಿಸುತ್ತಲಿದೆ. ನಿನ್ನ ತೇಜಸ್ಸೂ ಸಹ ಮಿತ್ರರಿಗೆ ಸಂತೋಷವನ್ನುಂಟುಮಾಡಲಿಕ್ಕಾಗಿ (ಸೂರ್ಯ) ಮಿತ್ರನಿಗೆ ದ್ರೋಹಮಾಡುತ್ತಲಿದೆ. ಇಲ್ಲಿ ನೀಚರ ಮುಖವನ್ನು ಮಲಿನಗೊಳಿಸಲು ಮಾಡಿದ ಪ್ರಯತ್ನವು ಜಗತ್ತನ್ನು ನಿರ್ಮಲಗೊಳಿಸಿತೆಂದು ಹೇಳಿದೆ. ಮಿತ್ರರಿಗೆ ಸಂತೋಷಪಡಿಸುವ ಉದ್ದೇಶದಿಂದ ನಡೆದ ಪ್ರಯತ್ನವು ಮಿತ್ರನಿಗೆ ದ್ರೋಹವಾಯಿತು.

ಉಪಕಾರವನ್ನು ಮಾಡುವ ಇಚ್ಛೆಯಿಂದ ನಡೆಸಿದ ಪ್ರಯತ್ನವು ಅದಕ್ಕೆ ವಿರುದ್ಧವಾದ ಫಲವನ್ನು ಮಾಡುತ್ತದೆ. ಪ್ರಸಿದ್ಧವಾದ ಕಾರಣಕ್ಕೆ ವಿರುದ್ಧವಾದ ವ್ಯಾಪಾರವು ನಡೆಯಿತೆಂದು ಇಲ್ಲಿ ತಿಳಿಸಿದೆ.

## ೪೧. ಅಧಿಕಾಲಂಕಾರ

ಅಧಿಕಂ ಪೃಥುಲಾಧಾರಾದಾಧೇಯಾಧಿಕ್ಯವರ್ಣನಮ್ ।
ಬ್ರಹ್ಮಾಂಡಾನಿ ಜಲೇ ಯತ್ರ ತತ್ರ ಮಾಂತಿ ನ ತೇ ಗುಣಾಃ ॥೯೪॥

ಅತ್ರ ಯತ್ರ ಮಹಾಜಲೌಘೇಽನಂತಾನಿ ಬ್ರಹ್ಮಾಂಡಾನಿ ಬುದ್ಬುದಕಲ್ಪಾನಿತ್ಯಾಧಾರಸ್ಯಾತಿವಿಶಾಲತ್ವಂ ಪ್ರದರ್ಶ್ಯ ತತ್ರ ನ ಮಾಂತೀತ್ಯಾಧೇಯಾನಾಂ ಗುಣಾನಾಂ ಆಧಿಕ್ಯಂ ವರ್ಣಿತಮ್. ಯಥಾ ವಾ–

ಯುಗಾಂತಕಾಲಪ್ರತಿಸಂಹೃತಾತ್ಮನೋ
ಜಗಂತಿ ಯಸ್ಯಾಂ ಸವಿಕಾಶಮಾಸತ ।
ತನೌ ಮಮುಸ್ತತ್ರ ನ ಕೈಟಭದ್ವಿಷಃ
ತಪೋಧನಾಭ್ಯಾಗಮಸಂಭವಾ ಮುದಃ ॥

ಪೃಥ್ವಾಧೇಯಾದ್ಯದಾಧಾರಾಧಿಕ್ಯ ತಂದಪಿ ತನ್ಮತಮ್ ।
ಕಿಯದಾಬ್ಬ್ರಹ್ಮಯತ್ರೈತೇ ವಿಶ್ರಾಮ್ಯಂತಿ ಗುಣಾಸ್ತವ ॥೯೫॥

ಅತ್ರ ಏತೇ ಇತಿ ಪ್ರತ್ಯಕ್ಷದೃಷ್ಟಮಹಾವೈಭವತ್ವೇನೋಕ್ತಾನಾಂ ಗುಣಾನಾಂ ವಿಶ್ರಾಮ್ಯತೀತ್ಯಸಂಬಾಧಾವಸ್ಥಾನೋಕ್ತ್ಯಾ ಆಧಾರಸ್ಯ ವಾಗ್ಬ್ರಹ್ಮಣಃ ಆಧಿಕಂ ವರ್ಣಿತಮ್. ಯಥಾ ವಾ–

ಅಹೋ ವಿಶಾಲಂ ಭೂಪಾಲ ಭುವನತ್ರಿತಯೋದರಮ್ ।
ಮಾತಿ ಮಾತುಮಶಕ್ಯೋಽಪಿ ಯಶೋರಾಶಿರ್ಯತ್ರ ತೇ ॥

ಅತ್ರ ಯದ್ಯಪ್ಯುದಾಹರಣದ್ವಯೇಽಪಿ ಕಿಯದ್ವಾಗ್ಬ್ರಹ್ಮೇತಿ, ಅಹೋ ವಿಶಾಲಮಿತಿ ಚ ಆಧಾರಯೋಃ ಪ್ರಶಂಸಾ ಕ್ರಿಯತೇ ; ತಥಾಪಿ ತನುತ್ವೇನ ಸಿದ್ಧವತ್ಕೃತಯೋಃ ಶಬ್ದಬ್ರಹ್ಮಭುವನೋದರಯೋಃ ಗುಣಯಶೋರಾಶ್ಯಧಿಕರಣತ್ವೇನ ಅಧಿಕತ್ವಂ ಪ್ರಕಲ್ಪ್ಯೈವ ಪ್ರಶಂಸಾ ಕ್ರಿಯತ ಇತಿ ತತ್ಪ್ರಶಂಸಾಪ್ರಸ್ತುತಗುಣಯಶೋರಾಶಿಪ್ರಶಂಸಾಯಾಮೇವ ಪರ್ಯವಸ್ಯತಿ.

ಆಧಾರವನ್ನು ವಿಶಾಲವೆಂದು ತಿಳಿಸಿ ಅದರ ಆಶ್ರಯದಲ್ಲಿರುವ ವಸ್ತುವನ್ನು ಅದಕ್ಕಿಂತಲೂ ಅಧಿಕವೆಂದು ವರ್ಣಿಸುವುದೇ ಅಧಿಕಾಲಂಕಾರವೆನಿಸುತ್ತದೆ. "ಯಾವ

ನೀರಿನಲ್ಲಿ ಅನೇಕ ಬ್ರಹ್ಮಾಂಡಗಳೆ ಅಡಗಬಲ್ಲವೋ ಅಲ್ಲಿ ನಿನ್ನ ಗುಣಗಳು ಅಡಗಲಿಲ್ಲ." ಬ್ರಹ್ಮಾಂಡಗಳಿಗೇ ಆಶ್ರಯವಾಗಿರುವ ನೀರು ಎಷ್ಟು ದೊಡ್ಡ ಆಧಾರವಾಗಿದ್ದರೂ ಆದರಲ್ಲಿ ಗುಣಗಳು ಅಡಗಲಿಲ್ಲವೆಂದಮೇಲೆ ಆಧೇಯವೆನಿಸಿದ ಗುಣಗಳು ಎಷ್ಟು ವ್ಯಾಪಕವಾಗಿದ್ದವೆಂದು ಅದರ ಆಧಿಕ್ಯವನ್ನು ಇಲ್ಲಿ ತಿಳಿಸಲಾಗಿದೆ. "ಪ್ರಳಯಕಾಲದಲ್ಲಿ ತನ್ನೊಳಗೆ ಎಲ್ಲವನ್ನೂ ಸೇರಿಸಿಕೊಳ್ಳುವ ಯಾವನಲ್ಲಿ ಜಗತ್ತೆಲ್ಲವೂ ಸಂತೋಷದಿಂದ ನೆಲಸಿದ್ದವೋ ಅಂತಹ ಕೃಷ್ಣನ ಶರೀರದಲ್ಲಿ ನಾರದಮಹರ್ಷಿಯ ಆಗಮನ ದಿಂದುಂಟಾದ ಸಂತೋಷವು ಅಡಗಲಿಲ್ಲ. ಬ್ರಹ್ಮಾಂಡಗಳನ್ನೇ ತನ್ನೊಳಗೆ ಅಡಗಿಸಿ ಕೊಳ್ಳುವಷ್ಟು ವಿಶಾಲವಾದ ಕೃಷ್ಣನ ಶರೀವೇ ಇಲ್ಲಿ ಆಧಾರವೆನಿಸಿದೆ. ಅದರೊಳಗೆ ನಾರದನ ಸಮಾಗಮದಿಂದ ಉಂಟಾದ ಸಂತೋಷವು ಅಡಗಲಿಲ್ಲವೆಂದು ಅದರ ಅತಿಶಯವನ್ನು ಇಲ್ಲಿ ವರ್ಣಿಸಿದೆ.

ವಿಶಾಲವಾದ ಆಧೇಯಕ್ಕಿಂತಲೂ ಆಧಾರವನ್ನೇ ಹೆಚ್ಚೆಂದು ವರ್ಣಿಸುವುದೂ ಸಹ ಆಧಿಕವೆನಿಸುತ್ತದೆ. ಪರಮೇಶ್ವರನನ್ನು ಕುರಿತು ಭಕ್ತನೊಬ್ಬನು ಹೇಳುತ್ತಾನೆ: "ಎಲ್ಲಿ ನಿನ್ನ ಗುಣಗಳು ಅಡಗುತ್ತವೆಯೋ ಅಂತಹ ಶಬ್ದಬ್ರಹ್ಮವೆಂಬುದು ಎಂತಹದು ?"

ಇಲ್ಲಿ 'ಏತೇ' ಎಂದು ಪ್ರತ್ಯಕ್ಷವಾಗಿ ಕಾಣುತ್ತಿರುವ ಮಹಾವೈಭವವೆಂದು ತಿಳಿಸಿರುವ ಗುಣಗಳೂ ಸಹ ಎಲ್ಲಿ ಅಡಗುತ್ತವೆಯೋ ಎಂದು ಹೇಳಿದೆ. ಇಂತಹ ವಿಶಾಲವಾದ ಗುಣಗಳು ಅನಾಯಾಸವಾಗಿ ಶಬ್ದಬ್ರಹ್ಮವೆನಿಸಿದ ವೇದದಲ್ಲಿ ಅಡಗಿವೆ ಎಂದು ಹೇಳಿದ್ದರಿಂದ ಆಧೇಯವೆನಿಸಿದ ಗುಣಗಳಿಗಿಂತಲೂ ಆಧಾರವೆನಿಸಿದ ವೇದ ಗಳೇ ಹೆಚ್ಚು ವ್ಯಾಪ್ತಿಯುಳ್ಳವೆಂದು ಹೇಳಿದೆ. "ಮಹಾರಾಜನೇ, ಮೂರು ಲೋಕ ಗಳನ್ನೊಳಗೊಂಡ ಪ್ರದೇಶವು ಎಷ್ಟು ದೊಡ್ಡದು ! ಅಳೆಯಲಿಕ್ಕಾಗದಿರುವ ನಿನ್ನ ಯಶೋರಾಶಿಯೂ ಅದರಲ್ಲಿ ಅಡಗುತ್ತದೆ." ಇಲ್ಲಿ ಯಶೋರಾಶಿಯೇ ಆಧೇಯ. ಇದು ಮೂರು ಲೋಕಗಳಲ್ಲಿಯೂ ವ್ಯಾಪಿಸಿದ್ದರಿಂದ ಈ ಯಶೋರಾಶಿಗಿಂತಲೂ ಭುವನೋದರವೇ ಅಧಿಕವೆಂದು ವರ್ಣಿಸಲಾಗಿದೆ. ಇಲ್ಲಿ ಉದಾಹರಣಗಳೆರಡರಲ್ಲೂ ವಾಗ್ಬ್ರಹ್ಮ ಎಂತಹದು?' 'ಭುವನೋದರವು ಎಷ್ಟು ವಿಶಾಲವಾಗಿದೆ,' ಎಂದು ಆಧಾರಗಳ ಪ್ರಶಂಸೆಯೇ ಕಂಡುಬಂದಿದೆ. ಆದರೂ ಅಲ್ಲಿ ವ್ಯಾಪಕವಾದ ನಿನ್ನ ಗುಣಗಳು ಅಡಗುತ್ತವೆ ಎಂದೂ, ರಾಜನ ವಿಶಾಲವಾದ ಯಶಸ್ಸು ವ್ಯಾಪಿಸಿದೆ ಎಂದೂ ಹೇಳಿದ್ದರಿಂದ ಶಬ್ದಬ್ರಹ್ಮದಲ್ಲೂ ಭುವನೋದರದಲ್ಲೂ ಪ್ರಮಾಣದಲ್ಲಿ ಅತ್ಯಲ್ಪ ವೆಂಬುದು ಸಿದ್ಧವೆನಿಸಿವೆ. ಇವನ್ನು ಗುಣಗಳಿಗೂ ಯಶೋರಾಶಿಗೂ ಆಶ್ರಯವಾದ್ದ ರಿಂದ ಅಧಿಕವೆಂದು ಕಲ್ಪಿಸಿಯೇ ಇಲ್ಲಿ ಪ್ರಶಂಸೆಮಾಡಲಾಗಿದೆ. ಆದರೂ ಅವುಗಳ ಪ್ರಶಂಸೆಯು ಪ್ರಕೃತವೆನಿಸಿವ ಗುಣ ಮತ್ತು ಯಶೋರಾಶಿ ಇವುಗಳ ಪ್ರಶಂಸೆ ಯಲ್ಲಿಯೇ ಕೊನೆಗಾಣುತ್ತದೆ.

## ೪೨. ಅಲ್ಪಾಲಂಕಾರ

ಅಲ್ಪಂ ತು ಸೂಕ್ಷ್ಮಾದಾಧೇಯಾದಾಧಾರಸ್ಯ ಸೂಕ್ಷ್ಮತಾ ।
ಮಣಿಮಾಲೋರ್ಮಿಕಾ ತೇಽದ್ಯ ಕರೇ ಜಪವಟೀಯತೇ ॥೯೬॥

ಅತ್ರ ಮಣಿಮಾಲಾಮಯೋರ್ಮಿಕಾ ತಾವದಂಗುಲಿಮಾತ್ರಪರಿಮಿತತ್ವಾ-ತ್ಸೂಕ್ಷ್ಮಾ; ಸಾಪಿ ವಿರಹಿಣ್ಯಾಃ ಕರೇ ಕಂಕಣವತ್ಪ್ರವೇಶಿತಾ. ತಸ್ಮಾತ್ ಜಪ ಮಾಲಾವಲ್ಲಂಬತ ಇತ್ಯುಕ್ತ್ವಾ ತತೋಽಪಿ ಕರಸ್ಯ ವಿರಹಕಾರ್ಶ್ಯಾತ್ ಅತಿಸೌಕ್ಷ್ಮ್ಯಂ ದರ್ಶಿತಮ್. ಯಥಾ ವಾ-

ಯನ್ಮಧ್ಯದೇಶಾದಪಿ ತೇ ಸೂಕ್ಷ್ಮಂ ಲೋಲಾಕ್ಷಿ ದೃಶ್ಯತೇ ।
ಮೃಣಾಲಸೂತ್ರಮಪಿ ತೇ ನ ಸಂಮ್ಮಾತಿ ಸ್ತನಾಂತರೇ ॥

ಒಂದರ ಆಶ್ರಯದಲ್ಲಿ ಮತ್ತೊಂದು ವಸ್ತುವಿರುವಾಗ ಆಶ್ರಿತವಸ್ತುವನ್ನು ಸೂಕ್ಷ್ಮವೆಂದು ತಿಳಿಸಿ ಆದರ ಆಶ್ರಯವನ್ನು ಅವಕ್ಕಿಂತಲೂ ಸೂಕ್ಷ್ಮವೆಂದು ತಿಳಿಸು ವುದೇ ಅಲ್ಪಾಲಂಕಾರವೆನಿಸುವುದು. "ಮಣಿಮಾಲೆಯ ರೂಪದಲ್ಲಿರುವ ಉಂಗುರವು ನಿನ್ನ ಕೈಯಲ್ಲಿ ಈಗ ಜಪಮಾಲೆಯಾಗಿ ಪರಿಣಮಿಸಿದೆ. ಮಣಿಮಾಲೆಯ ರೂಪ ದಲ್ಲಿರುವ ಉಂಗುರವು ಬೆರಳಿನಲ್ಲಿ ಮಾತ್ರವೇ ಇರುವುದರಿಂದ ಸೂಕ್ಷ್ಮವೆನಿಸಿದೆ. ಆದೂ ಸಹ ವಿರಹಿಣಿಯ ಕೈಯಲ್ಲಿ ಕಂಕಣದಂತೆ ಪ್ರವೇಶಿಸಿ ಅಲ್ಲಿ ಜಪಸರದಂತೆ ಜೋತಾಡುತ್ತಿದೆ' ಎಂದು ಹೇಳಿದ್ದರಿಂದ ವಿರಹಾವಸ್ಥೆಯಿಂದ ಕೃಶಳಾಗಿದ್ದ ಸ್ತ್ರೀಗೆ ಬೆರಳಿಗಿಂತಲೂ ಹಸ್ತವು ಬಹಳ ಸೂಕ್ಷ್ಮವಾಗಿತ್ತೆಂದು ಇಲ್ಲಿ ತಿಳಿಸಿದೆ. ಬೆರಳಿನಲ್ಲಿ ಅಡಗಿದ್ದ ಉಂಗುರವು ಕೈಗೆ ಬಂದಾಗ ಅಲ್ಲಿ ಜಪಮಾಲೆಯಂತೆ ಜೋತಾಡುತ್ತಿದೆ ಎಂದು ಹೇಳಿದ್ದರಿಂದ ಉಂಗುರಕ್ಕಾಧಾರವಾದ ಹಸ್ತವು ವಿರಹವ್ಯಥೆಯಿಂದ, ಬಹಳ ಕೃಶವಾಗಿದೆ ಎಂದು ಹೇಳಿದಂತಾಯಿತು: "ಚಂಚಲಾಕ್ಷಿಯೇ, ನಿನ್ನ ಸೊಂಟಕ್ಕಿಂತ ಸೂಕ್ಷ್ಮವಾಗಿ ಕಾಣುವ ತಾವರೆದಂಟಿನ ನೂಲು ಸಹಜವಾಗಿ ಸೂಕ್ಷ್ಮವಾಗಿದೆ." ಅದೇ ಇಲ್ಲಿ ಆಧೇಯವೆನಿಸಿದೆ. ಅದೂ ಸಹ ಸ್ತನಪ್ರದೇಶದಲ್ಲಿ ನಿಲ್ಲುವಂತಿಲ್ಲ. ಇಲ್ಲಿ ಆಧಾರ ವೆನಿಸಿದ ಸ್ತನಪ್ರದೇಶವು ಮತ್ತಷ್ಟು ಕೃಶವಾಗಿವೆ ಎಂದು ತಿಳಿಸಲಾಗಿದೆ.

## ೪೩. ಅನ್ಯೋನ್ಯಾಲಂಕಾರ

ಅನ್ಯೋನ್ಯಂ ನಾಮ ಯತ್ರ ಸ್ಯಾದುಪಕಾರಃ ಪರಸ್ಪರಮ್ ।
ತ್ರಿಯಾಮಾ ಶಶಿನಾ ಭಾತಿ ಶಶೀ ಭಾತಿ ತ್ರಿಯಾಮಯಾ ॥೯೭॥

ಯಥಾ ವಾ–

ಯಥೋರ್ಧ್ವಾಕ್ಷಃ ಪಿಬತ್ಯಂಬು ಪಥಿಕೋ ವಿರಳಾಂಗುಲಿಃ |
ತಥಾ ಪ್ರಪಾಪಾಲಿಕಾಪಿ ಧಾರಾಂ ವಿತನುತೇ ತನುಮ್ ||

ಅತ್ರ ಪ್ರಪಾಪಾಲಿಕಾಯಾಃ ಪಥಿಕೇನ ಸ್ವಾಸಕ್ತ್ಯಾ ಪಾನೀಯದಾನವ್ಯಾಜೇನ ಬಹುಕಾಲಂ ಸ್ವಮುಖಾವಲೋಕನಮಭಿಲಷಂತ್ಯಾಃ ವಿರಲಾಂಗುಲಿಕರಣತಶ್ಚಿರಂ ಪಾನೀಯದಾನಾನುವೃತ್ತಿಸಂಪಾದನೇನ ಉಪಕಾರಃ ಕೃತಃ. ತಥಾ ಪ್ರಪಾಪಾಲಿಕಯಾಪಿ ಪಾನೀಯಪಾನವ್ಯಾಜೇನ ಚಿರಂ ಸ್ವಮುಖಾವಲೋಕನಮಭಿಲಷತಃ ಪಥಿಕಸ್ಯ ಧಾರಾತನೂಕರಣತಶ್ಚಿರಂ ಪಾನೀಯಪಾನಾನುವೃತ್ತಿಸಂಪಾದನೇನ ಉಪಕಾರಃ ಕೃತಃ. ಅತ್ರೋಭಯೋರ್ವ್ಯಾಪಾರಾಭ್ಯಾಂ ಸ್ವಸ್ವೋಪಕಾರಸದ್ಭಾವೇಽಪಿ ಪರಸ್ಪರೋಪಕಾರೋಽಪಿ ನ ನಿವಾರ್ಯತೇ.

ಎರಡು ವಸ್ತುಗಳು ಒಂದಕ್ಕೊಂದು ಪೋಷಕವಾಗಿರುವುವೆಂದು ವರ್ಣಿಸುವುದು ಅನ್ಯೋನ್ಯಾಲಂಕಾರವೆನಿಸುತ್ತದೆ. 'ರಾತ್ರಿಯು ಚಂದ್ರನಿಂದಲೂ, ಚಂದ್ರನು ರಾತ್ರಿಯಿಂದಲೂ ಶೋಭಿಸುತ್ತಲಿವೆ'. ಇಲ್ಲಿ ರಾತ್ರಿ ಚಂದ್ರ ಈ ಎರಡಕ್ಕೆ ಪರಸ್ಪರ ಆಶ್ರಯದಿಂದ ಶೋಭೆಯನ್ನು ವರ್ಣಿಸಲಾಗಿದೆ. "ದಾರಿಗನು ಮೇಲಕ್ಕೆ ದೃಷ್ಟಿಯನ್ನಿಟ್ಟುಕೊಂಡು ಬೆರಳುಗಳನ್ನುಸಡಿಲಗೊಳಿಸಿ ನೀರನ್ನು ಹೇಗೆ ಕುಡಿಯುವನೋ, ಹಾಗೆಯೇ ಅರವಟ್ಟಿಗೆಯ ಕಾವಲುಗಾತಿಯೂ ಸಹ ನೀರಿನ ಧಾರೆಯನ್ನು ಸಣ್ಣದನ್ನಾಗಿ ಮಾಡಿದಳು.'' ಇಲ್ಲಿ ಅರವಟ್ಟಿಗೆಯ ಕಾವಲುಗಾತಿಗೆ ದಾರಿಗನಿಂದಲೂ, ಇವನಿಂದ ಆಕೆಗೂ ಪರಸ್ಪರ ಉಪಕಾರವಾಯಿತೆಂದು ವರ್ಣಿಸಿದೆ. ಅವನಿಂದ ಅವಳಿಗೆ ಹೇಗೆ ಆಯಿತೆಂದರೆ ಆಕೆಗೆ ಅವನಲ್ಲಿ ಇದ್ದ ಆಸಕ್ತಿಯಿಂದ ನೀರನ್ನು ಹಾಕುವ ನೆಪದಿಂದ ಬಹುಕಾಲ ಅವನ ಮುಖವನ್ನು ನೋಡಬೇಕೆಂಬ ಆಸೆ ಆಕೆಗೆ ಇದ್ದುದರಿಂದ ಇದನ್ನು ತಿಳಿದ ದಾರಿಗನು ತನ್ನ ಬೆರಳುಗಳನ್ನು ಸಡಿಲಗೊಳಿಸುವ ಮೂಲಕ ಆಕೆ ಬಹುಕಾಲ ನೀರನ್ನು ಹಾಕುತ್ತಿರುವಂತೆ ಏರ್ಪಡಿಸಿದನು. ಇದರಿಂದ ಅವಳಿಗೆ ಇವನಿಂದ ಉಪಕಾರವಾಯಿತು. ಅದೇ ರೀತಿಯಲ್ಲಿ ಅವಳಿಂದಲೂ ಅವನಿಗೆ ಉಪಕಾರವಾಯಿತು. ನೀರನ್ನು ಕುಡಿಯುವ ನೆಪದಿಂದ ಬಹು ಕಾಲ ಆಕೆಯ ಮುಖವನ್ನು ನೋಡಬೇಕೆಂದು ದಾರಿಗನು ಬಯಸಿದ್ದರಿಂದ ಇದನ್ನು ತಿಳಿದಂ ಆಕೆಯು ನೀರಿನ ಧಾರೆಯನ್ನು ಸಣ್ಣಗೆ ಮಾಡಿದ ಪ್ರಯುಕ್ತ ಅವನು ಬಹುಕಾಲ ನೀರನ್ನು ಕುಡಿಯುತ್ತಲಿರುವಂತೆ ಅವಕಾಶವನ್ನು ಕಲ್ಪಿಸಿದಳು. ಇಲ್ಲಿ ಇಬ್ಬರ ಪ್ರಯತ್ನಗಳಿಂದಲೂ ತಮತಮಗೆ ಉಪಕಾರವಾಗಿದ್ದರೂ ಒಬ್ಬರಿಂದೊಬ್ಬರಿಗೆ ಉಪಕಾರವಾಯಿತೆಂದು ಹೇಳಲಿಕ್ಕೂ ಅಡ್ಡಿಯಿಲ್ಲ.

## ೪೪. ವಿಶೇಷಾಲಂಕಾರ

ವಿಶೇಷಃ ಖ್ಯಾತಮಾಧಾರಂ ವಿನಾಪ್ಯಾಧೇಯವರ್ಣನಮ್ ।
ಗತೇಽಪಿ ಸೂರ್ಯೇ ದೀಪಸ್ಥಾಸ್ತಮಶ್ಛಿಂದಂತಿ ತತ್ಕರಾಃ ॥೯೮॥

ಕಮಲಮನಂಭಸಿ ಕಮಲೇ ಕುವಲಯಮೇತಾನಿ ಕನಕಲತಿಕಾಯಾಮ್ ।
ಸಾ ಚ ಸುಕುಮಾರಸುಭಗೇತ್ಯುತ್ಪಾತಪರಂಪರೇ ಕೇಯಮ್ ॥

ಅತ್ರ ಆದ್ಯೇ ಸೂರ್ಯಸ್ಯ ಪ್ರಸಿದ್ಧಾಧಾರಸ್ಯ ಅಭಾವೇಽಪಿ ತತ್ಕರಾಣಾ ಮನ್ಯತ್ರಾವಸ್ಥಿತಿರುಕ್ತಾ. ದ್ವಿತೀಯೇ ತ್ವಂಭಸಃ ಪ್ರಸಿದ್ಧಾಧಾರಸ್ಯ ಅಭಾವೇಽಪಿ ಕಮಲಕುವಲಯಯೋರನ್ಯತ್ರಾವಸ್ಥಿತಿರುಕ್ತಾ. ಕ್ವಚಿತ್ ಪ್ರಸಿದ್ಧಾಧಾರರಹಿತಾನಾಂ ಆಧಾರಾಂತರನಿರ್ದೇಶಂ ವಿನೈವ ಆಪ್ರಳಯಮವಸ್ಥಿತೇರ್ವರ್ಣನಂ ದೃಶ್ಯತೇ. ಯಥಾ ವಾ—

ದಿವಮಪ್ಯುಪಯಾತಾನಾಂ ಆಕಲ್ಪಮನಲ್ಪಗುಣಗಣಾ ಯೇಷಾಮ್ ।
ರಮಯಂತಿ ಜಗಂತಿ ಗಿರಃ ಕಥಮಿವ ಕವಯೋ ನ ತೇ ವಂದ್ಯಾಃ ॥

ಅತ್ರ ಕವೀನಾಮಭಾವೇಽಪಿ ತದ್ಗಿರಾಮಾಧಾರಾಂತರನಿರ್ದೇಶಂ ವಿನೈವ ಆಪ್ರಳಯಮವಸ್ಥಿತಿರ್ವರ್ಣಿತಾ.

ವಿಶೇಷಃ ಸೋಽಪಿ ಯದ್ಯೇಕಂ ವಸ್ತ್ವನೇಕತ್ರ ವರ್ಣ್ಯತೇ ।
ಅಂತರ್ಬಹಿಃ ಪುರಃ ಪಶ್ಚಾತ್ಸರ್ವದಿಕ್ಷ್ವಪಿ ಸೈವ ಮೇ ॥೯೯॥

ಯಥಾ ವಾ—
ಹೃದಯಾನ್ನಾಪಯಾತೋಽಸಿ ದಿಕ್ಷು ಸರ್ವಾಸು ದೃಶ್ಯಸೇ ।
ವತ್ಸ ರಾಮ ಗತೋಽಸೀತಿ ಸಂತಾಪೇನಾನುಮೀಯಸೇ ॥

ಕಿಂಚಿದಾರಂಭತೋಽಶಕ್ಯವಸ್ತ್ವಂತರಕೃತಿಶ್ಚ ಸಃ ।
ತ್ವಾಂ ಪಶ್ಯತಾ ಮಯಾ ಲಬ್ಧಂ ಕಲ್ಪವೃಕ್ಷನಿರೀಕ್ಷಣಮ್ ॥೧೦೦॥
ಸ್ಫುರದದ್ಭುತರೂಪಮುತ್ಪ್ರತಾಪಜ್ವಲನಂ ತ್ವಾಂ ಸೃಜತಾನವದ್ಯವಿದ್ಯಮ್ ।
ವಿಧಿನಾ ಸಸೃಜೇ ನವೋ ಮನೋಭೂರ್ಭುವಿ ಸತ್ಯಂ ಸವಿತಾ ಬೃಹಸ್ಪತಿಶ್ಚ ॥

ಅತ್ರ ಆದ್ಯೇ ರಾಜದರ್ಶನಾರಂಭೇಣ ಕಲ್ಪವೃಕ್ಷದರ್ಶನರೂಪಾಶಕ್ಯವಸ್ತ್ವಂತರಕೃತಿಃ ದ್ವಿತೀಯೇ ರಾಜಸೃಷ್ಟ್ಯಾರಂಭೇಣ ಮನೋಭ್ವಾದಿಸೃಷ್ಟಿರೂಪಾಶಕ್ಯವಸ್ತ್ವಂತರಕೃತಿಃ.

ಲೋಕಪ್ರಸಿದ್ಧವೆನಿಸಿದ ಆಧಾರವಿಲ್ಲದಿದ್ದರೂ ಆಧೇಯವಸ್ತು ಒಂದನ್ನು ವರ್ಣಿಸುವುದೇ ವಿಶೇಷವೆನಿಸುತ್ತದೆ. "ಸೂರ್ಯನು ಅಸ್ತನಾದರೂ ದೀಪದಲ್ಲಿರುವ

ಅವನ ಕಿರಣಗಳು ಕತ್ತಲೆಯನ್ನು ತೊಲಗಿಸುತ್ತವೆ''. ರಾತ್ರಿವೇಳೆ ಸೂರ್ಯನು ಅಗ್ನಿಯಲ್ಲಿ ಪ್ರವೇಶಿಸುವನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಆ ಅಗ್ನಿಗೆ ಸಂಬಂಧಿಸಿದ ದೀಪದಲ್ಲಿ ಅವನ ಕಿರಣಗಳು ನೆಲಸಿರುವುದಾಗಿ ಇಲ್ಲಿ ತಿಳಿಸಿದೆ. ಅದು ಆಧಾರವೆನಿಸಿದ ಸೂರ್ಯನು ಇಲ್ಲದಿದ್ದರೂ ಅವನ ಕಿರಣಗಳು ದೀಪದಲ್ಲಿ ನೆಲಸಿದ್ದು ಅವನ ಕೆಲಸವನ್ನು ಮಾಡಿದವೆಂದು ತಿಳಿಸಿದ್ದೇ ಇಲ್ಲಿ ವಿಶೇಷವೆನಿಸಿದೆ.

ಬೇರೊಂದು ಉದಾಹರಣವನ್ನು ಕೊಡಲಾಗಿದೆ. "ನೀರೇ ಇಲ್ಲದ ಜ ಕಮಲವೂ, ಆ ಕಮಲದಲ್ಲಿ ಕನ್ನೈದಿಲೆಯೂ, ಇವಿಷ್ಟೂ ಕನಕಲತೆಯಲ್ಲೂ ಇವೆ. ಆ ಲತೆಯೂ ಸಹ ಕೋಮಲವೂ ಸುಂದರವೂ ಆಗಿದೆ ಹಾಗೆ ಒದಗಿದ ಅಪಶಕುನ ಪರಂಪರೆ ಎಂತಹದೆಂಬುದೇ ತಿಳಿಯದು."

ಇಲ್ಲಿ ಕೊಟ್ಟಿರುವ ಉದಾಹರಣದಲ್ಲಿ ಕಮಲ ಎಂಬ ಶಬ್ದದಿಂದ ಮುಖವನ್ನೂ, ಕುವಲಯದಿಂದ ಕಣ್ಣುಗಳನ್ನೂ, ಕನಕಲತೆಯಿಂದ ನಾಯಿಕೆಯನ್ನು ಗ್ರಹಿಸಬೇಕು. ಇಲ್ಲಿ ನೀರೆಂಬ ಪ್ರಸಿದ್ಧವಾದ ಆಧಾರವಿಲ್ಲದಿದ್ದರೂ ಕಮಲಕುವಲಯಗಳೆರಡೂ ಒಂದೆಡೆಯಲ್ಲಿ ಇರುವುದಾಗಿ ತಿಳಿಸಿದ್ದೇ ವಿಶೇಷವನಿಸಿದೆ. ಕೆಲವೆಡೆಗಳಲ್ಲಿ ಲೋಕಪ್ರಸಿದ್ಧವಾದ ಯಾವ ಆಧಾರವೂ ಇಲ್ಲದೆಯೇ ಸಂಭವಿಸಿದ ವಸ್ತುವಿಗೆ ಬೇರೊಂದು ಆಧಾರವನ್ನು ತಿಳಿಸದೆ ಪ್ರಳಯಕಾಲದವರೆಗೂ ಅದು ನೆಲಸಿರುವುದಾಗಿ ತಿಳಿಸಿರುವುದೂ ಸಹ ವಿಶೇಷವೇ ಆಗುತ್ತದೆ. "ಕವಿಗಳು ದೇಹವನ್ನು ತೊರೆದು ಸ್ವರ್ಗಕ್ಕೆ ಹೋಗಿದ್ದರೂ ಅವರ ದಿವ್ಯಗುಣಗಳಿಂದ ಕೂಡಿದ ವಾಣಿಯು ಪ್ರಳಯಕಾಲದವರೆಗೂ ಜಗತ್ತನ್ನು ಸಂತೋಷಪಡಿಸುತ್ತದೆ. ಅಂತಹ ಕವಿಗಳು ಹೇಗೆ ವಂದ್ಯರಾಗಲಾರರು ?'' ಇಲ್ಲಿ ಕವಿಗಳಿಲ್ಲದಿದ್ದರೂ, ಅವರ ವಾಣಿಗೆ ಬೇರೊಂದು ಆಧಾರವನ್ನು ತಿಳಿಸದೇ ಇದ್ದರೂ ಪ್ರಳಯಕಾಲದವರೆಗೂ ಅದು ಇಲ್ಲಿಯೇ ನೆಲಸಿರುವುದೆಂದು ತಿಳಿಸಿದ್ದು ವಿಶೇಷವೆನಿಸಿದೆ.

ಒಂದೇ ವಸ್ತುವನ್ನು ಅನೇಕ ಕಡೆಗಳಲ್ಲಿ ನೆಲಸಿರುವುದೆಂದು ವರ್ಣಿಸುವುದೂ ಒಂದು ಬಗೆಯ ವಿಶೇಷವೆನಿಸಿದೆ. "ಒಳಗೆ ಹೊರಗೆ ಹಿಂದೆ ಮುಂದೆ ಎಲ್ಲಾ ಕಡೆಗಳಲ್ಲೂ ನನಗೆ ಆಕೆಯೇ ಕಾಣಿಸುತ್ತಿರುವಳು." ಒಂದೇ ವ್ಯಕ್ತಿ ಅನೇಕ ಕಡೆಗಳಲ್ಲಿ ಕಾಣುತ್ತಿರುವುದು ಇಲ್ಲಿ ವಿಶೇಷವೆನಿಸಿದೆ.

"ಪುತ್ರ, ರಾಮನೇ ನೀನು ಹೃದಯದಿಂದ ಹೊರಗೆ ಹೋಗಿಲ್ಲ. ಹಾಗೆಯೇ ಎಲ್ಲಾ ದಿಕ್ಕುಗಳಲ್ಲೂ ಕಾಣುತ್ತಿರುವೆ. ಆದರೆ ನೀನು ಮನೆಯಿಂದ ಹೋಗಿರುವೆ ಎಂದು ದುಃಖದಿಂದ ನಾನು ಊಹಿಸುತ್ತಿರುವೆನು'' ಹೀಗೆ ಒಬ್ಬ ವ್ಯಕ್ತಿಯೇ ಎಲ್ಲೆಡೆಯಲ್ಲೂ ಇರುವಂತೆ ಇಲ್ಲಿ ಅವನನ್ನು ವರ್ಣಿಸಿದ್ದು ಒಂದು ವಿಶೇಷವೇ ಆಗಿದೆ.

ಯಾವುದೋ ಒಂದು ಉದ್ದೇಶಕ್ಕಾಗಿ ಆರಂಭಿಸಿದ ಪ್ರಯತ್ನದಿಂದ ಅಶಕ್ಯವಾದ ಬೇರೊಂದು ವಸ್ತುವಿನ ಉತ್ಪತ್ತಿಯನ್ನು ತಿಳಿಸುವುದೂ ಒಂದು ವಿಶೇಷವೇ ಆಗಿದೆ. "ನಿನ್ನನ್ನು ನೋಡುತ್ತಿರುವ ನನಗೆ ಕಲ್ಪವೃಕ್ಷವೇ ಕಂಡಿತು" ಇಲ್ಲಿ ರಾಜದರ್ಶನಕ್ಕಾಗಿ ಮಾಡಿದ ಪ್ರಯತ್ನದಿಂದ ಕಲ್ಪವೃಕ್ಷವನ್ನು ಪಡೆದದ್ದಾಯಿತೆಂದು ಅಸಾಧ್ಯವೂ ಅದ್ಭುತವೂ ಆದ ಬೇರೊಂದು ವಸ್ತುವಿನ ಸಾಧನೆಯನ್ನು ತಿಳಿಸಲಾಗಿದೆ. "ಪ್ರಕಾಶಿಸುವ ಹೆಚ್ಚಿನ ರೂಪವಿದ್ದು ವಿಶೇಷಪ್ರಕಾಶದಿಂದ ಉರಿಯುತ್ತಲೂ, ಶುದ್ಧ ವಿದ್ಯೆಯಿಂದ ಶೋಭಿಸುತ್ತಲೂ ಇರುವ ನಿನ್ನನ್ನು ಸೃಷ್ಟಿಸಲು ಹೊರಟ ಬ್ರಹ್ಮನು ಇಹಲೋಕಕ್ಕೆ ಆಶ್ಚರ್ಯವನ್ನುಂಟುಮಾಡುವಷ್ಟು ಹೊಸಬರೆನಿಸಿದ ಮನ್ಮಥನನ್ನೂ ಸೂರ್ಯನನ್ನೂ ಬೃಹಸ್ಪತಿಯನ್ನೂ ನಿರ್ಮಿಸಿದನು". ಇಲ್ಲಿ ರಾಜನ ಸೃಷ್ಟಿಗಾಗಿ ಆರಂಭಿಸಿದ ಪ್ರಯತ್ನದಿಂದ ಮನ್ಮಥನೇ ಮೊದಲಾದ ಅಶಕ್ಯವ್ಯಕ್ತಿಗಳ ಸೃಷ್ಟಿ ಯಾಯಿತೆಂದು ತಿಳಿಸಿದ್ದು ವಿಶೇಷ.

## ೫೪. ವ್ಯಾಘಾತಾಲಂಕಾರಃ

ಸ್ಯಾದ್ವ್ಯಾಘಾತೋಽನ್ಯಥಾಕಾರಿ ತಥಾಕಾರಿ ಕ್ರಿಯೇತ ಚೇತ್ ।
ಯೈರ್ಜಗತ್ಪ್ರೀಯತೇ ಹಂತಿ ತೈರೇವ ಕುಸುಮಾಯುಧಃ ॥೧೦೧॥

ಯದ್ಯತ್ಸಾಧನತ್ವೇನ ಲೋಕೇಽವಗತಂ ತತ್ಕೇನಚಿತ್ ವಿರುದ್ಧಸಾಧನಂ ಕ್ರಿಯೇತ ಚೇತ್ಸ ವ್ಯಾಘಾತಃ, ಯದ್ವಾ ಯತ್ಸಾಧನತಯಾ ಕೇನಚಿದುಪಾತ್ತಂ ತದನ್ಯೇನ ತತ್ಪ್ರತಿದ್ವಂದ್ವಿನಾ ತದ್ವಿರುದ್ಧಸಾಧನಂ ಕ್ರಿಯೇತ ಚೇತ್ಸೋಽಪಿ ವ್ಯಾಘಾತಃ. ತತ್ರಾದ್ಯಃ ಉದಾಹೃತಃ—ದ್ವಿತೀಯೋ ಯಥಾ—

ದೃಶಾ ದಗ್ಧಂ ಮನಸಿಜಂ ಜೀವಯಂತಿ ದೃಶೈವ ಯಾಃ ।
ವಿರೂಪಾಕ್ಷಸ್ಯ ಜಯನೀಸ್ತಾಃ ಸ್ತುವೇ ವಾಮಲೋಚನಾಃ ॥

ಸೌಕರ್ಯೇಣ ನಿಬದ್ಧಾಪಿ ಕ್ರಿಯಾ ಕಾರ್ಯವಿರೋಧಿನೀ ।
ದಯಾ ಚೇದ್ಬಾಲ ಇತಿ ಮಯ್ಯುಪರಿತ್ಯಾಜ್ಯ ಏವ ತೇ ॥೧೦೨॥

ಅರ್ಥಾತ್ ಕಾರ್ಯವಿಶೇಷನಿಷ್ಪಾದಕತಯಾ ಕೇನಚಿತ್ಸಂಭಾವ್ಯಮಾನಾತ್ ಸಮರ್ಥ್ಯತೇ ಚೇತ್ ಸೋಽಪಿ ಅನ್ಯೇನ ಕಾರ್ಯವಿರೋಧಿಕ್ರಿಯಾಸೌಕರ್ಯೇಣ ಸಮರ್ಥ್ಯತೇ ಚೇತ್ ಸೋಽಪಿ ವ್ಯಾಘಾತಃ. ಕಾರ್ಯವಿರುದ್ಧಕ್ರಿಯಾಯಾಂ ಸೌಕರ್ಯಂ ತಾವತ್ ಕಾರಣಸ್ಯ ಸುತರಾಂ ತದಾನುಗುಣ್ಯಮ್. ಯಥಾ ಚೈತ್ರಯಾತ್ರೋನ್ಮುಖೇನ ರಾಜ್ಞಾ ಯುವರಾಜಸ್ಯ ರಾಜ್ಯ ಏವ ಸ್ಥಾಪನೇ ಯತ್ಕಾರಣತ್ವೇನ ಸಂಭಾವಿತಂ ಬಾಲ್ಯಂ ತತ್ಪ್ರತ್ಯುತ ತದ್ವಿರುದ್ಧಸ್ಯ ಸಹನಯನಸ್ಯೈವ ಕಾರಣತಯಾ ಯುವರಾಜೇನ ಪರಿತ್ಯಾಗಸ್ಯ ಅಯುಕ್ತತ್ವಂ ದರ್ಶಯತಾ ಸಮರ್ಥ್ಯತೇ. ಯಥಾ ವಾ—

ಲುಬ್ಧೋ ನ ವಿಸೃಜತ್ಯರ್ಥಂ ನರೋ ದಾರಿದ್ರ್ಯಶಂಕಯಾ ।
ದಾತಾಪಿ ವಿಸೃಜತ್ಯರ್ಥಂ ತಯೈವ ನನು ಶಂಕಯಾ ॥

ಅತ್ರ ಪೂರ್ವೋತ್ತರಾರ್ಧೇ ಪಕ್ಷಪ್ರತಿಪಕ್ಷರೂಪೇ ಕಯೋಶ್ಚಿದ್ವಚನೇ ಇತಿ ಲಕ್ಷಣಾನುಗತಿಃ.

ಒಂದು ಕಾರ್ಯಕ್ಕೆ ಸಾಧನವೆನಿಸಿದ ವಸ್ತುವು ಅದಕ್ಕೆ ವಿರುದ್ಧವಾದ ಕಾರ್ಯಕ್ಕೆ ಸಾಧನವೆನಿಸುವುದೇ ವ್ಯಾಘಾತವೆನಿಸುತ್ತದೆ. ಯಾವುದರಿಂದ ಜಗತ್ತಿಗೆ ಸಂತೋಷವಾಗುತ್ತದೆಯೋ ಅದರಿಂದಲೇ ಮನ್ಮಥನು ಜಗತ್ತನ್ನು ಕೊಲ್ಲುತ್ತಾನೆ.

ಒಂದು ಕಾರ್ಯಕ್ಕೆ ಸಾಧನವೆಂದು ಲೋಕದಲ್ಲಿ ಪ್ರಸಿದ್ಧವಾದುದನ್ನು ವಿರುದ್ಧವಾದ ಕಾರ್ಯಕ್ಕೆ ಸಾಧನವಾಗಿ ಉಪಯೋಗಿಸುವುದೇ ವ್ಯಾಘಾತವೆನಿಸುತ್ತದೆ. ಅಥವಾ ಒಂದು ಕಾರ್ಯಕ್ಕೆ ಸಾಧನವೆಂದು ಯಾವುದನ್ನಾದರೂ ಒಬ್ಬನು ತಿಳಿಸಿದರೆ ಎದುರಾಳಿಯೊಬ್ಬನು ಅದನ್ನು ವಿರುದ್ಧಸಾಧನವನ್ನಾಗಿ ಮಾಡಿದರೆ ಅದೂ ಸಹ ವ್ಯಾಘಾತವೆನಿಸುತ್ತದೆ. ಇವುಗಳಲ್ಲಿ ಮೊದಲನೆಯದನ್ನು ಉದಾಹರಿಸಿಯಾಯಿತು. ಎರಡನೆಯದಕ್ಕೆ ಉದಾಹರಣ ಹೀಗಿದೆ, ಇಲ್ಲಿ ಜಗತ್ಸಂತೋಷಕ್ಕೆ ಕಾರಣವೆನಿಸಿದ ಪುಷ್ಪದಿಂದಲೇ ಜಗದ್ವಿನಾಶವಾಗುತ್ತಿದೆ ಎಂದು ಹೇಳಿದ್ದರಿಂದ ಪುಷ್ಪವು ವಿರುದ್ಧಸಾಧನವೆನಿಸಿದೆ. "ಕಣ್ಣಿನಿಂದ ಸುಟ್ಟ ಮನ್ಮಥನನ್ನು ಕಣ್ಣಿನಿಂದಲೇ ಯಾರು ಬದುಕಿಸಬಲ್ಲರೋ ಅಂತಹ ಸ್ತ್ರೀಯರು ತ್ರಿಯಂಬಕನನ್ನೂ ಮೀರಿಸುವಂತವರು. ಅವರನ್ನು ಈಗ ಸ್ತುತಿಸುತ್ತೇನೆ.'' ಮನ್ಮಥನನ್ನು ಸುಡಲು ಈಶ್ವರನ ಹಣೆಗಣ್ಣೇ ಕಾರಣವೆನಿಸಿತ್ತು. ಆದರೆ ಅದೇ ಕಣ್ಣಿನ ಓರೆ ನೋಟದಿಂದ ಸ್ತ್ರೀಯರು ವಿರಹಿಗಳ ಹೃದಯದಲ್ಲಿ ಕಾಮನನ್ನು ಪ್ರಜ್ವಲಗೊಳಿಸುವರೆಂದು ಇಲ್ಲಿ ಹೇಳಿದ್ದರಿಂದ ದಹಿಸಲಿಕ್ಕೆ ಉಪಯೋಗಿಸಿದ ಕಣ್ಣೇ ಬದುಕಿಸುವ ಸಾಧನವೆನಿಸಿದೆ.

ಒಂದು ಕಾರ್ಯವನ್ನು ನಡೆಸಲು ಅನುಕೂಲವಾಗುವಂತೆ ಮಾಡಿದ ಕ್ರಿಯೆಯೇ ಆ ಕಾರ್ಯಕ್ಕೆ ವಿರುದ್ಧವಾಗುವುದಾದರೆ ಅದೂ ವ್ಯಾಘಾತವೇ ಆಗುತ್ತದೆ. ದಿಗ್ವಿಜಯಕ್ಕಾಗಿ ಹೊರಟಿರುವ ರಾಜನಿಗೆ ಯುವರಾಜನು ಹೇಳುವ ಮಾತಿನಲ್ಲಿ ಇದು ಸ್ಪಷ್ಟಪಡುತ್ತದೆ. ''ಚಿಕ್ಕವನೆಂದು ತಿಳಿದು ನನಗೆ ಯುವರಾಜಪಟ್ಟವನ್ನು ಕಟ್ಟಬೇಕೆಂಬ ದಯೆ ಇದ್ದಲ್ಲಿ ಅದೇ ಕಾರಣದಿಂದ ನನ್ನನ್ನು ಇಲ್ಲಿ ಬಿಡದೆ ನಿನ್ನ ಜೊತೆಯಲ್ಲಿಯೇ ಕರೆದೊಯ್ಯಬಹುದು ?'' ಲೋಕದಲ್ಲಿ ನಡೆಯುವ ಯಾವುದೋ ಒಂದು ಕಾರ್ಯಕ್ಕೆ ಸಾಧನವೆಂದು ಯಾವನಾದರೊಬ್ಬನು ಒಂದು ಅಂಶವನ್ನು ಊಹಿಸಿದರೆ ಅದರಿಂದ ಮತ್ತೊಬ್ಬನು ಆ ಕಾರ್ಯಕ್ಕೆ ವಿರುದ್ಧವಾಗಿರುವ ಮತ್ತೊಂದು ಅಂಶವನ್ನು ಸಮರ್ಥಿಸುವುದಾದರೆ ಅದೂ ವ್ಯಾಘಾತದ ಒಂದು ಬಗೆ ಎನಿಸುವುದು, ಒಂದು ಕಾರ್ಯಕ್ಕೆ ವಿರುದ್ಧವಾದ ಕ್ರಿಯೆಗೆ ಸೌಕರ್ಯ ಒದಗುವುದೆಂದರೆ ಆ ಕಾರ್ಯದ ಕಾರಣ

ವನ್ನು ವಿರುದ್ಧಕ್ರಿಯೆಗೆ ಪೋಷಕವೆಂದು ಸಮರ್ಥಿಸುವುದೇ ಆಗಿದೆ. ಕಾರ್ಯಕ್ಕೆ ವಿರುದ್ಧ ವಾದ ಕ್ರಿಯೆಗೆ ಸೌಕರ್ಯವಾಗುವುದೆಂದರೆ ಕಾರಣವು ಪೂರ್ತಿಯಾಗಿ ಅದಕ್ಕೆ ಅನುಕೂಲ ವಾಗಿ ಪರಿಣಮಿಸುವುದೆಂದರ್ಥ. ವಿಜಯಯಾತ್ರೆಗೆ ಹೊರಟ ರಾಜನು ಯುವರಾಜ ನನ್ನು ರಾಜ್ಯದಲ್ಲಿ ಸ್ಥಾಪಿಸಲು ಕಾರಣವೆಂದು ಊಹಿಸಿದ ಬಾಲ್ಯವೇ ಅದಕ್ಕೆ ವಿರುದ್ಧ ವಾಗಿ ಯುವರಾಜನನ್ನು ರಾಜನ ಜೊತೆಯಲ್ಲಿ ಕರೆದೊಯ್ಯಲು ಕಾರಣವೆನಿಸಿದ್ದ ರಿಂದ ತನ್ನನ್ನು ರಾಜ್ಯದಲ್ಲಿ ತೊರೆಯುವುದು ಅಯುಕ್ತವೆಂದು ಯುವರಾಜನು ತಿಳಿಸುತ್ತಾನೆ. ''ಕೃಪಣನು ತಾನು ಬಡವನಾದೇನೆಂಬ ಸಂದೇಹದಿಂದ ತನ್ನ ಹಣ ವನ್ನು ಕೈ ಬಿಡುವುದಿಲ್ಲ. ದಾನಶೌಂಡನೂ ಸಹ ಅದೇ ಶಂಕೆಯಿಂದಲೇ ಹಣವನ್ನು ಯಥೇಚ್ಛವಾಗಿ ಕೊಡುತ್ತಾನೆ.'' ಹಣವನ್ನು ಕೊಟ್ಟರೆ ಬಡವನಾದೇನೆಂದು ಭಾವಿಸಿ ಕೃಪಣನು ಕೊಡುವುದಿಲ್ಲ. ಹಣವನ್ನು ಕೊಡದೇ ಇದ್ದರೆ ಬಡವನಾದೇನೆಂದು ಭಾವಿಸಿ ದಾನಿಯು ಕೊಡುತ್ತಾನೆ. ಇಲ್ಲಿ ಹಣವನ್ನು ಕೊಡದಿರುವುದು ಮತ್ತು ಕೊಡುವುದು ಎರಡೂ ವಿರುದ್ಧಕ್ರಿಯೆಗಳು ಕೃಪಣ ಮತ್ತು ಉದಾರಿ ಇಬ್ಬರಿಗೂ ಬಡತನದ ಶಂಕೆ ಸಮಾನವಾಗಿದೆ. ದಾನಮಾಡದಿರಲಿಕ್ಕೆ ಒಬ್ಬನ ಕಾರಣ ವೆನಿಸಿದ್ದೇ ಮತ್ತೊಬ್ಬನಿಗೆ ದಾನಮಾಡಲಿಕ್ಕೆ ಕಾರಣವಾಗಿದೆ. ಇಲ್ಲಿ ಬಡತನದ ಶಂಕೆಯೇ ಇಬ್ಬರಿಗೂ ಅನ್ವಯಿಸುವ ಕ್ರಿಯೆ, ಇದು ಒಬ್ಬನಿಂದ ದಾನವನ್ನು ಮಾಡಿಸದೆ ಮತ್ತೊಬ್ಬನಿಂದ ದಾನವನ್ನು ಮಾಡಿಸುತ್ತದೆ. ಹಿಂದಿನ ಕಾರ್ಯಕ್ಕೆ ವಿರುದ್ಧ ವಾದರೂ ಮುಂದಿನ ಕಾರ್ಯಕ್ಕೆ ಅನುಕೂಲವಾಗುವಂತೆ ಬಡತನದ ಶಂಕೆಯನ್ನು ಕವಿ ಏರ್ಪಡಿಸಿರುವನು. ಇಲ್ಲಿ ಪೂರ್ವಾರ್ಧದಲ್ಲೂ ಉತ್ತರಾರ್ಧದಲ್ಲೂ ಹೇಳಿರುವ ಅಂಶಗಳು ಒಂದು ಪಕ್ಷವನ್ನೂ ಹಾಗೆಯೇ ಅದಕ್ಕೆ ವಿರುದ್ಧಪಕ್ಷವನ್ನೂ ತಿಳಿಸುವುದ ರಿಂದ ಇವು ಯಾರೋ ಕ್ರಮವಾಗಿ ಇಬ್ಬರು ಹೇಳಿರುವ ಮಾತುಗಳೆನಿಸಿದ್ದರಿಂದ ಇಲ್ಲಿ ಲಕ್ಷಣವೂ ಹೊಂದಿಕೆಯಾಗುತ್ತದೆ.

## ೬೩. ಕಾರಣಮಾಲಾಲಂಕಾರ

ಗುಂಫಃ ಕಾರಣಮಾಲಾ ಸ್ಯಾತ್ ಯಥಾಪ್ರಾಕ್ಪ್ರಾಂತಕಾರಣೈಃ ।
ನಯೇನ ಶ್ರೀಃ ಶ್ರಿಯಾ ತ್ಯಾಗಸ್ತ್ಯಾಗೇನ ವಿಪುಲಂ ಯಶಃ ॥೧೦೩॥

ಪೂರ್ವಪೂರ್ವಕಾರಣೀಭೂ ಉತ್ತರೋತ್ತರಕಾರಣಭೂತಪೂರ್ವಪೂರ್ವೈಃ ಕಾರಣಮಾಲಾ. ಆದ್ಯೋ ತೋತ್ತರೋತ್ತರೈರ್ವಾ ವಸ್ತುಭಿಃ ಕೃತೋ ಗುಂಫಃ ದಾಹೃತಾ. ದ್ವಿತೀಯಾ ಯಥಾ—

ಭವಂತಿ ನರಕಾಃ ಪಾಪಾತ್ಪಾಪಂ ದಾರಿದ್ರ್ಯಸಂಭವಮ್ ।
ದಾರಿದ್ರ್ಯಮಪ್ರದಾನೇನ ತಸ್ಮಾದ್ದಾನಪರೋ ಭವೇತ್ ॥

ಹಿಂದು ಹಿಂದಿನ ಕಾರ್ಯಗಳಿಗೆ ಮುಂದೆ ಮುಂದೆ ಕಾರಣಗಳನ್ನು ತಿಳಿಸುವುದಾಗಲೀ, ಮುಂದು ಮುಂದಿನ ಕಾರ್ಯಗಳಿಗೆ ಹಿಂದೆ ಹಿಂದೆ ಕಾರಣಗಳನ್ನು ತಿಳಿಸುವುದಾಗಲೀ ಕಾರಣಮಾಲೆ ಎನಿಸುವುದು. "ನೀತಿಯಿಂದ ಲಕ್ಷ್ಮಿಯೂ, ಲಕ್ಷ್ಮಿಯಿಂದ ತ್ಯಾಗವೂ, ತ್ಯಾಗದಿಂದ ವಿಸ್ತಾರವಾದ ಯಶಸ್ಸೂ ದೊರಕುತ್ತವೆ.'' ಇಲ್ಲಿ ನೀತಿಯು ಸಂಪತ್ತಿಗೆ ಕಾರಣವೆನಿಸಿದ್ದು ಅದೇ ಸಂಪತ್ತು ತ್ಯಾಗಕ್ಕೆ ಕಾರಣವೆನಿಸಿದ್ದು ಮುಂದೆ ಅದೇ ತ್ಯಾಗವು ರಾಜನ ಯಶಸ್ಸಿಗೆ ಕಾರಣವೆನಿಸಿದೆ. ಮುಂದಿನ ಕಾರ್ಯಕ್ಕೆ ಹಿಂದೆ ಕಾರಣವನ್ನು ಇಲ್ಲಿ ತಿಳಿಸದೆ, ಹಿಂದೆ ತಿಳಿಸಿರುವ ಕಾರ್ಯಕ್ಕೆ ಮುಂದೆ ಕಾರಣವನ್ನು ತಿಳಿಸುವುದು ಹೀಗಿದೆ : "ನರಕಗಳು ಪಾಪದಿಂದಲೂ, ಪಾಪವು ಬಡತನದಿಂದಲೂ, ಬಡತನವು ದಾನ ಮಾಡಿದ್ದರಿಂದಲೂ ಸಂಭವಿಸುತ್ತವೆ.'' ಇಲ್ಲಿ ಕ್ರಮವಾಗಿ ನರಕ, ಪಾಪ, ಬಡತನವೆಂಬ ಕಾರ್ಯಗಳನ್ನು ಹಿಂದೆ ತಿಳಿಸಿ ಮುಂದೆ ಅವುಗಳ ಕಾರಣಗಳನ್ನು ತಿಳಿಸಲಾಗಿದೆ.

## ೪೭. ಏಕಾವಳ್ಯಲಂಕಾರ

ಗೃಹೀತಮುಕ್ತರೀತ್ಯಾರ್ಥಶ್ರೇಣಿರೇಕಾವಲೀ ಮತಾ ।
ನೇತ್ರೇ ಕರ್ಣಾಂತವಿಶ್ರಾಂತೇ ಕರ್ಣೌ ದೋಸ್ತಂಭದೋಲಿತೌ ॥೧೦೪॥

ದೋಸ್ತಂಭೌ ಜಾನುಪರ್ಯಂತಪ್ರಲಂಬನಮನೋಹರೌ ।
ಜಾನುನೀ ರತ್ನಮುಕುರಾಕಾರೇ ತಸ್ಯ ಮಹೀಭುಜಃ ॥೧೦೫॥

ಉತ್ತರೋತ್ತರಸ್ಯ ಪೂರ್ವ ಪೂರ್ವವಿಶೇಷಣಭಾವಃ ಪೂರ್ವಪೂರ್ವಸ್ಯ ಉತ್ತರೋತ್ತರವಿಶೇಷಣಭಾವೋ ವಾ ಗೃಹೀತಮುಕ್ತರೀತಿಃ. ತತ್ರ ಆದ್ಯಃ ಪ್ರಕಾರ ಉದಾಹೃತಃ. ದ್ವಿತೀಯೋ ಯಥಾ–

ದಿಕ್ಕಾಲಾತ್ಮಸಮೈವ ಯಸ್ಯ ವಿಭುತಾ ಯಸ್ತತ್ರವಿದ್ಯೋತತೇ ॥
ಯತ್ರಾಮುಷ್ಯ ಸುಧೀಭವಂತಿ ಕಿರಣಾ ರಾಶೇಃ ಸ ಯಸಾಮಭೂತ್ ।
ಯಸ್ತತ್ಪಿತ್ರಮುಷಸ್ಸುಯೋ ಸ್ಯ ಹವಿಷೇ ಯಸ್ತಸ್ಯ ಜೀವಾತವೇ
ವೋಢಾ ಯದ್ಗುಣಮೇಷ ಮನ್ಮಥರಿಪೋಸ್ತಾಃ ಪಾಂತು ನೋಮೂರ್ತಯಃ ।

ಮೊದಲೊಂದು ವಿಶೇಷಣವನ್ನು ಕೊಟ್ಟು ಅದನ್ನು ಮುಂದೆ ತೊರೆದು ಅದಕ್ಕೆ ಬೇರೊಂದು ವಿಶೇಷಣವನ್ನು ಕಲ್ಪಿಸಿ ಹೀಗೆಯೇ ಬೇರೆ ವಿಶೇಷಣವಿಶೇಷ್ಯಗಳ ಸಾಲನ್ನು ಏರ್ಪಡಿಸುವುದೇ ಏಕಾವಳಿ ಎನಿಸುವುದು. "ಕಣ್ಣುಗಳು ಕಿವಿಗಳವರೆಗೂ ವ್ಯಾಪಿಸಿವೆ. ಕಿವಿಗಳು ಭುಜಗಳವರೆಗೂ ವ್ಯಾಪಿಸಿವೆ, ಭುಜಗಳೆರಡು ಮೊಳಕಾಲುಗಳ

ವರೆಗೂ ವಿಶಾಲವಾಗಿದ್ದು ಮನೋಹರವಾಗಿವೆ. ಮೊಣಕಾಲುಗಳು ಮಣಿಮಯವಾದ ಕನ್ನಡಿಯಂತಿವೆ.

ಹಿಂದು ಹಿಂದಿನದಕ್ಕೆ ಮುಂದು ಮುಂದಿನದು ವಿಶೇಷಣವಾದರೂ, ಮುಂದು ಮುಂದಿನದಕ್ಕೆ ಹಿಂದು ಹಿಂದಿನದು ವಿಶೇಷಣವಾದರೂ ಈ ರೀತಿಯಲ್ಲಿ ವಸ್ತುಗಳನ್ನು ಸಂಘಟಿಸುವುದೇ ಏಕಾವಳಿ ಎನಿಸುವುದು. ಹಿಂದಿನದಕ್ಕೆ ಮುಂದಿನದು ವಿಶೇಷಣವೆನಿಸಿದ ಸಂಘಟನೆಗೆ ಉದಾಹರಣವನ್ನು ಮೂಲದಲ್ಲಿಯೇ ಕೊಟ್ಟಿದೆ. ಹಿಂದೆ ತಿಳಿಸಿದ ನೇತ್ರಕ್ಕೆ ಕರ್ಣ ಎಂಬುದನ್ನು ಮುಂದೆ ವಿಶೇಷಣವಾಗಿ ಕೊಟ್ಟು, ಅದನ್ನು ಬಿಟ್ಟು ಮುಂದೆ ಅದಕ್ಕೆ ದೋಃಸ್ತಂಭ ಎಂಬುದನ್ನು ವಿಶೇಷಣ ವಾಗಿ ಕೊಟ್ಟಿದೆ. ಹೀಗೆ ಒಂದಕ್ಕೆ ಮುಂದೆ ಒಂದು ವಿಶೇಷಣವನ್ನು ಕೊಟು ಆ ವಿಶೇಷಣವನ್ನು ಮುಂದೆ ವಿಶೇಷ್ಯವನ್ನಾಗಿ ಮಾಡಿ ಅದಕ್ಕೆ ಬೇರೊಂದು ವಿಶೇಷಣ ವನ್ನು ಇಲ್ಲಿ ಕೊಡಲಾಗಿದೆ. ಮುಂದಿನ ವಿಶೇಷ್ಯಕ್ಕೆ ಹಿಂದೆ ಒಂದು ವಿಶೇಷಣವನ್ನು ಕೊಟ್ಟು ಅವನ್ನು ತೊರೆದು ಮುಂದೆ ಅದನ್ನೂ ವಿಶೇಷ್ಯವನ್ನಾಗಿ ಕಲ್ಪಿಸಿ ಅದಕ್ಕೆ ಬೇರೊಂದು ವಿಶೇಷಣವನ್ನು ಹಿಂದೆ ಕಲ್ಪಿಸುವುದೇ ಏಕಾವಳಿಯ ಎರಡನೆಯ ಬಗೆ. ಅದನ್ನು ಈಗ ಉದಾಹರಿಸುತ್ತಾನೆ :

'ಯಾವ ಆಕಾಶದ ವ್ಯಾಪ್ತಿಯು ದಿಕ್ಕು ಕಾಲ ಆತ್ಮ ಇವಕ್ಕೆ ಸಮಾನ ವಾಗಿದೆಯೋ, ಯಾವ ಸೂರ್ಯನು ಆ ಆಕಾಶದಲ್ಲಿದ್ದು ಶೋಭಿಸುವನೋ, ಯಾವ ನೀರಿನ ಚಂದ್ರನಲ್ಲಿ ಆ ಸೂರ್ಯನ ಕಿರಣಗಳು ಅಮೃತವೆನಿಸುತ್ತವೆಯೋ, ಯಾವ ನೀರಿನ ರಾಶಿಯಿಂದ ಆ ಚಂದ್ರನು ಹುಟ್ಟಿದನೋ, ಯಾವ ಅಗ್ನಿಯು ಆ ನೀರಿನ ಪಿತೃಧಾತು ವೆನಿಸಿದನೋ, ಯಾವ ಯಜಮಾನನು ಉಷಃಕಾಲದಲ್ಲಿ ಈ ಅಗ್ನಿಗೆ ಆಹುತಿಯನ್ನು ಕೊಡುವನೋ, ಯಾವ ವಾಯುವು ಆ ಯಜಮಾನನಿಗೆ ಜೀವನೌಷಧವಾಗಿರುವುದೋ, ಯಾವ ಭೂಮಿಯಲ್ಲಿರುವ ಗಂಧವನ್ನು ಈ ವಾಯು ಹೊತ್ತು ತರುವುದೋ ಅಂತಹ ಈಶ್ವರನ ಎಂಟು ಬಗೆಯ ಮೂರ್ತಿಗಳು ನಿಮ್ಮನ್ನು ರಕ್ಷಿಸಲಿ". ಇಲ್ಲಿ 'ಯಸ್ಯ ವಿಭುತಾ' ಎಂಬಲ್ಲಿ ಯಚ್ಛಬ್ದದಿಂದ ತಿಳಿದುಬರುವ ಗಗನವು ಮುಂದಿನ 'ಯಸ್ಮಿತ್ರ, ವಿದ್ಯೋತತೇ' ಎಂಬ ವಾಕ್ಯದಲ್ಲಿ ವಿಶೇಷಣವಾಗಿದೆ. ಇದು ಸೂರ್ಯನಿಗೆ ಆಧಾರ ವೆನಿಸಿದ್ದರಿಂದ ವಿಶೇಷಣವಾಗಿದೆ. ಯಃ ಎಂಬ ಪದದಿಂದ ತೋರುವ ಸೂರ್ಯನು ಈ ವಾಕ್ಯದಲ್ಲಿ ವಿಶೇಷ್ಯವಾಗಿದ್ದು ಮುಂದೆ 'ಯತ್ರಾಮುಷ್ಯ ಸುಧೀಭವಂತಿ' ಎಂಬ ವಾಕ್ಯದಲ್ಲಿ ವಿಶೇಷಣವೆನಿಸಿದ್ದಾನೆ. ಈ ವಾಕ್ಯದಲ್ಲಿ ವಿಶೇಷ್ಯವೆನಿಸಿರುವ ಚಂದ್ರನು ಮುಂದೆ 'ರಾಶೇಃ ಸ ಯಾಸಾಮಭೂತ್' ಎಂಬ ವಾಕ್ಯದಲ್ಲಿ ವಿಶೇಷಣವಾಗಿರುವನು. ಇಲ್ಲಿ ವಿಶೇಷವೆನಿಸಿರುವ ಸಮುದ್ರವು 'ಯಸ್ತಾತ್ಪಿತ್ರಮುಷಸ್ಸು' ಎಂಬ ವಾಕ್ಯದಲ್ಲಿ ವಿಶೇಷಣವೆನಿಸಿದೆ. ಇಲ್ಲಿ ವಿಶೇಷ್ಯವೆನಿಸಿರುವ ಅಗ್ನಿಯು 'ಯೋಽಸ್ಯ ಹವಿಷೇ' ಎಂಬ ವಾಕ್ಯದಲ್ಲಿ ವಿಶೇಷಣವಾಗಿದೆ. ಇಲ್ಲಿ ಯಃ ಎಂಬುದರಿಂದ ತಿಳಿದುಬರುವ

ಯಜಮಾನನು 'ಯಸ್ತಸ್ಯ ಜೀವಾತವೇ' ಎಂಬ ವಾಕ್ಯದಲ್ಲಿ ವಿಶೇಷಣವೆನಿಸಿದ್ದಾನೆ. ಇಲ್ಲಿ ವಿಶೇಷ್ಯವೆನಿಸಿರುವ ವಾಯುವು 'ಯದ್ಗುಣಮೇವ ಮೋಘಾ ಎಂಬ ವಾಕ್ಯದಲ್ಲಿ ಪೃಥ್ವಿಗೆ ವಿಶೇಷಣವಾಗಿದೆ. ಹೀಗೆ ಹಿಂದಿನ ವಾಕ್ಯದಲ್ಲಿ ಬಾದಿರುವ ಅಂಶವನ್ನು ಮುಂದಿನ ವಾಕ್ಯದಲ್ಲಿ ತೊರೆದು ವಿಶೇಷಣವಾಗಿ ಉಪಯೋಗಿಸುವ ಅರ್ಥಶ್ರೇಣಿಯನ್ನು ಇಲ್ಲಿ ಕಾಣಬಹುದು.

## ೪೮. ಮಾಲಾದೀಪಕಾಲಂಕಾರ

ದೀಪಕೈಕಾವಳೀಯೋಗಾನ್ಮಾಲಾದೀಪಕಮಿಷ್ಯತೇ ।
ಸ್ಮರೇಣ ಹೃದಯೇ ತಸ್ಯಾಸ್ತೇನ ತ್ವಯಿ ಕೃತಾ ಸ್ಥಿತಿಃ ॥ ೧೧೬ ॥

ಅತ್ರ ಸ್ಥಿತಿರಿತಿ ಪದಮೇಕಂ ಸ್ಮರೇಣ ತಸ್ಯಾಃ ಹೃದಯೇ ಸ್ಥಿತಿಃ ಕೃತಾ, ತೇನ ತಸ್ಯಾಃ ಹೃದಯೇನ ತ್ವಯಿ ಸ್ಥಿತಿಃ ಕೃತೇತ್ಯೇವಂ ವಾಕ್ಯದ್ವಯಾನ್ವಯಿ. ಅತೋ ದೀಪಕಮ್. ಗೃಹೀತಮುಕ್ತರೀತಿಸದ್ಭಾವಾದೇಕಾವಳೀ ಚೇತಿ ದೀಪಕೈಕಾವಳೀಯೋಗಃ ಯಥಾ ವಾ–

ಸಂಗ್ರಾಮಾಂಗಣಮಾಗತೇನ ಭವತಾ ಚಾಪೇ ಸಮಾರೋಪಿತೇ
ದೇವಾಕರ್ಣಯ ಯೇನ ಯೇನ ಸಹಸಾ ಯದ್ಯತ್ಸಮಾದಿತಮ್ ।
ಕೋದಂಡೇನ ಶರಾಃ ಶರೈರರಿಶಿರಸ್ತೇನಾಪಿ ಭೂಮಂಡಲಂ
ತೇನ ತ್ವಂ ಭವತಾ ಚ ಕೀರ್ತಿರತುಲಾ ಕೀರ್ತ್ಯಾ ಚ ಲೋಕತ್ರಯಮ್ ॥

ಅತ್ರ ಯೇನ ಯೇನ ಸಹಸಾ ಯದ್ಯತ್ಸಮಾಸಾದಿತಮಿತಿ ಸಂಕ್ಷೇಪವಾಕ್ಯಸ್ಥಿತಮೇಕಂ ಸಮಾಸಾದಿತಪದಂ ಕೋದಂಡೇನ ಶರಾಃ ಇತ್ಯಾದಿಷು ಷಟ್ಸ್ವಪಿ ವಿವರಣವಾಕ್ಯೇಷು ತತ್ತದುಚಿತಲಿಂಗವಚನವಿಪರಿಣಾಮೇನ ಅನ್ವೇತೀತಿ ದೀಪಕಮ್. ಶರಾದೀನಾಮುತ್ತರೋತ್ತರವಿಶೇಷಣಭಾವಾದೇಕಾವಳೀ ಚೇತಿ ದೀಪಕೈಕಾವಳೀಯೋಗಃ.

ದೀಪಕ ಮತ್ತು ಏಕಾವಳಿ ಇವೆರಡೂ ಒಂದೆಡೆಗೆ ಸೇರಿದರೆ ಅಲ್ಲಿ ತೋರುವ ಚಮತ್ಕಾರವು ಮಾಲಾದೀಪಕವೆನಿಸುತ್ತದೆ. ಪ್ರಕೃತಾಪ್ರಕೃತ ವಸ್ತುಗಳಿಗೆ ಒಂದೇ ಧರ್ಮದಲ್ಲಿ ಅನ್ವಯವಾಗುವುದೇ ದೀಪಕ. ಹಿಂದಿನದಕ್ಕೆ ವಿಶೇಷಣವಾಗಿದ್ದುದೇ ಮುಂದೆ ವಿಶೇಷ್ಯವೆನಿಸಿ ಅದಕ್ಕೆ ಬೇರೆ ವಿಶೇಷಣಗಳನ್ನು ಕೊಡುವುದೇ ಏಕಾವಳಿ. ಹೀಗೆ ಒಂದೇ ಧರ್ಮವು ಎರಡು ಕಡೆಗಳಲ್ಲಿ ಅನ್ವಯಿಸುವಂತಿದ್ದು ಹಿಂದೆ ಸ್ವೀಕರಿಸಿದ ವಿಶೇಷಣವನ್ನು ಮುಂದೆ ಬಿಡುವುದಾಗಿದ್ದರೆ ಅಲ್ಲಿ ತೋರುವ ಚಮತ್ಕಾರವು ಮಾಲಾದೀಪಕವೆನಿಸುತ್ತದೆ. "ಆಕೆಯ ಹೃದಯದಲ್ಲಿ ಮನ್ಮಥನು ನೆಲಸಿದನು. ಆ ಹೃದಯವೂ ಸಹ ನಿನ್ನಲ್ಲಿ ನೆಲಸಿತಂ ?" ಇಲ್ಲಿ ಸ್ಥಿತಾ (ನೆಲಸಿತು) ಎಂಬ ಒಂದೇ

ಪದವು ಮನ್ಮಥನಿಗೂ ಹೃದಯಕ್ಕೂ ಅನ್ವಯಿಸುತ್ತದೆ. ಮನ್ಮಥನು ಆಕೆಯ ಹೃದಯದಲ್ಲಿ ನೆಲಸಿದನೆಂದೂ, ಆ ಹೃದಯವು ನಿನ್ನಲ್ಲಿ (ನಾಯಕನಲ್ಲಿ) ನೆಲಸಿತೆಂದೂ ಎರಡು ವಾಕ್ಯಗಳಿಗೂ ಸ್ಥಿತಾ ಎಂಬ ಕ್ರಿಯಾರೂಪವಾದ ಒಂದೇ ಧರ್ಮದಲ್ಲಿ ಅನ್ವಯವಿರುವುದರಿಂದಲೂ, ಹಿಂದಿನ ವಾಕ್ಯದಲ್ಲಿ (ಸ್ಮರ) ಮನ್ಮಥನನ್ನು ಪರಿಗ್ರಹಿಸಿ ಮುಂದಿನದರಲ್ಲಿ ಬಿಡುವುದರಿಂದಲೂ ಇಲ್ಲಿ ದೀಪಕ ಏಕಾವಳಿ ಎರಡೂ ಇವೆ.

ಬೇರೊಂದು ಉದಾಹರಣವನ್ನು ಕೊಡುತ್ತಾನೆ: "ಮಹಾರಾಜನೇ, ರಣರಂಗಕ್ಕೆ ಬಂದ ನೀನು ಧನುಸ್ಸಿಗೆ ಬಾಣವನ್ನು ಏರಿಸಲು ಯಾರ್ಯಾರಿಗೆ ಏನೇನು ಸಂಭವಿಸಿ ತೆಂಬುದನ್ನು ಹೇಳುವೆನು ಕೇಳು, ಬಿಲ್ಲು ಬಾಣಗಳನ್ನೂ, ಬಾಣಗಳು ಶತ್ರುಗಳ ಶಿರಸ್ಸುಗಳನ್ನೂ, ಶಿರಸ್ಸುಗಳು ಭೂಮಿಯನ್ನೂ, ಆ ಭೂಮಿಯು ನಿನ್ನನ್ನೂ, ನೀನು ಕೀರ್ತಿಯನ್ನೂ, ಆ ಕೀರ್ತಿಯು ಮೂರುಲೋಕಗಳನ್ನೂ ಸಂಪಾದಿಸಿದವು.'' ಇಲ್ಲಿ ಯಾವುದು ಯಾವುದನ್ನು ಸಂಪಾದಿಸಿತು ಎಂಬುದನ್ನು ಸಂಕ್ಷೇಪವಾಗಿ ತಿಳಿಸುವಾಗ ಉಪಯೋಗಿಸಿರುವ 'ಸಮಾಸಾದಿತಂ' ಎಂಬ ಒಂದೇ ಪದವನ್ನು ಧನಸ್ಸು, ಬಾಣ ಗಳನ್ನು ಪಡೆಯಿತು ಎಂದು ಮುಂತಾಗಿ ಬಾಣ, ಧನಸ್ಸು, ಭೂಮಿ, ರಾಜ, ಕೀರ್ತಿ, ಮೂರು ಲೋಕಗಳು ಇವಿಷ್ಟಕ್ಕೂ ಆಯಾ ವಾಕ್ಯಕ್ಕೆ ಆವಶ್ಯಕವೆನಿಸಿದ ಲಿಂಗ ವಚನ ಗಳನ್ನು ಬದಲಾಯಿಸಿ ಅನ್ವಯಿಸಿದ್ದರಿಂದ ಇಲ್ಲಿ ದೀಪಕವಿದೆ. ಶರೈಃ ಅರಿಶಿರಃ ಸಮಾಸಾದಿತಂ, ಕೋದಂಡೇನ ಶರಾಃ ಸಮಾಸಾದಿತಾಃ, ಭವತಾ ಕೀರ್ತಿಃ ಸಮಾ ಸಾದಿತಾ ಎಂದು ಒಂದೇ ಪದವನ್ನು ಆರು ವಾಕ್ಯಗಳಲ್ಲೂ ಉಪಯೋಗಿಸಲಾಗಿದೆ. ಶರ ಮೊದಲಾದವು ಮುಂದು ಮುಂದಿನ ಶತ್ರು ಶಿರಸ್ಸು ಮೊದಲಾದವುಗಳಿಗೆ ವಿಶೇಷಣವಾಗಿರುವುದರಿಂದ ಏಕಾವಳಿಯೂ ಇದೆ. ಹಾಗೆ ಇವೆರಡೂ ಇಲ್ಲಿ ಸೇರಿರುವುದ ರಿಂದ ಇದು ಮಾಲಾದೀಪಕವೆನಿಸಿದೆ.

## ೪೯. ಸಾರಾಲಂಕಾರ

ಉತ್ತರೋತ್ತರಮುತ್ಕರ್ಷಃ ಸಾರ ಇತ್ಯಭಿಧೀಯತೇ ।
ಮಧುರಂ ಮಧು ತಸ್ಮಾಚ್ಚ ಸುಧಾ ತಸ್ಯಾಃ ಕವೇರ್ವಚಃ ॥೧೦೭॥

ಅಂತರ್ವಿಷ್ಣೋಸ್ತ್ರಿಲೋಕೀ ನಿವಸತಿ ಫಣಿನಾಮೀಶ್ವರೇ ಸೋಽಪಿ ಶೇತೇ
ಸಿಂಧೋಃ ಸೋಽಪ್ಯೇಕದೇಶೇ ತಮಪಿ ಚುಲಕಯಾ ಕುಂಭಯೋನಿಶ್ಚಕಾರ ।
ಧತ್ತೇ ಖದ್ಯೋತಲೀಲಾಮಯಮಪಿ ನಭಸಿ ಶ್ರೀನೃಸಿಂಹಕ್ಷಿತೀಂದ್ರ
ತ್ವತ್ಕೀರ್ತೇಃ ಕರ್ಣನೀಲೋತ್ಪಲಮಿದಮಪಿ ಚ ಪ್ರೇಕ್ಷಣೀಯಂ ವಿಭಾತಿ ।

ಅಯಂ ಶ್ಲಾಘ್ಯಗುಣೋತ್ಕರ್ಷಃ. ಅಶ್ಲಾಘ್ಯಗುಣೋತ್ಕರ್ಷೋ ಯಥಾ—

ಗಿರಿರ್ಮಹಾನ್ ಗಿರೇರಬ್ಧಿರ್ಮಹಾನಬ್ಧೇರ್ನಭೋ ಮಹತ್ ।

ನಭಸೋಽಪಿ ಮಹದ್ಬ್ರಹ್ಮ ತತೋಽಪ್ಯಾಶಾ ಗರೀಯಸೀ ॥

ಅತ್ರ ಬ್ರಹ್ಮಪರ್ಯಂತೇಷು ಮಹತ್ತ್ವಂ ಶ್ಲಾಘ್ಯಗುಣಃ ಪ್ರಕೃತಾರ್ಥಾಶಾಯಾಃ ಅಶ್ಲಾಘ್ಯಗುಣಃ.

ಹಿಂದು ಹಿಂದಿನದಕ್ಕಿಂತಲೂ ಮುಂದು ಮುಂದಿನದರಲ್ಲಿ ಶ್ರೇಷ್ಠತೆಯನ್ನು ತಿಳಿಸುವುದೇ ಸಾರವೆನಿಸುತ್ತದೆ. "ಜೇನುತುಪ್ಪವೇ ಸಿಹಿ, ಅದಕ್ಕಿಂತಲೂ ಅಮೃತವು ಸಿಹಿ. ಅದಕ್ಕಿಂತಲೂ ಕವಿಯ ಮಾತು ಸಿಹಿ". ಇಲ್ಲಿ ಜೇನುತುಪ್ಪವನ್ನು ಸಿಹಿ ಎಂದು ತಿಳಿಸಿ ಅದಕ್ಕಿಂತಲೂ ಅಮೃತವನ್ನು ಸಿಹಿ ಎಂದೂ, ಕವಿ ವಚನವನ್ನು ಅಮೃತಕ್ಕಿಂತ ಸಿಹಿ ಎಂದೂ ಹೇಳಲಾಗಿದೆ. ಹೀಗೆ ಒಂದಕ್ಕಿಂತ ಮತ್ತೊಂದನ್ನು ಶ್ರೇಷ್ಠವೆಂದು ತಿಳಿಸಿದ್ದು ಸಾರವೆನಿಸಿದೆ. ಬೇರೊಂದು ಉದಾಹರಣವು ಹೀಗಿದೆ; "ನೃಸಿಂಹ ಮಹಾರಾಜನೇ, ವಿಷ್ಣುವಿನ ಹೃದಯದಲ್ಲಿ ಮೂರು ಲೋಕಗಳು ನೆಲಸಿವೆ. ಅವನಾದರೋ ಸರ್ಪರಾಜನ ಮೇಲೆ ಮಲಗುತ್ತಾನೆ. ಆ ಸರ್ಪರಾಜನೂ ಸಹ ಸಮುದ್ರದ ಒಂದು ಭಾಗದಲ್ಲಿ ನೆಲಸಿದ್ದಾನೆ. ಅಂತಹ ಸಮುದ್ರವನ್ನು ಅಗಸ್ತ್ಯನು ಒಂದು ಶಾರೆಯನ್ನಾಗಿ ಮಾಡಿಕೊಂಡನು. ಆ ಅಗಸ್ತ್ಯನೂ ಸಹ ಆಕಾಶದಲ್ಲಿ ಮಿಂಚಿನ ಹುಳದಂತೆ ನೆಲಸಿರುವನು. ಆ ಆಕಾಶವೂ ಸಹ ನಿನ್ನ ಕೀರ್ತಿ ಎಂಬ ನಾಯಿಕೆಗೆ ಕರ್ಣಾಭರಣವೆನಿಸಿದ ನೀಲೋತ್ಪಲವೆಂದು ಕಾಣಿಸುತ್ತಿದೆ". ವಿಷ್ಣುವಿನ ಹೃದಯವು ಮೂರು ಲೋಕಗಳಿಗೂ ಆಶ್ರಯಸ್ಥಲವೆನಿಸಿದೆ. ಅಂತಹ ವಿಷ್ಣುವಿಗೆ ಆಶ್ರಯವೆನಿಸಿದ ಆದಿಶೇಷನು ದೊಡ್ಡವನು. ಆ ಆದಿಶೇಷನಿಗಿಂತಲೂ ಸಮುದ್ರವು ದೊಡ್ಡದು. ಆ ಸಮುದ್ರಕ್ಕಿಂತಲೂ ಅಗಸ್ತ್ಯನು ದೊಡ್ಡವನು, ಆ ಅಗಸ್ತ್ಯನಿಗಿಂತಲೂ ಆಕಾಶವು ವ್ಯಾಪಕವಾದದು. ಅಂತಹ ಆಕಾಶವೂ ರಾಜನ ಕೀರ್ತಿ ನಾಯಿಕೆಗೆ ಕರ್ಣಾಲಂಕಾರವಾಯಿತು. ಹೀಗೆ ಕೊನೆಗೆ ರಾಜನ ಕೀರ್ತಿಯೇ ಎಲ್ಲಕ್ಕೂ ಶ್ರೇಷ್ಠವೆಂಬ ಅಂಶವು ಇಲ್ಲಿ ತಿಳಿದುಬರುತ್ತದೆ. ಇದು ಪ್ರಶಂಸಾರ್ಹವಾದ ಗುಣಗಳ ಉತ್ಕರ್ಷವನ್ನು ತಿಳಿಸುತ್ತದೆ. ಪ್ರಶಂಸಾರ್ಹವಲ್ಲದ ಗುಣಗಳ ಉತ್ಕರ್ಷವನ್ನು ತಿಳಿಸುವುದನ್ನು ಮುಂದೆ ಉದಾಹರಿಸುತ್ತಾನೆ. "ಹುಲ್ಲಿಗಿಂತಲೂ ಹಗುರವಾದುದು ಹತ್ತಿ, ಹತ್ತಿಗಿಂತಲೂ ಹಗುರವಾದವನು ಯಾಚಕನು. ಇವನು ತನ್ನನ್ನು ಬೇಡಿಯಾನೆಂದು ಯೋಚಿಸಿ ಗಾಳಿ ಇವನನ್ನು ದೂರಕ್ಕೆ ತಳ್ಳುವುದಿಲ್ಲವೇ". ಇಲ್ಲಿ ಹುಲ್ಲಿಗಿಂತಲೂ ಹತ್ತಿಯೂ, ಹತ್ತಿಗಿಂತ ಯಾಚಕನೂ ಹಗುರನೆಂದು ಹೇಳಿದ್ದರಿಂದ ಹಿಂದು ಹಿಂದಿನದಕ್ಕಿಂತಲೂ ಮುಂದಿನದು ಪ್ರಶಂಸಾರ್ಹವಲ್ಲವೆಂದು ತಿಳಿಸಲಾಗಿದೆ. ಹಿಂದಿನದಕ್ಕಿಂತ ಮುಂದಿನದನ್ನು ತಿಳಿಸುವಾಗ ಕೆಲವು ಶ್ಲಾಘ್ಯವೂ, ಕೆಲವು ಅಶ್ಲಾಘ್ಯವೂ ಆಗಿರುವುದನ್ನು ಈಗ ಉದಾಹರಿಸುತ್ತಾನೆ, "ಬೆಟ್ಟವೇ ದೊಡ್ಡದು, ಬೆಟ್ಟಕ್ಕಿಂತಲೂ

ಸಮುದ್ರವು ದೊಡ್ಡದು. ಸಮುದ್ರಕ್ಕಿಂತ ಆಕಾಶವು ದೊಡ್ಡದು, ಆಕಾಶಕ್ಕಿಂತಲೂ ಬ್ರಹ್ಮ ದೊಡ್ಡದು, ಅದಕ್ಕಿಂತಲೂ ಆಶೆ ದೊಡ್ಡದು." ಬ್ರಹ್ಮದವರೆಗೂ ದೊಡ್ಡದೆಂದು ಹೇಳಿದ ವಸ್ತುಗಳೆಲ್ಲವೂ ಪ್ರಶಂಸಾರ್ಹವೆನಿಸಿವೆ. ಪ್ರಕೃತಸಂದರ್ಭಕ್ಕನುಗುಣವಾಗಿ ಆಶೆಯನ್ನು ದೊಡ್ಡದೆಂದು ತಿಳಿಸಿದ್ದು ಪ್ರಶಂಸಾರ್ಹವಲ್ಲದ ಗುಣವೆನಿಸಿದೆ.

## ೫೦. ಯಥಾಸಂಖ್ಯಾಲಂಕಾರ

ಯಥಾಸಂಖ್ಯಂ ಕ್ರಮೇಣೈವ ಕ್ರಮಿಕಾಣಾಂ ಸಮನ್ವಯಃ ।
ಶತ್ರುಂ ಮಿತ್ರಂ ವಿಪತ್ತಿಂ ಚ ಜಯ ರಂಜಯ ಭಂಜಯ ॥೧೦೮॥

ಯಥಾ ವಾ—

ಶರಣಂ ಕಿಂ ಪ್ರಪನ್ನಾನಿ ವಿಷವನ್ಮಾರಯಂತಿ ವಾ ।
ನ ತ್ಯಜ್ಯಂತೇ ನ ಭುಜ್ಯಂತೇ ಕೃಪಣೇನ ಧನಾನಿ ಯತ್ ॥
ಅಮುಂ ಕ್ರಮಾಲಂಕಾರ ಇತಿ ಕೇಚಿದ್ವ್ಯಾಜಹ್ರುಃ

ಒಂದು ಕ್ರಮದಲ್ಲಿ ತಿಳಿಸಿರುವ ಬೇರೆ ಬೇರೆ ಪದಾರ್ಥಗಳನ್ನು ಅದೇ ಕ್ರಮದಲ್ಲಿ ಅನ್ವಯಿಸುವುದರಲ್ಲಿ ನೆಲಸಿರುವ ಚಮತ್ಕಾರವೇ ಯಥಾಸಂಖ್ಯವೆನಿಸುತ್ತದೆ. ಉದ್ದೇಶ್ಯವಿಧೇಯಭಾವದಿಂದ ಬೇರೆ ಬೇರೆಯಾಗಿ ತಿಳಿಸಿರುವ ವಸ್ತುಗಳನ್ನು ಒಂದು ಕ್ರಮದಲ್ಲಿ ಅನ್ವಯಿಸುವುದೇ ಯಥಾಸಂಖ್ಯೆ ಎಂದು ಹೇಳಿದಂತಾಯಿತು. "ಶತ್ರು ಮಿತ್ರ ವಿಪತ್ತು ಇವಿಷ್ಟನ್ನು ಜಯಿಸು, ಸಂತೋಷಪಡಿಸು ಮತ್ತು ನಾಶಪಡಿಸು'' ಇಲ್ಲಿ ಉದ್ದೇಶಾಂಶವೆನಿಸಿದ ಮೂರಕ್ಕೂ ಮೂರು ವಿಧೇಯಾಂಶಗಳೊಡನೆ ಕ್ರಮವಾಗಿ ಅನ್ವಯವಾಗುತ್ತದೆ. ಶತ್ರುವನ್ನು ಜಯಿಸು, ಮಿತ್ರನನ್ನು ಸಂತೈಸು, ವಿಪತ್ತನ್ನು ನಾಶಪಡಿಸು ಹೀಗೆ ಅನ್ವಯವಾಗುತ್ತದೆ. ''ಕೃಪಣನು ಧನವನ್ನು ತ್ಯಾಗಮಾಡುವುದಿಲ್ಲವೆಂಬುದಕ್ಕೆ ಧನನ ಶರಣಾಗತಿಯೇ ಕಾರಣವೋ ? ಅಥವಾ ಅದನ್ನು ಆವನು ಅನುಭವಿಸದಿರುವುದಕ್ಕೆ ಅದು ಅವನನ್ನು ವಿಷದಂತೆ ಕೊಲ್ಲುವುದು ಕಾರಣವೋ." ಇಲ್ಲಿ "ಧನಾನಿ ನ ತ್ಯಜ್ಯಂತೇ" ಎಂಬುದನ್ನು ''ಶರಣಂ ಕಿಂ ಪ್ರಪನ್ನಾನಿ" ಎಂಬುದರಲ್ಲೂ, 'ನ ಭುಜ್ಯಂತೇ' ಎಂಬುದನ್ನು "ವಿಷವನ್ಮಾರಯಂತಿ" ಎಂಬುದರಲ್ಲೂ ಕ್ರಮವಾಗಿ ಅನ್ವಯಿಸಬೇಕು. ಇದನ್ನು ಕ್ರಮಾಲಂಕಾರವೆಂದು ಕೆಲವರು ಹೇಳುತ್ತಾರೆ.

## ೫೧. ಪರ್ಯಾಯಾಲಂಕಾರ

ಪರ್ಯಾಯೋ ಯದಿ ಪರ್ಯಾಯೇಣೈಕಸ್ಯಾನೇಕಸಂಶ್ರಯಃ ।
ಪದ್ಮಂ ಮುಕ್ತ್ವಾ ಗತಾ ಚಂದ್ರಂ ಕಾಮಿನೀವದನೋಪಮಾ । ॥೧೦೯॥

ಅತ್ರೈಕಸ್ಯ ಕಾಮಿನೀವದನಸಾದೃಶ್ಯಸ್ಯ ಕ್ರಮೇಣ ಪದ್ಮಚಂದ್ರರೂಪಾನೇಕಾ ಧಾರಸಂಶ್ರಯಣಂ ಪರ್ಯಾಯಃ. ಯದ್ಯಪಿ ಪದ್ಮಸಂಶ್ರಯಣಂ ಕಂಠತೋ ನೋಕ್ತಂ, ತಥಾಪಿ ಪದ್ಮಂ ಮುಕ್ತ್ವೇತಿ ತತ್ಪರಿತ್ಯಾಗೋಕ್ತ್ಯಾ ಪ್ರಾಕ್ ತತ್ಸಂಶ್ರಯಾಕ್ಷೇಪೇಣ ಪರ್ಯಾಯನಿರ್ವಾಹಃ. ಅತ ಏವ—

ಶ್ರೋಣೀಬಂಧಸ್ತ್ಯಜತಿ ತನುತಾಂ ಸೇವತೇ ಮಧ್ಯಭಾಗಃ
ಪದ್ಭ್ಯಾಂ ಮುಕ್ತಾಸ್ತರಲಗತಯಃ ಸಂಶ್ರಿತಾ ಲೋಚನಾಭ್ಯಾಮ್ ।
ಧತ್ತೇ ವಕ್ಷಃ ಕುಚಸಚಿವತಾಮದ್ವಿತೀಯಂ ತು ವಕ್ತ್ರಂ
ತ್ವದ್ಗಾತ್ರಾಣಾಂ ಗುಣವಿನಿಮಯಃ ಕಲ್ಪಿತೋ ಯೌವನೇನ ॥

ಇತ್ಯತ್ರ ಪರ್ಯಾಯಂ ಕಾವ್ಯಪ್ರಕಾಶಕೃದುದಾಜಹಾರ. ಸರ್ವತ್ರ ಶುದ್ಧ ಪರ್ಯಾಯೇ ಯಥಾ—

ನನ್ವಾಶ್ರಯಸ್ಥಿತಿರಿಯಂ ತವ ಕಾಲಕೂಟ
ಕೇನೋತ್ತರೋತ್ತರವಿಶಿಷ್ಟಪದೋಪದಿಷ್ಟಾ ।
ಪ್ರಾಗರ್ಣವಸ್ಯ ಹೃದಯೇ ವೃಷಲಕ್ಷ್ಮಣೋಽಥ
ಕಂಠೇಽಧುನಾ ವಸಸಿ ವಾಚಿ ಪುನಃ ಖಲಾನಾಮ್ ॥

ಸರ್ವೋಽಪ್ಯಯಂ ಶುದ್ಧಪರ್ಯಾಯಃ ಸಂಕೋಚಪರ್ಯಾಯೋ ಯಥಾ—

ಪ್ರಾಯಶ್ಚರಿತ್ವಾ ವಸುಧಾಮಶೇಷಾಂ
ಛಾಯಾಸು ವಿಶ್ರಮ್ಯ ತತಸ್ತರೂಣಾಮ್ ।
ಪ್ರೌಢಿಂ ಗತೇ ಸಂಪ್ರತಿ ತಿಗ್ಮಭಾನೌ
ಶೈತ್ಯಂ ಶನೈರಂತರಪಾಮಯಾಸೀತ್ ॥

ಅತ್ರ ಶೈತ್ಯಸ್ಯೋತ್ತರೋತ್ತರಮಾಧಾರಸಂಕೋಚಾತ್ಸಂಕೋಚಪರ್ಯಾಯಃ. ವಿಕಾಸ ಪರ್ಯಾಯೋ ಯಥಾ—

ಬಿಂಬೋಷ್ಠ ಏವ ರಾಗಸ್ತೇ ತನ್ವಿ ಪೂರ್ವಮದೃಶ್ಯತ ।
ಅಧುನಾ ಹೃದಯೇಽಪ್ಯೇಷ ಮೃಗಶಾವಾಕ್ಷಿ ದೃಶ್ಯತೇ ॥

ಅತ್ರ ರಾಗಸ್ಯ ಪೂರ್ವಾಧಾರಪರಿತ್ಯಾಗೇನ ಆಧಾರಾಂತರಸಂಕ್ರಮಣಾದ್ ವಿಕಾಸಪರ್ಯಾಯಃ.

ಏಕಸ್ಮಿನ್ಯದ್ಯನೇಕಂ ವಾ ಪರ್ಯಾಯಃ ಸೋಽಪಿ ಸಮ್ಮತಃ । ॥೧೦೩॥
ಅಧುನಾ ಪುಲಿನಂ ತತ್ರ ಯತ್ರ ಸ್ರೋತಃ ಪುರಾಽಜನಿ

ಯಥಾ ವಾ—

ಪುರಾಭೂದಸ್ಮಾಕಂ ಪ್ರಥಮಮವಿಭಿನ್ನಾ ತನುರಿಯಂ
ತತೋ ನು ತ್ವಂ ಪ್ರೇಯಾನ್ವಯಮಪಿ ಹತಾಶಾಃ ಪ್ರಿಯತಮಾಃ ।

ಇದಾನೀಂ ನಾಥಸ್ತ್ವಂ ವಯಮಪಿ ಕಳತ್ರಂ ಕಿಮಪರಂ
ಪತಾನಾಂ ಪ್ರಾಣಾನಾಂ ಕುಲಿಶಕಠಿನಾನಾಂ ಫಲಮಿದಮ್ ॥

ಅತ್ರ ದಂಪತ್ಯೋಃ ಪ್ರಥಮಮಭೇದಸ್ತತಃ ಪ್ರೇಯಸೀಪ್ರಿಯತಮಭಾವಸ್ತತೋ ಭಾರ್ಯಾಪತಿಭಾವ ಇತ್ಯಾಧೇಯಪರ್ಯಾಯಃ.

ಒಂದೇ ವಸ್ತು ಕ್ರಮವಾಗಿ ಅನೇಕ ಧರ್ಮಗಳನ್ನಾಶ್ರಯಿಸುವುದೇ ಪರ್ಯಾಯವೆನಿಸುತ್ತದೆ. "ಕಾಮಿನಿಯ ಮುಖಕಾಂತಿಯು ಕಮಲವನ್ನು ತೊರೆದು ಚಂದ್ರನನ್ನು ಸೇರಿತು." ಇಲ್ಲಿ ಕಾಮಿನೀಮುಖದ ಕಾಂತಿ ಎಂಬ ಒಂದೇ ವಸ್ತು ಕ್ರಮವಾಗಿ ಕಮಲ ಚಂದ್ರ ಇಬ್ಬರನ್ನು ಆಶ್ರಯಿಸಿದ್ದಾಗಿ ತಿಳಿಸಿದೆ. ಮುಖದ ಕಾಂತಿಯು ಕಮಲವನ್ನಾಶ್ರಯಿಸಿತೆಂಬುದನ್ನು ಕವಿ ಬಾಯಿಂದ ಹೇಳಿಲ್ಲ. ಆದರೂ ಕಮಲವನ್ನು ತೊರೆದು ಎಂದು ಹೇಳಿದ್ದರಿಂದ ತೊರೆಯುವ ಮೊದಲು ಕಮಲವನ್ನಾಶ್ರಯಿಸಿತ್ತೆಂಬ ಅರ್ಥವು ಸಹಜವಾಗಿ ಸಿದ್ಧಿಸುವುದರಿಂದ ಇದು ಪರ್ಯಾಯವೆನಿಸಿದೆ. "ಆಕೆಯ ಸೊಂಟದ ಹಿಂಭಾಗವು ಕಾರ್ಶ್ಯವನ್ನು ತೊರೆಯುತ್ತದೆ, ಆದರೆ ಮಧ್ಯಪ್ರದೇಶವು ಅದನ್ನಾಶ್ರಯಿಸುತ್ತದೆ. ಕಾಲುಗಳನ್ನು ತೊರೆದ ವೇಗವು ಕಣ್ಣುಗಳನ್ನಾಶ್ರಯಿಸಿತು. ಮೊದಲು ವಕ್ಷಸ್ಥಲದಲ್ಲಿದ್ದ ಅದ್ವಿತೀಯತೆಯು ಅಂದರೆ ಸಾದೃಶ್ಯವಿಲ್ಲದ ಸ್ಥಿತಿಯು ಅದನ್ನು ತೊರೆದು ಮುಖವನ್ನು ಸೇರಿಕೊಂಡಿತು. ಹೀಗೆ ನಿನ್ನ ಅವಯವಗಳು ಯೌವನಕಾಲದಲ್ಲಿ ಒಂದು ಗುಣವನ್ನು ಬಿಟ್ಟು ಮತ್ತೊಂದನ್ನು ಆಶ್ರಯಿಸಿದವು". ಇಲ್ಲಿ ಕಾರ್ಶ್ಯವು ಸೊಂಟದ ಹಿಂಭಾಗವನ್ನು ತೊರೆದು ಮಧ್ಯಪ್ರದೇಶವನ್ನೂ, ವೇಗವು ಕಾಲುಗಳನ್ನು ತೊರೆದು ಕಣ್ಣುಗಳನ್ನೂ, ಆಶ್ರಯಿಸಿದ್ದಾಗಿ ತಿಳಿಸಿದೆ. ಹಾಗೆಯೇ ಅದ್ವಿತೀಯ ಸ್ಥಿತಿಯು ವಕ್ಷಸ್ಥಳವನ್ನು ಬಿಟ್ಟು ಮುಖವನ್ನಾಶ್ರಯಿಸಿದ್ದಾಗಿ ತಿಳಿಸಿದೆ. ಒಬ್ಬನು ಮತ್ತೊಬ್ಬನ ಜೊತೆಯಲ್ಲಿ ಸದ್ವಿತೀಯವೆನಿಸಿದ್ದು ಎದುರಾಳಿ ಇಲ್ಲದಿರುವಾಗ ಅದ್ವಿತೀಯವೆನಿಸುವನು. ವಕ್ಷಸ್ಥಳಕ್ಕೆ ಯೌವನ ಕಾಲದಲ್ಲಿ ಕುಚಗಳ ಜೊತೆಯಲ್ಲಿರುವ ಸ್ಥಿತಿ ಒದಗಿದ್ದರಿಂದ ಅದು ಸದ್ವಿತೀಯವಾಯಿತು. ಆದರೆ ಅದರಲ್ಲಿ ಹಿಂದೆ ಇದ್ದ ಅದ್ವಿತೀಯಸ್ಥಿತಿಯೇ ಅದನ್ನು ಬಿಟ್ಟು ಈಗ ಮುಖವನ್ನು ಸೇರಿತು. ಯೌವನಕಾಲದಲ್ಲಿ ಆಕೆಯ ಮುಖವು ಅದ್ವಿತೀಯವೆನಿಸಿದ್ದರಿಂದ ಅದಕ್ಕೆ ಸದೃಶವಾದ ಎರಡನೆಯ ವಸ್ತುವೇ ಇಲ್ಲದಂತಾಯಿತು. ಹೀಗೆ ಎರಡು ಉದಾಹರಣಗಳಲ್ಲೂ ಹಿಂದಿನ ಆಧಾರವನ್ನಾಶ್ರಯಿಸಿದ ಅಂಶವು ವ್ಯಂಗ್ಯವಾಗಿ ತೋರಿ ಮುಂದಿನ ಆಧಾರವನ್ನಾಶ್ರಯಿಸುವ ಅಂಶವು ಶಬ್ದದಿಂದಲೇ ಸ್ಪಷ್ಟಪಡುವುದು. "ಎಲೈ ಕಾಲಕೂಟವಿಷವೇ, ನೀನು ಮುಂದೆ ಹೋಗುತ್ತ ಉತ್ತಮೋತ್ತಮಸ್ಥಾನಗಳನ್ನಾಶ್ರಯಿಸುತ್ತಿರುವ ಸ್ಥಿತಿಯನ್ನು ಯಾರು ನಿನಗೆ ತಿಳಿಸಿದರು ? ನೀನು ಮೊದಲು ಸಮುದ್ರದ ಮಧ್ಯದಲ್ಲಿ ನೆಲಸಿದ್ದೆ. ಆಮೇಲೆ ಈಶ್ವರನ ಕಂಠದಲ್ಲಿ ನೆಲಸಿದೆ, ಈಗ ನೀಚರ ಮಾತಿನಲ್ಲಿ ನೆಲಸಿರುವೆ." ಹೀಗೆ

ಮೊದಲು ಹೃದಯದಲ್ಲೂ, ಆಮೇಲೆ ಕಂಠದಲ್ಲೂ ಕೊನೆಗೆ ನೀಚರ ನಾಲಿಗೆಯಲ್ಲೂ ನೆಲಸಿರುವುದಾಗಿ ಹೇಳಿದ್ದರಿಂದ ಇದರಲ್ಲಿ ಬೇರೆ ಅಲಂಕಾರಗಳ ಸಂಪರ್ಕವಿಲ್ಲದ್ದ ರಿಂದ ಇದು ಶುದ್ಧಪರ್ಯಾಯವೆನಿಸಿದೆ. ಹಿಂದಿನ ಆಧಾರಕ್ಕಿಂತಲೂ ಮುಂದಿ ದನ್ನು ಸಂತೋಷಪಡಿಸುವುದು ಸಂಕೋಚಪರ್ಯಾಯವೆನಿಸುತ್ತದೆ. ಅದಕ್ಕೆ ಉದಾ ಹರಣ ಹೀಗಿದೆ : "ಶೈತ್ಯವು ಭೂಮಿಯಲ್ಲೆಲ್ಲಾ ಸಂಚರಿಸಿ ಆಮೇಲೆ ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡು ಈಗ ಸೂರ್ಯನು ಪ್ರಜ್ವಲಿಸುತ್ತಿರುವುದರಿಂದ ಮೆಲ್ಲ ಮೆಲ್ಲನೆ ನೀರಿನ ತಳಭಾಗವನ್ನು ಸೇರಿಕೊಂಡಿತು." ಇಲ್ಲಿ ಶೈತ್ಯಕ್ಕೆ ಆಧಾರವಾದ ಭೂಮಿಯನ್ನು ತಿಳಿಸಿ ಅದಕ್ಕಿಂತಲೂ ಮರದ ನೆರಳನ್ನು ಸಂಕೋಚವೆಂದು ತಿಳಿ ಅದಕ್ಕಿಂತಲೂ ನೀರಿನ ತಳಭಾಗವು ಮತ್ತಷ್ಟು ಸಂಕೋಚವಾಗಿದೆ. ಇಲ್ಲಿ ಹೃದಯ ವೆನಿಸಿದೆ ನೀರಿನ ತಳಭಾಗವು ಮರದ ನೆರಳಿಗಿಂತಲೂ ಸಂಕುಚಿತವಾಗಿದೆ.

ಹಿಂದಿನ ಆಧಾರಕ್ಕಿಂತಲೂ ಮುಂದಿನದರಲ್ಲಿ ವಿಕಾಸವನ್ನು ತಿಳಿಸುವುದು ವಿಕಾಸ ಪರ್ಯಾಯವೆನಿಸುತ್ತದೆ. ಇದಕ್ಕೆ ಉದಾಹರಣ ಹೀಗಿದೆ :

"ಕೃಶಾಂಗಿ, ರಾಗವು ಮೊದಲು ನಿನ್ನ ತುಟಿಯಲ್ಲಿಯೇ ಕಾಣುತ್ತಿತ್ತು. ಈಗ ಲಾದರೋ ಹೃದಯದಲ್ಲೂ ಕಾಣುತ್ತಿದೆ" ಇಲ್ಲಿ ರಾಗವು ತುಟಿ ಎಂಬ ಹಿಂದಿನ ಆಧಾರವನ್ನು ತೊರೆದು ಹೃದಯವೆಂಬ ಬೇರೊಂದು ಆಧಾರವನ್ನು ಆಶ್ರಯಿಸಿದ್ದ ರಿಂದ ಹಿಂದಿನ ಆಧಾರಕ್ಕಿಂತಲೂ ಮುಂದಿನದು ವಿಶಾಲವೆಂಬುದು ತಿಳಿದುಬರು ತ್ತದೆ. ರಾಗವೆಂದರೆ ಕೆಂಪು ಬಣ್ಣ, ಪ್ರೀತಿ ಎಂಬ ಎರಡು ಅರ್ಥಗಳು ಶ್ಲೇಷದಿಂದ ತೋರುತ್ತವೆ. ಇಲ್ಲಿ ಇವೆರಡನ್ನೂ ಒಂದೇ ಎಂದು ಭಾವಿಸಿ ತುಟಿಯಲ್ಲಿದ್ದ ಕೆಂಪು ಬಣ್ಣವು ಹೃದಯದಲ್ಲಿ ಪ್ರೀತಿ ಎನಿಸಿ ವಿಶಾಲವಾಯಿತೆಂದು ತಿಳಿಸಲಾಗಿದೆ. ಆದ್ದರಿಂದ ಇದು ವಿಕಾಸಪರ್ಯಾಯಕ್ಕೆ ಉದಾಹರಣವಾಗಿದೆ.

ಒಂದೇ ಆಧಾರವನ್ನು ಕ್ರಮವಾಗಿ ಒಂದು ಪದಾರ್ಥವು ಬಿಟ್ಟು ಬೇರೊಂದು ಪದಾರ್ಥವು ಆಶ್ರಯಿಸಿದರೆ ಅದೂ ಪರ್ಯಾಯದ ಮತ್ತೊಂದು ಬಗೆ ಎನಿಸುತ್ತದೆ. "ಎಲ್ಲಿ ಹಿಂದೆ ಪ್ರವಾಹವಿತ್ತೋ ಅಲ್ಲಿ ಈಗ ಮರಳಿದೆ." ಹೀಗೆ ಮರಳಿಗೂ ಪ್ರವಾಹಕ್ಕೂ ಒಂದೇ ಆಶ್ರಯವನ್ನು ಇಲ್ಲಿ ತಿಳಿಸಲಾಗಿದೆ. "ಹಿಂದೆ ನಮ್ಮಿಬ್ಬರ ದೇಹಗಳು ಏಕವೇ ಆಗಿದ್ದವು, ಆಮೇಲೆ ನೀನು ಪ್ರೀತಿಮಂತನೆನಿಸಿದೆ. ನಿರಾಶಳಾದ ನಾನು ಪ್ರಿಯೆ ಎನಿಸಿದೆನು. ಈಗ ನೀನು ಪತಿ ಎನಿಸಿರುವೆ. ನಾನು ನಿನ್ನ ಭಾರ್ಯೆ ಎನಿಸಿದೆನು. ಇದಕ್ಕಿಂತ ಬೇರೆ ಹೇಳುವುದೇನಿದೆ ? ವಜ್ರದಂತೆ ಕಠಿಣವಾದ ಈ ತುಚ್ಛಪ್ರಾಣವನ್ನು ಉಳಿಸಿಕೊಂಡಿದ್ದಕ್ಕೆ ಇದೇ ಫಲ." ಹೊಸದಾಗಿ ದಾಂಪತ್ಯವು ಸಂಭವಿಸಿದಾಗ ಒಂದೇ ಬಗೆಯಾದ ಪ್ರೀತಿಯಿದ್ದು ಸ್ವಲ್ಪ ಕಾಲ ಕಳೆದ ಮೇಲೆ ನಮ್ಮಿಬ್ಬರಲ್ಲೂ ತರತಮಭಾವವು ತೋರಿತೆಂದೂ, ಆಮೇಲೆ ಹೆಂಡತಿ ಗಂಡ ಎಂಬ

ಭೇದಭಾವವು ಸಂಭವಿಸಿತೆಂದೂ ಇಲ್ಲಿ ತಿಳಿಸಿದೆ. ಮೊದಲು ಅಭಿನ್ನತೆಯಿದ್ದು ಕ್ರಮವಾಗಿ ಅಂತರವುಂಟಾಯಿತು. ಹೀಗೆ ಒಂದೇ ಬಗೆಯ ದಂಪತಿಗಳಲ್ಲಿ ಮೊದಲು ಅಭೇದ, ಆಮೇಲೆ ಪ್ರೇಯಸೀಪ್ರಿಯತಮಭಾವ, ಕೊನೆಗೆ ಭಾರ್ಯಾಪತಿಭಾವ. ಹೀಗೆ ಅನೇಕ ಆಧೇಯಗಳಿರುವುದಾಗಿ ಕಂಡುಬಂದಿದೆ. ಆದ್ದರಿಂದ ಇದು ಆಧೇಯ ಪರ್ಯಾಯವೆನಿಸಿದೆ.

## ೫೨. ಪರಿವೃತ್ತ್ಯಲಂಕಾರ

ಪರಿವೃತ್ತಿರ್ವಿನಿಮಯೋ ನ್ಯೂನಾಭ್ಯಧಿಕಯೋರ್ಮಿಥಃ ।
ಜಗ್ರಾಹೈಕಂ ಶರಂ ಮುಕ್ತ್ವಾ ಕಟಾಕ್ಷಾತ್ಸ ರಿಪುಶ್ರಿಯಮ್ ॥೧೧೦॥

ಯಥಾ ವಾ—ತಸ್ಯ ಚ ಪ್ರವಯಸೋ ಜಟಾಯುಷಃ
ಸ್ವರ್ಗಿಣಃ ಕಿಮಿಹ ಶೋಚ್ಯತೇಽಧುನಾ ।
ಯೇನ ಜರ್ಜರಕಳೇವರವ್ಯಯಾತ್
ಕ್ರೀತಮಿಂದುಕಿರಣೋಜ್ವಲಂ ಯಶಃ ॥

ಒಂದು ಕನಿಷ್ಠವಾದ ವಸ್ತುವನ್ನು ಕೊಟ್ಟು ಉತ್ಕೃಷ್ಟವಾದ ವಸ್ತು ಒಂದನ್ನು ಪಡೆಯುವುದೇ ಪರಿವೃತ್ತ್ಯಲಂಕಾರವೆನಿಸುವುದು. "ಅವನು ಓರೆನೋಟದೊಡನೆ ಬಾಣ ಒಂದನ್ನು ಪ್ರಯೋಗಿಸಿ ಶತ್ರುಗಳ ಸಂಪತ್ಸಮೃದ್ಧಿಯನ್ನೇ ವಶಪಡಿಸಿ ಕೊಂಡನು." ಶತ್ರುವಿನ ಐಶ್ವರ್ಯ ಹೆಚ್ಚಿನದು. ಅಷ್ಟೊಂದು ಅಪಾರವಾದ ಐಶ್ವರ್ಯವನ್ನು ಓರೆನೋಟದೊಡಗೂಡಿದ ಒಂದು ಬಾಣದಿಂದಲೇ ಸೂರೆಗೊಂಡ ನೆಂದು ತಿಳಿಸಿದ್ದರಿಂದ ಇದು ವಿನಿಮಯವೆನಿಸಿದೆ. ಒಂದರ ಬದಲು ಮತ್ತೊಂದನ್ನು ಸ್ವೀಕರಿಸುವುದೇ ವಿನಿಮಯ. ಇದೇ ಪರಿವೃತ್ತ್ಯಲಂಕಾರ. "ಮುದಿಯಾದ ಜಟಾಯು ಸ್ವರ್ಗಕ್ಕೆ ಹೋಗಿರುವ ಬಗ್ಗೆ ಶೋಚಿಸಬೇಕಾದ್ದೇನಿದೆ ? ಅವನು ತನ್ನ ಜರ್ಜರವಾದ ದೇಹವನ್ನು ರಾವಣನೊಡನೆ ಹೂಡಿದ ಯುದ್ಧದಲ್ಲಿ ತೊರೆದು ಚಂದ್ರಕಿರಣದಂತೆ ಸ್ವಚ್ಛವಾದ ಯಶಸ್ಸನ್ನು ಗಳಿಸಿದನು." ದೇಹವನ್ನು ಅರ್ಪಿಸಿ ಶಾಶ್ವತವಾದ ಯಶಸ್ಸನ್ನು ಗಳಿಸಿದ್ದರಿಂದ ನಿಕೃಷ್ಟವಾದ ದೇಹಕ್ಕೂ ಉತ್ಕೃಷ್ಟವಾದ ಯಶಸ್ಸಿಗೂ ವಿನಿಮಯ ವನ್ನು ಇಲ್ಲಿ ತಿಳಿಸಲಾಗಿದೆ.

## ೫೩. ಪರಿಸಂಖ್ಯಾಲಂಕಾರ

ಪರಿಸಂಖ್ಯಾ ನಿಷಿದ್ಧೈಕಮೇಕಸ್ಮಿನ್ ವಸ್ತು ಯಂತ್ರಣಮ್ ।
ಸ್ನೇಹಕ್ಷಯಃ ಪ್ರದೀಪೇಷು ನ ಸ್ವಾಂತೇಷು ನತಭ್ರುವಾಮ್ ॥೧೧೧॥

ವಿಲಂಘಯಂತಿ ಶ್ರುತಿವರ್ತ್ಮ ಯಸ್ಯಾಂ
ಲೀಲಾವತೀನಾಂ ನಯನೋತ್ಪಲಾನಿ ।
ಬಿಭರ್ತಿ ಯಸ್ಯಾಮಪಿ ವಕ್ರಿಮಾಣಂ
ಏಕೋ ಮಹಾಕಾಲಜಟಾರ್ಧಚಂದ್ರಃ ॥

ಆದ್ಯೋದಾಹರಣೇ ನಿಷೇಧಃ ಶಾಬ್ದಃ ; ದ್ವಿತೀಯೇ ತ್ವಾರ್ಥಃ.

"ಸ್ನೇಹವು ದೀಪದಲ್ಲಿ ಮುಗಿಯಿತೇ ಹೊರತು ಪ್ರೇಯಸಿಯ ಹೃದಯದಲ್ಲಿ ಮುಗಿಯಲಿಲ್ಲ". ಸ್ನೇಹ ಎಂಬುದು ಶ್ಲೇಷದಿಂದ ಜಿಡ್ಡು ಮತ್ತು ಪ್ರೇಮ ಈ ಎರಡನ್ನು ಬೋಧಿಸುತ್ತದೆ. ಸ್ನೇಹವು ಮುಗಿಯಿತೆಂಬುದನ್ನು ಪ್ರೇಯಸಿಯ ಹೃದಯದಲ್ಲಿ ನಿಷೇಧಿಸಿ ದೀಪಗಳಿಗೆ ಅನ್ವಯಿಸುವುದಾಗಿ ಇಲ್ಲಿ ತಿಳಿಸಿದೆ. ಹಾಗೆಯೇ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಉಜ್ಜಯಿನೀಪಟ್ಟಣದಲ್ಲಿ ಕರ್ಣ ಮಾರ್ಗವೆಂಬ ವೇದಮಾರ್ಗವನ್ನು ಉಲ್ಲಂಘಿಸಿದಂತವು ಸ್ತ್ರೀಯರ ನೇತ್ರೋತ್ಪಲಗಳು ಹೊರತು ಬೇರೆ ಯಾವುವೂ ಅಲ್ಲ. ವಕ್ರಾಕಾರವನ್ನು ಧರಿಸಿರುವುದು ಮಹಾಕಾಲ ನೆನಿಸಿದ ಶಿವಲಿಂಗವೇ ಹೊರತು ಬೇರೆ ಯಾವುದೂ ಅಲ್ಲ." ಇಲ್ಲಿ ವಕ್ರಾಕಾರವು ಈಶ್ವರನ ಶಿರಸ್ಸಿನಲ್ಲಿರುವ ಅರ್ಧಚಂದ್ರನಲ್ಲಿ ಇತ್ತೇ ಹೊರತು ಬೇರೆ ಯಾವುದರಲ್ಲೂ ಇರಲಿಲ್ಲವೆಂದು ಇಲ್ಲಿ ಹೇಳಿದ್ದರಿಂದ ನಿಷೇಧಾಂಶವು ಅರ್ಥದಿಂದ ತೋರುತ್ತದೆ. ಅದನ್ನು ಶಬ್ದದಿಂದ ಸ್ಪಷ್ಟವಾಗಿ ತಿಳಿಸಿಲ್ಲ. ಹಿಂದಿನ ಉದಾಹರಣದಲ್ಲಿ ನಿಷೇಧವನ್ನು ಶಬ್ದದಿಂದಲೇ ತಿಳಿಸಿದೆ.

## ೫೪. ವಿಕಲ್ಪಾಲಂಕಾರ

ವಿರೋಧೇ ತುಲ್ಯಬಲಯೋರ್ವಿಕಲ್ಪಾಲಂಕೃತಿರ್ಮತಾ ।
ಸದ್ಯಃ ಶಿರಾಂಸಿ ಚಾಪಾನ್ವಾ ನಮಯಂತು ಮಹೀಭುಜಃ ॥೧೧೩॥

ಅತ್ರ ಸಂಧಿವಿಗ್ರಹಪ್ರಮಾಣಪ್ರಾಪ್ತಯೋಃ ಶಿರಶ್ಚಾಪನಮನಯೋರ್ಯುಗಪದುಪಸ್ಥಿತಯೋಃ ಯುಗಪತ್ಕರ್ತುಮಶಕ್ಯಯೋಃ ವಿಕಲ್ಪಃ. ಯಥಾ ವಾ—

ಪತತ್ವವಿರತಂ ವಾರಿ ನೃತ್ಯಂತಿ ಚ ಕಲಾಪಿನಃ ।
ಅದ್ಯ ಕಾಂತಃ ಕೃತಾಂತೋ ವಾ ದುಃಖಸ್ಯಾಂತಂ ಕರಿಷ್ಯತಿ ॥

ಪ್ರಿಯಸಮಾಗಮಶ್ಚೇನ್ನ ಮರಣಮಾಶಂಸನೀಯಂಮರಣೇ ತು ನ ಪ್ರಿಯಸಮಾಗಮಸಂಭವ ಇತಿ ತಯೋರಾಶಂಸಾಯಾಂ ವಿಕಲ್ಪಃ.

ರಾಜರು ಶಿರಸ್ಸುಗಳನ್ನಾಗಲೀ ಧನುಸ್ಸುಗಳನ್ನಾಗಲಿ ಬೇಗನೆ ಬಾಗಿಸಲಿ." ಇಲ್ಲಿ ಸಂಧಿಯನ್ನಾಗಲೀ ಯುದ್ಧವನ್ನಾಗಲೀ ಮಾಡಲೇಬೇಕೆಂದು ತಿಳಿಸುವ ಪ್ರಮಾಣದಿಂದ ಶಿರಸ್ಸು ಮತ್ತು ಧನಸ್ಸುಗಳನ್ನು ಬಗ್ಗಿಸಬೇಕೆಂಬ ಈ ಎರಡು ಮಾರ್ಗಗಳೂ ಒಂದೇ ಕಾಲದಲ್ಲಿ ಸಂಭವಿಸಿವೆ. ಇವೆರಡನ್ನೂ ಒಂದೇ ಕಾಲದಲ್ಲಿ ಆಚರಿಸಲು ಅಸಾಧ್ಯವಾದ್ದರಿಂದ ಸಂಧಿಯನ್ನು ಮಾಡಬೇಕೇ ಅಥವಾ ಯುದ್ಧವನ್ನಾಚರಿಸಬೇಕೇ ? ಎಂದು ವಿಕಲ್ಪಗಳು ಸಂಭವಿಸುತ್ತವೆ. ಶತ್ರುಗಳು ಸೋಲನ್ನು ಒಪ್ಪಿಕೊಂಡು ಸಂಧಿಗೆ ಬರಲಿ ; ಇಲ್ಲವೇ ಮುಂದಕ್ಕೆ ಸಿದ್ಧವಾಗಲಿ, ಹೀಗೆ ಎರಡು ವಿರುದ್ಧ ಪಕ್ಷಗಳನ್ನು ಅವರೆದುರಿಗೆ ಇಲ್ಲಿ ಇಡಲಾಗಿದೆ. ಇದರಲ್ಲೂ ಒಂದು ಬಗೆಯ ಚಮತ್ಕಾರ ವಿರುವುದರಿಂದ ಇದು ವಿಕಲ್ಪವೆನಿಸಿದೆ. "ನಿರಂತರವೂ ನೀರು ಸುರಿಯುತ್ತಿದೆ. ನವಿಲುಗಳು ಕುಣಿಯುತ್ತಲಿವೆ. ಈಗ ಪ್ರಿಯನಾಗಲೀ ಯಮನಾಗಲೀ ಬಂದು ನಮ್ಮ ದುಃಖವನ್ನು ಕೊನೆಗಾಣಿಸುವ ಪು." ಇಲ್ಲಿ ಪ್ರಿಯನ ಸಮಾಗಮವಾಗುವುದಾದರೆ ಮರಣವನ್ನು ಊಹಿಸಬೇಕಾಗಿಲ್ಲ ; ಮರಣವಾಗುವುದಾದರೆ ಪ್ರಿಯನ ಸಮಾಗಮವು ಸಂಭವಿಸುವಂತಿಲ್ಲ. ಹೀಗೆ ಇವೆರಡರಲ್ಲಿ ಒಂದು ನಡೆಯಬೇಕೆಂದು ಊಹಿಸುವುದರಿಂದ ಇದು ವಿಕಲ್ಪಾಲಂಕಾರವಾಗುತ್ತದೆ.

## ೫೫. ಸಮುಚ್ಚಯಾಲಂಕಾರ

ಬಹೂನಾಂ ಯುಗಪದ್ಭಾವಭಾಜಾಂ ಗುಂಫಃ ಸಮುಚ್ಚಯಃ ।
ನಶ್ಯಂತಿ ಪಶ್ಚಾತ್ಪಶ್ಯಂತಿ ತ್ರಸ್ಯಂತಿ ಚ ಭವದ್ದ್ವಿಷಃ ॥೧೧೪॥

ಅವಿರೋಧೇನ ಸಂಭಾವಿತಯೌಗಪದ್ಯಾನಾಂ ನಾಶಾದೀನಾಂ ಗುಂಫನಂ ಸಮುಚ್ಚಯಃ.

ಬಿಭ್ರಾಣಾ ಹೃದಯೇ ತ್ವಯಾ ವಿನಿಹಿತಂ ಪ್ರೇಮಾಭಿಧಾನಂ ನವಂ
ಶಲ್ಯಂ ಯದ್ವಿದಧಾತಿ ಸಾ ವಿಧುರಿತಾ ಸಾಧೋ ತದಾಕರ್ಣ್ಯತಾಮ್ ।
ಶೇತೇ ಶುಷ್ಯತಿ ತಾಮ್ಯತಿ ಪ್ರಲಪತಿ ಪ್ರಮ್ಲಾಯತಿ ಪ್ರೇಂಖತಿ
ಭ್ರಾಮ್ಯತ್ಯುಲ್ಲಠತಿ ಪ್ರಣಶ್ಯತಿ ಗಲತ್ಯುನ್ಮೂರ್ಛತಿ ತ್ರುಟ್ಯತಿ ॥

ಅತ್ರ ಕಾಸಾಂಚಿತ್ಕ್ರಿಯಾಣಾಂ ಕಿಂಚಿತ್ಕಾಲಭೇದಸಂಭವೇಽಪಿ ಶತಪತ್ರಪತ್ರಶತಭೇದನ್ಯಾಯೇನ ಯೌಗಪದ್ಯಂ ವಿರಹಾತಿಶಯದ್ಯೋತನಾಯ ವಿವಕ್ಷಿತಮಿತಿ ಲಕ್ಷಣಾನುಗತಿಃ.

ಅಹಂಪ್ರಥಮಿಕಾಭಾಜಾಂ ಏಕಕಾರ್ಯಾನ್ವಯೇಽಪಿ ಸಃ ।
ಕುಲಂ ರೂಪಂ ವಯೋ ವಿದ್ಯಾ ಧನಂ ಚ ಮದಯಂತ್ಯಮುಮ್ ॥

ಯತ್ರೈಕಃ ಕಾರ್ಯಸಿದ್ಧಿಹೇತುತ್ವೇನ ಪ್ರಕ್ರಾಂತಸ್ತತ್ರಾನ್ಯೇಽಪಿ ಯದ್ಯಹಮಹಮಿಕಯಾ ಖಲೇಕಪೋತನ್ಯಾಯೇನ ತತ್ಸಿದ್ಧಿಂ ಕುರ್ವಂತಿಸೋಽಪಿ ಸಮುಚ್ಚಯಃ. ಯಥಾ ಮದೇ ಆಭಿಜಾತ್ಯಮೇಕಂ ಸಮಗ್ರಂ ಕಾರಣಂ ತಾದೃಗೇವ ರೂಪಾದಿಕಮಪಿ ಯತ್ಸಾಧನತ್ವೇನ ಅವತರತೀತಿ. ಯಥಾ ವಾ—

ಪ್ರದಾನಂ ಪ್ರಚ್ಛನ್ನಂ ಗೃಹಮುಪಗತೇ ಸಂಭ್ರಮವಿಧಿಃ
ನಿರುತ್ಸೇಕೋ ಲಕ್ಷ್ಮ್ಯಾಮನಭಿಭವಗಂಧಾಃ ಪರಕಥಾಃ ।
ಪ್ರಿಯಂ ಕೃತ್ವಾ ಮೌನಂ ಸದಸಿ ಕಥನಂ ಚಾಪ್ಯುಪಕೃತೇಃ
ಶ್ರುತೇಽತ್ಯಂತಾಸಕ್ತಿಃ ಪುರುಷಮಭಿಜಾತಂ ಕಥಯತಿ ॥

ಏಕಕಾಲದಲ್ಲಿ ವಿರೋಧವಿಲ್ಲದೆ ಸಂಭವಿಸಬಹುದಾದ ಅನೇಕ ಅಂಶಗಳನ್ನು ಒಂದೆಡೆಗೆ ಕೂಡಿಸಿದ್ದಾಗಿ ವರ್ಣಿಸುವುದೇ ಸಮುಚ್ಚಯವೆನಿಸುವುದು. "ನಿನ್ನ ಶತ್ರುಗಳಲ್ಲಿ ಕೆಲವರು ನಾಶಗೊಳ್ಳುವವರು. ಮತ್ತೆ ಕೆಲವರು ಹಿಂದೆ ನಿಂತು ನೋಡುವವರು. ಬೇರೆ ಕೆಲವರು ರಾಜ್ಯಭ್ರಷ್ಟರಾದವರು.'' ಹೀಗೆ ಒಂದೇ ಕಾಲದಲ್ಲಿ ನಾಶ, ದರ್ಶನ, ಭ್ರಂಶ ಇವು ಮೂರೂ ವಿರೋಧವಿಲ್ಲದೆ ಒಂದೆಡೆಗೆ ಸೇರಿವೆ ಎಂದು ಹೇಳಿದ್ದರಿಂದ ಇದು ಸಮುಚ್ಚಯವೆನಿಸಿದೆ. ನಾಯಕನಿಗೆ ದೂತಿ ಹೇಳುವ ಮಾತು ಹೀಗಿದೆ : "ಎಲೈ ಸಾಧುವೆ, ನೀನು ಹೃದಯದಲ್ಲಿ ನೆಟ್ಟಿರುವ ಪ್ರೇಮವೆಂಬ ಹೊಸದೊಂದು ಬಾಣದ ತುದಿಯನ್ನು ಧರಿಸಿ ವಿರಹದಿಂದ ನರಳುತ್ತಿರುವ ಆ ನಾಯಿಕೆ ಏನೇನು ಮಾಡುತ್ತಿರುವಳೆಂಬುದನ್ನು ಹೇಳುವೆನು, ಕೇಳು; ಆಕೆ ಒಮ್ಮೆ ಮಲಗುತ್ತಾಳೆ, ಒಮ್ಮೆ ಒಣಗುತ್ತಾಳೆ, ಒಮ್ಮೆ ಬಾಡಿಹೋಗುತ್ತಾಳೆ ಒಮ್ಮೆ ಗೋಳಾಡುತ್ತಾಳೆ, ಒಮ್ಮೆ ಚಲಿಸುತ್ತಾಳೆ, ಒಮ್ಮೆ ಹೆಚ್ಚು ಗ್ಲಾನಿ ಪಡುತ್ತಾಳೆ. ಒಮ್ಮೆ ಅಳ್ಳಾಡುತ್ತಾಳೆ, ಒಮ್ಮೆ ಅಲೆಯುತ್ತಾಳೆ, ಒಮ್ಮೆ ಹೊರಳಾಡುತ್ತಾಳೆ, ನಾಶಗೊಳ್ಳುತ್ತಾಳೆ, ಒಮ್ಮೆ ಕುಸಿದು ಹೋಗುತ್ತಾಳೆ, ಒಮ್ಮೆ ಮೂರ್ಛೆಗೊಳ್ಳುತ್ತಾಳೆ. ಹೆಚ್ಚು ದುಃಖದಿಂದ ಕ್ಷಯಿಸುತ್ತಾಳೆ.'' ಹೀಗೆ ಇಲ್ಲಿ ನಡೆದಿರುವ ಕ್ರಿಯೆಗಳಲ್ಲಿ ಕೆಲವಕ್ಕೆ ಕೊಂಚ ಹೊತ್ತಿನ ವ್ಯತ್ಯಾಸವಿದ್ದರೂ ಬಹು ಸೂಕ್ಷ್ಮವಾದ್ದರಿಂದ ಅದನ್ನು ಗಮನಿಸಲಾಗುವುದಿಲ್ಲ. ಕಮಲದ ನೂರು ದಳಗಳನ್ನು ಜೋಡಿಸಿಕೊಂಡು ಸೂಜಿಯಿಂದ ಚುಚ್ಚಿದರೆ ಬಹಳ ಬೇಗನೆ ಸೂಜಿಯು ಒಳಗೆ ಹೋಗುತ್ತದೆ. ಹಾಗೆ ಚುಚ್ಚಿದಾಗ ಒಂದು ದಳದಿಂದ ಮತ್ತೊಂದು ದಳಕ್ಕೆ ಇರುವ ಅಂತರವನ್ನು ತಿಳಿಯಲಾಗದಿರುವಂತೆ ಇಲ್ಲಿ ನಡೆದಿರುವ ಕ್ರಿಯೆಗಳಲ್ಲಿ ಕಾಲವ್ಯತ್ಯಾಸವನ್ನು ಕಂಡುಹಿಡಿಯಲಾಗುವುದಿಲ್ಲ. ಆಕೆಗೆ ಹೆಚ್ಚು ವಿರಹವ್ಯಥೆಯುಂಟಾಗಿತ್ತೆಂಬುದನ್ನು ತಿಳಿಸಲು ಹೀಗೆ ಎಲ್ಲವನ್ನೂ ಒಟ್ಟಿಗೆ ಸೇರಿಸಿರುವುದರಿಂದ ಲಕ್ಷಣವು ಹೊಂದಿಕೆಯಾಗುತ್ತದೆ.

ನಾನು ಮುಂದು ತಾನು ಮುಂದು ಎಂದು ಸಂಭವಿಸುವ ವಸ್ತುಗಳಿಗೆ ಒಂದೇ

ಕಾರ್ಯದಲ್ಲಿ ಅನ್ವಯವು ಬರುವುದಾದರೆ ಅದೂ ಸಮುಚ್ಚಯವೇ ಆಗುವುದು. ಕುಲ, ರೂಪ, ವಯಸ್ಸು, ವಿದ್ಯೆ, ಧನ ಇವೆಲ್ಲವೂ ಇವನನ್ನು ಮದಗೊಳಿಸುತ್ತವೆ.

ಒಂದು ಕಾರ್ಯವು ಸಿದ್ಧಿಸಲು ಪ್ರಸಿದ್ಧವಾದ ಕಾರಣವು ಎಲ್ಲ ಸಂಭವಿಸುವುದೋ ಅಲ್ಲಿಯೇ ನಾನು ಮುಂದು ತಾನು ಮುಂದೆಂದು ಅನೇಕ ಕಾರಣಗಳು ಖಲೇಕಪೋತನ್ಯಾಯದಿಂದ ಸಂಭವಿಸಿ ಆ ಕಾರ್ಯವನ್ನು ಸಾಧಿಸುವುದೇ ಸಮುಚ್ಚಯವೆನಿಸುತ್ತದೆ. ಒಬ್ಬನನ್ನು ಮದಗೊಳಿಸಲು ಸತ್ಕುಲ ಪ್ರಸೂತಿ ಎಂಬ ಕಾರಣವೇ ಸಾಕು; ಅದರ ಜೊತೆಗೆ ರೂಪ, ವಯಸ್ಸು, ವಿದ್ಯೆ, ಧನ ಇವೂ ಮೇಲೆಮೇಲೆ ಒದಗುತ್ತವೆ. ಇದಕ್ಕೆ ಬೇರೊಂದು ಉದಾಹರಣ ಹೀಗಿದೆ: "ರಹಸ್ಯವಾಗಿ ದಾನ ಮಾಡುವುದು, ಮನೆಗೆ ಬಂದ ಅತಿಥಿಗಳನ್ನು ಸಡಗರದಿಂದ ಸತ್ಕರಿಸುವುದು, ಸಂಪತ್ತಿದ್ದರೂ ಸಹ ಗರ್ವಪಡದಿರುವುದು, ತಿರಸ್ಕಾರದ ವಾಸನೆಯೇ ಇಲ್ಲದಂತೆ ಇತರರ ಸಮಾಚಾರವನ್ನು ತಿಳಿಸುವುದು, ಇತರರಿಗೆ ಒಳ್ಳೆಯದನ್ನು ಮಾಡಿ ಬಾಯಿಂದ ಹೇಳದಿರುವುದು. ತಮಗೆ ಬೇರೆಯವರು ಮಾಡಿದ ಉಪಕಾರವನ್ನು ಸಭೆಯಲ್ಲಿ ಪ್ರಶಂಸಿಸುವುದು, ಶಾಸ್ತ್ರವನ್ನು ಉತ್ಸಾಹದಿಂದ ಕೇಳಿ ತಿಳಿಯುವುದು ಇವಿಷ್ಟು ಪುರುಷನನ್ನು ಸತ್ಕುಲಪ್ರಸೂತನೆಂದು ತಿಳಿಸುತ್ತವೆ." ಇಲ್ಲಿ ಸತ್ಕುಲ ಪ್ರಸೂತಿಗೆ ಅನೇಕ ಕಾರಣಗಳು ಬಂದೊದಗುತ್ತವೆ ಎಂದು ತಿಳಿಸಿದೆ. ಕಣದಲ್ಲಿ ಒಂದು ಪಾರಿವಾಳವು ಧಾನ್ಯವನ್ನು ತಿನ್ನಲು ಬಂದರೆ ಬೇರೆ ಪಕ್ಷಿಗಳೂ ಅದರ ಹಿಂದೆಯೇ ಬರುತ್ತವೆ, ಹಾಗೆ ಒಂದು ಕಾರ್ಯಸಾಧನೆಗೆ ಅನೇಕ ಕಾರಣಗಳು ಒಂದರ ಮೇಲೆ ಒಂದರಂತೆ ಸಂಭವಿಸುತ್ತವೆಯಾದ್ದರಿಂದ ಇದು ಸಮುಚ್ಚಯಾಲಂಕಾರವೆನಿಸಿದೆ.

## ೫೬. ಕಾರಕದೀಪಕಾಲಂಕಾರ

ಕ್ರಮಿಕೈಕಗತಾನಾಂ ತು ಗುಂಫಃ ಕಾರಕದೀಪಕಮ್ ।
ಗಚ್ಛ ತ್ಯಾಗಚ್ಛತಿ ಪುನಃ ಪಾಂಥಃ ಪಶ್ಯತಿ ಪೃಚ್ಛತಿ॥

ನಿದ್ರಾತಿ ಸ್ನಾತಿ ಭುಂಕ್ತೇ ಚಲತಿ ಕಚಭರಂ ಶೋಷಯತ್ಯಂತರಾಸ್ತೆ
ದೀವ್ಯತ್ಯಕ್ಷೈರ್ನ ಚಾಯಂ ಗದಿತುಮುಪಸರೋ ಭೂಯ ಆಯಾಹಿ ಯಾಹಿ ।
ಇತ್ಯುದ್ದಂಡೈಃಪ್ರಭೂಣಾಮಸಕೃದಧಿಕೃತೈರ್ವಾರಿತಾನ್ದ್ವಾರಿ ದೀನಾನ್
ಅಸ್ಮಾನ್ಪಶ್ಯಾಬ್ಧಿಕನ್ಯೇ ಸರಸಿರುಹರುಚಾಮುತ್ತರಂಗೈರಪಾಂಗೈಃ ॥

ಆದ್ಯೋದಾಹರಣೇ ಶ್ರುತಸ್ಯ ಪಾಂಥಸ್ಯ ಕರ್ತೃಕಾರಕಸ್ಯೈಕಸ್ಯ ಗಮನಾದಿಷ್ವನ್ವಯಃ ದ್ವಿತೀಯೇ ತ್ವಧ್ಯಾಹೃತಸ್ಯ ಪ್ರಭುಕರ್ತೃಕಾರಕಸ್ಯ ನಿದ್ರಾದಿಷ್ವನ್ವಯಃ

ಇತ್ಯೇಕಸ್ಯಾನೇಕವಾಕ್ಯಾನ್ವಯೇನ ದೀಪಕಚ್ಛಾಯಾಪತ್ತ್ಯಾ ಕಾರಕದೀಪಂ ಪ್ರಥಮ ಸಮುಚ್ಚಯಪ್ರತಿದ್ವಂದ್ವೀದಮ್ ॥

ಒಂದೇ ಕಾರಕಕ್ಕೆ ಸಂಬಂಧಿಸಿದಂತೆ ಅನೇಕ ಗುಣ, ಕ್ರಿಯೆ ಮೊದಲಾದ ಧರ್ಮಗಳನ್ನು ಒಟ್ಟುಗೂಡಿಸಿ ತಿಳಿಸುವುದೇ ಕಾರಕದೀಪಕವೆನಿಸುತ್ತದೆ. "ಪಥಿಕನು ಹೋಗುತ್ತಾನೆ, ಬರುತ್ತಾನೆ, ನೋಡುತ್ತಾನೆ ಮತ್ತು ಕೇಳುತ್ತಾನೆ'' ಇಲ್ಲಿ ಪಥಿಕನೆಂಬುವನೊಬ್ಬನೇ ಅನೇಕ ಬಗೆಯ ಕ್ರಿಯೆಗಳಿಗೆ ಕರ್ತನೆನಿಸಿರುವುದಾಗಿ ತಿಳಿಸಿದೆ. "ಪ್ರಭು ಮಲಗಿದ್ದಾನೆ, ಸ್ನಾನಮಾಡುತ್ತಿದ್ದಾನೆ, ಊಟ ಮಾಡುತ್ತಿದ್ದಾನೆ, ಕೂದಲು ಗಳನ್ನು ಒಣಗಸುತ್ತಿದ್ದಾನೆ, ಒಳಗೆ ಇದ್ದು ಪಗಡೆಯಾಡುತ್ತಿದ್ದಾನೆ. ಈಗ ಅವನಿಗೆ ತಿಳಿಸಲಿಕ್ಕೆ ಸಮಯವಿಲ್ಲ. ಈಗ ಹೋಗಿ ಮತ್ತೆ ಬಾ'' ಹೀಗೆಂದು ಹೇಳುತ್ತ ಕೈಯಲ್ಲಿ ದಂಡವನ್ನು ಹಿಡಿದಿರುವ ಪ್ರಭುವಿನ ಸೇವಕರು ಬಾಗಿಲಲ್ಲಿ ನಮ್ಮನ್ನು ತಡೆಯು ತ್ತಿರಲು ಕಮಲದ ಕಾಂತಿಗೆ ಸದೃಶವಾದ ನಿನ್ನ ಓರೆ ನೋಟಗಳಿಂದ ನಮ್ಮನ್ನ ಕೊಂಚ ನೋಡು, ಲಕ್ಷ್ಮೀದೇವಿ !'' ಇಲ್ಲಿ ಪ್ರಭು ಒಬ್ಬನೇ ನಿದ್ರೆ ಮೊದಲಾದ ಅನೇಕ ಕಾರ್ಯಗಳಲ್ಲಿ ತೊಡಗಿರುವನೆಂದು ಹೇಳಲಾಗಿದೆ. ಕರ್ತೃಕಾರಕನೆನಿಸಿದ ಒಬ್ಬ ವ್ಯಕ್ತಿಗೆ ಅನೇಕವಾಕ್ಯಗಳಲ್ಲಿ ಅನ್ವಯವು ಬಂದದ್ದರಿಂದ ದೀಪಕದ ಛಾಯೆ ಇರುವ ಪ್ರಯುಕ್ತ ಇದು ಕಾರಕದೀಪಕವೆನಿಸಿದೆ. ಸಮುಚ್ಚಯದ ಮೊದಲನೆಯ ಬಗೆಗೆ ಇದು ಎದುರಾಳಿ ಎನಿಸಿದೆ.

## ೫೭. ಸಮಾಧ್ಯಲಂಕಾರ

ಸಮಾಧಿಃ ಕಾರ್ಯಸೌಕರ್ಯಂ ಕಾರಣಾಂತರಸನ್ನಿಧೇಃ ।
ಉತ್ಕಂಠಿತಾ ಚ ತರುಣೀ ಜಗಾಮಾಸ್ತಂ ಚ ಭಾನುಮಾನ್ ॥

ಯಥಾ ವಾ—

ಮಾನಮಸ್ಯಾ ನಿರಾಕರ್ತುಂ ಪಾದಯೋರ್ಮೇ ಪತಿಷ್ಯತಃ ।
ಉಪಕಾರಾಯ ದಿಷ್ಟ್ಯೈತದುದೀರ್ಣಂ ಘನಗರ್ಜಿತಮ್ ॥

ಕೇನಚಿದಾರಿಪ್ಸಿತಸ್ಯ ಕಾರ್ಯಸ್ಯಕಾರಣಾಂತರಸನ್ನಿಧಾನಾದ್ಯತ್ಸೌಕರ್ಯಂ ತಸ್ಯ ಮ್ಯಗಾಧಾನಾತ್ಸಮಾಧಿಃ. ದ್ವಿತೀಯಸಮುಚ್ಚಯಪ್ರತಿದ್ವಂದ್ವೀ ಅಯಂ ಸಮಾಧಿ ತತ್ರ ಬಹೂನಾಂ ಪ್ರತ್ಯೇಕಂ ಸಮರ್ಥಾನಾಂ ಖಲೇಕಪೋತನ್ಯಾಯೇನ ಯುಗಪ ತ್ಕಾರ್ಯಸಾಧನತ್ವೇನ ಅವತಾರಃ. ಅತ್ರ ತ್ವೇಕೇನ ಕಾರ್ಯೇ ಸಮಾರಿಪ್ಸಿತೇಽನ್ಯಸ್ಯ ಕಾಕತಾಲೀಯನ್ಯಾಯೇನ ಆಪತಿತಸ್ಯ ತತ್ಸೌಕರ್ಯಾಧಾಯಕತ್ವಮಾತ್ರಮ್. ಅತ್ರೋ ದಾಹರಣಂ ಉತ್ಕಂಠಿತೇತಿ. ಉತ್ಕಂಠ್ಯೈವ ಪ್ರಿಯಾಭಿಸರಣೇ ಪುಷ್ಕಲಂ ಕಾರಣಂ

ಸಾಂಧಕಾರಾಗಮಮಪೇಕ್ಷತೇ. "ಅತ್ಯಾರೂಢೋ ಹಿ ನಾರೀಣಾಮಕಾಲಜ್ಞೋ ಮನೋಭವಃ" ಇತಿ ನ್ಯಾಯಾತ್ ದೈವಾದಾಪತತಾ ತ್ವಂಧಕಾರೇಣ ತತ್ಸೌಕರ್ಯ ಮಾತ್ರಂ ಕೃತಮಿತಿ. ಏವಂ ದ್ವಿತೀಯೋದಾಹರಣೇsಪಿ ಯೋಜ್ಯಮ್.

ಬೇರೊಂದು ಕಾರಣವು ಸನ್ನಿಹಿತವಾಗಿರುವ ಪ್ರಯುಕ್ತ ಕಾರ್ಯವು ಸುಗಮವಾಗಿ ನಡೆಯಿತೆಂದು ತಿಳಿಸುವುದೇ ಸಮಾಧಿ ಎನಿಸುವುದು "ಸ್ತ್ರೀಯರಿಗೆ ಅತ್ಯುತ್ಕಟವಾದ ಬಯಕೆಯುಂಟಾಗಿದೆ. ಸೂರ್ಯನೂ ಸಹ ಮುಳುಗಿದನು" ಇಲ್ಲಿ ಸ್ತ್ರೀಯರ ಉತ್ಕಂಠೆಗೆ ಸೂರ್ಯನು ಅಸ್ತನಾದದ್ದು ಅನುಕೂಲವಾಗಿ ಪರಿಣಮಿಸಿತು. "ನಾಯಿಕೆಯ ಪ್ರಣಯ ಕೋಪವನ್ನು ಪರಿಹರಿಸಲು ಪಾದಗಳಲ್ಲಿ ಬೀಳಲಿಚ್ಛಿಸುವವನಿಗೆ ಉಪಕಾರಮಾಡಲಿಕ್ಕಾಗಿ ಈ ಮೇಘವು ಗುಡುಗಿತು." ಇದರಿಂದ ಅವಳ ಪ್ರಣಯ ಕೋಪವು ಶಮನವಾಗಲು ಅನುಕೂಲವಾಯಿತು. ಒಬ್ಬನು ಆರಂಭಿಸಲಿಚ್ಛಿಸಿದ ಕಾರ್ಯಕ್ಕೆ ಬೇರೊಂದು ಕಾರಣವು ಒದಗಿದ್ದರಿಂದ ದೊರಕುವ ಸೌಕರ್ಯವು ಸಮಾಧಿ ಎನಿಸುವುದು. ಹಾಗೆ ಕಾರಣವು ಸಂಭವಿಸುವುದರಿಂದ ಮನಸ್ಸಿಗೆ ಸಮಾಧಾನವು ಆಗುವ ಪ್ರಯುಕ್ತ ಇದನ್ನು ಸಮಾಧಿ ಎಂದು ಕರೆದದ್ದು ಸಾರ್ಥಕವೆನಿಸಿದೆ. ಸಮುಚ್ಚಯದ ಎರಡನೆಯ ಬಗೆಗೆ ಇದು ಎದುರಾಳಿ ಎನಿಸಿದೆ. ಸಮುಚ್ಚಯ ದಲ್ಲಾದರೋ ಒಂದೊಂದೂ ಸಮರ್ಥವೆನಿಸಿದ ಅನೇಕ ಕಾರಣಗಳು ಖಲೇಕಪೋತ ನ್ಯಾಯದಿಂದ ಒಂದು ಕಾರ್ಯವನ್ನು ಸಾಧಿಸಲಿಕ್ಕೆ ಏಕಕಾಲದಲ್ಲಿ ಒಂದೆಡೆಗೆ ಸೇರುತ್ತವೆ. ಇಲ್ಲಿಯಾದರೋ ಯಾವನೋ ಒಬ್ಬನು ಒಂದು ಕಾರ್ಯವನ್ನಾ ರಂಭಿಸಲು ಮತ್ತೊಂದು ಅಂಶವು ಕಾಕತಾಳೀಯನ್ಯಾಯದಿಂದ ಅನಿರೀಕ್ಷಿತವಾಗಿ ಅವನ ಜೊತೆಗೆ ಒದಗಿ ಆ ಕೆಲಸವನ್ನು ಮುಗಿಸಲು ಸೌಕರ್ಯವನ್ನು ಕಲ್ಪಿಸುತ್ತದೆ. "ಪ್ರಿಯನನ್ನು ಅನುಸರಿಸಿಕೊಂಡು ಪೋಗಲು ಸ್ತ್ರೀಯರಿಗೆ ಉತ್ಕಂಠೆಯೇ ಅನು ಕೂಲವಾದ ಕಾರಣವೆನಿಸಿದೆ" ಎಂದು ಲೋಕದಲ್ಲಿ ನ್ಯಾಯವು ಹರಡಿದೆ. ಇದು ಸ್ತ್ರೀಗೆ ಸಹಜವಾಗಿರುವುದರಿಂದ ಸೂರ್ಯನು ಮುಳುಗುವುದನ್ನೂ, ಕತ್ತಲೆ ಯಾಗುವುದನ್ನೂ ಇದು ನಿರೀಕ್ಷಿಸುವುದೇ ಇಲ್ಲ. ಆದರೂ ಸೂರ್ಯನು ಮುಳುಗಿದುದು ಇಲ್ಲಿ ಅನುಕೂಲವಾಯಿತು. ಸ್ತ್ರೀಯರಿಗೆ ಅಕಾಲದಲ್ಲಿ ಹುಟ್ಟುವ ಕಾಮವಿಕಾರವು ಹೊರಗಿನ ಸನ್ನಿವೇಶವನ್ನು ನಿರೀಕ್ಷಿಸುವುದಿಲ್ಲವೆಂಬುದು ಸಹಜವಾದರೂ ಆಕಸ್ಮಿಕವಾಗಿ ಬಂದ ಕತ್ತಲೆಯಿಂದ ಅವಳಿಗೆ ಸೌಕರ್ಯವುಂಟಾಯಿತೆಂದು ಇಲ್ಲಿ ಭಾವಿಸಲಾಗಿದೆ. ಇದನ್ನು ಸಮುಚ್ಚಯದಲ್ಲಿ ಕಾಣಲಾರೆವು. ಇದೇ ಸಮಾಧ್ಯಲಂಕಾರದ ವೈಶಿಷ್ಟ್ಯ. ಹೀಗೆಯೇ ಸಮಾಧಿಯ ಎರಡನೆಯ ಉದಾಹರಣದಲ್ಲೂ ತಿಳಿಯುವುದು.

## ೮೫ ಪ್ರತ್ಯನೀಕಾಲಂಕಾರ

ಪ್ರತ್ಯನೀಕಂ ಬಲವತಃ ಪಕ್ಷೆ ಪರಾಕ್ರಮಃ ।
ಜೈತನೇತ್ರಾನುಗೌ ಕರ್ಣೌ ಉತ್ಪಲಾಭ್ಯಾಮಧಃ ಕೃತೌ॥೧೧೮॥
ಮಮ ರೂಪಕೀರ್ತಿಮಹರದ್ಭುವಿ ಯಸ್ತದನು ಪ್ರವಿಷ್ಟಹೃದಯೇಯಮಿತಿ
ತ್ವಯಿಮತ್ಸರಾದವ ನಿರಸ್ತದಯಃ ಸುತರಾಂ ಕ್ಷಿಣೋತಿ ಖಲು ತಾಂ ಮದನಃ॥

ಏವಂ ಬಲವತಿ ಪ್ರತಿಪಕ್ಷೇ ಪತಿಕರ್ತುಮಶಕ್ತಸ್ಯ ತದೀಯಬಾಧನಂ ಪ್ರತ್ಯನೀಕ ಮಿತಿ ಸ್ಥಿತೇ ಸಾಕ್ಷಾತ್ಪ್ರತಿಪಕ್ಷೇ ಪರಾಕ್ರಮಃ ಪ್ರತ್ಯನೀಕಮಿತಿ ಕೈಮುತಿಕನ್ಯಾಯೇನ ಫಲತಿ. ಯಥಾ—

ಮಧುವ್ರತೌಘಃ ಕುಪಿತ ಸ್ವಕೀಯಮಧುಪ್ರಪಾಪದ್ಮನಿಮೀಲನೇನ ।
ಬಿಂಬಂಸಮಾಕ್ರಮ್ಯ ಬಲಾತ್ಸುಧಾಂಶೋಃ ಕಳಂಕಮಧ್ಯೇ ಧ್ರುವಮಾತನೋತಿ॥

ಬಲವಂತನಾದ ಶತ್ರುವಿನ ಕಡೆಯವರಲ್ಲಿ ಪರಾಕ್ರಮವನ್ನು ತೋರಿಸುವದು ಪ್ರತ್ಯನೀಕವೆನಿಸುತ್ತದೆ. ಶತ್ರುವನ್ನು ನಿಗ್ರಹಿಸಲಿಕ್ಕಾಗದಿದ್ದರೂ ಆವನ ಪಕ್ಷದವ ರಲ್ಲಾದರೂ ಪ್ರರಾಕ್ರಮವನ್ನು ತೋರಿಸುವುದರಲ್ಲೂ, ಒಂದು ಬಗೆಯ ಚಮತ್ಕಾರ ವಿರುವುದರಿಂದ ಆ ಚಮತ್ಕಾರವು ಪ್ರತ್ಯನೀಕಾಲಂಕಾರವೆನಿಸುವುದು. "ಜಯಶೀಲ ವಾದ ಕಣ್ಣುಗಳವರೆಗೂ ವ್ಯಾಪಿಸಿರುವ ಕಿವಿಗಳನ್ನು ಕನ್ನೈದಿಲೆಗಳು ತಿರಸ್ಕರಿಸಿದವು." ಕನ್ನೈದಿಲೆಗಳಿಗೆ ಬಲಿಷ್ಠವಾದ ನೇತ್ರಗಳನ್ನು ಜಯಿಸಲಿಕ್ಕಾಗದ ಪ್ರಯುಕ್ತ ನೇತ್ರಕ್ಕೆ ಸದೃಶವಾದ ಕಿವಿಗಳನ್ನು ಅವು ಜಯಿಸಿದವೆಂದು ಇಲ್ಲಿ ತಿಳಿಸಿದೆ. ಇದಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಭೂಮಿಯಲ್ಲಿ ಯಾವನು ತನ್ನ ಸೌಂದರ್ಯದ ವ್ಯಾಪ್ತಿಯನ್ನು ಅಪಹರಿಸಿದನೋ ಅಂತಹವನ ಹೃದಯವನ್ನು ಈಕೆ ಪ್ರವೇಶಿಸಿರುವ ಳೆಂದು ಭಾವಿಸಿ ದ್ವೇಷದಿಂದಲೋ ಏನೋ ಎಂಬಂತೆ ದಯೆಯಿಲ್ಲದೆ ಮನ್ಮಥನು ಆಕೆಯನ್ನು ಕ್ಷೀಣಗೊಳಿಸುತ್ತಿರುವನು." ಇಲ್ಲಿ ಮನ್ಮಥನು ತನ್ನ ರೂಪಲಾವಣ್ಯ ವನ್ನು ಮೀರಿಸಿದ ನಾಯಕನನ್ನು ಪೀಡಿಸಲು ಅಸಮರ್ಥನಾದ್ದರಿಂದ ಆವನ ಹೃದಯ ದಲ್ಲಿ ಪ್ರವೇಶಿಸಿರುವ ನಾಯಿಕೆಯನ್ನು ಪೀಡಿಸುತ್ತಿರುವನೆಂದು ತಿಳಿಸಲಾಗಿದೆ. ಹೀಗೆ ಬಲವತ್ತರವಾದ ಶತ್ರುವಿನ ಕಡೆಯವರಿಗೆ ತೊಂದರೆಯನ್ನು ಕೊಡಲು ಶಕ್ತಿಯಿಲ್ಲ ದವನು ಅಂತಹ ಶತ್ರುವಿನ ಕಡೆಯಲ್ಲಿ ಯಾರನ್ನಾದರೂ ಬಾಧಿಸುವುದೇ ಪ್ರತ್ಯನೀಕಾ ಲಂಕಾರವೆನಿಸುವುದಾದರೆ ನೇರವಾಗಿ ಶತ್ರುವಿನಲ್ಲಿಯೇ ಬಲಪ್ರಯೋಗವನ್ನು ಮಾಡು ವುದೂ ಸಹ ಪ್ರತ್ಯನೀಕವೆನಿಸುವುದೆಂಬ ಬಗ್ಗೆ ಹೇಳುವುದೇನಿದೆ ? ಅದು ಸ್ವತಃಸಿದ್ಧ ವಾಗುತ್ತದೆ. ಅದನ್ನು ಬಾಯಿಂದ ಹೇಳಬೇಕಾಗಿಯೇ ಇಲ್ಲ. ಈ ಬಗ್ಗೆ ಉದಾ ಹರಣವನ್ನು ಕೊಡುತಾನೆ, ಮಧುಪಾನಕ್ಕೆ ಅಂವಟ್ಟಿಗೆಯುತಿದ್ದ ಕಮಲವನ್ನು

ಚಂದ್ರನಂ ಮುಚ್ಚಿದ ಪ್ರಯುಕ್ತ ಅವನ ಮೇಲೆ ಕೋಪಿಸಿಕೊಂಡ ದುಂಬಿಗಳ ಗುಂಪು ಚಂದ್ರಮಂಡಲವನ್ನು ಹಠಾತ್ತಾಗಿ ಸೆಳೆದು ಅದರ ಮಧ್ಯಭಾಗವನ್ನು ಆಕ್ರಮಿಸಿ ಅಲ್ಲಿನ ಕಳಂಕನನ್ನು ನಿಶ್ಚಯಗೊಳಿಸುತ್ತವೆ" ಇಲ್ಲಿ ಚಂದ್ರನು ದುಂಬಿಗಳಿಗೆ ನೇರವಾಗಿ ಪ್ರತಿಕಕ್ಷಿ ಎನಿಸಿರುವುದರಿಂದ ಅವನಲ್ಲಿಯೇ ನೇರವಾಗಿ ದುಂಬಿಗಳು ಪ್ರವೇಶಿಸಿ ಕಳಂಕವನ್ನು ತಂದೊಡ್ಡಿದವೆಂದು ವರ್ಣಿಸಲಾಗಿದೆ. ಇಲ್ಲಿ ಶತ್ರುಪಕ್ಷದವರನ್ನು ಆಕ್ರಮಿಸುವ ಬದಲು ಶತ್ರುವನ್ನೇ ನೇರವಾಗಿ ಆಕ್ರಮಿಸಿದ ಅಂಶವು ಸ್ಪಷ್ಟಪಡುತ್ತದೆ.

## ೫೯. ಅರ್ಥಾಪತ್ತ್ಯಲಂಕಾರ

ಕೈಮುತ್ಯೇನಾರ್ಥಸಂಸಿದ್ಧಿಃ ಕಾವ್ಯಾರ್ಥಾಪತ್ತಿರಿಷ್ಯತೇ ।
ಸ ಜಿತಸ್ತ್ವನ್ಮುಖೇನೇಂದುಃ ಕಾ ವಾರ್ತಾ ಸರಸೀರುಹಾಮ್ ॥೧೧೯॥

ಅತ್ರ 'ಸಃ' ಇತ್ಯನೇನ 'ಪದ್ಮಾನಿ ಯೇನ ಜಿತಾನಿ' ಇತಿ ವಿವಕ್ಷಿತಂ. ತಥಾ ಚ ಸೋಽಪಿ ಯೇನ ಜಿತಸ್ತೇನ ಪದ್ಮಾನಿ ಜಿತಾನೀತಿ ಕಿಮು ವಕ್ತವ್ಯಮಿತಿ ದಂಡಾಪೂಪಿಕಾನ್ಯಾಯೇನ ಪದ್ಮರೂಪಸ್ಯಾರ್ಥಸ್ಯ ಸಂಸಿದ್ಧಿಃ ಕಾವ್ಯಾರ್ಥಾಪತ್ತಿಃ. ತಾಂತ್ರಿಕಾಭಿಮತಾರ್ಥಾಪತ್ತಿವ್ಯಾವರ್ತನಾಯ ಕಾವ್ಯೇತಿ ವಿಶೇಷಣಮ್. ಯಥಾ ವಾ—

ಅಧರೋ, ಯಮಧೀರಾಕ್ಷ್ಯಾ ಬಂಧುಜೀವಪ್ರಭಾಹರಃ
ಅನ್ಯಜೀವಪ್ರಭಾಂ ಹಂತ ಹರತೀತಿ ಕಿಮದ್ಭುತಮ್ ।
ಸ್ವಕೀಯಂ ಹೃದಯಂ ಭಿತ್ತ್ವಾ ನಿರ್ಗತೌ ಯೌ ಪಯೋಧರೌ
ಹೃದಯಸ್ಯಾನ್ಯದೀಯಸ್ಯ ಭೇದನೇ ಕಾ ಕೃಪಾ ತಯೋಃ ॥

"ಮಾಡಲಿಕ್ಕೆ ಅಸಾಧ್ಯವೆನಿಸಿದ ಕಾರ್ಯವನ್ನೇ ಸಾಧಿಸುವಾಗ ಸಾಧಾರಣವಾದ ಮತ್ತೊಂದು ಕಾರ್ಯವು ಸುಲಭವಾಗಿ ಸಿದ್ಧಿಸುತ್ತದೆ ಎಂದು ಮತ್ತೊಮ್ಮೆ ಹೇಳುವುದೇನಿದೆ ? ಹಾಗೆ ಹೇಳುವುದೇ ಅನಾವಶ್ಯಕ''ವೆಂಬುದು ಕೈಮುತಿಕನ್ಯಾಯವೆನಿಸಿದೆ. ಈ ರೀತಿಯಲ್ಲಿ ಒಂದು ವಸ್ತುವು ಸಂಘಟಿಸುವುದರಲ್ಲೂ ಚಮತ್ಕಾರವಿರುವ ಪ್ರಯುಕ್ತ ಅದು ಕಾವ್ಯಾರ್ಥಾಪತ್ತಿ ಎನಿಸುವುದು. ನಿನ್ನ ಮುಖವು ಆ ಚಂದ್ರನನ್ನೇ ಸೋಲಿಸಿತೆಂದ ಮೇಲೆ ಕಮಲಗಳನ್ನು ಜಯಿಸುವುದೆಂಬ ಬಗ್ಗೆ ಹೇಳುವುದೇನಿದೆ ?'' ಒಂದು ಪ್ರಸಿದ್ಧವಸ್ತುವಿನ ಪಾಡೇ ಹೀಗಾದ ಮೇಲೆ ಬೇರೊಂದು ಸಾಧಾರಣವಾದ ವಸ್ತುವಿನ ಬಗ್ಗೆ ಹೇಳುವುದೇನಿದೆ ? ಎಂದು ಅಷ್ಟರಿಂದಲೇ ಕಾರ್ಯವು ಸಿದ್ಧಿಸಿತೆಂದು ತಿಳಿಸುವುದೇ ಕಾವ್ಯದಲ್ಲಿ ಪ್ರಯೋಗಿಸುವ ಅರ್ಥಾಪತ್ತಿ ಎನಿಸುವುದು. ಕಮಲಗಳನ್ನು ಜಯಿಸಿ- ಆ ಚಂದ್ರನನ್ನೇ ಮುಖವು ಸೋಲಿಸಿತೆಂದ ಮೇಲೆ ಕಮಲಗಳನ್ನು

ಜಯಿಸಬಲ್ಲದೆಂಬುದು ಸ್ವತಃಸಿದ್ಧವಾಯಿತು. ಸಕಲಲೋಕಗಳನ್ನು ಆನಂದ ಪಡಿಸುವ ಚಂದ್ರನೇ ಮುಖಕ್ಕೆ ಸೋತನೆಂದ ಮೇಲೆ ಕಮಲಗಳು ಸೋತವೆಂಬು ದನ್ನು ಬಾಯಿಂದ ಹೇಳಬೇಕಾಗಿಯೇ ಇಲ್ಲವೆಂದು ವರ್ಣಿಸುವುದರಲ್ಲಿ ಅಡಗಿರುವ ಸೌಂದರ್ಯವೇ ಇಲ್ಲಿ ಅರ್ಥಾಪತ್ತ್ಯಲಂಕಾರವೆನಿಸಿದೆ. ದಾರಿಗನು ದೊಣ್ಣೆಗೆ ದೋಸೆಯ ಗಂಟನ್ನು ಕಟ್ಟಿಕೊಂಡು ಹೋಗುತ್ತಿದ್ದು ಒಮ್ಮೆ ದಾರಿಯಲ್ಲಿ ವಿಶ್ರಮಿ ಸಲು ಕುಳಿತಾಗ ದೋಸೆಯನ್ನು ಕೆಳಗೆ ಇಡುವನು. ಆಗ ನಾಯಿಯೊಂದು ದೊಣ್ಣೆ ಯನ್ನು ಕಚ್ಚಿಕೊಂಡು ಹೋಗುವುದು. ದೊಣ್ಣೆ ಹೋದ ಮೇಲೆ ದೋಸೆಯೂ ಹೋದಂತೆಯೇ ಆಯಿತು. ಅದನ್ನು ಬಾಯಿಂದ ಹೇಳಬೇಕಾಗಿಯೇ ಇಲ್ಲ. ಇದು ದಂಡಾಪೂಪಿಕಾನ್ಯಾಯವೆನಿಸಿದೆ. ಅದರಂತೆ ಅರ್ಥಾಪತ್ತಿಯೂ ಒಂದು ಅಲಂಕಾರ ವೆನಿಸಿದೆ. ಮೀಮಾಂಸಕರು ಹೇಳುವ ಅರ್ಥಾಪತ್ತಿಗಿಂತಲೂ ಇದು ಬೇರೆ ಎಂಬುದನ್ನು ತಿಳಿಸಲಿಕ್ಕಾಗಿ ಇದನ್ನು ಕಾವ್ಯಾರ್ಥಾಪತ್ತಿ ಎಂದು ಕರೆಯಲಾಗಿದೆ. "ಬಂಧೂಕ ವೆಂಬ ಪುಷ್ಪದ ಕಾಂತಿಯನ್ನೇ ಅಪಹರಿಸಿದ (ಬಂಧುಗಳೆನಿಸಿದ ಜೀವರ ಕಾಂತಿಯನ್ನು ಅಪಹರಿಸಿದ) ಈ ಚಂಚಲಾಕ್ಷಿಯ ಕೆಳತುಟಿಯು ಬೇರೆ ಜೀವಗಳ ಕಾಂತಿಯನ್ನು ಅಪಹರಿಸಬಲ್ಲದೆಂಬಲ್ಲಿ ಆಶ್ಚರ್ಯವೇನಿದ್ದೀತು?'' "ತನಗೆ ಆಶ್ರಯವನ್ನು ಕೊಟ್ಟಂಥ ಹೃದಯವನ್ನೇ ಭೇದಿಸಿ ಹೊರಟ ಸ್ತನಗಳೆರಡು ಬೇರೊಬ್ಬನ ಹೃದಯವನ್ನು ಭೇದಿಸದೆ ಬಿಡುತ್ತವೆಯೆ ? ಹಾಗೆ ಭೇದಿಸದಿರಲು ಅವಕ್ಕೆ ದಯೆ ಎಲ್ಲಿಂದ ಬರಬೇಕು ?" ನಾಯಿಕೆಯ ಅಧರವು ಕೆಂಪಾಗಿರುವ ಬಂಧೂಕವೆಂಬ ಪುಷ್ಪದ ಪ್ರಭೆಯನ್ನೇ ಮೀರಿಸಿದ್ದರಿಂದ ಮತ್ತೊಬ್ಬರ ಪ್ರಭೆಯನ್ನು ಅಪಹರಿಸುವ ಬಗ್ಗೆ ಹೇಳುವುದೇನಿದೆ ? ಸ್ತನಗಳು ತಮಗೆ ಆಶ್ರಯವನ್ನು ಕೊಟ್ಟ ಹೃದಯವನ್ನೇ ಭೇದಿಸಿರುವಾಗ ಬೇರೆಯವರ ಹೃದಯವನ್ನು ಭೇದಿಸುವುದರಲ್ಲಿ ಆಶ್ಚರ್ಯ ವೇನಿದ್ದೀತು ?

## ೬೦. ಕಾವ್ಯಲಿಂಗಾಲಂಕಾರ

ಸಮರ್ಥನೀಯಸ್ಯಾರ್ಥಸ್ಯ ಕಾವ್ಯಲಿಂಗಂ ಸಮರ್ಥನಮ್ ।
ಜಿತೋಽಸಿ ಮಂದ ಕಂದರ್ಪ ಮಚ್ಚಿತ್ತೇಽಸ್ತಿ ತ್ರಿಲೋಚನಃ ॥೧೨೧॥

ಅತ್ರ ಕಂದರ್ಪಜಯೋಪನ್ಯಾಸಃ ದುಷ್ಕರವಿಷಯತ್ವಾತ್ ಸಮರ್ಥನಸಾಪೇಕ್ಷಃ। ತಸ್ಯ "ಮಚ್ಚಿತ್ತೇಽಸ್ತಿ ತ್ರಿಲೋಚನಃ'' ಇತಿ ಸ್ವಾಂತಃಕರಣೇ ಶಿವಸನ್ನಿಧಾನಪ್ರದರ್ಶ ನೇನ ಸಮರ್ಥನಂ ಕಾವ್ಯಲಿಂಗಮ್. ವ್ಯಾಪ್ತಿಪಕ್ಷಧರ್ಮತಾಸಾಪೇಕ್ಷನ್ಯಾಯಿಕ ಲಿಂಗವ್ಯಾವರ್ತನಾಯ ಕಾವ್ಯವಿಶೇಷಣಮ್. ಇದಂ ವಾಕ್ಯಾರ್ಥಹೇತುಕಂ ಕಾವ್ಯ ಲಿಂಗಮ್. ಪದಾರ್ಥಹೇತುಕಂ ಯಥಾ—

ಭಸ್ಮೋದ್ಧೂಲನ ಭದ್ರಮಸ್ತು ಭವತೇ ರುದ್ರಾಕ್ಷಮಾಲೇ ಶುಭಂ
ಹಾ ಸೋಪಾನಪರಂಪರೇ ಗಿರಿಸುತಾಕಾಂತಾಲಯಾಲಂಕೃತೇ ।
ಅದ್ಯಾರಾಧನತೋಷಿತೇನ ವಿಧುನಾ ಯುಷ್ಮತ್ಸಪರ್ಯಾಸುಖಾ
ಲೋಕೋಚ್ಛೇದಿನಿ ಮೋಕ್ಷನಾಮನಿ ಮಹಾಮೋಹೇ ನಿಲೀಯಾಮಹೇ ॥

ಅತ್ರ ಮೋಕ್ಷಸ್ಯ ಮಹಾಮೋಹತ್ವಮಪ್ರಸಿದ್ಧಮಿತಿ ತತ್ಸಮರ್ಥನೇ ಸುಖಾಲೋಕೋಚ್ಛೇದಿನೀತಿ ಪದಾರ್ಥೋ ಹೇತುಃ. ಕ್ವಚಿತ್ಪದಾರ್ಥವಾಕ್ಯಾರ್ಥೌ ಪರಸ್ಪರಸಾಪೇಕ್ಷೌ ಹೇತುಭಾವಂ ಭಜತಃ. ಯಥಾ ವಾ—

ಚಿಕುರಪ್ರಕರಾ ಜಯಂತಿ ತೇ ವಿದುಷೀ ಮೂರ್ಧನಿ ಯಾನ್ಬಿಭರ್ತಿ ಸಾ ।
ಪಶುನಾಪ್ಯಪುರಸ್ಕೃತೇನ ತತ್ತುಲನಾಮಿಚ್ಛತು ಚಾಮರೇಣ ಕಃ ? ॥

ಅತ್ರ ಚಾಮರಸ್ಯ ದಮಯಂತೀಕುಂತಲಭಾರಸಾಮ್ಯಾಭಾವೇ ವಿದುಷೀ ಮೂರ್ಧನಿ ಯಾನ್ಬಿಭರ್ತಿ ಸೇತಿ ವಾಕ್ಯಾರ್ಥಃ ; ಪಶುನಾಪ್ಯಪುರಸ್ಕೃತೇನೇತಿ ಪದಾರ್ಥಶ್ಚೇತ್ಯುಭಯಂ ಮಿಳಿತಂ ಹೇತುಃ. ಕ್ವಚಿತ್ಸಮರ್ಥನೀಯಾರ್ಥಸಮರ್ಥನಾರ್ಥೇ ವಾಕ್ಯಾರ್ಥೇ ಪದಾರ್ಥೋ ಹೇತುಃ.

ವಪುಃಪ್ರಾದುರ್ಭಾವಾದನುಮಿತಮಿದಂ ಜನ್ಮನಿ ಪುರಾ
ಪುರಾರೇ ನ ಕ್ವಾಪಿ ಕ್ವಚಿದಪಿ ಭವಂತಂ ಪ್ರಣತವಾನ್ ।
ನಮನ್ಮುಕ್ತಃ ಸಂಪ್ರತ್ಯಹಮತನುರಗ್ರೇಽಪ್ಯನತಿಮಾನ್
ಇತೀಶ ಕ್ಷಂತವ್ಯಂ ತದಿದಮುಪರಾಧದ್ವಯಮಪಿ ॥

ಅತ್ರ ತಾವದಪರಾಧದ್ವಯಂ ಸಾಧನೀಯಂ ಅಸ್ಪಷ್ಟಾರ್ಥತ್ವಾತ್. ತತ್ಸಮರ್ಥನಂ ಚ ಪೂರ್ವಾಪರಜನ್ಮನೋಃ ಅನಮನಾಭ್ಯಾಂ ವಾಕ್ಯಾರ್ಥಭೂತಾಭ್ಯಾಂ ಕ್ರಿಯತೇ. ಅತ್ರ ದ್ವಿತೀಯವಾಕ್ಯಾರ್ಥೇ ಅತನುತ್ವಂ ಏಕಪದಾರ್ಥೋ ಹೇತುಃ. ಅತ್ರಾಪಿ ಸಂಪ್ರತಿ ನಮನ್ಮುಕ್ತಃ ಇತಿ ವಾಕ್ಯಾರ್ಥೋಽನೇಕಪದಾರ್ಥೋ ವಾ ಹೇತುಃ.

ಒಂದುಕಡೆ ಒಂದು ಅಂಶವನ್ನು ತಿಳಿಸಿ ಅದನ್ನು ಸಮರ್ಥಿಸಲಿಕ್ಕಾಗಿ ಬೇರೊಂದು ಪದವನ್ನೋ ಅಥವಾ ವಾಕ್ಯವನ್ನೋ ಪ್ರಯೋಗಿಸುವುದೇ ಕಾವ್ಯಲಿಂಗ ವೆನಿಸುತ್ತದೆ. ಅಲ್ಲಿಗೆ ಸಮರ್ಥಿಸಬೇಕಾದ ಅರ್ಥವನ್ನು ಸಮರ್ಥಿಸುವುದೇ ಕಾವ್ಯ ಲಿಂಗವೆಂದು ಹೇಳಿದಂತಾಯಿತು. "ಮೂಢಮನ್ಮಥನೇ, ನೀನು ಸೋತಿರುವೆ, ಯಾಕೆಂದರೆ ನನ್ನ ಮನಸ್ಸಿನಲ್ಲಿ ನಿನ್ನ ಶತ್ರುವಾದ ಈಶ್ವರನಿದ್ದಾನೆ." ಇಲ್ಲಿ ಮನ್ಮಥನ ಸೋಲು ಅಸಾಧ್ಯವಾದ್ದರಿಂದ ಅದನ್ನು ಯುಕ್ತಿಯಿಂದ ಸಮರ್ಥಿಸಲೇ ಬೇಕು. "ನನ್ನ ಮನಸ್ಸಿನಲ್ಲಿ ಈಶ್ವರನಿದ್ದಾನೆ. ಆದ್ದರಿಂದ ನೀನು ಮಿಸುಕಾಡು ವಂತಿಲ್ಲ" ಎಂದು ಹೇಳಿದ್ದರಿಂದ ಮನ್ಮಥನ ಸೋಲಿಗೆ ಕಾರಣವನ್ನು ವಾಕ್ಯದಿಂದ ತಿಳಿಸಿದಂತಾಯಿತು. "ಮಚ್ಚಿತ್ತೇಽಸ್ತಿ ತ್ರಿಲೋಚನಃ" ಎಂಬ ವಾಕ್ಯದ ಅರ್ಥವೇ

ಮನ್ಮಥನ ವಿಜಯವೆಂಬ ಅರ್ಥಕ್ಕೆ ಸಮರ್ಥಕವಾಯಿತು. ಹೃದಯದಲ್ಲಿ ಶಿವನಿರು ವುದನ್ನು ತಿಳಿಸಿದ್ದರಿಂದ ಮನ್ಮಥನ ಸೋಲು ಸಿದ್ಧವಾಯಿತು. ಆದ್ದರಿಂದ ಇಲ್ಲಿ ವಾಕ್ಯಾರ್ಥವೇ ಉದ್ದಿಷ್ಟವಾದ ಅರ್ಥವನ್ನು ಸಮರ್ಥಿಸಲು ಕಾರಣವೆನಿಸಿದೆ. ವ್ಯಾಪ್ತಿ (ಹೇತು ಸಾಧ್ಯಗಳು ಒಂದೆಡೆ ಇರುವಿಕೆ) ಪಕ್ಷಧರ್ಮ (ಹೇತುವು ಪಕ್ಷದಲ್ಲಿ (ಇರುವಿಕೆ) ಇವನ್ನು ಅಪೇಕ್ಷಿಸುವ ನೈಯಾಯಿಕಮತದ (ಹೇತು) ಲಿಂಗಕ್ಕಿಂತಲೂ ಇದು ಬೇರೆ ಎಂದು ತಿಳಿಸಲಿಕ್ಕಾಗಿ ಇದನ್ನು ಕಾವ್ಯಲಿಂಗವೆಂದು ಕರೆಯಲಾಗಿದೆ. ಲಿಂಗವೆಂದರೆ ಹೇತು; ಒಂದು ಅರ್ಥವನ್ನು ಸಮರ್ಥಿಸುವ ಸಾಧನ. ಇದು ಒಂದು ಪದದಲ್ಲಾದರೂ ಇರಬಹುದು ಅಥವಾ ವಾಕ್ಯದಲ್ಲಾದರೂ ಇರಬಹುದು. ಒಂದು ಪದದ ಅರ್ಥವೇ ಸಮರ್ಥನೀಯವಾದ ಅಂಶವನ್ನು ಸಮರ್ಥಿಸುವುದಕ್ಕೆ ಈ ಉದಾಹರಣವನ್ನು ಕೊಡುತ್ತಾನೆ. "ಭಸ್ಮಧಾರಣವೇ, ನಿನಗೆ ಮಂಗಳವಾಗಲಿ. ಎಲೈ ರುದ್ರಾಕ್ಷಮಾಲೆಯೇ, ನಿನಗೆ ಶುಭವಾಗಲಿ. ಕೈಲಾಸಕ್ಕೆ ಅಲಂಕಾರವೆನಿಸಿದ ಸೋಪಾನಪರಂಪರೆಯೇ ನಿನಗೆ ಒಳ್ಳೆಯದಾಗಲಿ. ಈಗ ಮಾಡಿದ ಪೂಜೆಯಿಂದ ಸಂತೋಷಗೊಂಡ ಸ್ವಾಮಿಯೊಡನೆ ಸೇರಿದ ನಾವು ಮುಂದೆ ನಿಮ್ಮನ್ನು ಉಪ ಯೋಗಿಸಿಕೊಂಡು ಮಾಡಬಹುದಾದ ಪೂಜೆಯ ಸುಖವನ್ನೇ ಕಾಣಲಿಕ್ಕಾಗದಿರು ವಂತಹ ಮೋಕ್ಷವೆಂಬ ಗಾಢಾಂಧಕಾರದಲ್ಲಿ ಸೇರಿಕೊಳ್ಳುವೆವು.'' ಇಲ್ಲಿ ಮೋಕ್ಷವನ್ನು ಗಾಢಾಂಧಕಾರವೆಂದು ಹೇಳಿದ್ದು ಅಷ್ಟು ಪ್ರಸಿದ್ಧವಾಗಿಲ್ಲ. ಆದ್ದರಿಂದ ಅದನ್ನು ಯುಕ್ತಿಯಿಂದ ಸಮರ್ಥಿಸಲಿಕ್ಕಾಗಿ 'ಸುಖಾಲೋಕೋಚ್ಛೇದಿನಿ' ಎಂಬ ಪದವನ್ನು ಕವಿಯು ಪ್ರಯೋಗಿಸಿದ್ದಾನೆ. ಎಲ್ಲಾ ಬಗೆಯ ಸುಖಪ್ರಕಾಶವನ್ನು ತೊಲಗಿಸು ವಂತಹದೆಂಬುದೇ ಅದರ ಅರ್ಥ. ಇದು ಮೋಕ್ಷವನ್ನು ಗಾಢಾಂಧಕಾರವೆಂದು ಹೇಳಲಿಕ್ಕೆ ಹೇತುವೆನಿಸಿದೆ. ನಿರಾಕಾರಸ್ಥಿತಿಯೆನಿಸಿದ ಬಯಲಿನಲ್ಲಿ ಬಯಲಾದವನಿಗೆ ಯಾವ ಬಗೆಯ ಪ್ರಕಾಶವೂ ಕಾಣುವುದಿಲ್ಲ. ಆದ್ದರಿಂದ ಇದು ಪದಾರ್ಥವೇ ಹೇತು ವೆನಿಸಿರುವ ಕಾವ್ಯಲಿಂಗಕ್ಕೆ ಉದಾಹರಣವೆನಿಸಿದೆ. ಕೆಲವು ಕಡೆ ಪದಾರ್ಥ ವಾಕ್ಯಾರ್ಥ ಗಳೆರಡೂ ಒಂದನ್ನೊಂದು ಅಪೇಕ್ಷಿಸುತ್ತಲೇ ಸಮರ್ಥನೀಯವಾದ ಒಂದು ಅಂಶವನ್ನು ಸಮರ್ಥಿಸುತ್ತವೆ. ಇದನ್ನು ಉದಾಹರಿಸುತ್ತಾನೆ. "ಪಂಡಿತೆ ಎನಿಸಿದ ಯಾವ ದಮಯಂತಿಯು ಶಿರಸ್ಸಿನಲ್ಲಿ ಯಾವುದನ್ನು ಧರಿಸಿರುವಳೋ ಅಂತಹ ಕೇಶಪಾಶವು ಸರ್ವೋತ್ಕೃಷ್ಟವೆನಿಸಿದೆ. ತಿರ್ಯಗ್ಜಾತಿಯ ಪಶು ಚಮರೀಮೃಗದಿಂದಲೂ ಗೌರವಿಸದ ಮುಂಭಾಗದಲ್ಲಿ ಧರಿಸದೆ 'ಹಿಂದುಗಡೆ ಮಾತ್ರವೇ ಇಟ್ಟುಕೊಂಡಿರುವ ಚಾಮರ (ಬಾಲ)ದೊಡನೆ ಆ ಕೇಶಪಾಶಕ್ಕೆ ಹೋಲಿಕೆಯನ್ನು ಯಾವನು ಇಚ್ಛಿಸಿಯಾನು ?'' ಚಮರೀಮೃಗದ ಬಾಲದಿಂದಲೇ ಚಾಮರವನ್ನು ಮಾಡುವರು. ಆ ಚಾಮರದೊಡನೆ ಕೇಶಪಾಶವನ್ನು ಕೆಲವರು ಅವಿವೇಕದಿಂದ ಹೋಲಿಸುವರು. ಇದು ಸರಿಯಲ್ಲವೆಂದು ಕವಿ ಇಲ್ಲಿ ತಿಳಿಸುತ್ತಾನೆ. ಯಾಕೆಂದರೆ ಚಮರೀಮೃಗವೇ ತನ್ನ ಬಾಲವನ್ನು ಕೀಳ

ಪಾಶಕ್ಕೆ ಹೋಲಿಸಬಹುದೆಂದು ಭಾವಿಸಿಲ್ಲ. ಆದ್ದರಿಂದಲೇ ಅದು ಆ ಬಾಲವನ್ನು ಹಿಂದೆ ಯಾರಿಗೂ ಕಾಣಿಸದಂತೆ ಇರಿಸಿಕೊಂಡಿದೆ. ಇಂತಹ ಸ್ಥಿತಿಯಲ್ಲಿ ಅದು ಹೇಗೆ ಕೇಶಾಪಾಶಕ್ಕೆ ಹೋಲಿಕೆಯಾದೀತು? ಹೀಗೆ ದಮಯಂತಿಯ ಕೇಶಪಾಶಕ್ಕೆ ಚಾಮರವು ಹೋಲುವುದಿಲ್ಲವೆಂಬ ಅಂಶವನ್ನು ಇಲ್ಲಿ ಸಮರ್ಥಿಸಬೇಕಾಗಿದೆ "ಪಂಡಿತೆಯಾದ ದಮಯಂತಿಯೇ ಆ ಕೇಶಪಾಶವನ್ನು ತಲೆಯ ಮೇಲೆ ಧರಿಸಿದ್ದಳು" ಎಂಬ ವಾಕ್ಯಾರ್ಥವೂ, ಪಶುವಿನಿಂದಲೂ ಚಾಮರವು ತಿರಸ್ಕೃತವಾಗಿತ್ತು" ಎಂದು ತಿಳಿಸುವಾಗ ಉಪಯೊಗಿಸಿದ ಪಶು ಎಂಬ ಪದದ ಅರ್ಥವೂ ಎರಡೂ ಸೇರಿಕೊಂಡು ಇಲ್ಲಿ ಪ್ರಕೃತವಿಷಯವನ್ನು ಸಮರ್ಥಿಸಲು ಹೇತುವೆನಿಸಿವೆ.

ಕೆಲವು ಕಡೆಗಳಲ್ಲಿ ಸಮರ್ಥಿಸಬೇಕಾಗಿರುವ ಅಂಶವನ್ನು ಸಮರ್ಥಿಸುವ ಒಂದು ವಾಕ್ಯಾರ್ಥಕ್ಕೆ ಒಂದು ಪದದ ಅರ್ಥವು ಹೇತುವೆನಿಸಿರುತ್ತದೆ. ಅದನ್ನು ಇಲ್ಲಿ ಉದಾಹರಿಸುತ್ತಾನೆ. "ಎಲೈ ಶಿವನೇ, ಶರೀರವು ಈಗ ಬಂದಿರುವ ಪ್ರಯುಕ್ತ ಹಿಂದಿನ ಜನ್ಮದಲ್ಲಿ ಎಲ್ಲಿಯಾದರೂ ಒಮ್ಮೆಯೂ ನಿನಗೆ ನಮಸ್ಕಾರ ಮಾಡಿರಲಿಕ್ಕಿಲ್ಲ. ಈಗ ನಮಸ್ಕಾರಮಾಡಿ ಪಾಶದಿಂದ ಬಿಡುಗಡೆಯನ್ನು ಹೊಂದಿ ದೇಹವಿಲ್ಲದವನಾ ಗುವ ಪ್ರಯುಕ್ತ ಮುಂದಿನ ಜನ್ಮದಲ್ಲೂ ನಮಸ್ಕಾರಮಾಡಲಿಕ್ಕೆ ಅವಕಾಶವಿರುವು ದಿಲ್ಲ. ಸ್ವಾಮಿ. ಹಿಂದಿನ ಜನ್ಮದಲ್ಲಿ ಮಾಡಿದ ಮತ್ತು ಮುಂದಿನ ಜನ್ಮದಲ್ಲಿ ಮಾಡ ಬಹುದಾದ ಈ ಎರಡು ಅಪರಾಧಗಳನ್ನು ದಯೆಯಿಟ್ಟು ಕ್ಷಮಿಸಬೇಕು". ಇಲ್ಲಿ ಸಾಧಕನು ಹಿಂದೆ ಮಾಡಿದಂತೆಯೂ ಮುಂದೆ ಮಾಡುವಂತೆಯೂ ತಿಳಿಸಿರುವ ಎರಡು ಅಪರಾಧಗಳನ್ನು ಸಮರ್ಥಿಸಬೇಕಾಗಿದೆ. ಇವೆರಡು ಅಂಶಗಳನ್ನು ಇಲ್ಲಿ ಸ್ಪಷ್ಟ ವಾಗಿ ತಿಳಿಸಿಲ್ಲವಾದ ಪ್ರಯುಕ್ತ ಇವುಗಳಿಗೆ ಸಮರ್ಥನವು ಅವಶ್ಯವಾಗಿ ಬೇಕಾಗಿವೆ. ಹಿಂದಿನ ಜನ್ಮದಲ್ಲಿ ನಮಸ್ಕರಿಸದೇ ಇದ್ದದ್ದು, ಮುಂದೆ ನಮಸ್ಕರಿಸದೇ ಇರುವುದು ಇವೆರಡೂ ಅರ್ಥಗಳನ್ನು ತಿಳಿಸುವ ಎರಡು ವಾಕ್ಯಗಳಿಂದಲೂ ಈ ಅಪರಾಧಗಳೆರ ಡನ್ನು ಸಮರ್ಥಿಸಲಾಗಿದೆ. ಇಲ್ಲಿ "ಅಗ್ರೇಽಪ್ಯನತಿಮಾನ್" ಎಂಬುದೇ ಎರಡ ನೆಯ ವಾಕ್ಯವು. ಇದರಿಂದ ಎರಡನೆಯ ಅಪರಾಧವನ್ನು ಸಮರ್ಥಿಸಬೇಕಾಗಿದೆ. ಆದರೆ 'ಮುಂದೆಯೂ ನಮಸ್ಕರಿಸುವುದಿಲ್ಲ' ಎಂಬ ಈ ವಾಕ್ಯಾರ್ಥಕ್ಕೆ 'ಅತನುಃ' (ದೇಹವಿಲ್ಲದ ಸ್ಥಿತಿ) ಎಂಬ ಪದದ ಅರ್ಥವು ಹೇತುವೆನಿಸಿದೆ. ಇದರಿಂದ "ದೇಹ ವಿಲ್ಲದ ಪ್ರಯುಕ್ತ ಮುಂದೆ ನಾನು ನಮಸ್ಕಾರಮಾಡಲಾರೆ". ಎಂಬ ಅರ್ಥವು ಇಲ್ಲಿ ಸ್ಪಷ್ಟಪಡುತ್ತದೆ. ದೇಹವಿಲ್ಲವೆಂದು ಇಲ್ಲಿ ತಿಳಿಸಿರುವದರಲ್ಲೂ 'ಸಂಪ್ರತಿ ನಮ ನ್ಮುಕ್ತಃ' 'ಈಗ ನಮಸ್ಕರಿಸಿ ಪಾಶದಿಂದ ಬಿಡುಗಡೆಯನ್ನು ಹೊಂದಿದೆನು' ಎಂಬ ವಾಕ್ಯಾರ್ಥವು ಹೇತುವೆನಿಸಿದೆ. ಇಲ್ಲಿ ಕ್ರಿಯಾಪದವಿಲ್ಲದ್ದರಿಂದ ಇದನ್ನು ವಾಕ್ಯವೆಂದು ಕರೆಯದಿದ್ದರೆ ಅನೇಕ ಪದಗಳ ಸಮೂಹವೆಂದಾದರೂ ಭಾವಿಸಬಹುದು.

ಕ್ವಚಿತ್ಪರಸ್ಪರವಿರುದ್ಧಯೋಃ ಸಮರ್ಥನೀಯಯೋಃ ಉಭಯೋಃ ಕ್ರಮಾದ್ವಾ
ಹೇತುಭಾವಂ ಭಜತಃ, ತದ್ಯಥಾ—

ಅಸೋಢಾ ತತ್ಕಾಲೋಲ್ಲಸದಸಹಭಾವಸ್ಯ ತಪಸಃ
ಕಥಾನಾಂ ವಿಸ್ರಂಭೇಷ್ವಥ ಚ ರಸಿಕಃ ಶೈಲದುಹಿತುಃ ।
ಪ್ರಮೋದಂ ವೋ ದಿಶ್ಯಾತ್ಕಪಟವಟುವೇಷಾಪನಯನೇ
ತ್ವರಾಶೈಥಿಲ್ಯಾಭ್ಯಾಂ ಯುಗಪದಭಿಯುಕ್ತಃ ಸ್ಮರಹರಃ ॥

ಅತ್ರ ಶಿವಸ್ಯ ಯುಗಪತ್ ಕೃತ್ರಿಮಬ್ರಹ್ಮಚಾರಿವೇಷಾಪನಯನತ್ವರಾ
ತದನುವರ್ತನೇಚ್ಛಯೋರ್ವಿರುದ್ಧಯೋಃ ಕ್ರಮಾದ್ಗಿರಿಜಾತೀವ್ರತಪಸೋಽಸಹಿ-
ಷ್ಣುತ್ವಂ ತತ್ಸಂಲಾಪಕೌತುಕಂ ಚೇತ್ಯುಭಾವರ್ಥೌ ಹೇತುತ್ವೇನ ನಿಬದ್ಧೌ.
ಕ್ವಚಿತ್ಪರವಿರುದ್ಧಯೋಃ ಸಮರ್ಥನೀಯಯೋಃ ಏಕ ಏವ ಹೇತುಃ ಯಥಾ—

ಜೀಯಾದಂಬುಧಿತನಯಾಧರರಸಮಾಸ್ವಾದಯನ್ಮುರಾರಿರಯಂ ।
ಅಂಬುಧಿಮಥನಕ್ಲೇಶಂ ಕಲಯನ್ವಿಫಲಂ ಚ ಸಫಲಂ ಚ ॥

ಅತ್ರ ವಿಫಲತ್ವಸಫಲತ್ವಕಲನಯೋರ್ವಿರುದ್ಧಯೋಃ ಏಕ ಏವ ಅಂಬುಧಿತನಯಾಧರರ-
ಸಾಸ್ವಾದೋ ಹೇತುಃ. ಇದಂ ಕಾವ್ಯಲಿಂಗಂ ಹೇತ್ವಲಂಕಾರ ಇತಿ ಕೇಚಿದ್ವ್ಯಾಜಹ್ರುಃ.

ಹೇ ಗೋದಾವರಿ ದೇವಿ, ತಾವಕತಟೋದ್ದೇಶೇ ಕಳಿಂಗಃ ಕವಿಃ
ವಾಗ್ದೇವೀಂ ಬಹುದೇಶದರ್ಶನಸಖೀಂ ತ್ಯಕ್ತ್ವಾ ವಿರಕ್ತಿಂ ಗತಃ ।
ಏನಾಮರ್ಣವಮಧ್ಯಸುಪ್ತಮುರಭಿನ್ನಾಭೀಸರೋಜಾಸನಂ
ಬ್ರಹ್ಮಾಣಂ ಗಮಯ ಕ್ಷಿತೌ ಕಥಮಸಾವೇಕಾಕಿನೀ ಸ್ಥಾಸ್ಯತಿ ॥

ಇತ್ಯತ್ರ ಬ್ರಹ್ಮಣಃ ಪ್ರಾಪಣಂ ಕಥಂ ಗೋದಾವರ್ಯಾ ಕರ್ತವ್ಯಮಿತ್ಯಸಂಭಾ-
ವನೀಯಾರ್ಥೋಪಪಾದಕಸ್ಯ. ಅರ್ಣವಮಧ್ಯೇತ್ಯಾದಿತದ್ವಿಶೇಷಣಸ್ಯ ನ್ಯಸನಂ
ಶ್ಲೇಷಾಖ್ಯೋ ಗುಣ ಇತಿ "ಶ್ಲೇಷೋಽವಿಘಟಮಾನಾರ್ಥಘಟಕಾರ್ಥಸ್ಯ ವರ್ಣನಂ"
ಇತಿ ಶ್ಲೇಷಲಕ್ಷಣಮಿತಿ ಚ ಜಯದೇವೇನೋಕ್ತಮ್, ವಸ್ತುತಸ್ತು ಅತ್ರಾಪಿ
ಪದಾರ್ಥಹೇತುಕಂ ಕಾವ್ಯಲಿಂಗಮೇವ ತದ್ಭೇದಕಾಭಾವಾತ್ ॥

ಕೆಲವು ಕಡೆ ಸಮರ್ಥಿಸಬೇಕಾಗಿರುವ ಅಂಶಗಳು ಪರಸ್ಪರ ವಿರುದ್ಧವಾಗಿದ್ದರೆ
ಅವೆರಡನ್ನು ಸಮರ್ಥಿಸಲಿಕ್ಕೆ ಕ್ರಮವಾಗಿ ವಾಕ್ಯಾರ್ಥಪದಾರ್ಥಗಳೆರಡೂ ಹೇತು
ವೆನಿಸುತ್ತವೆ. ಅದನ್ನು ಇಲ್ಲಿ ಉದಾಹರಿಸುತ್ತಾನೆ. ತಪಸ್ಸನ್ನಾಚರಿಸುತ್ತಿದ್ದ
ಪಾರ್ವತಿಯ ಬಳಿಗೆ ಬ್ರಹ್ಮಚಾರಿಯ ವೇಷದಿಂದ ಬಂದ ಶಿವನ ವರ್ಣನಪ್ರಕರಣದಲ್ಲಿ
ಇದನ್ನು ಉದಾಹರಿಸಿದೆ. "ಬ್ರಹ್ಮಚಾರಿಯ ಕಪಟವೇಷವನ್ನು ತೊರೆಯುವುದರಲ್ಲಿ
ಆತುರತೆ, ಪಾರ್ವತಿಯನ್ನು ಹಿಂಬಾಲಿಸಬೇಕೆಂಬ ಉತ್ಕಟವಾದ ಇಚ್ಛೆ ಇವುಗಳಿಂದ
ಕೂಡಿಯೂ, ಆ ಕಾಲದಲ್ಲಿ ಆಕೆ ಅಷ್ಟು ಉಗ್ರತಪಸ್ಸನ್ನು ಆಚರಿಸುತ್ತಿದ್ದುದಕ್ಕೆ

ಸಹಿಸದೆಯೂ, ಪಾರ್ವತಿಯ ಕತೆಗಳನ್ನು ಕೇಳುವುದರಲ್ಲಿ ಕುತೂಹಲಿಯೂ ಆಗಿದ್ದ ಶಿವನು ನಿಮ್ಮನ್ನು ಸಂತೋಷಪಡಿಸಲಿ." ಇಲ್ಲಿ ಶಿವನಿಗೆ ಬ್ರಹ್ಮಚಾರಿಯ ವೇಷವನ್ನು ತೊರೆಯುವ ಆಸಕ್ತಿಯೂ ಪಾರ್ವತಿಯನ್ನು ಅನುಸರಿಸಬೇಕೆಂಬ ಇಚ್ಛೆಯೂ ಒಮ್ಮೆಗೆ ಹುಟ್ಟಿದವೆಂದು ವರ್ಣಿಸಿದೆ. ಇವು ಪರಸ್ಪರ ವಿರುದ್ಧವಾದುವು. ಅವನಿಗೆ ಏಕಕಾಲದಲ್ಲಿ ವೇಷವನ್ನು ತೊರೆಯುವ ಆಸಕ್ತಿಯೂ, ಪಾರ್ವತಿಯನ್ನು ಹಿಂಬಾಲಿಸಬೇಕೆಂಬ ಇಚ್ಛೆಯೂ ಇದ್ದದ್ದು ಸಮರ್ಥನೀಯವಾದ ಅಂಶ. ಇವು ಪರಸ್ಪರ ವಿರುದ್ಧವೆನಿಸಿವೆ. ಕಪಟವೇಷವನ್ನು ಶಿವನು ತೊರೆದರೆ ಪಾರ್ವತಿಯನ್ನು ಹಿಂಬಾಲಿಸುವಂತಿಲ್ಲ. ಆಕೆಯನ್ನು ಹಿಂಬಾಲಿಸಬೇಕೆಂಬ ಇಚ್ಛೆ ಅವನಿಗೆ ಇದ್ದರೆ ಕಪಟವೇಷವನ್ನು ತೊರೆಯುವುದರಲ್ಲಿ ಆಸಕ್ತಿ ಇರಬಾರದು. ಹೀಗೆ ವಿರುದ್ಧವಾಗಿರುವ ಈ ಎರಡು ಅಂಶಗಳನ್ನು ಸಮರ್ಥಿಸಲಿಕ್ಕೆ ಪಾರ್ವತಿಯು ಆಚರಿಸುತ್ತಿದ್ದ ಉಗ್ರತಪಸ್ಸನ್ನು ಶಿವನಿಗೆ ಸಹಿಸಲಿಕ್ಕಾಗದೇ ಇದ್ದುದು ಮತ್ತು ಅವಳೊಡನೆ ಮಾತಾಡಬೇಕೆಂಬ ಕೂತೂಹಲವಿದ್ದುದು ಇವೆರಡೂ ಹೇತುವೆನಿಸಿವೆ. ಕಪಟವೇಷವನ್ನು ತೊರೆಯುವ ಆಸಕ್ತಿಯನ್ನು ಸಮರ್ಥಿಸಲು ಆಕೆಯ ಉಗ್ರತಪಸ್ಸನ್ನು ಶಿವನು ಸಹಿಸದೇ ಇದ್ದುದೇ ಕಾರಣವೆನಿಸಿದೆ. ಆಕೆಯನ್ನು ಹಿಂಬಾಲಿಸಬೇಕೆಂಬ ಇಚ್ಛೆಯನ್ನು ಸಮರ್ಥಿಸಲು ಅವಳೊಡನೆ ಮಾತನಾಡಬೇಕೆಂಬ ಕುತೂಹಲವು ಹೇತುವೆನಿಸಿದೆ.

ಕೆಲವು ಕಡೆಗಳಲ್ಲಿ ಸಮರ್ಥನೀಯಾಂಶಗಳೆರಡೂ ಪರಸ್ಪರವಿರುದ್ಧವಾಗಿದ್ದಲ್ಲಿ ಅವೆರಡನ್ನೂ ಸಮರ್ಥಿಸಲಿಕ್ಕೆ ಒಂದೇ ಹೇತುವಿರುತ್ತದೆ. ಅದರ ಉದಾಹರಣ ಹೀಗಿದೆ : "ಲಕ್ಷ್ಮಿಯ ಕೆಳತುಟಿಯ ಅಮೃತವನ್ನು ಕುಡಿಯುತ್ತ ಸಮುದ್ರಮಥನದ ಕ್ಲೇಶವನ್ನು ಇಂತಹ ಸ್ತ್ರೀಯ ಲಾಭದಿಂದ ಸಫಲಗೊಳಿಸುತ್ತಲೂ, ಈಕೆಯ ಅಧರಾಮೃತವಿರುವಾಗ ಪ್ರಸಿದ್ಧವಾದ ಅಮೃತದಿಂದೇನು ಫಲವೆಂದು ಅದನ್ನು ವಿಫಲಗೊಳಿಸುತ್ತಲೂ ಇರುವ ವಿಷ್ಣುವು ಸರ್ವೋತ್ಕೃಷ್ಟನಾಗಿರಲಿ" ಇಲ್ಲಿ ಸಮುದ್ರಮಂಥನದ ಮಹಾಕ್ಲೇಶವನ್ನು ಸಫಲಗೊಳಿಸುವುದು ಮತ್ತು ವಿಫಲಗೊಳಿಸುವುದು ಇವೆರಡೂ ಸಮರ್ಥಿಸಬೇಕಾಗಿರುವ ಅಂಶಗಳು. ಇವು ಪರಸ್ಪರ ವಿರುದ್ಧವಾಗಿವೆ. ಶ್ರಮವು ಸಫಲವಾಗುವುದಾದರೆ ವಿಫಲವಾಗುವಂತಿಲ್ಲ; ವಿಫಲವಾಗುವುದಾದರೆ ಸಫಲವಾಗಲಾರದು. ಹೀಗೆ ವಿರುದ್ಧವಾದ ಈ ಎರಡು ಅಂಶಗಳನ್ನು ಸಮರ್ಥಿಸಲಿಕ್ಕೂ ಲಕ್ಷ್ಮಿಯ ಅಧರರಸಾಸ್ವಾದವೆಂಬುದೊಂದೇ ಹೇತುವೆಂದು ಇಲ್ಲಿ ತಿಳಿಸಲಾಗಿದೆ. ಈ ಕಾವ್ಯಲಿಂಗವನ್ನು ಹೇತ್ವಲಂಕಾರವೆಂದು ಕೆಲವರು ಕರೆದಿದ್ದಾರೆ. "ಎಲೈ ಗೋದಾವರೀದೇವಿಯೇ, ನನ್ನ ಮಾತನ್ನು ಕೇಳು. ಕಳಿಂಗನೆಂಬ ಕವಿಯು ಅನೇಕ ದೇಶಗಳನ್ನು ನೋಡಲಿಕ್ಕೆ ತನ್ನ ಜೊತೆಯಲ್ಲಿಯೇ ಇದ್ದ ಸರಸ್ವತಿಯನ್ನು ನಿನ್ನ ತೀರಪ್ರದೇಶದಲ್ಲಿ ತೊರೆದು ವೈರಾಗ್ಯವನ್ನು ಹೊಂದಿರುವನು. ಈಗ ಈಕೆ ಒಬ್ಬಳು ಈ ಭೂಮಿಯಲ್ಲಿ ಹೇಗೆ ಇದ್ದಾಳು ? ಇವಳನ್ನು ಇಲ್ಲಿಯೇ ಸಮುದ್ರದೊಳಗೆ ಮಲ

ಗಿರುವ ವಿಷ್ಣುವಿನ ನಾಭಿಕಮಲದಲ್ಲಿ ಮಂಡಿಸಿರುವ ಬ್ರಹ್ಮನ ಬಳಿಗೆ ಕರೆದುಕೊಂಡು ಹೋಗಿ ಸೇರಿಸು" ಇಲ್ಲಿ ಬ್ರಹ್ಮನ ಬಳಿಗೆ ಕರೆದೊಯ್ಯಲು ಗೋದಾವರೀನದಿಗೆ ಹೇಗೆ ಸಾಧ್ಯವಾದೀತು ಎಂಬ ಅಂಶವು ಸಹಜವಾಗಿ ಸಂಭವಿಸದೇ ಇರುವುದರಿಂದ ಅದನ್ನು ಸಮರ್ಥಿಸಬೇಕಾಗಿದೆ. ಅದಕ್ಕಾಗಿಯೇ "ಸಮುದ್ರಮಧ್ಯದಲ್ಲಿಯೇ ವಿಷ್ಣು ಮಲಗಿದ್ದಾನೆ. ಅವನ ನಾಭಿಕಮಲದಲ್ಲಿಯೇ ಬ್ರಹ್ಮನಿರುವನು. ಗೋದಾವರಿಯು ಹೇಗಾದರೂ ಸಮುದ್ರವನ್ನು ಸೇರಲಿರುವಳು. ಹಾಗಿ ಹೋಗುವಾಗ ಜೊತೆಯಲ್ಲಿಯೇ ಸರಸ್ವತಿಯನ್ನು ಕರೆದೊಯ್ದು ಬ್ರಹ್ಮನೊಡನೆ ಸೇರಿಸಲಿಕ್ಕೆ ಸಾಧ್ಯವಿದೆ" ಎಂಬ ಅಂಶವನ್ನು ತಿಳಿಸುವ ವಿಶೇಷಣವನ್ನು ಇಲ್ಲಿ ಕವಿಯು ಪ್ರಯೋಗಿಸಿರುವನು. ಇಂತಹ ವಿಶೇಷಣವನ್ನು ಕೊಡುವುದೇ ಶ್ಲೇಷವೆಂಬ ಗುಣವೆನಿಸಿದೆ ಎಂದು ಹೇಳಿ ಜಯದೇವನು "ಹೊಂದಿಕೆಯಾಗದಂತಹ ವಸ್ತುವನ್ನು ಹೊಂದಿಸುವಂತೆ ವರ್ಣಿಸುವುದೇ ಶ್ಲೇಷ"ವೆಂದು ಅದರ ಲಕ್ಷಣವನ್ನೂ ಸಹ ತಿಳಿಸಿರುವನು. ವಾಸ್ತವವಾಗಿ ವಿಚಾರಮಾಡಿ ನೋಡಿದರೆ ಇಲ್ಲಿ "ಅರ್ಣವಮಧ್ಯ" ಎಂಬ ಸಮಸ್ತ ಪದದಲ್ಲಿ ತೋರುವ ವಿಶೇಷಣವೇ ಪ್ರಕೃತಾರ್ಥವನ್ನು ಸಮರ್ಥನಮಾಡುವ ಪ್ರಯುಕ್ತ ಇದು ಪದಾರ್ಥಹೇತುಕಕಾವ್ಯಲಿಂಗವೇ ಆಗಬೇಕು. ಇಲ್ಲಿ ಇದನ್ನು ತಪ್ಪಿಸುವಂತಹ ಬೇರೆ ಯಾವ ಅಂಶವನ್ನೂ ತಿಳಿಸಿಲ್ಲ. ಆದ್ದರಿಂದ ಈ ಶ್ಲೋಕವು ಕಾವ್ಯಲಿಂಗಕ್ಕೆ ಉದಾಹರಣವಾಗುವುದೇ ಹೊರತು ಇದು ಶ್ಲೇಷಗುಣಕ್ಕೆ ಉದಾಹರಣವಾಗುವ ಸಂಭವವಿಲ್ಲ.

ನನು ಸಾಭಿಪ್ರಾಯಪದಾರ್ಥವಾಕ್ಯಾರ್ಥವಿನ್ಯಸನರೂಪಾತ್ಪರಿಕರಾತ್ ಕಾವ್ಯಲಿಂಗಸ್ಯ ಕಿಂ ಭೇದಕಮ್ ? ಉಚ್ಯತೇ. ಪರಿಕರೇ ಪದಾರ್ಥವಾಕ್ಯಾರ್ಥಬಲಾತ್ ಪ್ರತೀಯಮಾನಾರ್ಥೌ ವಾಚ್ಯೋಪಸ್ಕಾರಕತಾಂ ಭಜತಃ. ಕಾವ್ಯಲಿಂಗೇ ತು ಪದಾರ್ಥವಾಕ್ಯಾರ್ಥಾವೇವ ಹೇತುಭಾವಂ ಭಜತಃ. ನನು ಯದ್ಯಪಿ 'ಸುಧಾಲೋಕೋಚ್ಛೇದಿನಿ' ಇತ್ಯಾದಿ ಪದಾರ್ಥಹೇತುಕಾವ್ಯಲಿಂಗೋದಾಹರಣೇ 'ಅಗ್ರೇಽಪ್ಯನತಿಮಾನ್' ಇತ್ಯಾದಿವಾಕ್ಯಾರ್ಥ ಹೇತುಕ ಕಾವ್ಯಲಿಂಗೋದಾಹರಣೇ ಚ ಪದಾರ್ಥವಾಕ್ಯಾರ್ಥವೇವ ಹೇತುಭಾವಂ ಭಜತಃ ; ತಥಾಪಿ 'ಪಶುನಾಪ್ಯಪುರಸ್ಕೃತೇನ' ಇತಿ ಪದಾರ್ಥಹೇತುಕೋದಾಹರಣೇ 'ಮಚ್ಚಿತ್ತೇಽಸ್ತಿ ತ್ರಿಲೋಚನಃ' ಇತಿ ವಾಕ್ಯಾರ್ಥಹೇತುಕೋದಾಹರಣೇ ಚ ಪ್ರತೀಯಮಾನಾರ್ಥಸ್ಯಾಪಿ ಹೇತುಕೋಟ್ಯನುಪ್ರವೇಶೋ ದೃಶ್ಯತೇ. ಪಶುನೇತಿ ಹಿ ಅವಿವೇಕಿತ್ವಾಭಿಪ್ರಾಯಗರ್ಭಂ 'ವಿದುಷೀತ್ಯಸ್ಯ ಪ್ರತಿನಿರ್ದೇಶತ್ವಾತ್. ತ್ರಿಲೋಚನ ಇತಿ ಚ ಕಂದರ್ಪದಾಹಕತೃತೀಯಲೋಚನತ್ವಾಭಿಪ್ರಾಯಗರ್ಭಂ' ಕಂದರ್ಪಜಯೋಪಯೋಗಿತ್ವಾತ್ತಸ್ಯ. ಸತ್ಯಮ್. ತಥಾಪಿ ನ ತಯೋಃ ಪರಿಕರ ಏವ ಕಿಂತು ತದುತ್ಥಾಪಿತು ಕಾವ್ಯಲಿಂಗಮಪಿ, ಪ್ರತೀಯಮಾನಾವಿವೇಕವಿಶಿಷ್ಟೇನ ಪಶುನಾಪಿ ಅಪುರಸ್ಕೃತತ್ವಸ್ಯ ಅನೇಕಪದಾರ್ಥಸ್ಯ ಪ್ರತೀಯಮಾನ

ಕಂದರ್ಪದಾಹಕತೃತೀಯಲೋಚನವಿಶಿಷ್ಟಸ್ಯ ಶಿವಸ್ಯ ಚಿತ್ತೇ ಸನ್ನಿಧಾನಸ್ಯ ಚ ವಾಕ್ಯಾರ್ಥಸ್ಯ ವಾಚ್ಯಸ್ಯೈವ ಹೇತುಭಾವಾತ್. ನ ಹಿ ತಯೋರ್ವಾಚ್ಯಯೋರ್ಹೇತು ಭಾವೇ ತಾಭ್ಯಾಂ ಪ್ರತೀಯಮಾನಂ ಮಧ್ಯೇ ಕಿಂಚಿದ್ದ್ವಾರಮಸ್ತಿ ಯಥಾ 'ಸರ್ವಾ ಶುಚಿನಿಧಾನಸ್ಯ' ಇತ್ಯಾದಿನಾ ಅನೇಕಪದಾರ್ಥೇನ ಪ್ರತೀಯಮಾನಂ ಶರೀರಸ್ಯ ಅಸಂರಕ್ಷಣೀಯತ್ವಮ್. ತಥಾ ಚ ವಾಕ್ಯಾರ್ಥಪರಿಕರೋದಾಹರಣೇ ಪರ್ಯಾಯೋಕ್ತ ವಿಧಯಾ ತತ್ತದ್ವಾಕ್ಯಾರ್ಥೇನ ಪ್ರತೀಯಮಾನಂ 'ನಾಹಂ ವ್ಯಾಸಃ' ಇತ್ಯಾದಿ. ತಸ್ಮಾತ್ಪಶುನೇತ್ಯತ್ರ, ತ್ರಿಲೋಚನ ಇತ್ಯತ್ರ ಚ ಪ್ರತೀಯಮಾನಂ ವಾಚ್ಯಸ್ಯೈವ ಪದಾರ್ಥಸ್ಯ ವಾಕ್ಯಾರ್ಥಸ್ಯ ಚ ಹೇತುಭಾವೋಪಪಾದಕತಯಾ ಕಾವ್ಯಲಿಂಗಸ್ಯ ಲಿಂಗಮೇವ. ಯಥಾ 'ತ್ವನ್ನೇತ್ರಸಮಾನಕಾಂತಿ ಸಲಿಲೇ ಮಗ್ನಂ ತದಿಂದೀವರಮ್' ಇತ್ಯನೇಕವಾಕ್ಯಾರ್ಥಹೇತುಕಕಾವ್ಯಲಿಂಗೋದಾಹರಣೇ ತ್ವನ್ನೇತ್ರಸಮಾನಕಾಂತಿ' ಇತ್ಯಾದೀನಿ ಇಂದೀವರಶಶಿಹಂಸವಿಶೇಷಣಾನಿ ತೇಷಾಂ ವಾಕ್ಯಾರ್ಥಾನಾಂ ಹೇತು ಭಾವೋಪಪಾದಕಾನೀತಿ. ತತ್ರ ವಾಕ್ಯಾರ್ಥಹೇತುಕಕಾವ್ಯಲಿಂಗೇ ಪದಾರ್ಥಹೇತು ಕಕಾವ್ಯಲಿಂಗಮಂಗಮಿತಿ ನ ತಯೋಃ ಕಾವ್ಯಲಿಂಗೋದಾಹರಣತ್ವೇ ಕಾಚಿದನುಪಪತ್ತಿಃ

ಅಭಿಪ್ರಾಯಪೂರ್ಣ (ಅರ್ಥಗರ್ಭಿತ)ವಾದ ಪದಾರ್ಥವನ್ನಾಗಲೀ ವಾಕ್ಯಾರ್ಥ ವನ್ನಾಗಲೀ ಪ್ರಯೋಗಿಸುವುದೇ ಪರಿಕರಾಲಂಕಾರವೆನಿಸುವುದರಿಂದ ಅದಕ್ಕೂ ಕಾವ್ಯ ಲಿಂಗಕ್ಕೂ ಭೇದವೇನು ? ಎಂದರೆ ಅವೆರಡಕ್ಕೂ ಭೇದವಿದೆ ಎಂಬುದನ್ನು ಈಗ ತಿಳಿಸುತ್ತಾನೆ. ಪರಿಕರಾಲಂಕಾರದಲ್ಲಿ ಪದಾರ್ಥವಾಕ್ಯಾಗಳ ಬಲದಿಂದ ತೋರುವ ವ್ಯಂಗ್ಯಾರ್ಥವು ವಾಚ್ಯಾರ್ಥಕ್ಕೆ ಪೋಷಕವಾಗಿರುತ್ತದೆ. ಕಾವ್ಯಲಿಂಗಾಲಂಕಾರ ದಲ್ಲಾದರೋ ಪದಾರ್ಥವಾಕ್ಯಾರ್ಥಗಳೇ ಒಂದು ಸಮರ್ಥನೀಯವಾದ ಅಂಶವನ್ನು ಸಮರ್ಥಿಸಲು ಕಾರಣವೆನಿಸುತ್ತವೆ. 'ಸುಖಾಲೋಕೋಚ್ಛೇದಿನಿ' ಎಂಬ ಪದದ ಅರ್ಥವೇ ಮೋಕ್ಷವನ್ನು ಮಹಮೋಹವೆಂದು ಸಮರ್ಥಿಸಿರುವ ಕಡೆಯಲ್ಲೂ 'ಅಗ್ರೇಽಪ್ಯನತಿಮಾನ್' ಎಂಬ ವಾಕ್ಯದ ಅರ್ಥವೇ ಮುಂದಿನ ಜನ್ಮದಲ್ಲಿ ಮಾಡ ಬಹುದಾದ ಅಪರಾಧವನ್ನು ಸಮರ್ಥಿಸಲು ಹೇತುವೆನಿಸಿರುವ ಕಡೆಯಲ್ಲೂ ಈ ಪದಾರ್ಥ ವಾಕ್ಯಾರ್ಥಗಳೇ ನೇರವಾಗಿ ಹೇತುವೆನಿಸಿದೆ ಎಂಬುದನ್ನು ಒಪ್ಪಬಹುದು. ಇಲ್ಲಿ ವ್ಯಂಗ್ಯಾರ್ಥದ ಸಂಪರ್ಕವನ್ನು ಒಪ್ಪಬೇಕಾಗಿಲ್ಲ. ಆದರೂ "ಪಶುನಾಪ್ಯ ಪುರಸ್ಕೃತೇನ" ಎಂಬ ಪದದ ಅರ್ಥವೇ ಕೇಶಪಾಶಕ್ಕೆ ಹೋಲಿಕೆಯಿಲ್ಲವೆಂಬ ಅಂಶ ವನ್ನು ಸಮರ್ಥಿಸಲು ಹೇತುವೆನಿಸಿರುವ ಕಡೆಯಲ್ಲೂ 'ಮಚ್ಚಿತ್ತೇಽಸ್ತಿತ್ರಿಲೋಚನಃ' ಎಂದು ವಾಕ್ಯದ ಅರ್ಥವೇ ಮನ್ಮಥನ ಸೋಲನ್ನು ಸಮರ್ಥಿಸಲು ಹೇತುವೆನಿಸಿರುವ ಕಡೆಯಲ್ಲೂ ವ್ಯಂಗ್ಯಾರ್ಥವೂ ಸಹ ಕಾರಣಕೋಟಿಯಲ್ಲಿ ಪ್ರವೇಶಿಸಿರುವುದಾಗಿ ಕಂಡುಬರುತ್ತವೆ 'ಪಶಾನ್' ಎಂಬಲ್ಲಿ ಪಶುಪದದಿಂದ ವಿವೇಕವಿಲ್ಲದವನು ಎಂಬ ಅಭಿಪ್ರಾಯವು ವ್ಯಂಗ್ಯವಾಗಿ ತೋರುತ್ತದೆ. ಇದನ್ನು 'ವಿದುಷೀ' ಎಂಬುದಕ್ಕೆ

ಎದುರಾಳಿಯಾಗಿ ಇಲ್ಲಿ ಪ್ರಯೋಗಿಸಲಾಗಿದೆ. ಯುಕ್ತಾಯುಕ್ತವಿವೇಕವೇ ಇಲ್ಲದ ಪ್ರಾಣಿಯೂ ಸಹ ಚಾಮರವನ್ನು ತಿರಸ್ಕರಿಸಿ ಜನರಿಗೆ ತೋರಿಸದಂತೆ ಹಿಂದಕ್ಕೆ ಇಟ್ಟುಕೊಂಡಿದೆ. ಇದಕ್ಕೆ ಪ್ರತಿಯಾಗಿ "ಪಂಡಿತೆ ಎನಿಸಿದ ದಮಯಂತಿಯು ಕೇಶಪಾಶವನ್ನು ಮೇಲ್ಗಡೆ ಧರಿಸಿ ಪುರಸ್ಕರಿಸಿರುವಳು" ಎಂದು ತಿಳಿಸಿದ್ದರಿಂದ 'ಪಶುನಾಪಿ' ಎಂಬಲ್ಲಿ ಅದಕ್ಕೆ ವಿರುದ್ಧವಾದ ಅಭಿಪ್ರಾಯವು ವ್ಯಂಗ್ಯವಾಗಿ ತೋರುವುದನ್ನು ಒಪ್ಪಲೇಬೇಕು. 'ಮಚ್ಚಿತ್ತೇಽಸ್ತಿ ತ್ರಿಲೋಚನಃ' ಎಂಬಲ್ಲಿಯೂ ಸಹ ಈ ಪದದಿಂದ 'ಮನ್ಮಥನನ್ನು ಸುಡುವಂತಹ ಮೂರನೆಯ ಕಣ್ಣು ಶಿವನಲ್ಲಿ ಇತ್ತು' ಎಂಬ ಅಭಿಪ್ರಾಯವು ವ್ಯಂಗ್ಯವಾಗಿ ತೋರುತ್ತದೆ. ಮನ್ಮಥನನ್ನು ಸುಡಲಿಕ್ಕೆ ಮೂರನೆಯ ಕಣ್ಣನ್ನೇ ಉಪಯೋಗಿಸಬೇಕಾಗಿತ್ತು. ಹೀಗೆ ಕಾವ್ಯಲಿಂಗದ ಉದಾಹರಣಗಳಲ್ಲೂ ವ್ಯಂಗ್ಯಾರ್ಥದ ಸಂಪರ್ಕವಿರುವ ಪ್ರಯುಕ್ತ ಇವೂ ಪರಿಕರಕ್ಕೇ ಅನ್ವಯಿಸಲಿ ; ಕಾವ್ಯಲಿಂಗವೇಕೆ ಬೇಕು ? ಎಂದು ಕೇಳುವುದಾದರೆ ಇದನ್ನು ಒಪ್ಪುವುದರಲ್ಲಿ ತಪ್ಪೇನಿಲ್ಲವೆಂದು ತಿಳಿಸುತ್ತಾನೆ. ಹೀಗೆ ಈ ಉದಾಹರಣಗಳಲ್ಲಿ ವ್ಯಂಗ್ಯಾರ್ಥವು ತೋರಿ ಇಂತಹ ಅರ್ಥವನ್ನೊಳಗೊಂಡ ಪದಾರ್ಥವಾಕ್ಯಾರ್ಥಗಳೇ ಒಂದು ಅಂಶವನ್ನು ಸಮರ್ಥನಮಾಡಲು ಹೇತುವೆನಿಸಿದರೂ ಸಹ ಅಂತಹ ಕಡೆಗಳಲ್ಲಿ ಪರಿಕರಾಲಂಕಾರವನ್ನು ಹೇಳುವುದರಲ್ಲಿ ತಪ್ಪೇನೂ ಇಲ್ಲ. ಆದರೆ ಅವುಗಳಿಂದ ಹೊರಹೊಮ್ಮುವ ಕಾವ್ಯಲಿಂಗವೂ ಅಲ್ಲಿ ಉಂಟೆಂಬುದನ್ನು ಒಪ್ಪಲೇಬೇಕು. ಅಲ್ಲಿ ತೋರುವ ಅವಿವೇಕಿ ಎಂಬ ವ್ಯಂಗ್ಯಾರ್ಥಗಳನ್ನೊಳಗೊಂಡು 'ಪಶುನಾಪ್ಯಪುರಸ್ಕೃತೇನ' ಎಂಬ ಅನೇಕ ಪದಗಳಲ್ಲಿ ತೋರುವ ಅರ್ಥವೂ, ಹಾಗೆಯೇ "ಮಚ್ಚಿತ್ತೇಽಸ್ತಿ ತ್ರಿಲೋಚನಃ" ಎಂಬಲ್ಲಿ ತೋರುವ "ಮನ್ಮಥನನ್ನು ಸುಡುವ ಲೋಚನ" ಎಂಬ ವ್ಯಂಗ್ಯಾರ್ಥವನ್ನೊಳಗೊಂಡ ಶಿವನು ಮನಸ್ಸಿನಲ್ಲಿಯೇ ಇರುವನೆಂಬ ವಾಕ್ಯಾರ್ಥವೂ ಕ್ರಮವಾಗಿ ಚಾಮರವು ಕೇಶಪಾಶಕ್ಕೆ ಹೋಲಿಕೆಯಾಗಲಿಲ್ಲವೆಂಬ ವಾಚ್ಯಾರ್ಥವನ್ನೂ 'ಮನ್ಮಥನು ಸೋತನು' ಎಂಬ ವಾಚ್ಯಾರ್ಥವನ್ನೂ ಸಮರ್ಥನಮಾಡಲಿಕ್ಕೆ ಹೇತುವೆನಿಸಿವೆಯಾದ್ದರಿಂದ ಇಲ್ಲಿ ವ್ಯಂಗ್ಯಾರ್ಥವಿದ್ದರೂ ಸಹ ಕಾವ್ಯಲಿಂಗವನ್ನು ಒಪ್ಪದೇ ಇರಲಿಕ್ಕಾಗುವುದಿಲ್ಲ. ಹೀಗೆ ಪದಾರ್ಥವಾಕ್ಯಾರ್ಥಗಳೆರಡೂ ವಾಚ್ಯವೇ ಆಗಿದ್ದು ಸಮರ್ಥಿಸಬೇಕಾದ ಅರ್ಥವನ್ನು ಸಮರ್ಥಿಸಲು ಹೇತುವೆನಿಸಿದರೆ ಅವುಗಳಿಂದ ವ್ಯಂಗ್ಯಾರ್ಥವು ತೋರುವುದಕ್ಕೆ ಮಧ್ಯದಲ್ಲಿ ಯಾವ ಸಹಾಯವೂ ಬೇಕಾಗಿಲ್ಲ. 'ಸರ್ವಾಶುಚಿನಿಧಾನಸ್ಯ' ಎಂಬ ಪದಾರ್ಥಪರಿಕರಾಲಂಕಾರದ ಉದಾಹರಣದಲ್ಲಿ ಅನೇಕ ಪದಾರ್ಥಗಳಿಂದ ಶರೀರವು ರಕ್ಷಣೆಗೆ ಯೋಗ್ಯವಾದ್ದಲ್ಲವೆಂಬ ಅರ್ಥವು ವ್ಯಂಗ್ಯವಾಗಿ ತೋರುತ್ತದೆ. ಹಾಗೆಯೇ ವಾಕ್ಯಾರ್ಥಪರಿಕರಾಲಂಕಾರದ ಉದಾಹರಣದಲ್ಲಿ ಪರ್ಯಾಯೋಕ್ತ್ಯಲಂಕಾರದ ರೀತಿಯಿಂದ ಆಯಾಯ ವಾಕ್ಯಾರ್ಥಗಳಿಂದಲೇ ನೇರವಾಗಿ 'ನಾಹಂ ವ್ಯಾಸಃ' (ನಾನು ವ್ಯಾಸನಲ್ಲ) ಇದೇ ಮೊದಲಾದ

ಅರ್ಥಗಳು ತೋರುತ್ತವೆ. ಆದ್ದರಿಂದ 'ಪಶುನಾ' ಎಂಬಲ್ಲೂ, 'ತ್ರಿಲೋಚನಃ' ಎಂಬಲ್ಲೂ ತೋರುವ ವ್ಯಂಗ್ಯಾರ್ಥವು ವಾಚ್ಯವೇ ಆಗಿರುವ ಪದಾರ್ಥಕ್ಕೂ ವಾಕ್ಯಾರ್ಥಕ್ಕೂ ಬೇರೊಂದು ಅಂಶವನ್ನು ಸಮರ್ಥನಮಾಡಲಿಕ್ಕೆ ಹೇತುವೆನಿಸಲು ಪೋಷಕವಾಗಿರುವುದರಿಂದ ಕಾವ್ಯಲಿಂಗಕ್ಕೆ ಅದು ವಿರುದ್ಧವಾಗುವುದಿಲ್ಲ. ಇಲ್ಲಿ ವ್ಯಂಗ್ಯಾರ್ಥವಿದ್ದರೂ ಪೋಷಕವಾಗಬಹುದೇ ಹೊರತು ದ್ವಾರವೆನಿಸುವಂತಿಲ್ಲ. ಆದರೆ ಪರಿಕರದಲ್ಲಾದರೋ ವ್ಯಂಗ್ಯಾರ್ಥವು ತೋರಲೇಬೇಕೆಂಬ ನಿಯಮವಿದೆ. ಕಾವ್ಯಲಿಂಗದಲ್ಲಿ ಅದು ತೋರಿದರೂ ತೋರಬಹುದು. ಇದ್ದರೆ ಅದು ಸಮರ್ಥನಕ್ಕೆ ಪೋಷಕವಾಗಿರುವುದೇ ಹೊರತು ಆದರ ಮೂಲಕವೇ ಸಮರ್ಥನಮಾಡಬೇಕೆಂಬ ನಿಯಮವಿಲ್ಲ. ಹೀಗೆ ಪರಿಕರವು ಕಾವ್ಯಲಿಂಗಕ್ಕೆ ಉಪಕಾರವಾಗುವುದರಿಂದ ಅಂಗವೆನಿಸಿದೆ. "ನಿನ್ನ ಕಣ್ಣುಗಳಿಗೆ ಸಮಾನವಾದ ಕಾಂತಿಯುಳ್ಳ ಯಾವ ಕಮಲವುಂಟೋ ಅದೂ ಸಹ ನೀರಿನಲ್ಲಿ ಮುಳುಗಿತು" ಎಂಬ ಅನೇಕ ವಾಕ್ಯಾರ್ಥಗಳೇ ಸಮರ್ಥನಕ್ಕೆ ಹೇತುವೆನಿಸಿರುವ ಕಾವ್ಯಲಿಂಗದ ಉದಾಹರಣದಲ್ಲಿ ಕಮಲ, ಚಂದ್ರ, ಹಂಸ ಇವುಗಳಿಗೆ ವಿಶೇಷಣವಾಗುವ 'ತ್ವನ್ನೇತ್ರಸಮಾನಕಾಂತಿ' ಇದೇ ಮೊದಲಾದವು ಅಲ್ಲಿರುವ ವಾಕ್ಯಾರ್ಥಗಳಿಗೆ "ವಿನೋದಪಡುವುದನ್ನೂ ಸಹ ದೈವವು ಸಹಿಸುವುದಿಲ್ಲ"ವೆಂಬ ಅಂಶವನ್ನು ಸಮರ್ಥಿಸಲು ಕಾರಣವೆನಿಸಲಿಕ್ಕೆ ಪೋಷಕವೆನಿಸಿವೆ. ಆದ್ದರಿಂದ ಪದದಲ್ಲಾಗಲೀ ವಾಕ್ಯದಲ್ಲಾಗಲೀ ವ್ಯಂಗ್ಯಾರ್ಥವು ಸೇರಿಕೊಂಡಿದ್ದರೂ ಸಮರ್ಥಿಸಬೇಕಾದ ಅಂಶವನ್ನು ಸಮರ್ಥನಮಾಡಲಿಕ್ಕೆ ಯಾವ ಆತಂಕವೂ ಸಂಭವಿಸುವಂತಿಲ್ಲ. ಇಲ್ಲಿ ಸಮರ್ಥನವು ಮುಖ್ಯವೇ ಹೊರತು ವ್ಯಂಗ್ಯಾರ್ಥವು ಮುಖ್ಯವಲ್ಲ. ಅದು ಕೆಲವೆಡೆ ತೋರಬಹುದು ; ಕೆಲವೆಡೆ ತೋರದೆ ಇರಬಹುದು. ತೋರಿದರೆ ಪರಿಕರವು ಕಾವ್ಯಲಿಂಗಕ್ಕೆ ಪೋಷಕವಾಗುವುದೇ ಹೊರತು ದ್ವಾರವೆನಿಸಲಾರದು. ಆದರಿಂದಲೇ ಇಲ್ಲಿ ಸಮರ್ಥನಮಾಡಬೇಕೆಂಬ ನಿರ್ಬಂಧವಿಲ್ಲ. ಹೀಗೆ ವಾಕ್ಯಾರ್ಥವೇ ಹೇತುವೆನಿಸಿದ ಕಾವ್ಯಲಿಂಗಕ್ಕೆ ಪದಾರ್ಥವೇ ಸಮರ್ಥನದ ಹೇತುವೆನಿಸಿದ ಕಾವ್ಯಲಿಂಗವು ಅಂಗವೆನಿಸಿದ್ದರಿಂದ 'ಪಶುನಾಪಿ' ಎಂಬಲ್ಲೂ "ಮಚ್ಚಿತ್ತೇಽಸ್ತಿ ತ್ರಿಲೋಚನಃ" ಎಂಬಲ್ಲೂ ಕಾವ್ಯಲಿಂಗವಿರುವ ಬಗ್ಗೆ ಯಾವ ಅನೌಚಿತ್ಯವೂ ಕಂಡುಬರುವುದಿಲ್ಲ.

## ೬೧. ಅರ್ಥಾಂತರನ್ಯಾಸಾಲಂಕಾರ

ಉಕ್ತಿರರ್ಥಾಂತರನ್ಯಾಸಃ ಸ್ಯಾತ್ಸಾಮಾನ್ಯವಿಶೇಷಯೋಃ ।
ಹನೂಮಾನಬ್ಧಿಮತರದ್ದುಷ್ಕರಂ ಕಿಂ ಮಹಾತ್ಮನಾಮ್ ॥೧೨೦॥
ಗುಣವದ್ವಸ್ತುಸಂಸರ್ಗಾದ್ಯಾತಿ ಸ್ವಲ್ಪೋಽಪಿ ಗೌರವಮ್ ।
ಪುಷ್ಪಮಾಲಾನುಷಂಗೇಣ ಸೂತ್ರಂ ಶಿರಸಿ ಧಾರ್ಯತೇ ॥೧೨೧॥

ಸಾಮಾನ್ಯ ವಿಶೇಷಯೋರ್ದ್ವಯೋರಪ್ಯುಕ್ತಿರರ್ಥಾಂತರನ್ಯಾಸಃ ತಯೋಶ್ಚ ಏಕಂ ಪ್ರಸ್ತುತಂ ಅನ್ಯದಪ್ರಸ್ತುತಂ ಭವತಿ. ತತಶ್ಚ ವಿಶೇಷೇ ಪ್ರಸ್ತುತೇ ತೇನ ಸಹ ಅಪ್ರಸ್ತುತಸಾಮಾನ್ಯರೂಪಸ್ಯ, ಸಾಮಾನ್ಯೇ ಪ್ರಸ್ತುತೇ ತೇನ ಸಹ ಅಪ್ರಸ್ತುತ-ವಿಶೇಷರೂಪಸ್ಯ ಅರ್ಥಾಂತರಸ್ಯ ನ್ಯಸನಂ ಅರ್ಥಾಂತರನ್ಯಾಸ ಇತ್ಯುಕ್ತಂ ಭವತಿ ತತ್ರ ಆದ್ಯಸ್ಯ ದ್ವಿತೀಯಾರ್ಧಮುದಾಹರಣಂ, ದ್ವಿತೀಯಸ್ಯ ದ್ವಿತೀಯಶ್ಲೋಕಃ. ನನ್ವಯಂ ಕಾವ್ಯಲಿಂಗಾನ್ನಾತಿರಿಚ್ಯತೇ ; ತಥಾ ಹಿ. ಉದಾಹರಣದ್ವಯೇಽಪಿ ಅಪ್ರಸ್ತುತಯೋಃ ಸಾಮಾನ್ಯವಿಶೇಷಯೋಃ ಉಕ್ತಿಃ ಪ್ರಸ್ತುತಯೋಃ ವಿಶೇಷಸಾಮಾನ್ಯಯೋಃ ಸಮರ್ಥನ ಏವೋಪಕರೋತೀತಿ ವಿವೇಕ್ತವ್ಯಮ್. ನ ಹಿ ಸರ್ವಥೈವ ಪ್ರಸ್ತುತಾನನ್ವಯಿ ಅಪ್ರಸ್ತುತಾಭಿಧಾನಂ ಯುಜ್ಯತೇ ನ ತಾವದಪ್ರಸ್ತುತಪ್ರಶಂಸಾಯಾಮಿವ ಪ್ರಸ್ತುತವ್ಯಂಜಕತಯಾ, ಪ್ರಸ್ತುತಯೋರಪಿ ವಿಶೇಷಸಾಮಾನ್ಯಯೋಃ ಸ್ವಶಬ್ದೋಪಾತ್ತತ್ವಾತ್ ನಾಪ್ಯಸಮಾನಾಲಂಕಾರ ಇವ ಪ್ರಸ್ತುತಪ್ರತೀತಿಜನಕತಯಾ, ತದ್ವದಿಹ ವ್ಯಾಪ್ತಿ ಪಕ್ಷ ಧರ್ಮತಾದ್ಯಭಾವಾತ್. ನಾಪಿ ದೃಷ್ಟಾಂತಾಲಂಕಾರ ಇವ ಉಪಮಾನತಯಾ

ವಿಸ್ರಬ್ಧಘಾತದೋಷಂ ಸ್ವವಧಾಯ ಬಲಸ್ಯ ವೀರಕೋಪಕರಃ ।
ನವತರುಭಂಗಧ್ವನಿರಿವ ಹರಿನಿದ್ರಾತಸ್ಕರಃ ಕರಿಣಃ ॥

ಇತ್ಯಾದಿಷು ಸಾಮಾನ್ಯೇ ವಿಶೇಷಸ್ಯ ಉಪಮಾನತ್ವದರ್ಶನೇಽಪಿ ವಿಶೇಷೇ ಸಾಮಾನ್ಯಸ್ಯ ಕ್ವಚಿದಪಿ ತದದರ್ಶನಾತ್. ಉಪಮಾನತಯಾ ತದನ್ವಯೇ ಸಾಮಂಜಸ್ಯಾಪ್ರತೀತೇಶ್ಚ. ತಸ್ಮಾತ್ಪ್ರಸ್ತುತಸಮರ್ಥಕತಯೈವ ಅಪ್ರಸ್ತುತಸ್ಯೋಪಯೋಗಃ ಇಹಾಪಿ ವಕ್ತವ್ಯಃ. ತತಶ್ಚ ವಾಕ್ಯಾರ್ಥಹೇತುಕಂ ಕಾವ್ಯಲಿಂಗಮೇವ ಅತ್ರಾಪಿ ಸ್ಯಾತ್ ; ನ ತ್ವಲಂಕಾರಾಂತರಸ್ಯ ಅವಕಾಶ ಇತಿ ಚೇತ್ ಅತ್ರ ಕೇಚಿತ್. ಸಮರ್ಥನಸಾಪೇಕ್ಷಸ್ಯ ಸಮರ್ಥನೇ ಕಾವ್ಯಲಿಂಗಂ, ನಿರಪೇಕ್ಷಸ್ಯಾಪಿ ಪ್ರತೀತಿವೈಶದ್ಯಾತ್ ಸಮರ್ಥನೇಽರ್ಥಾಂತರನ್ಯಾಸಃ. ನ ಹಿ ಯತ್ತ್ವನ್ನೇತ್ರಸಮಾನಕಾಂತಿ' ಇತ್ಯಾದಿ ಕಾವ್ಯಲಿಂಗೋದಾಹರಣೇಷ್ವಿವ

ಅಥೋಪಗೂಢೇ ಶರದಾ ಶಶಾಂಕೇ
ಪ್ರಾವೃಡ್ಯಯೌ ಶಾಂತತಟಿತ್ಕಟಾಕ್ಷಾ ।
ಕಾಸಾಂ ನ ಸೌಭಾಗ್ಯಗುಣೋಽಂಗನಾನಾಂ
ನಷ್ಟಃ ಪರಿಭ್ರಷ್ಟಪಯೋಧರಾಣಾಮ್ ।
ದಿವಾಕರಾದ್ರಕ್ಷತಿ ಯೋ ಗುಹಾಸು
ಲೀನಂ ದಿವಾ ಭೀತಮಿವಾಂಧಕಾರಮ್ ।
ಕ್ಷುದ್ರೇಽಪಿ ನೂನಂ ಶರಣಂ ಪ್ರಪನ್ನೇ
ಮಮತ್ವಮುಚ್ಚೈಃ ಶಿರಸಾಮತೀವ ॥

ದಂತೆ ಇವನ ಆಕಾರವೂ ಗಂಭೀರವಾಗಿದೆ' ಹೀಗೆ ಪ್ರಕೃತವಿಶೇಷಕ್ಕೆ ಸಾಮಾನ್ಯವು ಉಪಮಾನವಾಗಿ ಕಂಡುಬಂದಿದ್ದೆ ಎಂದು ಹೇಳುವುದಾದರೆ ಹಾಗೆ ಅನ್ವಯಿಸುವುದು ಸಮಂಜಸವಾಗುವುದಿಲ್ಲ. ಅದು ಅಯುಕ್ತವೇ ಆದೀತು. ಆದ್ದರಿಂದ ಪ್ರಕೃತಾರ್ಥವನ್ನು ಸಮರ್ಥನಮಾಡಲಿಕ್ಕಾಗಿಯೇ ಅಪ್ರಕೃತಾರ್ಥವನ್ನು ಉಪಯೋಗಿಸಿಕೊಳ್ಳಬೇಕೆಂದೇ ಕಾವ್ಯಲಿಂಗದಂತೆ ಇಲ್ಲಿಯೂ ಹೇಳಬೇಕಾಗುತ್ತದೆ. ಇದರಿಂದ ವಾಕ್ಯಾರ್ಥವೇ ಹೇತುವೆನಿಸಿರುವ ಕಾವ್ಯಲಿಂಗವೇ ಅರ್ಥಾಂತರನ್ಯಾಸದ ಉದಾಹರಣಗಳಿಗೂ ಸಹಜವಾಗಿ ಹೊಂದಿಕೆಯಾಗುವ ಪ್ರಯುಕ್ತ ಇದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ. ಇದನ್ನು ಅಪ್ರಸ್ತುತಪ್ರಶಂಸೆ, ಅನುಮಾನ, ದೃಷ್ಟಾಂತಗಳಲ್ಲಿ ಸೇರಿಸಲಿಕ್ಕಾಗದ್ದರಿಂದಲೂ, ಕಾವ್ಯಲಿಂಗದ ಲಕ್ಷಣವು ಇಲ್ಲಿಯೂ ಅನ್ವಯಿಸುವುದರಿಂದಲೂ ಇದನ್ನು ಕಾವ್ಯಲಿಂಗದಲ್ಲಿ ಸೇರಿಸುವುದೇ ಯುಕ್ತವೆಂದು ಆಕ್ಷೇಪವು ಬರುತ್ತದೆ. ಇದಕ್ಕೆ ಸಮಾಧಾನವನ್ನು ಕೆಲವರು ಹೀಗೆ ಹೇಳುತ್ತಾರೆ :

ಸಮರ್ಥಿಸಬೇಕಾದ ಅರ್ಥವನ್ನು ಸಮರ್ಥಿಸಲು ಕಾವ್ಯಲಿಂಗವನ್ನು ಅವಶ್ಯವಾಗಿ ಒಪ್ಪಲೇಬೇಕು. ಅರ್ಥಾಂತರನ್ಯಾಸದಲ್ಲೂ ಸಮರ್ಥನವು ಬರುತ್ತದೆ, ಆದರೆ ಇಲ್ಲಿ ಬೇರೆ ರೀತಿಯಲ್ಲಿ ಬರುತ್ತದೆ. ಒಂದು ಅರ್ಥವು ಸಮರ್ಥನವನ್ನು ಅಪೇಕ್ಷಿಸದೇ ಇರುವಷ್ಟು ಲೋಕಪ್ರಸಿದ್ಧವಾಗಿದ್ದರೂ ಸಹ ಕವಿಯು ತನ್ನ ಪ್ರತಿಭಾ ವೈಭವದಿಂದ ಅದನ್ನು ಸಮರ್ಥನಮಾಡುವುದಾದರೆ ಆ ಬಗೆಯ ಸಮರ್ಥನವು ಅರ್ಥಾಂತರನ್ಯಾಸವೆನಿಸುವುದು. "ಯತ್ತ್ವನ್ನೇತ್ರಸಮಾನಕಾಂತಿ" ಮೊದಲಾದ ಕಾವ್ಯಲಿಂಗದ ಉದಾಹರಣಗಳಲ್ಲಿರುವಂತೆ ಅರ್ಥಾಂತರನ್ಯಾಸದ ಉದಾಹರಣಗಳಲ್ಲಿ ಪ್ರಕೃತಾಂಶವು ಸಮರ್ಥನವನ್ನಪೇಕ್ಷಿಸುವುದಿಲ್ಲ. ಈ ಕೆಳಗಿನ ಉದಾಹರಣಗಳಲ್ಲಿ ಇದು ಸ್ಪಷ್ಟವಾಗುತ್ತದೆ. "ಶರತ್ಕಾಲವು ಚಂದ್ರನನ್ನು ಆಲಿಂಗಿಸುತ್ತಿರಲು ಮಿಂಚುಗಳೆಂಬ ಒರೆನೋಟಗಳನ್ನು ಮುಚ್ಚಿಕೊಂಡು ವರ್ಷಾಕಾಲವು ತೊಲಗಿತು. ಸ್ತನಗಳು ಜೋತಾಡುತ್ತಿರುವಾಗ ಯಾವ ಸ್ತ್ರೀಯರಿಗೆ ತಾನೆ ಸೌಂದರ್ಯವೆಂಬ ಗುಣವು ತೊಲಗದೇ ಇದ್ದೀತು ?" ಇಲ್ಲಿ ವಿಶೇಷವಾದ ಅರ್ಥವನ್ನು ಮೊದಲು ತಿಳಿಸಿ ಅದನ್ನು ಸಾಮಾನ್ಯವೆನಿಸಿದ ಬೇರೊಂದು ಅರ್ಥದಿಂದ ಸಮರ್ಥನಮಾಡಲಾಗಿದೆ. "ಹಗಲಿನಲ್ಲಿ ಹೆದರಿಕೆಯಿಂದಲೋ ಏನೋ ಎಂಬಂತೆ ಗವಿಗಳಲ್ಲಿ ಅಡಗಿದ್ದ ಕತ್ತಲೆಯನ್ನು ಹಿಮಾಲಯವು ಸೂರ್ಯನಿಂದ ರಕ್ಷಿಸುತ್ತದೆ. ನೀಚನಾದರೂ ಶರಣಾಗತನಾದರೆ ಅವನ ಬಗ್ಗೆ ಮಹಾತ್ಮರಿಗೆ ಆತ್ಮೀಯತೆ ಇರುತ್ತದೆ." ಇಲ್ಲಿ ವಿಶೇಷಾಂಶವನ್ನು ಸಾಮಾನ್ಯಾಂಶದಿಂದ ಸಮರ್ಥನಮಾಡಿದೆ, ಆದರೆ ಹಾಗೆ ಮಾಡುವ ಅವಶ್ಯಕತೆ ಏನೂ ಇಲ್ಲಿ ಕಾಣಬರುವುದಿಲ್ಲ. ಇಲ್ಲಿ ಸೂರ್ಯೋದಯವಾಗಿದ್ದರೂ ಹಗಲಿನಲ್ಲೂ ಗವಿಗಳಲ್ಲಿ ಕತ್ತಲೆ ಇರುವುದೆಂಬುದು ಪ್ರಕೃತ ವಿಶೇಷಾಂಶ. ನೀಚನೊಬ್ಬನು ಶರಣಾಗತನಾದರೂ ಅವನನ್ನು ಮಹಾತ್ಮರು ಕೈಬಿಡುವುದಿಲ್ಲವೆಂಬುದು ಅಪ್ರಕೃತ ಸಾಮಾನ್ಯಾಂಶ. ಇಲ್ಲಿ

ವಿಶೇಷವು ಸಾಮಾನ್ಯದಿಂದ ಸಮರ್ಥನವನ್ನು ಅಪೇಕ್ಷಿಸುವುದಿಲ್ಲ. ಹಾಗೆ ಸಮರ್ಥನ ಮಾಡುವ ಆವಶ್ಯಕತೆಯಿಲ್ಲ. ಗವಿಗಳಲ್ಲಿ ಕತ್ತಲೆ ಹಗಲಿನಲ್ಲೂ ಇರುವುದೆಂಬ ಅಂಶವು ಎಲ್ಲರಿಗೂ ತಿಳಿವೇ ಇದೆ. ಅದನ್ನು ಸಮರ್ಥಿಸಲಿಕ್ಕಾಗಿ ಸಾಮಾನ್ಯಾಂಶವನ್ನು ಕೊಡ ಬೇಕಾಗಿಯೇ ಇಲ್ಲ. ಆದರೂ ಕವಿಯು ತನ್ನ ಬುದ್ಧಿವೈಭವದಿಂದ ಕೊಟ್ಟಿರುವನು. ಹೀಗೆಯೇ ಮೊದಲನೆಯ ಉದಾಹರಣದಲ್ಲೂ ವಿಶೇಷವನ್ನು ಸಾಮಾನ್ಯಾಂಶದಿಂದ ಸಮರ್ಥಿಸಬೇಕಾಗಿಲ್ಲವಾದರೂ ಕವಿಯು ತನ್ನ ಜ್ಞಾನವಿಲಾಸದಿಂದ ಸಮರ್ಥಿಸಿದ್ದಾನೆ. "ಶರತ್ಕಾಲವು ಚಂದ್ರನೊಡಗೂಡಲು ವರ್ಷಾಕಾಲವು ಮಿಂಚುಗಳೆಂಬ ಓರೆ ನೋಟ ಗಳನ್ನು ಅಡಗಿಸಿಕೊಂಡು ಕಣ್ಮರೆಯಾಯಿತು" ಇದೇ ಇಲ್ಲಿ ಪ್ರಕೃತ ವಿಶೇಷಾಂಶ. "ಸ್ತನಗಳು ಜೋತಾಡುವಾಗ ಯಾವ ಸ್ತ್ರೀಗೆ ತಾನೆ ಸೌಂದರ್ಯವು ತೊಲಗದಿದ್ದೀತು. ಇದೇ ಇಲ್ಲಿ ಅಪ್ರಕೃತ ಸಾಮಾನ್ಯಾಂಶ. ಇಲ್ಲಿ ವಿಶೇಷಾಂಶವನ್ನು ಸಮರ್ಥನ ಮಾಡಲು ಸಾಮಾನ್ಯಾಂಶವು ಬೇಕಾಗಿಲ್ಲ. ಶರತ್ಕಾಲವು ಬಂದಾಗ ವರ್ಷಾಕಾಲವು ತೊಲಗುವುದೆಂಬುದು ಎಲ್ಲರಿಗೂ ತಿಳಿದ ವಿಷಯುವೇ ಆಗಿದೆ. ಇಂತಹ ಲೋಕಾನು ಭವಸಿದ್ಧವಾದ ವಿಶೇಷಾರ್ಥವನ್ನು ಸಮರ್ಥಿಸಲು ಬೇರೊಂದು ಸಾಮಾನ್ಯಾರ್ಥವೇ ಬೇಕಾಗಿಲ್ಲ. ಆದರೂ ಕವಿಯು ತನ್ನ ಬುದ್ಧಿವೈಭವದಿಂದ ಸಮರ್ಥನಮಾಡಿದ್ದಾನೆ. ಕಾವ್ಯಲಿಂಗದಲ್ಲಾದರೋ ಒಂದು ಮಹತ್ತರವಾದ ಅಂಶವನ್ನು ತಿಳಿಸಿದ ಮೇಲೆ ಅದನ್ನು ಸಮರ್ಥನಮಾಡಲೇಬೇಕೆಂಬ ಆವಶ್ಯಕತೆ ತೀವ್ರವಾಗಿರುತ್ತದೆ. ಇದೇ ಇವೆರಡಕ್ಕೂ ಇರುವ ವೈಲಕ್ಷಣ್ಯವೆಂದು ಕೆಲವರು ಹೇಳುತ್ತಾರೆ. ಆದರೆ ವಾಸ್ತವ ವಾಗಿ ವಿಚಾರಮಾಡಿ ನೋಡಿದರೆ ಇದು ಕೆಲವು ಕಡೆ ಮಾತ್ರವೇ ಅನ್ವಯಿಸಬಹುದೇ ಹೊರತು ಎಲ್ಲಾ ಕಡೆಗಳಲ್ಲೂ ಅನ್ವಯಿಸುವುದಿಲ್ಲ. ಅರ್ಥಾಂತರನ್ಯಾಸದಲ್ಲೂ ಸಹ ವಿಶೇಷವನ್ನು ಸಾಮಾನ್ಯದಿಂದ ಸಮರ್ಥನಮಾಡುವ ಆವಶ್ಯಕತೆ ಇಲ್ಲದಿದ್ದರೂ ಸಾಮಾನ್ಯಾಂಶವನ್ನು ತಿಳಿಸುವ ಕಡೆಗಳಲ್ಲಿ ವಿಶೇಷಾಂಶದಿಂದ ಸಮರ್ಥನಮಾಡುವ ಆವಶ್ಯಕತೆಯು ಮಾತ್ರ ಇದ್ದೇ ಇರುವುದು. ಯಾವುದೊಂದು ವಿಶೇಷವೂ ಇಲ್ಲದೇ ಇದ್ದರೆ ಸಾಮಾನ್ಯಾಂಶವು ಇರುವಂತೆಯೇ ಇಲ್ಲ. ಕೆಂಪು ಗಡಿಗೆ, ಕಪ್ಪು ಗಡಿಗೆ ಮೊದಲಾದ ವಿಶೇಷಗಳೇ ಇಲ್ಲದಿದ್ದರೆ ಎಲ್ಲದರಲ್ಲೂ ಅನ್ವಯಿಸುವ ಘಟತ್ವ ಎಂಬ ಸಾಮಾನ್ಯವು ಹೇಗೆ ಇದ್ದೀತು ? ಹೀಗೆ ಲೋಕದಲ್ಲಿ ನ್ಯಾಯವು ಹರಡಿರುವುದರಿಂದ "ವಸ್ತುಗಳು ನಿಸ್ಸಾರವೆನಿಸಿದ್ದರೂ ಅನೇಕವಿದ್ದು ಒಂದೆಡೆಗೆ ಸೇರಿದರೆ ಎಂತಹ ಕಾರ್ಯವನ್ನಾದರೂ ಸಾಧಿಸಬಲ್ಲವು" ಎಂದು ಸಾಮಾನ್ಯಾಂಶವನ್ನು ತಿಳಿಸಿದರೆ ಇದರಲ್ಲಿ ವಿಶೇಷವೇನೆಂಬುದು ಯಾರಿಗೂ ತಿಳಿಯುವುದೇ ಇಲ್ಲ. ಇದನ್ನು ಎಲ್ಲರಿಗೂ ತಿಳಿಸಲಿಕ್ಕಾಗಿ ಸಂಗಮವಾಗಿ ವಿಶೇಷಾಂಶದಿಂದ ಸಮರ್ಥನಮಾಡಲೇಬೇಕು. "ಸಣ್ಣ ಸಣ್ಣ ಹುಲ್ಲುಗಳಿಂದಲೇ ಹಗ್ಗವು ತಯಾರಾಗಿದೆಯಾದರೂ ಅದರಿಂದ ದೊಡ್ಡ ದೊಡ್ಡ ಆನೆಯನ್ನೂ ಸಹ ಕಟ್ಟಬಹುದು" ಎಂದು ಎಲ್ಲರಿಗೂ ತಿಳಿದಂತಹ ವಿಶೇಷಾಂಶ

ಒಂದನ್ನು ತಿಳಿಸಲೇಬೇಕು. ಹಾಗೆ ಸರ್ವಾನುಭವಸಿದ್ಧವಾದ ವಿಶೇಷಾಂಶದಿಂದ ಸಾಮಾನ್ಯಾಂಶವನ್ನು ಸಮರ್ಥನಮಾಡಿದರೆಯೇ ಸಾಮಾನ್ಯಾಂಶವನ್ನು ಎಲ್ಲರಿಗೂ ಮನಸ್ಸಿನಲ್ಲಿ ತಿಳಿಯಲು ಅನುಕೂಲವಾಗುತ್ತದೆ. ಹಾಗೇ ಸಾಮಾನ್ಯಾಂಶವು ನಮ್ಮ ಬುದ್ಧಿಯಲ್ಲಿ ಉಳಿಯಬೇಕಾದರೆ ಸರ್ವರಿಗೂ ತಿಳಿದಂತಹ ವಿಶೇಷಾಂಶವನ್ನು ತಿಳಿಸಲೇ ಬೇಕಾದ್ದರಿಂದ ಅರ್ಥಾಂತರನ್ಯಾಸವು ಸ್ವತಂತ್ರವಾದ ಅಲಂಕಾರವಾಗಿರಲೇಬೇಕು.

ನ ಚ ತತ್ರ ಸಾಮಾನ್ಯಸ್ಯ 'ಕಾಸಾಂ ನ ಸೌಭಾಗ್ಯಗುಣೋಽಂಗನಾನಾಂ, ಇತ್ಯಾದಿವಿಶೇಷಸಮರ್ಥನಾರ್ಥಸಾಮಾನ್ಯಸ್ಯೇವ ಲೋಕಸಂಪ್ರತಿಪನ್ನತಯಾ ವಿಶೇಷಾವತರಣಂ ವಿನೈವ ಬುದ್ಧೌ ಪ್ರತಿಷ್ಠಿತತ್ವಂ ಸಂಭವತೀತಿ ಶ್ಲೋಕೇ ತನ್ನ್ಯಸನಂ ನಾಪೇಕ್ಷಿತಮಸ್ತೀತಿ ವಾಚ್ಯಮ್. ಸಾಮಾನ್ಯಸ್ಯ ಸರ್ವತ್ರ ಲೋಕಸಂಪ್ರತಿಪನ್ನತಯಾ 'ಯಥಾ ಮಹಾನಸಃ' ಇತಿ ತದ್ವಿಶೇಷರೂಪದೃಷ್ಟಾಂತಾನುಪಾದಾನಸಂಪಾದನಮಾತ್ರೇಣ ಅಪ್ರಸಿದ್ಧವ್ಯಾಪ್ತಿರೂಪಸಾಮಾನ್ಯೋಪನ್ಯಾಸೇಽಪಿ ತದ್ವಿಶೇಷರೂಪದೃಷ್ಟಾಂತೋಪನ್ಯಾಸನೈರಪೇಕ್ಷ್ಯಂ ಸಂಭವತಿ, ನ ಚೈವಂ ಸಾಮಾನ್ಯೇನ ವಿಶೇಷಸಮರ್ಥನಸ್ಥಲೇಽಪಿ ಕ್ವಚಿತ್ತಸ್ಯ ಸಾಮಾನ್ಯಸ್ಯ ಲೋಕಪ್ರಸಿದ್ಧತ್ವಾಭಾವೇನ ತಸ್ಯ ಬುದ್ಧ್ಯಾರೋಹಾಯ ಪುನರ್ವಿಶೇಷಾಂತರಸ್ಯ ನ್ಯಾಸಪ್ರಸಂಗ ಇತಿ ವಾಚ್ಯಮ್. ಇಷ್ಟಾಪತ್ತೇಃ. ಅತ್ರೈವ ವಿಷಯೇ ವಿಕಸ್ವರಾಲಂಕಾರಸ್ಯ ಅನುಪದಮೇವ ದರ್ಶಯಿಷ್ಯಮಾಣತ್ವಾತ್. ಕಿಂಚ ಕಾವ್ಯಲಿಂಗೇಽಪಿ ನ ಸರ್ವತ್ರ ಸಮರ್ಥನಸಾಪೇಕ್ಷತ್ವನಿಯಮಃ, 'ಚಿಕುರಪ್ರಕರಾ ಜಯಂತಿ ತೇ'. ಇತ್ಯತ್ರ ತದಭಾವಾದುಪಮಾನಪಸ್ತುಷುವರ್ಣನೀಯಸಾಮ್ಯಾಭಾವೇನ ನಿಂದಾಯಾಃ ಕವಿಕುಲಕ್ಷುಣ್ಣತ್ವೇನ ಅತ್ರ ಸಮರ್ಥನಾಪೇಕ್ಷಾವಿರಹಾತ್. 'ನಹಿ ತದಾಸ್ಯದಾಸ್ಯೇಽಪಿ ಗತೋಽಧಿಕಾರಿತಾಂ ನ ಶಾರದಃ ಪಾರ್ವಣಶರ್ವರೀಶ್ವರಃ' ಇತ್ಯಾದಿಷು ಸಮರ್ಥನಂ ದೃಶ್ಯತೇ.

ನ ವಿಷೇಣ ನ ಶಸ್ತ್ರೇಣ ನಾಗ್ನಿನಾ ನ ಚ ಮೃತ್ಯುನಾ ।
ಅಪ್ರತೀಕಾರಪಾರುಷ್ಯಾಃ ಸ್ತ್ರೀಭಿರೇವ ಸ್ತ್ರಿಯಃ ಕೃತಾಃ ॥

ಇತ್ಯಾದಿಕಾವ್ಯಲಿಂಗವಿಷಯೇಷು ಸಮರ್ಥನಾಪೇಕ್ಷಾವಿರಹೇಽಪಿ ಅಪ್ರತೀಕಾರಪಾರುಷ್ಯಾಃ ಇತ್ಯಾದಿನಾ ಸಮರ್ಥನದರ್ಶನಾಚ್ಚ. ನ ಹಿ ತತ್ರ ಸ್ತ್ರೀಣಾಂ ವಿಷಾದಿನಿರ್ಮಿತತ್ವಾಭಾವಪ್ರತಿಪಾದನಂ ಸಮರ್ಥನಸಾಪೇಕ್ಷಂ ಪ್ರಸಿದ್ಧತ್ವಾತ್. ತಸ್ಮಾದುಭಯತೋ ವ್ಯಭಿಚಾರಾತ್ಸಮರ್ಥನಾಪೇಕ್ಷಸಮರ್ಥನೇ ಕಾವ್ಯಲಿಂಗಂ ತನ್ನಿರಪೇಕ್ಷಸಮರ್ಥನೇಽರ್ಥಾಂತರನ್ಯಾಸ ಇತಿ ನ ವಿಭಾಗಃ; ಕಿಂತು ಸಮರ್ಥ್ಯಸಮರ್ಥಕಯೋಃ ಸಾಮಾನ್ಯವಿಶೇಷಸಂಬಂಧೇಽರ್ಥಾಂತರನ್ಯಾಸಃ ತದಿತರಸಂಬಂಧೇ ಕಾವ್ಯಲಿಂಗಮಿತ್ಯೇವ ವ್ಯವಸ್ಥಾ ಅವಧಾರಣೀಯಾ. ಪ್ರಪಂಚಶ್ಚಿತ್ರಮೀಮಾಂಸಾಖಂಡನೇ ದ್ರಷ್ಟವ್ಯಃ.

ಏವಮಪ್ರಕೃತೇನ ಪ್ರಕೃತಸಮರ್ಥನಮುದಾಹೃತಮ್ ಪ್ರಕೃತೇನ ಅಪ್ರಕೃತ ಸಮರ್ಥನಂ ಯಥಾ–

ಯಮುಚ್ಯತೇ ಪಾರ್ವತಿ ಪಾಪವೃತ್ತಯೇ
ನ ರೂಪಮಿತ್ಯವ್ಯಭಿಚಾರಿ ತದ್ವಚಃ ।
ತಥಾ ಹಿ ತೇ ಶೀಲಮುದಾರದರ್ಶನೇ
ತಪಸ್ವಿನಾಮಪ್ಯುಪದೇಶತಾಂ ಗತಮ್ ॥

ಯಥಾ ವಾ—

ದಾನಂ ದದತ್ಯಪಿ ಜಲೈಃ ಸಹಸಾಧಿರೂಢೇ
ಕೋ ವಿದ್ಯಮಾನಗತಿರಾಸಿತುಮುತ್ಸಹೇತ ।
ಯದ್ದಂತಿನಃ ಕಟಕಟಾಹತಟಾನ್ಮಿಮಂಕ್ಷೋಃ
ಮಂಕ್ಷೂದಪಾತಿ ಪರಿತಃ ಪಟಲೈರಲೀನಾಮ್ ॥

ಹಿಂದೆ ಹೇಳಿದ ಪದ್ಯದಲ್ಲಿ 'ಕಾಸಾಂ ನ ಸೌಭಾಗ್ಯಗುಣೋಽಂಗನಾನಾಂ' ಎಂಬಲ್ಲಿ ತಿಳಿಸಿರುವ ಸಾಮಾನ್ಯಾಂಶವನ್ನು ಪೂರ್ವಾರ್ಧದಲ್ಲಿ ಹೇಳಿರುವ ವಿಶೇಷಾಂಶವನ್ನು ಸಮರ್ಥನಮಾಡಲಿಕ್ಕಾಗಿ ಕೊಟ್ಟಿದೆ. "ಸ್ತನಗಳು ಜೋತಾಡುತ್ತಿರುವಾಗ ಯಾವ ಸ್ತ್ರೀಯರಿಗೆ ತಾನೆ ಸೌಂದರ್ಯವು ನಷ್ಟವಾಗದೇ ಇದ್ದೀತು ?" ಎಂಬ ಸಾಮಾನ್ಯಾಂಶವು ಲೋಕದಲ್ಲಿ ಎಲ್ಲರಿಗೂ ತಿಳಿದದ್ದೇ ಆದ ಪ್ರಯುಕ್ತ ಅದನ್ನು ಯಾರಾದರೂ ಸುಲಭವಾಗಿ ಗ್ರಹಿಸಬಲ್ಲರು. ಅದನ್ನು ತಿಳಿಯಲಿಕ್ಕಾಗಿ ವಿಶೇಷಾಂಶವನ್ನು ಗ್ರಹಿಸಬೇಕಾಗಿಲ್ಲ. ಆದ್ದರಿಂದ ಸಾಮಾನ್ಯಾಂಶವನ್ನು ಹೇಳುವ ಅವಶ್ಯಕತೆಯಿಲ್ಲವೆಂದು ಆಕ್ಷೇಪಿಸಿದರೆ ಅದು ಹೊಂದುವುದಿಲ್ಲ ; ಯಾಕೆಂದರೆ ಸಾಮಾನ್ಯಾಂಶವು ಎಲ್ಲವೆಯಲ್ಲೂ ಜನರೆಲ್ಲರಿಗೂ ತಿಳಿದೇ ಇರುತ್ತದೆ ಎಂಬ ನಿಯಮವಿಲ್ಲ. ಎಲ್ಲಿ ಧೂಮವಿದೆಯೋ ಅಲ್ಲಿ ಬೆಂಕಿ ಇರುತ್ತದೆ ಎಂಬ ವ್ಯಾಪ್ತಿಯು ಸಾಮಾನ್ಯವಾಗಿ ಎಲ್ಲರಿಗೂ ತಿಳಿದೇ ಇರುವುದು. ಆದ್ದರಿಂದ 'ಯಥಾ ಮಹಾನಸಃ' ಎಂದು ಅಡಿಗೆಮನೆಯಲ್ಲಿ ಹೊಗೆ ಬೆಂಕಿ ಎರಡೂ ಇರುತ್ತವೆ ಎಂಬ ವಿಶೇಷವಾದ ದೃಷ್ಟಾಂತವನ್ನು ಹೇಳಬೇಕಾಗಿಯೇ ಇಲ್ಲ. ಆದರೂ ಹಾಗೆ ವಿಶೇಷವಾದ ದೃಷ್ಟಾಂತವನ್ನು ಕೊಡಲಾಗಿದೆ. ಹಾಗೆ ಅಪ್ರಸಿದ್ಧವಾದ ವ್ಯಾಪ್ತಿ ಎನಿಸಿದ ಸಾಮಾನ್ಯಾಂಶವನ್ನು ಹೇಳಿದ್ದರೂ ಸಹ ಅದಕ್ಕೆ ವಿಶೇಷವೆನಿಸಿದ ದೃಷ್ಟಾಂತವನ್ನು ತಿಳಿಸುವ ಆವಶ್ಯಕತೆಯಿಲ್ಲವೆಂದು ಹೇಳಲಿಕ್ಕಾಗುವುದಿಲ್ಲ. ಅಂದರೆ ವಿಶೇಷಾಂಶವನ್ನು ಹೇಳಲೇಬೇಕಾಗುತ್ತದೆ. ಹೀಗೆ ಸಾಮಾನ್ಯಾಂಶದಿಂದ ವಿಶೇಷಾಂಶವನ್ನು ಸಮರ್ಥನಮಾಡಿರುವ ಕಡೆಗಳಲ್ಲೂ ಕೆಲವು ಕಡೆ ಸಾಮಾನ್ಯಾಂಶವು ಲೋಕದಲ್ಲಿ ಪ್ರಸಿದ್ಧವಲ್ಲದ್ದರಿಂದ ಅದನ್ನು ಅನುಭವಕ್ಕೆ ತಂದುಕೊಡಲಿಕ್ಕಾಗಿ ಮತ್ತೆ ವಿಶೇಷ ಒಂದನ್ನು ಹೇಳಲೇಬೇಕಾಗುತ್ತದೆ ಎಂದು

ಹೇಳುವುದಾದರೆ ಅದೂ ಸರಿಯಲ್ಲ ; ಯಾಕೆಂದರೆ ಎಲ್ಲಿ ಸಾಮಾನ್ಯಾಂಶವು ಲೋಕ
ಪ್ರಸಿದ್ಧವಲ್ಲವೋ ಅಲ್ಲಿ ಅದನ್ನು ಸ್ಪಷ್ಟಪಡಿಸಲಿಕ್ಕಾಗಿ ವಿಶೇಷಾಂಶವನ್ನು ತಿಳಿಸುವುದು
ನಮಗೆ ಇಷ್ಟವೇ ಆಗಿದೆ. ಈ ವಿಷಯದಲ್ಲಿ ವಿಕಸ್ವರ ಎಂಬ ಬೇರೊಂದು
ಅಲಂಕಾರವನ್ನು ನಾವು ಒಪ್ಪಿಕೊಂಡೇ ಇರುವೆವು. ಇದೂ ಅಲ್ಲದೆ, ಕಾವ್ಯಲಿಂಗ
ದಲ್ಲಿಯೂ ಎಲ್ಲೆಡೆಯಲ್ಲೂ ಸಮರ್ಥನಮಾಡುವ ಆವಶ್ಯಕತೆಯುಂಟೆಂಬ ನಿಯಮ
ವಿಲ್ಲ. ‘‘ಚಿರುಪ್ರಕಾರಾ ಜಯಂತಿ ತೇ’’ ಎಂಬಲ್ಲಿ ಸಮರ್ಥನದ ಆವಶ್ಯಕತೆಯೇ ಇಲ್ಲ.
ಅಲ್ಲಿ ಉಪಮಾನವೆನಿಸಿದ ಚಾಮರಕ್ಕೆ ಉಪಮೇಯವೆನಿಸಿದ ಕೇಶಪಾಶದೊಡನೆ ಸಾಮ್ಯ
ವಿಲ್ಲದ್ದರಿಂದ ಉಪಮಾನದ ನಿಂದೆಯುಂಟೆಂಬುದು ಕವಿಗಳೆಲ್ಲರಿಗೂ ಅನುಭವಸಿದ್ಧ
ವಾದ ಪ್ರಯುಕ್ತ ಕೇಶಪಾಶಕ್ಕೆ ಸಾಮ್ಯವಿರಲಿಲ್ಲವೆಂಬುದನ್ನು ಸಮರ್ಥನಮಾಡಬೇಕಾದ
ಆವಶ್ಯಕತೆಯೇ ಇಲ್ಲ. ‘ಶರತ್ಕಾಲದ ಹುಣ್ಣಿಮೆಯ ಚಂದ್ರನು ಆಕೆಯ ಮುಖವನ್ನು
ಸೇವಿಸಲಿಕ್ಕೂ ಅನರ್ಹನು’’ ಎಂಬಲ್ಲಿ ಯಾವ ಅಂಶಕ್ಕೂ ಸಮರ್ಥನವೇ ಕಂಡು
ಬಂದಿಲ್ಲ. ಆದರೆ ಕೆಲವು ಕಡೆಗಳಲ್ಲಿ ಮಾತ್ರ ಸಮರ್ಥನವುಂಟೆಂಬುದೂ ಕಂಡು
ಬಂದಿದೆ. ‘‘ಸ್ತ್ರೀಯರು ವಿಷಯದಿಂದಾಗಲೀ, ಶಸ್ತ್ರದಿಂದಾಗಲೀ, ಬೆಂಕಿಯಿಂದಾಗಲಿ
ಯಮನಿಂದಾಗಲೀ ನಿರ್ಮಿತವಾಗಿಲ್ಲ. ಹಾಗೆ ಇವುಗಳಿಂದ ಅವರು ನಿರ್ಮಿತವಾಗಿದ್ದರೆ
ಅವರ ಕಾರ್ಯಕ್ಕೆ ಪ್ರತೀಕಾರವಿರುತ್ತಿತ್ತು. ಅವರ ಕ್ರೂರತನವನ್ನು ತಡೆ
ಯಲಿಕ್ಕೆ ಆಗದಿರುವ ಪ್ರಯುಕ್ತ ಸ್ತ್ರೀಯರು ಸ್ತ್ರೀಯರಿಂದಲೇ ನಿರ್ಮಿತರಾಗಿರುವರು.’’
ಇದೂ ಸಹ ಕಾವ್ಯಲಿಂಗದ ಉದಾಹರಣವೇ ಆಗಿದೆ. ಸ್ತ್ರೀಯರ ಸೃಷ್ಟಿಕ್ರಮವನ್ನು
ಸಮರ್ಥಿಸಬೇಕಾದ ಆವಶ್ಯಕತೆಯಿಲ್ಲದಿದ್ದರೂ ಅವರ ಕಾಠಿಣ್ಯಕ್ಕೆ ಪ್ರತೀಕಾರವೇ
ಇಲ್ಲದ್ದರಿಂದ ಅವರ ಸೃಷ್ಟಿಯು ವಿಷ ಮೊದಲಾದವುಗಳಿಂದ ಆಗಿಲ್ಲವೆಂದು
ಸಮರ್ಥನಮಾಡಿರುವುದಾಗಿ ಕಂಡುಬಂದಿದೆ. ಸ್ತ್ರೀಯರನ್ನು ವಿಷ ಮೊದಲಾದ
ಗಳಿಂದ ನಿರ್ಮಿಸಿಲ್ಲವೆಂಬುದು ಲೋಕಪ್ರಸಿದ್ಧವಾದ್ದರಿಂದ ಅದಕ್ಕೆ ಸಮರ್ಥನೆಯೇ
ಬೇಕಾಗಿಲ್ಲ. ಆದರೂ ಕವಿಯು ‘ಅಪ್ರತೀಕಾರಪಾರುಷ್ಯಾಃ’ ಎಂದು ಸಮರ್ಥನ
ವನ್ನು ಮಾಡಿದ್ದಾನೆ. ಆದ್ದರಿಂದ ಅರ್ಥಾಂತರನ್ಯಾಸದಲ್ಲಿರುವಂತೆ ಕಾವ್ಯಲಿಂಗ
ದಲ್ಲೂ ಸಮರ್ಥನದ ಬಗ್ಗೆ ವ್ಯಭಿಚಾರದೋಷವಿರುವ ಪ್ರಯುಕ್ತ ಅರ್ಥಸಮರ್ಥ
ನವೇ ಇವೆರಡನ್ನೂ ಪ್ರತ್ಯೇಕಿಸುವ ವೈಲಕ್ಷಣ್ಯವೆಂದು ಒಪ್ಪಲಿಕ್ಕಾಗುವುದಿಲ್ಲ. ಹಾಗಾ
ದರ ಇವೆರಡರ ಭೇದವು ಯಾವುದನ್ನು ಅವಲಂಬಿಸಿವೆ ? ಸಮರ್ಥಿಸಬೇಕಾಗಿರುವ
ಅರ್ಥವನ್ನು ಸಮರ್ಥಿಸುವುದೇ ಕಾವ್ಯಲಿಂಗವೆಂದೂ, ಸಮರ್ಥನವನ್ನು ಅಪೇಕ್ಷಿಸದೇ
ಇರುವ ಅರ್ಥವನ್ನು ಸಮರ್ಥಿಸುವುದೇ ಅರ್ಥಾಂತರನ್ಯಾಸವೆಂದೂ ಇವೆರಡಕ್ಕೂ
ವೈಲಕ್ಷಣ್ಯವೆಂದು ಹೇಳುವುದಕ್ಕೆ ವ್ಯಭಿಚಾರದೋಷವು ಕಂಡುಬರುವ ಪ್ರಯುಕ್ತ
ಇವೆರಡು ಅಲಂಕಾರಗಳಿಗೂ ವೈಲಕ್ಷಣ್ಯವನ್ನು ಬೇರೆ ರೀತಿಯಿಂದಲೇ ಹೇಳಬೇಕು.
ಆ ರೀತಿ ಯಾವುದು ? ಸಮರ್ಥಿಸಬೇಕಾಗಿರುವ ಅಂಶಕ್ಕೂ ಸಮರ್ಥಿಸುವ ಅಂಶಕ್ಕೂ

ಸಾಮಾನ್ಯ ವಿಶೇಷಸಂಬಂಧವು ಎಲ್ಲಿ ತೋರುವುದೋ ಅಲ್ಲಿ ಅರ್ಥಾಂತರನ್ಯಾಸವನ್ನೂ ಅವೆರಡು ಅಂಶಗಳಿಗೆ ಸಾಮಾನ್ಯ ವಿಶೇಷಭಾವವಲ್ಲದೆ ಕಾರ್ಯಕಾರಣಭಾವವೇ ಮೊದಲಾದ ಬೇರೆ ಸಂಬಂಧವು ಎಲ್ಲಿ ಕಂಡುಬರುವುದೋ ಅಲ್ಲಿ ಕಾವ್ಯಲಿಂಗವನ್ನೂ ಹೇಳುವುದು ಯುಕ್ತವೆನಿಸುವುದು. ಹೀಗೆ ಮಾಡುವುದರಿಂದ ವ್ಯಭಿಚಾರದೋಷವು ಬರುವಂತಿಲ್ಲ. ಸಮರ್ಥನಾರ್ಹವಾದ ಅರ್ಥವು ಸಾಮಾನ್ಯವೋ ವಿಶೇಷವೋ ಆಗಿದ್ದು ಸಮರ್ಥಕವಾದ ಅರ್ಥವು ವಿಶೇಷವೋ ಸಾಮಾನ್ಯವೋ ಆಗಿದ್ದರೆ ಅಲ್ಲಿ ಅರ್ಥಾಂತರ ನ್ಯಾಸವುಂಟೆಂದು ಒಪ್ಪಿಕೊಂಡರೆ ಇದು ಕಾವ್ಯಲಿಂಗದಿಂದ ಬೇರೆಯಾಗಿ ಸ್ವತಂತ್ರ ಶಕ್ತಿಯಿಂದ ಶೋಭಿಸಬಲ್ಲದು. ಇದರ ವಿವೇಚನೆಯನ್ನು ಚಿತ್ರಮೀಮಾಂಸದಲ್ಲಿ ಮಾಡಬಹುದು,

ಈವರೆವಿಗೆ ಅಪ್ರಕೃತಾಂಶದಿಂದ ಪ್ರಕೃತಾರ್ಥವನ್ನು ಸಮರ್ಥಿಸುವುದಕ್ಕೆ ಉದಾಹರಣಗಳನ್ನು ಕೊಟ್ಟಾಯಿತು. ಪ್ರಕೃತಾಂಶದಿಂದ ಅಪ್ರಕೃತಾಂಶವನ್ನು ಸಮರ್ಥಿಸುವುದಕ್ಕೆ ಉದಾಹರಣಗಳನ್ನು ಈಗ ಕೊಡಲಾಗುವುದು.

''ಉದಾರಸ್ವಭಾವದ ಪಾರ್ವತಿಯೇ, ಒಳ್ಳೆಯ ಆಕಾರವಿರುವ ಕಡೆ ಒಳ್ಳೆ ಗುಣವೂ ಇರುತ್ತದೆ ಎಂಬ ನ್ಯಾಯದಂತೆ ರೂಪಸೌಂದರ್ಯವು ಪಾಪಾಚರಣಕ್ಕೆ ಪ್ರೇರಕವಲ್ಲವೆಂದು ಹಿರಿಯರು ಹೇಳುವ ಮಾತು ಸತ್ಯವಾದುದು. ಅದಕ್ಕೆ ವ್ಯಭಿಚಾರ ದೋಷವಿಲ್ಲ. ನೀನಂ ಸುಂದರಿಯಾಗಿದ್ದರೂ ತಪಸ್ವಿಗಳಿಗೂ ಆದರ್ಶವೆನಿಸಿದ ತಪಸ್ಸನ್ನು ಆಚರಿಸುತ್ತಲೇ ಶೀಲಶುದ್ಧಿಯನ್ನು ಕಾಪಾಡಿಕೊಂಡಿರುವೆ.'' ಇಲ್ಲಿ ಪ್ರಕೃತ ವಿಶೇಷದಿಂದ ಅಪ್ರಕೃತವಾದ ಸಾಮಾನ್ಯಾಂಶವನ್ನು ಸಮರ್ಥಿಸಲಾಗಿದೆ. ರೂಪವು ಪಾಪಕ್ಕೆ ಪ್ರೇರಕವಲ್ಲವೆಂಬುದು ಅಪ್ರಕೃತವಾದ ಸಾಮಾನ್ಯಾಂಶ. ಇದನ್ನು "ಪಾರ್ವತಿಯ ರೂಪವು ತಪಸ್ವಿಗಳಿಗೂ ಆದರ್ಶವೆನಿಸಿದೆ'' ಎಂಬ ಪ್ರಕೃತವಿಶೇಷವು ಸಮರ್ಥಿಸಿದೆ. ಈ ಬಗ್ಗೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. ''ದಾತೃ ಒಬ್ಬನು ಸಹಜ ವಾಗಿ ದಾನ ಮಾಡುತ್ತಿರುವಾಗ ಕೆಲವು ಮೂರ್ಖರು ಅವನಿಗೆ ದುಷ್ಪ್ರೇರಣವನ್ನು ಮಾಡುತ್ತಿರಲು ವಿವೇಕಿ ಎನಿಸಿದ ಯಾವ ಭಿಕ್ಷುವು ತಾನೆ ಇವನನ್ನು ಆಶ್ರಯಿಸಲು ಇಚ್ಛಿಸಿಯಾನು ? ಆನೆಯು ಸಹಜವಾಗಿ ಮದೋದಕವನ್ನು ಸುರಿಸುತ್ತಿರಲು ದುಂಬಿಗಳ ಸಮೂಹವು ಅದನ್ನು ಕುಡಿಯಲು ಬಂದು ಕಪೋಲಸ್ಥಲದಲ್ಲಿ ಸೇರುತ್ತಿರು ವಾಗ ಆ ಆನೆಯು ನೀರಿನಲ್ಲಿ ಮುಳುಗಲು ಇಚ್ಛಿಸಿದರೆ ಆ ನೀರು ಆನೆಯ ಕಪೋಲ ಸ್ಥಲದ ಮೇಲೆ ವ್ಯಾಪಿಸುವುದು ಸಹಜ. ಆಗ ಹಂಡೆಯೂತಿರುವ ಆನೆಯು ಕಪೋಲ ಸ್ಥಲದಿಂದ ದುಂಬಿಗಳು ಬೇಗನೆ ಹಾರಿಹೋಗುತ್ತವೆ. ಆನೆಯು ನೀರಿನಲ್ಲಿ ಮುಳುಗಲು ದುಂಬಿಗಳು ಮದಪಾನಕ್ಕಾಗಿ ಕಪೋಲಸ್ಥಲದಲ್ಲಿ ಹೇಗೆ ನೆಲಸುತ್ತವೆ? ''ಇಲ್ಲಿ ದಾನ ಮಾಡುವವನು ನಿರಂಕುಶವಾದ ಸ್ವಾತಂತ್ರ್ಯವಿಲ್ಲದೆ ಪರಪ್ರೇರಣೆಯಂತೆ ವರ್ತಿಸಿದರೆ ಅವನನ್ನು ಯಾರು ತಾನೆ ಆಶ್ರಯಿಸಿಯಾರು?'' ಎಂಬುದೇ ಅಪ್ರಕೃತವಾದ

ಸಾಮಾನ್ಯಾಂಶ. ಇದನ್ನು ಪ್ರಕೃತವಿಶೇಷಾಂಶವು ಸಮರ್ಥನಮಾಡಿದೆ. "ಆನೆಯು ನೀರಿನಲ್ಲಿ ಮುಳುಗಿದಾಗ ಅದರ ಕಪೋಲಸ್ಥಲದಲ್ಲಿದ್ದ ದುಂಬಿಗಳು ಅಲ್ಲಿಂದ ಹಾರಿ ಹೋಗುತ್ತವೆ" ಎಂಬುದೇ ಪ್ರಕೃತವಿಶೇಷಾಂಶ. ಇದರಿಂದ ಸಾಮಾನ್ಯಾಂಶದ ಸಮರ್ಥನವನ್ನು ಇಲ್ಲಿ ಕಾಣಬಹುದು.

## ೬೨. ವಿಕಸ್ವರಾಲಂಕಾರ

ಯಸ್ಮಿನ್ವಿಶೇಷಸಾಮಾನ್ಯವಿಶೇಷ ಸ ವಿಕಸ್ವರಃ ।
ಸ ನ ಜಿಗ್ಯೇ ಮಹಾಂತೋ ಹಿ ಸುರ್ಧರ್ಷಾಃ ಸಾಗರಾ ಇವ ॥೧೩೩॥

ಯಸ್ಯ ಕಸ್ಯಚಿದ್ವಿಶೇಷಸ್ಯ ಸಮರ್ಥನಾರ್ಥಂ ಸಾಮಾನ್ಯಂ ವಿನ್ಯಸ್ಯ ತತ್ಪ್ರಸಿದ್ಧಾವಪಿ ಅಪರಿತುಷ್ಯತಾ ಕವಿನಾ ತತ್ಸಮರ್ಥನಾಯ ಪುನರ್ವಿಶೇಷಾಂತರಂ ಉಪಮಾನರೀತ್ಯಾ ಅರ್ಥಾಂತರನ್ಯಾಸವಿಧಯಾ ವಾ ವಿನ್ಯಸ್ಯತೇ ತತ್ರ ವಿಕಸ್ವರಾಲಂಕಾರಃ. ಉತ್ತರಾರ್ಧಂ ಯಥಾ ಕಥಂಚಿದುದಾಹರಣಮ್. ಇದಂ ತು ವ್ಯಕ್ತಮುದಾಹರಣಮ್.

ಅನಂತರತ್ನಪ್ರಭವಸ್ಯ ಯಸ್ಯ ಹಿಮಂ ನ ಸೌಭಾಗ್ಯವಿಲೋಪಿ ಜಾತಮ್ ।
ಏಕೋ ಹಿ ದೋಷೋ ಗುಣಸನ್ನಿಪಾತೇ ನಿಮಜ್ಜತೀಂದೋಃ
ಕಿರಣೇಷ್ವಿವಾಂಕಃ ॥

ಇದಮುಪಮಾನರೀತ್ಯಾ ವಿಶೇಷಾಂತರಸ್ಯ ನ್ಯಸನೇ ಉದಾಹರಣಮ್ ಅರ್ಥಾಂತರನ್ಯಾಸವಿಧಯಾ ಯಥಾ—

ಕರ್ಣಾರುಂತುದಮಂತ ರಣಿತಂ ಗಾಹಸ್ವ ಕಾಕಸ್ವಯಂ
ಮಾಕಂದಂ ಮಕರಂದಶಾ ನಮಿಹ ತ್ವಂ ಮನ್ಮಹೇ ಕೋಕಿಲಮ್ ।
ಧನ್ಯಾನಿಸ್ಥಲವೈಭವೇನ ಚಿದ್ಧಸ್ತೂನಿ ಕಸ್ತೂರಿಕಾಂ
ನೇಪಾಲಕ್ಷಿತಿಪಾಲ ಫಾಲಪತಿತೇ ಪಂಕೇ ನ ಶಂಕೇತ ಕಃ ?॥

ವಗಲ್ಸ್ಮಿಮಬ್ಜಶಶಿನೋರ್ಮಧುಲಿಟ್‌ಕಳಂಕೌ
ಧತ್ತೋಮುಪೇ ತು ತವ ದೃಕ್ತಿಲಕಾಂಜನಾಭಾಮ್ ।
ದೋಷಾವಿತಃ ಕ್ವಚನ ಮೇಲನತೋ ಗುಣತ್ವಂ
ವಕ್ತುರ್ಗುಣೌ ಹಿ ವಚಸಿ ಭ್ರಮವಿಪ್ರಲಂಭೌ ॥

ಮೊದಲು ಒಂದು ವಿಶೇಷವನ್ನು ತಿಳಿಸಿ ಅದನ್ನು ಸಮರ್ಥಿಸಲಿಕ್ಕಾಗಿ ಒಂದು ಸಾಮಾನ್ಯಾಂಶವನ್ನು ಹೇಳಿ. ಅದು ಲೋಕಪ್ರಸಿದ್ಧವಾಗಿದ್ದರೂ ಸಹ ಅಷ್ಟರಲ್ಲಿ

ವನ್ನು ಉಪಮಾನರೂಪದಿಂದಲೋ ಅಥವಾ ಅರ್ಥಾಂತರನ್ಯಾಸದ ರೀತಿಯಿಂದಲೋ ಎಲ್ಲಿ ಕೊಡುವನೋ ಅಂತಹ ಕಡೆಗಳಲ್ಲಿ ತೋರುವ ಚಮತ್ಕಾರವು ಸಹೃದಯರಿಗೆ ಆಹ್ಲಾದಕರವಾಗಿರುವುದರಿಂದ ಅದು ವಿಕಸ್ವರಾಲಂಕಾರವೆನಿಸುವುದು. "ಅವನನ್ನು ಸೋಲಿಸಲಿಕ್ಕಾಗಲಿಲ್ಲ. ಮಹಾತ್ಮರಾದವರನ್ನು ಸುಲಭವಾಗಿ ಬಗ್ಗಿಸಲಿಕ್ಕಾಗುವುದಿಲ್ಲ. ಅವರು ಸಮುದ್ರದಂತೆ ಅಜೇಯರು.''. ಇಲ್ಲಿ ಒಬ್ಬ ರಾಜನು ಅಜೇಯನೆಂಬ ವಿಶೇಷವನ್ನು ತಿಳಿಸಿ ಅವನು ಹೇಗೆ ಅಜೇಯನೆಂಬುದನ್ನು ಸಮರ್ಥಿಸಲಿಕ್ಕಾಗಿ "ಮಹಾತ್ಮರೆಲ್ಲರೂ ಅಜೇಯರು" ಎಂಬ ಸಾಮಾನ್ಯವನ್ನು ಕೊಡಲಾಗಿದೆ. ಮಹಾತ್ಮರು ಹೇಗೆ ಅಜೇಯರು ಎಂಬುದನ್ನು ಸಮರ್ಥಿಸಲು 'ಸಾಗರಾ ಇವ' ಎಂದು ಉಪಮಾನದ ರೂಪದಲ್ಲಿ ಬೇರೊಂದು ವಿಶೇಷವನ್ನು ಕೊಡಲಾಗಿದೆ. ಈ ಉದಾಹರಣವು ಅಷ್ಟು ಸ್ಪಷ್ಟವಾಗಿಲ್ಲ. ಮಹಾತ್ಮರು ಅಸಾಧಾರಣರಾದ್ದರಿಂದ ಅವರು ಅಜೇಯರೆಂಬ ವಿಶೇಷಾಂಶವು ಅತಿಪ್ರಸಿದ್ಧವಾದ ಪ್ರಯುಕ್ತ ಅದನ್ನು ಸಮರ್ಥಿಸುವ ಆವಶ್ಯಕತೆಯಿಲ್ಲ. ಆದರೂ ಇಲ್ಲಿ 'ಸಾಗರಾ ಇವ' ಎಂದು ಸಮರ್ಥನ ಮಾಡಿರುವುದು ಅಷ್ಟು ಸಮಂಜಸವೆನಿಸಿಲ್ಲ. ಆದ್ದರಿಂದ ಈ ಉದಾಹರಣವು ಅಷ್ಟು ಸ್ಪಷ್ಟವಾಗಿಲ್ಲ. ಅದಕ್ಕಾಗಿಯೇ ಬೇರೊಂದು ಸ್ಪಷ್ಟವಾದ ಉದಾಹರಣ ವನ್ನು ಮುಂದೆ ಕೊಟ್ಟಿದೆ. "ಅನೇಕ ರತ್ನಗಳಿಗೆ ಗಣಿ ಎನಿಸಿದ ಹಿಮಾಲಯ ಪರ್ವತವನ್ನು ಹಿಮವು ಮುಚ್ಚಿದ್ದರೂ ಅದರಿಂದ ಪರ್ವತದ ಸೌಂದರ್ಯವು ಕೆಡಲಿಲ್ಲ. ಒಬ್ಬನಲ್ಲಿ ಒಂದು ಸಣ್ಣ ದೋಷವಿದ್ದರೂ ಅದು ಅವನ ಅನೇಕ ಗುಣಗಳೊಡನೆ ಸೇರಿಕೊಳ್ಳುವುದು. ಸರ್ವಾಂಗಸುಂದರನಾದ ಚಂದ್ರನ ಕಿರಣ ಗಳೊಳಗೆ ಕಳಂಕವು ಮುಚ್ಚಿಹೋಗುವಂತೆ ಒಂದು ದೋಷವಿದ್ದರೂ ಗುಣಗಳೊಳಗೆ ಮುಚ್ಚಿಹೋಗುವುದು". ಹೀಗೆ "ಚಂದ್ರನ ಕಿರಣಗಳಲ್ಲಿ ಕಳಂಕವು ಮುಚ್ಚುವಂತೆ" ಎಂದು ಉಪಮಾನವನ್ನು ಕೊಡುವ ಮೂಲಕ ವಿಶೇಷಾಂಶವನ್ನು ತಿಳಿಸಿ ಅದರಿಂದ ಹಿಂದಿನ ಸಾಮಾನ್ಯಾಂಶವನ್ನು ಸಮರ್ಥನ ಮಾಡಲಾಗಿದೆ.

ಅರ್ಥಾಂತರನ್ಯಾಸದ ರೀತಿಯಲ್ಲಿ ಸಾಮಾನ್ಯಾಂಶವನ್ನು ವಿಶೇಷಾಂಶದಿಂದ ಸಮರ್ಥನ ಮಾಡಲಿಕ್ಕೆ ಉದಾಹರಣೆಗಳನ್ನು ಈಗ ಕೊಡಲಾಗುವುದು. "ಎಲೈ ಕಾಗೆಯೇ ಕರ್ಣಕಠೋರವಾದ ಧ್ವನಿಯನ್ನು ತೊರೆದು ನಿನ್ನಷ್ಟಕ್ಕೆ ನೀನು ಮಕರಂದ ಪೂರ್ಣವಾದ ಮಾವಿನ ಮರವನ್ನು ಪ್ರವೇಶಿಸು. ಆಗ ನಿನ್ನನ್ನೂ ಕೋಗಿಲೆ ಎಂದು ನಾವು ತಿಳಿಯುವೆವು. ಸ್ಥಾನದ ಮಹಿಮೆಯಿಂದ ಕೆಲವು ವಸ್ತುಗಳು ಶೋಭಿಸು ತ್ತವೆ. ನೇಪಾಲರಾಜನ ಹಣೆಯಲ್ಲಿ ಬಿದ್ದ ಕೆಸರನ್ನೂ ಸಹ ಕಸ್ತೂರಿ ಎಂದು ಯಾರು ತಾನೆ ಭಾವಿಸಲಾರರು ?" ಇಲ್ಲಿ ಮೊದಲು ವಿಶೇಷವೃತ್ತಾಂತವನ್ನು ತಿಳಿಸಿದೆ. "ಕಾಗೆಯು ಕರ್ಣಕಠೋರವಾಗಿ ಅರಚದೆ ಮಾವಿನ ಮರದಲ್ಲಿ ನೆಲಸಿದರೆ ಅದನ್ನು ಕೋಗಿಲೆ ಎಂದು ಜನರು ತಿಳಿಯುವರು" ಇದೇ ಇಲ್ಲಿ ಪ್ರಕೃತ ವಿಶೇಷಾಂಶ.

ಇದನ್ನು ಸಮರ್ಥಿಸಲಿಕ್ಕಾಗಿ ಒಂದು ಸಾಮಾನ್ಯಾಂಶವು ಬಂದಿದೆ. "ಕೆಲವು ವಸ್ತುಗಳು ಸ್ಥಾನಬಲದಿಂದ ಶೋಭಿಸುತ್ತವೆ" ಎಂಬುದೇ ಇಲ್ಲಿ ಸಾಮಾನ್ಯಾಂಶವು. ಇದು ಅರ್ಥಾಂತರನ್ಯಾಸದ ರೀತಿಯಿಂದ ಬಂದಿದೆ. ಇದನ್ನು ಸಮರ್ಥಿಸಲು ಬೇರೊಂದು ವಿಶೇಷಾಂಶವು ಬಂದಿದೆ. "ನೇಪಾಲರಾಜನ ಕೆನ್ನೆಯಲ್ಲಿ ಕೆಸರಿದ್ದರೂ ಕಸ್ತೂರಿ ಎನಿಸುತ್ತದೆ.'' ಎಂಬುದೇ ಇಲ್ಲಿ ವಿಶೇಷಾಂಶ. ಇದಕ್ಕೆ ಮತ್ತೊಂದು ಉದಾಹರಣವನ್ನು ಕೊಡುತ್ತಾನೆ. ''ದುಂಬಿ ಮತ್ತು ಕಳಂಕ ಇವು ಕಮಲದಲ್ಲೂ ಚಂದ್ರನಲ್ಲೂ ಮಾಲಿನ್ಯವನ್ನುಂಟುಮಾಡುತ್ತವೆ. ನಿನ್ನ ಮುಖದಲ್ಲಾದರೋ ಅವು ಕಣ್ಣುಗಳಿಗೂ ತಿಲಕಾಂಜನಕ್ಕೂ ಕಾಂತಿಯನ್ನು ನೀಡಿವೆ.'' ಇದು ಇಲ್ಲಿ ಪ್ರಕೃತ ವಿಶೇಷಾಂಶ. ಇದನ್ನು ಸಮರ್ಥಿಸಲಿಕ್ಕಾಗಿ ಅಪ್ರಕೃತಸಾಮಾನ್ಯಾಂಶವನ್ನು ಕೊಡುತ್ತಾನೆ. ''ದೋಷಗಳೂ ಸಹ ಒಂದೆಡೆಗೆ ಸೇರಿದರೆ ಕೆಲವು ಸಂದರ್ಭಗಳಲ್ಲಿ ಗುಣಗಳೆನಿಸುತ್ತವೆ'' ಇದೇ ಇಲ್ಲಿ ಸಾಮಾನ್ಯಾಂಶ. ಇದು ಅರ್ಥಾಂತರನ್ಯಾಸಕ್ರಮದಿಂದ ಬಂದಿದೆ. ಇದನ್ನು ಸಮರ್ಥಿಸಲಿಕ್ಕಾಗಿ ಮತ್ತೊಂದು ವಿಶೇಷಾಂಶವನ್ನು ಕೊಡಲಾಗಿದೆ. "ಭಾಷಣಕಾರನ ಮಾತಿನಲ್ಲಿ ಕೆಲವು ವೇಳೆ ಭ್ರಾಂತಿಯೂ, ಕೆಲವು ವೇಳೆ ಕಪಟವೂ ತೋರಿದರೆ ಅವು ಗುಣಗಳಾಗಿಯೇ ಮಾರ್ಪಡುತ್ತವೆ.'' ಇದೇ ಇಲ್ಲಿ ವಿಶೇಷಾಂಶ. ಇದರಿಂದ ಹಿಂದಿನ ಸಾಮಾನ್ಯಾಂಶವನ್ನು ಸಮರ್ಥಿಸಿ ಆ ಮೂಲಕ ಹಿಂದಿನ ವಿಶೇಷಕ್ಕೆ ಪುಷ್ಟಿಯನ್ನು ಕೊಡಲಾಗಿದೆ. ಈ ಬಗೆಯ ಚಮತ್ಕಾರವು ಏಕಸ್ವರಾಲಂಕಾರವೆನಿಸಿದೆ.

## ೬೩. ಪ್ರೌಢೋಕ್ತ್ಯಲಂಕಾರ

ಪ್ರೌಢೋಕ್ತಿರುತ್ಕರ್ಷಾಹೇತೌ ತದ್ಧೇತುತ್ವಪ್ರಕಲ್ಪನಮ್ ॥
ಕಚಾಃ ಕಲಿಂದಜಾತೀರತಮಾಲಸ್ತೋಮಮೇಚಕಾಃ ॥ ೧೨೪ ॥

ಕಚಾಃ ಕಲಿಂದಜಾತೀರತಮೂಲಸ್ತೋಮಮೇಚಕಾಃ ॥ ೧೨೪ ॥ ಉತ್ಕರ್ಷಾಹೇತೌ ತದ್ಧೇತುತ್ವಪ್ರಕಲ್ಪನಂ ಪ್ರೌಢೋಕ್ತಿಃ ಯಥಾ ತಮಾಲ ಕಾರ್ಷ್ಣ್ಯಾತಿಶಯಾಹೇತೌ ತದ್ಧೇತುತ್ವಪ್ರಕಲ್ಪನಂ ಪ್ರೌಢೋಕ್ತಿಃ ಯಥಾ ತಮಾಲ ಗಲತನ್ನೈಲ್ಯಾತಿಶಯಾಹೇತೌ ಯಮುನಾತಟರೋಹಣೇ ತದ್ಧೇತುತ್ವಪ್ರಕಲ್ಪನಮ್.

ಯಥಾ ವಾ—

ಕಲ್ಪತರುಕಾಮದೋಗ್ಧ್ರೀಚಿಂತಾಮಣಿಧನದಶಂಖಾನಾಮ್ ।
ರಚಿತೋ ರಜೋಭರಪಯಸ್ತೇಜಃಶ್ವಾಸಾಂತರಾಂಬರೈರ್ವೇಷಃ ॥

ಅತ್ರ ಕಲ್ಪವೃಕ್ಷಾದ್ಯೈಃ ಕೈವಿತರಣಾತಿಶಾಯಿವರ್ಣನೀಯರಾಜವಿತರಣಾತಿಶಯಾಹೇತೌ ಕಲ್ಪವೃಕ್ಷಪರಾಗಾದಿರೂಪಪಂಚಭೂತನಿರ್ಮಿತತ್ವೇನ ತದ್ಧೇತುತ್ವಪ್ರಕಲ್ಪನಂ ಪ್ರೌಢೋಕ್ತಿಃ.

ಒಂದು ವಸ್ತುವು ಒಂದು ಕಾರ್ಯವನ್ನು ಉತ್ಕರ್ಷಗೊಳಿಸಲು ಕಾರಣವಲ್ಲ

ದಿದ್ದರೂ ಆದರ ಉತ್ಕರ್ಷಕ್ಕೆ ಅದನ್ನು ಕಾರಣವೆಂದು ಕಲ್ಪಿಸುವುದೇ ಪ್ರೌಢೋಕ್ತಿ ಎನಿಸುವುದು. "ಆಕೆಯ ಕೂದಲು ಯಮುನಾನದಿಯ ದಡದಲ್ಲಿರುವ ಹೊಂಗೆ ಮರಗಳ ಸಮೂಹದಂತೆ ಕಪ್ಪಾಗಿದೆ."

ಮಹತ್ತರವಾದ ಕಾರ್ಯಕ್ಕೆ ಒಂದು ವಸ್ತುವು ಕಾರಣವಲ್ಲದಿದ್ದರೂ ಅದನ್ನು ಕಾರಣವೆಂದು ಕಲ್ಪಿಸುವುದೇ ಪ್ರೌಢೋಕ್ತಿ ಎನಿಸುತ್ತದೆ. ಹೊಂಗೆಮರಗಳಲ್ಲಿ ಹೆಚ್ಚು ವ್ಯಾಪಿಸಿರುವ ಕಪ್ಪು ಬಣ್ಣಕ್ಕೆ ಯಮುನಾನದಿಯ ತೀರಪ್ರದೇಶವು ಕಾರಣವಲ್ಲದಿದ್ದರೂ ಅದನ್ನು ಕಾರಣವೆಂದು ಇಲ್ಲಿ ಕಲ್ಪಿಸಿರುವುದರಿಂದ ಇದು ಪ್ರೌಢೋಕ್ತಿ ಎನಿಸಿದೆ. "ಈ ಮಹಾರಾಜನು ಕಲ್ಪವೃಕ್ಷ, ಕಾಮಧೇನು, ಚಿಂತಾಮಣಿ, ಕುಬೇರ, ಶಂಖ ಇವುಗಳ ಪರಾಗಸಮೂಹ, ಹಾಲು, ತೇಜಸ್ಸು, ನಿಟ್ಟುಸಿರು, ಒಳಗಿನ ಬಯಲು ಇವುಗಳಿಂದ ನಿರ್ಮಿತವಾಗಿರುವನು." ಎಲ್ಲಿ ಕಲ್ಪವೃಕ್ಷವೇ ಮೊದಲಾದವುಗಳಲ್ಲಿ ಒಂದೊಂದು ವಸ್ತುವು ಅಭ್ಯರ್ಥಿಗಳಿಗೆ ದಾನಮಾಡವುದಕ್ಕಿಂತಲೂ ಹೆಚ್ಚಾಗಿ ದಾನಮಾಡುತ್ತಿರುವ ಮಹಾರಾಜನ ಔದಾರ್ಯಾತಿಶಯಕ್ಕೆ ಕಲ್ಪವೃಕ್ಷದ ಪರಾಗವೇ ಮೊದಲಾದ ಐದು ಪದಾರ್ಥಗಳಿಂದ ರಾಜನ ನಿರ್ಮಾಣವೇ ಕಾರಣವೆಂದು ಇಲ್ಲಿ ಕಲ್ಪಿಸಲಾಗಿದೆ. ಇಲ್ಲಿ ಕಲ್ಪವೃಕ್ಷದ ಪರಾಗ, ಕಾಮಧೇನುವಿನ ಹಾಲು ಚಿಂತಾಮಣಿಯ ಪ್ರಕಾಶ, ಕುಬೇರನ ನಿಟ್ಟುಸಿರು, ಶಂಖದೊಳಗಿನ ಬಯಲು ಈ ಐದು ವಸ್ತುಗಳು ರಾಜನ ನಿರ್ಮಾಣಕ್ಕೆ ಕಾರಣವಲ್ಲದಿದ್ದರೂ ಅವನ್ನು ಕಾರಣವೆಂದು ಕಲ್ಪಿಸಲಾಗಿದೆ. ಆದ್ದರಿಂದ ಇದು ಪ್ರೌಢೋಕ್ತಿ ಎನಿಸಿದೆ.

## ೩೪. ಸಂಭಾವನಾಲಂಕಾರ

ಸಂಭಾವನಾ ಯದೀತ್ಥಂ ಸ್ಯಾದಿತ್ಯೂಹೋಽನ್ಯಸ್ಯ ಸಿದ್ಧಯೇ ।
ಯದಿ ಶೇಷೋ ಭವೇದ್ವಕ್ತಾ ಕಥಿತಾಃ ಸ್ಯುರ್ಗುಣಾಸ್ತವ ॥೧೨೫॥

ಕಸ್ತೂರಿಕಾಮೃಗಾಣಾಮಂಡಾದ್ಗಂಧಗುಣಮಖಿಲಮಾದಾಯ ।
ಯದಿ ಪುನರಹಂ ವಿಧಿಃ ಸ್ಯಾಂ ಖಲಜಿಹ್ವಾಯಾಂ ನಿವೇಶಯಿಷ್ಯಾಮಿ ॥

ಯದ್ಯರ್ಥೋಕ್ತೌ ಚ ಕಲ್ಪನಮತಿಶಯೋಕ್ತಿಭೇದ ಇತಿ ಕಾವ್ಯಪ್ರಕಾಶಕಾರಃ.

ಒಂದು ಕಾರ್ಯವನ್ನು ಸಾಧಿಸಲಿಕ್ಕಾಗಿ ಹೊರಟು ಈ ಕಾರ್ಯವು ಹೀಗೆ ಆಗುವುದಾದರೆ ಆ ಕಾರ್ಯವು ಹಾಗೆ ಆಗುವುದೆಂದು ಊಹಿಸುವುದೇ ಸಂಭಾವನೆ ಎನಿಸುವುದು, ಆದಿಶೇಷನೇ ಕಥೆಯನ್ನು ಹೇಳುವುದಾದರೆ ಆಗ ನಿನ್ನ ಗುಣಗಳನ್ನು ಹೇಳಿದಂತಾಗುವುದು.

"ನಾನು ಬ್ರಹ್ಮನಾಗಿದ್ದಿದ್ದರೆ ಕಸ್ತೂರೀಮೃಗಗಳ ಕುಂಡಿಯಲ್ಲಿರುವ ಸುಗಂಧ ಪೆಲ್ಲವನ್ನೂ ತೆಗೆದುಕೊಂಡು ನೀಚರ ನಾಲಿಗೆಯಲ್ಲಿ ಇಡುತ್ತಿದ್ದೆನು." ಇಲ್ಲಿ ಕಸ್ತೂರೀ ಮೃಗಗಳ ಅಂಡದಲ್ಲಿರುವ ಸುಗಂಧವನ್ನು ತೆಗೆದುಕೊಂಡು ನೀಚರ ನಾಲಿಗೆಯಲ್ಲಿ ಇಡಬೇಕಾದ ಕಾರ್ಯವು ಸಿದ್ಧಿಸಬೇಕಾಗಿದೆ. ಇದು ಅಸಾಧ್ಯವಾದ ಕಾರ್ಯ. ಇದರ ಸಿದ್ಧಿಗೆ ನಾನು ಬ್ರಹ್ಮನಾಗುವುದು ಆವಶ್ಯಕವೆನಿಸಿದೆ. ಇದು ಆದರೆ ಅದು ಆಗಬಹುದೆಂದು ಇಲ್ಲಿ ಊಹಿಸಲಾಗಿದೆ. ನಾನು ಬ್ರಹ್ಮನಾಗುವುದಾದರೆ ಆ ಕಾರ್ಯವನ್ನು ಮಾಡಲು ನನಗೆ ಸಾಧ್ಯವಾದೀತೆಂಬ ಊಹೆ ಇರುವುದರಿಂದ ಇದು ಸಂಭಾವನೆ ಎನಿಸಿದೆ. ಮೊದಲನೆಯ ಉದಾಹರಣದಲ್ಲಿ ರಾಜನ ಗುಣಗಳನ್ನು ವರ್ಣಿಸುವುದೇ ಪ್ರಕೃತಕಾರ್ಯ. ಅದು ಸಿದ್ಧಿಸಬೇಕಾದರೆ ವರ್ಣಿಸುವವನು ಆದಿಶೇಷನೇ ಆಗಬೇಕೆಂದು ಊಹಿಸಲಾಗಿದೆ. ರಾಜನ ಗುಣಗಳ ವರ್ಣನವು ಸಿದ್ಧಿಸಬೇಕಾದರೆ ವರ್ಣಿಸುವವನು ಆದಿಶೇಷನೇ ಆಗಬೇಕೆಂದು ಊಹಿಸಿರುವುದರಿಂದ ಇದು ಸಂಭಾವನೆ ಎನಿಸಿದೆ.

ಇಲ್ಲಿ 'ಯದಿ' ಎಂಬ ಅವ್ಯಯದ ಅರ್ಥವನ್ನು ತಿಳಿಸುತ್ತಲೇ 'ವರ್ಣಿಸುವವನು ಆದಿಶೇಷನಾಗುವುದಾದರೆ' ಎಂದು ಕಲ್ಪನೆ ಇರುವುದರಿಂದ ಇದು ಅತಿಶಯೋಕ್ತಿಯಲ್ಲಿ ಒಂದು ಬಗೆ ಎಂದು ಕಾವ್ಯಪ್ರಕಾಶಕಾರನು ಹೇಳಿದ್ದಾನೆ.

## ೬೫. ಮಿಥ್ಯಾಧ್ಯವಸಿತ್ಯಲಂಕಾರ

ಕಿಂಚಿನ್ಮಿಥ್ಯಾತ್ವಸಿದ್ಧ್ಯರ್ಥಂ ಮಿಥ್ಯಾರ್ಥಾಂತರಕಲ್ಪನಮ್ ।
ಮಿಥ್ಯಾಧ್ಯವಸಿತಿರ್ವೇಶ್ಯಾಂ ವಶಯೇತ್ಖಸ್ರಜಂ ವಹನ್ ॥

ಅತ್ರ ವೇಶ್ಯಾವಶೀಕರಣಸ್ಯಾತ್ಯಂತಾಸಂಭಾವಿತತ್ವಸಿದ್ಧಯೇ ಗಗನಕುಸುಮಮಾಲಿಕಾಧಾರಣರೂಪಾರ್ಥಾಂತರಕಲ್ಪನಂ ಮಿಥ್ಯಾಧ್ಯವಸಿತಿಃ. ಯಥಾ ವಾ—

ಅಸ್ಯ ಕ್ಷೋಣಿಪತೇಃ ಪರಾರ್ಧಪರಯಾ ಲಕ್ಷೀಕೃತಾಃ ಸಂಖ್ಯಯಾ
ಪ್ರಜ್ಞಾಚಕ್ಷುರವೇಕ್ಷ್ಯಮಾಣಬಧಿರಶ್ರಾವ್ಯಾಃ ಕಿಲಾಕೀರ್ತಯಃ ।
ಗೀಯಂತೇ ಸ್ವರಮಷ್ಟಮಂ ಕಲಯತಾ ಜಾತೇನ ವಂಧ್ಯೋದರಾತ್
ಮೂಕಾನಾಂ ಪ್ರಕರೇಣ ಕೂರ್ಮರಮಣೀದುಗ್ಧೋದಧೇ ರೋಧಸಿ ॥

ಅತ್ರ ಆದ್ಯೋದಾಹರಣಂ ನಿದರ್ಶನಗರ್ಭಂ; ದ್ವಿತೀಯಂಚ ಶುದ್ಧಮ್. ಅಸಂಬಂಧೇ ಸಂಬಂಧರೂಪಾತಿಶಯೋಕ್ತಿತೋ ಮಿಥ್ಯಾಧ್ಯವಸಿತೇಃ ಕಿಂಚಿನ್ಮಿಥ್ಯಾತ್ವಸಿದ್ಧ್ಯರ್ಥಂ ಮಿಥ್ಯಾರ್ಥಾಂತರಕಲ್ಪನಾತ್ಮನಾ ವಿಚ್ಛಿತ್ತಿವಿಶೇಷೇಣಭೇದಃ.

ಯಾವುದೋ ಒಂದು ವಿಷಯವನ್ನು ಸುಳ್ಳೆಂದು ಸಾಧಿಸಲಿಕ್ಕಾಗಿ ಬೇರೊಂದು ಸುಳ್ಳಾದ ವಿಷಯವನ್ನು ಕಲ್ಪಿಸುವುದೇ ಮಿಥ್ಯಾಧ್ಯವಸಿತಿ ಎನಿಸುತ್ತದೆ. "ಆಕಾಶ ಪುಷ್ಪದ ಮಾಲಿಕೆಯನ್ನು ಧರಿಸಿದವನೇ ವೇಶ್ಯೆಯನ್ನು ವಶಪಡಿಸಿಕೊಳ್ಳಬಲ್ಲನು."

ಇಲ್ಲಿ ವೇಶ್ಯೆಯನ್ನು ವಶಪಡಿಸಿಕೊಳ್ಳುವುದು ಅತ್ಯಂತ ಅಸಂಭವವೆಂಬುದನ್ನು ಸಾಧಿಸಲಿಕ್ಕಾಗಿ ಆಕಾಶಪುಷ್ಪದ ಮಾಲಿಕೆಯನ್ನು ನಿರ್ಮಿಸಿ ಕೊರಳಲ್ಲಿ ಧರಿಸಬೇಕೆಂಬ ವಿಷಯವನ್ನು ಕಲ್ಪಿಸಲಾಗಿದೆ. ಆಕಾಶಪುಷ್ಪವೆಂಬುದೇ ಸುಳ್ಳು. ಅದರಿಂದ ಮಾಲಿಕೆಯನ್ನು ರಚಿಸುವುದೇ ಅಸಂಭವ. ಅದನ್ನು ಕೊರಳಲ್ಲಿ ಧರಿಸುವುದು ಹೇಗ ಅಸಂಭವವೋ ಹಾಗೇ ವೇಶ್ಯಾಸ್ತ್ರೀಯನ್ನು ವಶಪಡಿಸಿಕೊಳ್ಳುವುದೂ ಅಸಂಭವವೆಂದು ಇಲ್ಲಿ ತಿಳಿಸಿದೆ. ವೇಶ್ಯಾವಶೀಕರಣವೆಂಬ ಒಂದು ಸುಳ್ಳನ್ನು ಸಾಧಿಸಲು ಆಕಾಶ ಪುಷ್ಪಮಾಲೆ ಎಂಬ ಮತ್ತೊಂದು ಸುಳ್ಳನ್ನು ಇಲ್ಲಿ ಕಲ್ಪಿಸಲಾಗಿದೆ. ಹೀಗೆ ಒಂದು ಸುಳ್ಳನ್ನು ಸ್ಥಿರಪಡಿಸಲು ಮತ್ತೊಂದು ಸುಳ್ಳನ್ನು ಕಲ್ಪಿಸುವುದರಲ್ಲೂ ಒಂದು ಬಗೆಯ ಚಮತ್ಕಾರವಿರುವುದರಿಂದ ಈ ಚಮತ್ಕಾರವು ಮಿಥ್ಯಾಧ್ಯವಸಿತ್ಯ ಲಂಕಾರವೆನಿಸಿದೆ.

''ಈ ಮಹಾರಾಜನ ಅಕೀರ್ತಿಗಳು ಪರಾರ್ಧಸಂಖ್ಯೆಗಿಂತಲೂ ಹೆಚ್ಚಾಗಿದ್ದು ಕುರುಡರಿಗೆ ಕಾಣಿಸುವಂತೆಯೂ, ಕಿವುಡರಿಗೆ ಕೇಳುವಂತೆಯೂ ಇದ್ದು ಅದನ್ನು ಹೆಣ್ಣು ಆಮೆಯು ಹಿಂಡಿದ ಹಾಲಿನಿಂದ ನಿರ್ಮಿತವಾದ ಸಮುದ್ರದ ದಡದಲ್ಲಿ ಬಂಜೆಗೆ ಹುಟ್ಟಿ ಮೂಗರಿಗೆ ಹಿರಿಯನೆನಿಸಿದವನು ಅಷ್ಟಮಸ್ವರದಲ್ಲಿ ಹಾಡುತ್ತಿರುವನು.'' ಇಲ್ಲಿ ಅಕೀರ್ತಿ ಎಂಬುದೇ ಎಲ್ಲಿಯೂ ಇಲ್ಲವೆಂಬುದನ್ನು ಸಾಧಿಸಬೇಕಾಗಿದೆ. ಅದನ್ನು ಸಾಧಿಸಲು ಅನೇಕ ಸುಳ್ಳುಗಳನ್ನು ಇಲ್ಲಿ ಕಲ್ಪಿಸಿದೆ. ಅದನ್ನು ಕುರುಡರು ನೋಡುವಂತೆಯೂ, ಕಿವುಡರು ಕೇಳುವಂತೆಯೂ ಕಲ್ಪಿಸಿದೆ. ಹೆಣ್ಣು ಆಮೆಯ ಹಾಲಿನಿಂದಾಗಿರುವ ಸಮುದ್ರದ ದಡದಲ್ಲಿ ಬಂಜೆಯ ಮಗನು ಮೂಗರಲ್ಲಿ ಅಗ್ರಗಣ್ಯನೆನಿಸಿದ್ದು ಅಷ್ಟಮಸ್ವರದಲ್ಲಿ ಹಾಡುತ್ತಿರುವನೆಂಬುದು ಮತ್ತಷ್ಟು ಸುಳ್ಳು ಅಷ್ಟಮಸ್ವರವೇ ಇಲ್ಲ. ಬಂಜೆಗೆ ಮಗನೇ ಇರುವುದಿಲ್ಲ. ಅದರಲ್ಲೂ ಮೂಗನು ಹಾಡುತ್ತಿರುವನೆಂಬುದು ಸಂಭವವೇ ಇಲ್ಲ. ಹೆಣ್ಣು ಆಮೆಯ ಹಾಲಿನಿಂದ ಸಮುದ್ರವೇ ಆಗುವಂತಿಲ್ಲ. ಹೀಗೆ ಅಕೀರ್ತಿಯೆಂಬುದೇ ಇಲ್ಲವೆಂಬುದನ್ನು ಸಾಧಿಸಲು ಇಷ್ಟೆಲ್ಲಾ ಸುಳ್ಳಿನ ಕಂತೆಯನ್ನು ಕಲ್ಪಿಸಿದೆ. ಇಲ್ಲಿ ಮೊದಲನೆಯ ಉದಾಹರಣದಲ್ಲಿ ನಿದರ್ಶನಾಲಂಕಾರವು ಸೇರಿಕೊಂಡಿದೆ. ಎರಡನೆಯದರಲ್ಲಿ ಬೇರೆ ಯಾವ ಅಲಂಕಾರವೂ ಇಲ್ಲದೆ ಮಿಥ್ಯಾಧ್ಯವಸಿತಿಯಷ್ಟೇ ಇರುವುದರಿಂದ ಆ ಉದಾಹರಣವು ಶುದ್ಧವೆನಿಸಿದೆ. ಸಂಬಂಧವಿಲ್ಲದ ಕಡೆಯಲ್ಲಿ ಸಂಬಂಧವನ್ನು ಕಲ್ಪಿಸುವ ಅತಿಶಯೋಕ್ತಿಗಿಂತಲೂ ಮಿಥ್ಯಾಧ್ಯವಸಿತಿಯಲ್ಲಿ ಯಾವುದೋ ಒಂದು ವಸ್ತುವನ್ನು ಸುಳ್ಳೆಂದು ಸಾಧಿಸಲಿಕ್ಕಾಗಿ ಮತ್ತೊಂದು ಸುಳ್ಳನ್ನು ಕಲ್ಪಿಸುವುದೇ ವಿಶೇಷವೆನಿಸಿದ್ದರಿಂದ ಈ ಬಗೆಯ ವೈಚಿತ್ರ್ಯವಿರುವ ಪ್ರಯುಕ್ತ ಇದು ಅತಿಶಯೋಕ್ತಿಗಿಂತ ಬೇರೆ ಎನಿಸಿದೆ.

## ೬೬. ಲಲಿತಾಲಂಕಾರ

ವರ್ಣ್ಯೇ ಸ್ಯಾದ್ವರ್ಣ್ಯವೃತ್ತಾಂತಪ್ರತಿಬಿಂಬಸ್ಯ ವರ್ಣನಮ್ ।
ಲಲಿತಂ ನಿರ್ಗತೇ ನೀರೇ ಸೇತುಮೇಷಾ ಚಿಕೀರ್ಷತಿ ॥ ೧೨೭ ॥

ಪ್ರಸ್ತುತೇ ಧರ್ಮಿಣಿ ಯೋ ವರ್ಣನೀಯೋ ವೃತ್ತಾಂತಸ್ತಮವರ್ಣಯಿತ್ವಾ ತತ್ರೈವ ತತ್ಪ್ರತಿಬಿಂಬರೂಪಸ್ಯ ಕಸ್ಯಚಿದಪ್ರಸ್ತುತವೃತ್ತಾಂತಸ್ಯ ವರ್ಣನಂ ಲಲಿತಮ್ ಯಥಾ ಕಥಂಚಿದ್ದಾಕ್ಷಿಣ್ಯಸಮಾಗತತತ್ಕಾಲೋಪೇಕ್ಷಿತ ಪ್ರತಿನಿವೃತ್ತನಾಯಕಾಂತರಾಸಕ್ತನಾಯಕಾನಯನಾರ್ಥಂ ಸಖೀಂ ಪ್ರೇಷಯಿತುಕಾಮಾಂ ನಾಯಿಕಾಮುದ್ದಿಶ್ಯ ಸಖ್ಯಾ ವಚನೇನ ತದ್ವ್ಯಾಪಾರಪ್ರತಿಬಿಂಬಭೂತಗತಜಲಸೇತುಬಂಧವರ್ಣನಮ್. ನೇಯಮಪ್ರಸ್ತುತಪ್ರಶಂಸಾ ಪ್ರಸ್ತುತಧರ್ಮಿಕತ್ವಾತ್ ; ನಾಪಿ ಸಮಾಸೋಕ್ತಿಃ ಪ್ರಸ್ತುತವೃತ್ತಾಂತೇ ವರ್ಣ್ಯಮಾನೇ ವಿಶೇಷಣಸಾರೂಪ್ಯೇಣ ವಾ ಅಪ್ರಸ್ತುತ ವೃತ್ತಾಂತಸ್ಫೂರ್ತ್ಯಭಾವಾತ್ ; ಅಪ್ರಸ್ತುತವೃತ್ತಾಂತಾದೇವ ಸರೂಪಾದಿಹ ಪ್ರಸ್ತುತವೃತ್ತಾಂತಸ್ಯ ಗಮ್ಯತ್ವಾತ್. ನಾಪಿ ನಿದರ್ಶನಾ ಪ್ರಸ್ತುತಾಪ್ರಸ್ತುತ ವೃತ್ತಾಂತಯೋಃ ಶಬ್ದೋಪಾತ್ತಯೋರೈಕ್ಯಸಮಾರೋಪ ಏವ ತಸ್ಯಾಃ ಸಮುನ್ಮೇಷಾತ್. ಯದಿ ವಿಷಯವಿಷಯಿಣೋಃ ಶಬ್ದೋಪಾತ್ತಯೋಃ ಪ್ರವರ್ತಮಾನ ಏವ ಅಲಂಕಾರೋ ವಿಷಯಮಾತ್ರೋಪಾದಾನೇಽಪಿ ಸ್ಯಾತ್ತದಾಯ ರೂಪಕಮೇವ ಭೇದೇಽಪ್ಯಭೇದರೂಪಾಯಾ ಅತಿಶಯೋಕ್ತೇರಪಿ ವಿಷಯ ಮಾತ್ರಮೇತ್. ನನು ತರ್ಹ್ಯತ್ರ ಪ್ರಸ್ತುತನಾಯಕಾದಿನಿಗರಣೇನ ತತ್ರ ಶಬ್ದೋಪಾತ್ತಾಪ್ರಸ್ತುತನೀರಾದ್ಯಭೇದಾಧ್ಯವಸಾಯ ಇತಿ ಭೇದೇಽಭೇದರೂಪಾತಿಶಯೋಕ್ತಿರಸ್ತು. ಏವಂ ತರ್ಹಿ ಸಾರೂಪ್ಯನಿಬಂಧನಾಽಪ್ರಸ್ತುತಪ್ರಶಂಸಾವಿಷಯೋಽಪಿ ಸೈವಾತಿಶಯೋಕ್ತಿಃ ಸ್ಯಾತ್. ಅಪ್ರಸ್ತುತಧರ್ಮಿಕತ್ವಾನ್ನ ಭವತೀತಿ ಚೇತ್ ತತ್ರಾಪ್ಯಪ್ರಸ್ತುತಧರ್ಮಿವಾಚಕಪದಸ್ಯಾಪಿ ಪ್ರಸಿದ್ಧಾತಿಶಯೋಕ್ತ್ಯುದಾಹರಣೇಷ್ವಿವ ಪ್ರಸ್ತುತಧರ್ಮಿಲಕ್ಷಕತ್ವಸಂಭವಾತ್. ನನ್ವಪ್ರಸ್ತುತಪ್ರಶಂಸಾಯಾಂ ಸರೂಪಾದ ಪ್ರಸ್ತುತವಾಕ್ಯಾರ್ಥಾತ್ ಪ್ರಸ್ತುತವಾಕ್ಯಾರ್ಥೋಽವಗಮ್ಯತೇ ನ ತ್ವತಿಶಯೋಕ್ತಾವಿವ ವಿಷಯಿವಾಚಕೈಸ್ತತ್ತತ್ಪದೈರ್ವಿಷಯಾ ಲಕ್ಷ್ಯಂತ ಇತಿ ಭೇದ ಇತಿ ಚೇತ್ತರ್ಹಿ ಇಹಾಪಿ ಪ್ರಸ್ತುತಗತಾದಪ್ರಸ್ತುತವೃತ್ತಾಂತರೂಪಾತ್ ವಾಕ್ಯಾರ್ಥಾತ್ ತದ್ಗತ ಪ್ರಸ್ತುತವೃತ್ತಾಂತರೂಪೋ ವಾಕ್ಯಾರ್ಥೋಽವಗಮ್ಯತ ಇತ್ಯೇವ ಅತಿಶಯೋಕ್ತಿತೋ ಭೇದೋಽಸ್ತು. ವಸ್ತುತಸ್ತು

ಪ್ರಕೃತವಸ್ತುವಿನಲ್ಲಿ ವರ್ಣಿಸಬೇಕಾಗಿರುವ ವೃತ್ತಾಂತವನ್ನು ವರ್ಣಿಸದೆಯೇ ಅದಕ್ಕೆ ಸದೃಶವಾದ ಬೇರೊಂದು ಅಪ್ರಕೃತವೃತ್ತಾಂತವನ್ನು ವರ್ಣಿಸುವುದೇ

ಲಲಿತಾಲಂಕಾರವೆನಿಸುತ್ತದೆ. "ನೀರೆಲ್ಲವೂ ಹರಿದು ಹೋದಮೇಲೆ ಈಕೆಯು ಕಟ್ಟೆಯನ್ನು ಕಟ್ಟಲಿಚ್ಛಿಸುತ್ತಾಳೆ". ಪ್ರಕೃತವಸ್ತುವೇ ವಿಶೇಷ್ಯವೆನಿಸಿರುವಾಗ ಅದರಲ್ಲಿ ವರ್ಣಿಸಬೇಕಾಗಿರುವ ವೃತ್ತಾಂತವನ್ನು ವರ್ಣಿಸದೆ ಅಲ್ಲಿಯೇ ಅದಕ್ಕೆ ಸದೃಶವಾದ ಬೇರೊಂದು ಅಪ್ರಕೃತವೃತ್ತಾಂತವನ್ನು ತಿಳಿಸುವುದೇ ಲಲಿತಾಲಂಕಾರವೆನಿಸುವುದು. ಹೇಗೋ ಕಷ್ಟದಿಂದ ದಾಕ್ಷಿಣ್ಯಕ್ಕಾಗಿ ಬಂದು ಅದೇ ಕಾಲದಲ್ಲಿ ತಿರಸ್ಕೃತನಾಗಿ ಹಿಂತಿರುಗಿ ಹೋಗಿ ಬೇರೆ ಒಬ್ಬ ನಾಯಿಕೆಯಲ್ಲಿ ಆಸಕ್ತನಾಗಿರುವ ನಾಯಕನನ್ನು ಕರೆತರಲು ಸಖಿಯನ್ನು ಕಳುಹಿಸಲಿಚ್ಛಿಸುವ ನಾಯಿಕೆಗೆ ಸಖಿಯು ಹೇಳುವ ಮಾತಿದು. ಆ ನಾಯಕನನ್ನು ಕರೆತರುವ ಪ್ರಯತ್ನವು ಅಸಾಧ್ಯವೆಂಬ ಅಂಶವನ್ನು ಇಲ್ಲಿ ತಿಳಿಸದೆ ಅದಕ್ಕೆ ಸದೃಶವಾದ ನೀರಿನ ಸಮಾಚಾರವನ್ನು ವರ್ಣಿಸಲಾಗಿದೆ. ನೀರೆಲ್ಲವೂ ಹರಿದು ಹೋದಮೇಲೆ ಕಟ್ಟೆಯನ್ನು ಕಟ್ಟುವಂತೆ ತಿರಸ್ಕೃತನಾಗಿ ಹಿಂದಕ್ಕೆ ಹೋಗಿ ಬೇರೆಕಡೆಯಲ್ಲಿ ಅಂಟಿಕೊಂಡಿರುವ ನಾಯಕನನ್ನು ಸಮಾಧಾನಪಡಿಸಿ ಕರೆತರುವುದು ಅಸಾಧ್ಯವಾದುದೆಂದು ತಿಳಿಸುವ ಪ್ರಕರಣವಿದು. ನಾಯಕನನ್ನು ಕರೆತರುವ ವಿಷಯವೇ ಪ್ರಕೃತವೃತ್ತಾಂತ. ಅದನ್ನು ತಿಳಿಸದೆ ನೀರೆಲ್ಲವೂ ಹರಿದು ಹೋದ ಮೇಲೆ ಈಕೆಯು ಕಟ್ಟೆಯನ್ನು ಕಟ್ಟಲಿಚ್ಛಿಸುವಳೆಂದು ಅವಳಿಗೆ ಸಂಬಂಧಿಸದಂತೆ ಅಪ್ರಕೃತವೃತ್ತಾಂತವನ್ನು ಇಲ್ಲಿ ತಿಳಿಸಲಾಗಿದೆ. ಈ ಬಗೆಯ ವರ್ಣನೆ ಲಲಿತಾಲಂಕಾರವೆನಿಸಿದೆ. ಇದರಲ್ಲಿ ವರ್ಣಿಸಿರುವ ಪ್ರಕೃತವಸ್ತುವೇ ಧರ್ಮಿ (ವಿಶೇಷ್ಯ) ಎನಿಸಿರುವುದರಿಂದ ಇದನ್ನು ಅಪ್ರಸ್ತುತಪ್ರಶಂಸೆಯಲ್ಲಿ ಸೇರಿಸಲಿಕ್ಕಾಗುವುದಿಲ್ಲ. ಅಲ್ಲಿಯಾದರೋ ಅಪ್ರಕೃತವಸ್ತುವೇ ಧರ್ಮಿ (ವಿಶೇಷ್ಯ) ಎನಿಸಿರುತ್ತದೆ. ಆದ ಪ್ರಯುಕ್ತ ಲಲಿತಾಲಂಕಾರವು ಅಪ್ರಸ್ತುತಪ್ರಶಂಸೆಗಿಂತ ಬೇರೆಯಾಗಿದೆ. ಹಾಗೆಯೇ ಇದನ್ನು ಸಮಾಸೋಕ್ತಿಯಲ್ಲೂ ಸೇರಿಸಲಾಗುವುದಿಲ್ಲ. ಪ್ರಕೃತವೃತ್ತಾಂತವನ್ನು ವರ್ಣಿಸುವಾಗ ವಿಶೇಷಣಗಳ ಸಾಮ್ಯದಿಂದಾಗಲೀ, ಸಾರೋಪ್ಯದಿಂದಾಗಲೀ ಅಪ್ರಕೃತ ವೃತ್ತಾಂತವು ಇಲ್ಲಿ ತೋರಿಬರದೇ ಇರುವುದರಿಂದ ಇದು ಸಮಾಸೋಕ್ತಿಯಾಗಲಾರದು. ಸಮಾನವಾದ ಅಪ್ರಕೃತವೃತ್ತಾಂತದಿಂದಲೇ ಧರ್ಮಿಗೆ ಸಂಬಂಧಿಸಿದ ಪ್ರಕೃತವೃತ್ತಾಂತವನ್ನು ವ್ಯಂಗ್ಯವಾಗಿ ತಿಳಿಸುವುದೇ ಲಲಿತಾಲಂಕಾರದ ವೈಶಿಷ್ಟ್ಯವೆನಿಸಿರುವ ಪ್ರಯುಕ್ತ ಇಲ್ಲಿ ಸಮಾಸೋಕ್ತಿಯಂತೆ ಪ್ರಕೃತವೃತ್ತಾಂತದ ವರ್ಣನೆಯೇ ಬರುವುದಿಲ್ಲ. ಇವನ್ನು ನಿದರ್ಶನೆಯಲ್ಲೂ ಸೇರಿಸಲಾಗುವುದಿಲ್ಲ : ಯಾಕೆಂದರೆ ಪ್ರಕೃತ ಅಪ್ರಕೃತ ವೃತ್ತಾಂತಗಳೆರಡನ್ನು ಶಬ್ದದಿಂದಲೂ ತಿಳಿಸಿದ್ದು ಅವಕ್ಕೆ ಐಕ್ಯವನ್ನು ಆರೋಪಿಸುವಾಗಲೇ ನಿದರ್ಶನಾಲಂಕಾರವು ಪ್ರವರ್ತಿಸುತ್ತದೆ. ಇಲ್ಲಿಯಾದರೋ ಅವೆರಡು ವೃತ್ತಾಂತಗಳನ್ನೂ ಶಬ್ದದಿಂದ ವಾಚ್ಯವಾಗಿ ತಿಳಿಸುವುದಿಲ್ಲ. ಆದ್ದರಿಂದ ನಿದರ್ಶನೆಯಂತೆ ಐಕ್ಯಾರೋಪಕ್ಕೆ ಇಲ್ಲಿ ಅವಕಾಶವಿಲ್ಲ. ಆದರೆ ಪ್ರಕೃತಧರ್ಮಿಯಲ್ಲಿ ತಿಳಿಸಬೇಕಾದ ವೃತ್ತಾಂತವನ್ನು ತಿಳಿಸದೆಯೇ ಅದಕ್ಕೆ ಸದೃಶವಾದ ಬೇರೊಂದು, ವೃತ್ತಾಂತವನ್ನು ಇಲ್ಲಿ ತಿಳಿಸಲಾಗುವುದು. ಎರಡು ವೃತ್ತಾಂತಗಳನ್ನು ಶಬ್ದದಿಂದ

ತಿಳಿಸಿದೆ ಇರುವ ಪ್ರಯುಕ್ತ ಇದು ನಿದರ್ಶನೆಯಾಗಲಾರದು. ಉಪಮೇಯವನ್ನೂ ಉಪಮಾನವನ್ನೂ ಆಯಾ ಶಬ್ದದಿಂದ ತಿಳಿಸಿದಾಗಲೇ ಪ್ರವರ್ತಿಸುವ ಅಲಂಕಾರವು ಉಪಮಾನ ಒಂದನ್ನೇ ತಿಳಿಸಿರುವಾಗಲೂ ಬರುವುದಾದರೆ ಆಗ ರೂಪಕಾಲಂಕಾರವೇ ಭೇದವಿದ್ದರೂ ಅಭೇದವನ್ನು ತಿಳಿಸುವ ಅತಿಶಯೋಕ್ತಿಯ ಉದಾಹರಣಗಳನ್ನೂ ಆಕ್ರಮಿಸಬೇಕಾದೀತು. ಹಾಗಾದರೆ ಇಲ್ಲಿ (ಲಲಿತಾಲಂಕಾರದಲ್ಲಿ) ಪ್ರಕೃತನಾಯಕನನ್ನು ಶಬ್ದದಿಂದ ತಿಳಿಸದೆಯೇ ಅಪ್ರಕೃತವಾದ ನೀರಿನ ವೃತ್ತಾಂತವನ್ನು ತಿಳಿಸಿರುವುದರಿಂದ ಉಪಮೇಯವೆನಿಸಿದ ನಾಯಕನಲ್ಲಿ ಉಪಮಾನವೆನಿಸಿದ ನೀರಿನ ಅಭೇದವನ್ನು ಕಲ್ಪಿಸಲಾಗಿದೆಯಾದ್ದರಿಂದ ನೀರಿಗೂ ನಾಯಕನಿಗೂ ಭೇದವಿದ್ದರೂ ಅಭೇದವನ್ನು ತಿಳಿಸುವ ಅತಿಶಯೋಕ್ತ್ಯಲಂಕಾರವನ್ನೇ ಏಕೆ ಹೇಳಬಾರದು? ಎಂದು ಆಕ್ಷೇಪವು ಬರುತ್ತದೆ ಹಾಗೆ ಇಲ್ಲಿ ಅತಿಶಯೋಕ್ತಿಯನ್ನೇ ಹೇಳುವುದಾದರೆ ಸಾರೂಪ್ಯಮೂಲವಾದ ಅಪ್ರಸ್ತುತಪ್ರಶಂಸೆಯಲ್ಲೂ ಅತಿಶಯೋಕ್ತಿಯನ್ನೇ ಏಕೆ ಹೇಳಬಾರದು? ಅಂದರೆ ಅಲ್ಲಿ ಅಪ್ರಕೃತವಸ್ತುವೇ (ಧರ್ಮ) ವಿಶೇಷವಾಗಿರುವುದರಿಂದ ಅತಿಶಯೋಕ್ತಿಯನ್ನು ಹೇಳಲಿಕ್ಕಾಗುವುದಿಲ್ಲದೆಂದು ಅಲ್ಲಿ ಮಾತ್ರ ಸಮಾಧಾನವನ್ನು ಹೇಳುವುದಾದರೆ ಅಪ್ರಸ್ತುತಪ್ರಶಂಸೋದಾಹರಣದಲ್ಲಿಯೂ ಸಹ ಅಪ್ರಕೃತಧರ್ಮವನ್ನು ತಿಳಿಸುವ ಪದವು ಪ್ರಸಿದ್ಧವಾದ ಅತಿಶಯೋಕ್ತಿಯ ಉದಾಹರಣಗಳಂತೆ ಪ್ರಕೃತಧರ್ಮಿಯನ್ನು ಲಕ್ಷಣಾವೃತ್ತಿಯಿಂದ ತಿಳಿಸಬಹುದಾದ್ದರಿಂದ ಅಪ್ರಸ್ತುತಪ್ರಶಂಸೆಯೂ ಅತಿಶಯೋಕ್ತಿಯಲ್ಲಿಯೇ ಸೇರಲಿ ಎಂದು ಆಕ್ಷೇಪವು ನೆಲೆಯಾಗಿ ನಿಲ್ಲುತ್ತದೆ. ಅಪ್ರಸ್ತುತಪ್ರಶಂಸೆಯಲ್ಲಿ ಸದೃಶವಾದ ಅಪ್ರಕೃತವಾಕ್ಯಾರ್ಥದಿಂದ ಪ್ರಕೃತವಾಕ್ಯಾರ್ಥವು ತಿಳಿದು ಬರುತ್ತದೆಯಾದರೂ ಅತಿಶಯೋಕ್ತಿಯಲ್ಲಿರುವಂತೆ ಉಪಮಾನವನ್ನು (ವಿಷಯಿ) ತಿಳಿಸುವ ಪದದಿಂದಲೇ ಉಪಮೇಯವು (ವಿಷಯ) ಲಕ್ಷಣೆಯಿಂದ ತಿಳಿದು ಬರುವುದಿಲ್ಲ. ಆದ್ದರಿಂದ ಅವೆರಡಕ್ಕೂ ಇದೇ ವೈಲಕ್ಷಣ್ಯವೆನಿಸಿದೆ ಎಂದು ಹೇಳುವುದಾದರೆ ಆಗ ಇಲ್ಲಿಯೂ (ಲಲಿತಾಲಂಕಾರದಲ್ಲೂ ಸಹ) ಪ್ರಕೃತಸಂದರ್ಭಕ್ಕೆ ಅನ್ವಯಿಸುವ ಅಪ್ರಕೃತವೃತ್ತಾಂತವೆನಿಸಿದ ವಾಕ್ಯಾರ್ಥದಿಂದ ಅದೇ ಸಂದರ್ಭಕ್ಕನುಗುಣವಾದ ಪ್ರಕೃತವೃತ್ತಾಂತವೆಂಬ ವಾಕ್ಯಾರ್ಥವೇ ತಿಳಿದುಬರುವ ಪ್ರಯುಕ್ತ ಇದೇ ಲಲಿತಾಲಂಕಾರದ ವೈಶಿಷ್ಟ್ಯವೆನಿಸಿ ಇದನ್ನು ಅತಿಶಯೋಕ್ತಿಯಿಂದ ಬೇರ್ಪಡಿಸುತ್ತದೆ.

> ಸೋಽಪೂರ್ವೋ ರಸನಾವಿಪರ್ಯಯವಿಧಿಸ್ತತ್ಕರ್ಣಯೋಶ್ಚಾಪಲಂ
> ದೃಷ್ಟಿಃ ಸಾ ಮದವಿಸ್ಮೃತಸ್ವಪರದಿಕ್ಕಿಂ ಭೂಯಸೋಕ್ತೇನ ವಾ ।
> ಪೂರ್ವಂ ನಿಶ್ಚಿತವಾನಸಿ ಭ್ರಮರ ಹೇ ಯದ್ವಾರಣೋಽದ್ಯಾಪ್ಯಸೌ
> ಅಂತಃಶೂನ್ಯಕರೋ ನಿಷೇವ್ಯತ ಇತಿ ಭ್ರಾತಃ ಕ ಏಷ ಗ್ರಹಃ ॥

ಇತ್ಯಾದ್ಯಪ್ರಸ್ತುತಪ್ರಶಂಸೋದಾಹರಣೇ ಪ್ರಥಮಪ್ರತೀತಾತ್ ಅಪ್ರಸ್ತುತವಾಕ್ಯಾರ್ಥಾತ್ ಪ್ರಸ್ತುತವಾಕ್ಯಾರ್ಥೋಽವಗಮ್ಯತೇ ಇತ್ಯೇತನ್ನ ಘಟತೇ.

ಅಪ್ರಸ್ತುತೇ ವಾರಣ್ಯ ಭ್ರಮರಾಸೇವ್ಯತ್ವೇ ಕರ್ಣಚಾಪಲಮಾತ್ರಸ್ಯ ಭ್ರಮರಸೇವ್ಯ ಕರಣಹೇತುತ್ವಸಂಭವೇಽಪಿ ರಚನಾವಿಪರ್ಯಯಾಂತಃ ಶೂನ್ಯಕರತ್ವಯೋರ್ಹೇ ತುತ್ವಾಸಂಭವೇನ ಮದಸ್ಯಪ್ರತ್ಯುತ ತತ್ಸೇವ್ಯತ್ವಏವ ಹೇತುತ್ವೇನ ಚ ರಸನಾವಿಪರ್ಯ ಯಾದೀನಾಂ ತತ್ರ ಹೇತುತ್ವಾನ್ವಯಾರ್ಥಂ ವಾರಣಪದಸ್ಯ ದುಷ್ಟಪ್ರಭುರೂಪವಿಷಯ ಕ್ರೋಡೀಕಾರೇಣೈವ ಪ್ರವೃತ್ತೇಃ ವಕ್ತವ್ಯತ್ವಾತ್. ಏವಂ ಸತ್ಯಪಿ ಯದ್ಯಪ್ರಸ್ತು ತಸಂಬೋಧನಾದಚ್ಛಿತ್ತಿ ವಿಶೇಷಾತ್ ತತ್ರ ಅಪ್ರಸ್ತುತಪ್ರಶಂಸಾಯಾ ಅತಿ ಶಯೋಕ್ತಿತೋ ಭೇದೋ ಘಟತೇ ತದ್ವತ್ರಾಪಿ ಪ್ರಸ್ತುತಂ ಧರ್ಮಿಣಂ ಸ್ವಪದೇನ ನಿರ್ದಿಶ್ಯ ತತ್ರ ಅಪ್ರಸ್ತುತವರ್ಣನಾರೂಪಸ್ಯ ವಿಚ್ಛಿತ್ತಿವಿಶೇಷಸ್ಯ ಸದ್ಭಾವಾತ್ತತೋ ಭೇದಃ ಸುತರಾಂ ಘಟತೇ. "ಪಶ್ಯ ನೀಲೋತ್ಪಲದ್ವಂದ್ವಾನ್ನಿಸ್ಸರಂತಿ" "ವಾಚಃ ಕಾಪಿ ಸ್ಫುರತಿ ಗಗನೇ ತತ್ಪರಂ ಸೂಕ್ಷ್ಮಪದ್ಯಾ" ಇತ್ಯಾದಿಷು ಚ ಪ್ರಸ್ತುತಸ್ಯ ಕಸ್ಯಚಿದ್ಧರ್ಮಿಣಃ ಸ್ವವಾಚಕೇನ ಅನಿರ್ದಿಷ್ಟತ್ವಾತ್ ಅತಿಶಯೋಕ್ತಿರೇವ. ಏತೇನ ಗತಜಲಸೇತುಬಂಧವರ್ಣನಾದಿಪ್ರಸಂಬಂಧೇ ಸಂಬಂಧಾತಿಶಯೋಕ್ತಿರಸ್ತ್ವಿತಿ ಶಂಕಾಪಿ ನಿರಸ್ತಾ. ತಥಾ ಸತಿ "ಕಸ್ತ್ವಂ ಭೋಃ ಕಥಯಾಮಿ" ಇತ್ಯಾದಾವಪಿ ತತ್ಪ್ರಸಂಗಾತ್ ಸಾರೂಪ್ಯನಿಬಂಧನಪ್ರಸ್ತುತವಾಕ್ಯಾರ್ಥಾವಗತಿರೂಪವಿಚ್ಛಿತ್ತಿವಿಶೇಷಾಲಂಕಾರಾಂತರಕ ಲ್ಪನಂ ತ್ವಿಹಾಪಿ ತುಲ್ಯಮ್. ತಸ್ಮಾತ್ಸರ್ವಾಲಂಕಾರವಿಲಕ್ಷಣಮಿದಂ ಲಲಿತಮ್. ಯಥಾ ವಾ–

> ಕ್ವ ಸೂರ್ಯಪ್ರಭವೋ ವಂಶಃ ಕ್ವಚಾಲ್ಪವಿಷಯಾ ಮತಿಃ ।
> ತಿತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಮ್ ॥

ಅತ್ರಾಪಿ ನಿದರ್ಶನಾಭ್ರಾಂತಿರ್ನ ಕಾರ್ಯಾ. ಅಲ್ಪವಿಷಯಯಾ ಮತ್ಯಾ ಸೂರ್ಯವಂಶಂ ವರ್ಣಯಿತುಮಿಚ್ಛುರಹಮಿತಿ ಪ್ರಸ್ತುತವೃತ್ತಾಂತಾಸಂಪನ್ಯಾಸಾ ತ್ತತ್ಪ್ರತಿಬಿಂಬಭೂತಸ್ಯ ಉಡುಪೇನ ಸಾಗರಂ ತಿತೀರ್ಷುರಸ್ಮೀತ್ಯಪ್ರಸ್ತುತವೃತ್ತಾಂತಸ್ಯ ವರ್ಣನೇನ ಆದೌ ಉಪಮಾಲಂಕಾರವಿನ್ಯಸನೇನ ಕೇವಲಂ ತತ್ರ ತಾತ್ಪರ್ಯಸ್ಯ ಗಮ್ಯಮಾನತ್ವಾತ್. ಯಥಾ ವಾ–

> ಅನಾಯಿ ದೇಶಃ ಕತಮಸ್ತ್ವಯಾದ್ಯ ವಸಂತಮುಕ್ತಸ್ಯ ದಶಾಂ ವನಸ್ಯ ।
> ತ್ವದಾಪ್ತಸಂಕೇತತಯಾ ಕೃತಾರ್ಥಾ ಶ್ರಾವ್ಯಾಪಿ ನಾನೇನ ಜನೇನ ಸಂಜ್ಞಾ ।

ಅತ್ರ ಕತಮೋ ದೇಶಸ್ತ್ವಯಾ ಪರಿತ್ಯಕ್ತ ಇತಿ ಪ್ರಸ್ತುತಾರ್ಥಮನುಪನ್ಯಸ್ಯ ವಸಂತಮುಕ್ತಸ್ಯ ದಶಾಮನಾಯಿ ಇತಿ ತತ್ಪ್ರತಿಬಿಂಬಭೂತಾರ್ಥಮಾತ್ರೋಪನ್ಯಾಸಾಲ್ಲಲಿ ತಾಲಂಕಾರಃ.

ವಾಸ್ತವವಾಗಿ ವಿಮರ್ಶೆಮಾಡಿದರೆ ಅಪ್ರಸ್ತುತಪ್ರಶಂಸೆಯ ಉದಾಹರಣದಲ್ಲಿ ಮೊದಲು ತೋರುವ ಅಪ್ರಕೃತವಾಕ್ಯಾರ್ಥದಿಂದ ಪ್ರಕೃತವಾಕ್ಯಾರ್ಥವು ತಿಳಿದು ಬರುತ್ತದೆ ಎಂಬುದು ಹೊಂದುವುದಿಲ್ಲ. ಈ ಉದಾಹರಣದಲ್ಲಿ ಇದನ್ನು ಕಾಣಬಹುದು. ಯಾಚಕನೊಬ್ಬನು ರಾಜಸಭೆಗೆ ಹೋಗಿ ಏನನ್ನೂ ಪಡೆಯದೆ ಹಿಂತಿರುಗುತ್ತಿದ್ದರೂ ಮತ್ತೆ ಅವನನ್ನೇ ಆಶ್ರಯಿಸುತ್ತಿರಲು ಅಂತವನನ್ನು ಉದ್ದೇಶಿಸಿ ಬೇರೊಬ್ಬನು ದುಂಬಿಯನ್ನು ನೋಡಿ ಹೇಳುವ ಮಾತಿದು. ಎಲೈ ಸೋದರನಾದ ದುಂಬಿಯೇ, ನೀನು ಹಿಂದೆಯೇ ಇದೆಲ್ಲವನ್ನೂ ಕೇಳಿ ನಿಶ್ಚಯಿಸಿಕೊಂಡಿರುವೆ. ಹಿಂದೆ ಇದ್ದಂತೆಯೇ ಆ ರಾಜನು ತನ್ನ ನಾಲಿಗೆಯನ್ನು ಬದಲಾಯಿಸಿ ವಿಪರೀತವಾಗಿ ಮಾತನಾಡುವುದನ್ನು ಬಿಟ್ಟಿಲ್ಲ. ಆ ಚಾಡಿಕೋರರ ಮಾತನ್ನು ಕೇಳುವ ಚಾಪಲ್ಯ ಹಿಂದಿನಂತೆಯೇ ಈಗಲೂ ಇದೆ. ನಾಲಿಗೆಯನ್ನು ತಿರುಗಿಸುವ ಚಾಪಲ್ಯ ಆನೆಯಲ್ಲೂ ಇದೆ. ಹಾಗೆಯೇ ದುಂಬಿಗಳನ್ನು ಓಡಿಸಲಿಕ್ಕಾಗಿ ಅದು ಕಿವಿಗಳನ್ನು ಅಲ್ಲಾಡಿಸುವುದೂ ಸಹಜವೇ. ಮದದಿಂದ ಯುಕ್ತಾಯುಕ್ತವಿವೇಚನೆಯನ್ನು ತೊರೆಯುವ ರಾಜನ ದೃಷ್ಟಿ ಹಿಂದಿನಂತೆಯೇ ಈಗಲೂ ಇದೆ. ಮದೋದಕದ ಪ್ರಭಾವದಿಂದ ತಾನು ಹೋಗುವ ದಾರಿ ಸರಿಯೋ ತಪ್ಪೋ ಎಂದು ತಿಳಿಯುವ ದೃಷ್ಟಿ ಆನೆಗೆ ತಪ್ಪಿ ಹೋಗಿದೆ. ಹೀಗಿದ್ದರೂ ಒಳಗೆ ತೂತಿನಿಂದ ಕೂಡಿದ ಸೊಂಡಲಿರುವ ಈ ಆನೆಯನ್ನು ಆಶ್ರಯಿಸಬೇಕೆಂಬ ಆಗ್ರಹವು ನಿನಗೆ ಏಕೆ ಬೇಕು! ಕೊಡುಗೈ ಇಲ್ಲದೆ ಯಾವಾಗಲೂ ಹೊರಗೆ ಅಟ್ಟುತ್ತಿರುವ ಈ ರಾಜನನ್ನು ಆಶ್ರಯಿಸಬೇಕೆಂಬ ಆಗ್ರಹವಾದರೂ ಏಕೆ ಬೇಕು ?'' ಇದು ಅಪ್ರಕೃತ ಉದಾಹರಣವೇ ಆದರೂ ಇದರಲ್ಲಿ ಮೊದಲು ತಿಳಿದುಬರುವ ಅಪ್ರಕೃತವಾದ ದುಂಬಿಯ ವೃತ್ತಾಂತದಿಂದ ಪ್ರಕೃತ ಯಾಚಕನ ವೃತ್ತಾಂತವು ತಿಳಿದು ಬರುತ್ತದೆ ಎಂಬುದೇ ಹೊಂದುವುದಿಲ್ಲ. ಇಲ್ಲಿ ವಾರಣಪದದಿಂದ ಶ್ಲೇಷಾಲಂಕಾರದ ಮೂಲಕ "ಬಂದವರನ್ನು ತಡೆದು ಹೊರಗೆ ಅಟ್ಟುವ ಅಯೋಗ್ಯನಾದ ಯಜಮಾನ'' ಎಂಬ ಉಪಮೇಯವನ್ನು ಕ್ರೋಡೀಕರಿಸಿಕೊಂಡೇ ಪ್ರಕೃತಾರ್ಥವು ತೋರುತ್ತದೆ. ವಿಷಯಿಯನ್ನು ತಿಳಿಸುವ ಈ ಪದದಿಂದಲೇ ವಿಷಯವೂ ತೋರುತ್ತದೆ. ಆದ್ದರಿಂದ ಅಪ್ರಸ್ತುತಪ್ರಶಂಸೆಯಲ್ಲಿ ಭೇದವಿದ್ದರೂ ಆ ಭೇದವನ್ನು ತಿಳಿಸುವ ಅತಿಶಯೋಕ್ತಿಯನ್ನು ಹೇಳಲಿಕ್ಕೆ ಅವಕಾಶವಿದ್ದೇ ಇದೆ. ಆನೆಯು ದುಂಬಿಗೆ ಸೇವಿಸಲರ್ಹವಲ್ಲವೆಂಬುದೇ ಅಪ್ರಕೃತವಾಕ್ಯಾರ್ಥವೆನಿಸಿದೆ. ಇಲ್ಲಿ ಕಿವಿಗಳನ್ನಾಡಿಸುವುದರಿಂದಲೇ ದುಂಬಿಗಳನ್ನು ಹೊರಗೆ ಅಟ್ಟಲು ಸಾಧ್ಯವಿರುವಾಗ ನಾಲಿಗೆಯನ್ನು ಬದಲಾಯಿಸುವುದು, ಸೊಂಡಲಿನೊಳಗೆ ರಂಧ್ರವಿರುವುದು ಇವೆರಡನ್ನು ಕಾರಣವೆಂದು ಹೇಳಬೇಕಾಗಿಯೇ ಇಲ್ಲ. ಇದೂ ಅಲ್ಲದೆ, ಆನೆಯು ಮದವನ್ನು ಸುರಿಸುತ್ತಿರುವುದೇ ದುಂಬಿಗಳಿಗೆ ಅದನ್ನು ಆಶ್ರಯಿಸಲು ಕಾರಣವೆನಿಸಿದ್ದರಿಂದಲೂ ಜಿಹ್ವಾಪರಿವೃತ್ತಿ, ಅಂತಃಶೂನ್ಯಕರತ್ವ ಇವೆರಡನ್ನೂ ಸಹ ಅಲ್ಲಿ

ಕಾರಣವೆಂದು ಅನ್ವಯಿಸಲಿಕ್ಕಾಗಿ ವಾರಣಪದವು ಅಯೋಗ್ಯನಾದ ಪ್ರಭು ಎಂಬ ವಿಷಯು (ಉಪಮೇಯು) ವನ್ನೂ ಸೇರಿಸಿಕೊಂಡೇ ಪ್ರವರ್ತಿಸುತ್ತದೆ ಎಂದು ಇಲ್ಲಿ ಹೇಳಲೇಬೇಕು. ಆನೆ ಎಂಬ ಅರ್ಥದ (ಈ ಪದವು) ಲಕ್ಷಣೆಯಿಂದ ಅಯೋಗ್ಯ ಪ್ರಭು ಎಂಬ ಅರ್ಥವನ್ನು ತಿಳಿಸುವುದಾಗಿ ಒಪ್ಪಲೇಬೇಕು. ಹೀಗಿದ್ದರೂ ಸಹ ಅಪ್ರಕೃತವಾದ ದುಂಬಿಯನ್ನು ಸಂಬೋಧಿಸುವುದೇ ಒಂದು ವೈಲಕ್ಷಣ್ಯವೆನಿಸಿರುವುದರಿಂದ ಈ ಉದಾಹರಣದಲ್ಲಿ ಅಪ್ರಸ್ತುತಪ್ರಸಂಸೆಗೆ ಅತಿಶಯೋಕ್ತಿಯಿಂದ ಭೇದವು ಇರುವುದೆಂದು ಒಪ್ಪುವುದಾದರೆ ಆಗ ಲಲಿತಾಲಂಕಾರದಲ್ಲೂ ಸಹ ಪ್ರಕೃತಧರ್ಮವನ್ನು ಶಬ್ದದಿಂದಲೇ ನಿರ್ದೇಶಿಸಿ ಅಲ್ಲಿಯೇ ಅಪ್ರಕೃತವರ್ಣನವೆಂಬ ವೈಚಿತ್ರ್ಯವಿಶೇಷವಿರುವ ಪ್ರಯುಕ್ತ ಅತಿಶಯೋಕ್ತಿಗೂ ಇದಕ್ಕೂ ಭೇದವುಂಟೆಂಬುದನ್ನು ಒಪ್ಪಲೇಬೇಕು. "ಪಶ್ಯ ನೀಲೋತ್ಪಲದ್ವಂದ್ವಾನ್ನಿಸ್ಸರಂತಿ" "ಪಾಹೀ ಕಾಪಿ ಸ್ಫುರತಿ" ಎಂಬ ಪದ್ಯಗಳಲ್ಲಾದರೋ ಪ್ರಕೃತವಾದ ಯಾವುದೊಂದು ಧರ್ಮವನ್ನೂ ಆಯಾ ಪದದಿಂದ ತಿಳಿಸದೇ ಇರುವ ಪ್ರಯುಕ್ತ ಅವು ಅತಿಶಯೋಕ್ತಿಗೆ ಉದಾಹರಣಗಳಾಗುತ್ತವೆ. ಆ ಬಗ್ಗೆ ವಿವಾದವಿಲ್ಲ. ಹೀಗೆ ಇಲ್ಲಿ ನಿಷ್ಕರ್ಷವಿರುವ ಪ್ರಯುಕ್ತ ನೀರೆಲ್ಲವೂ ಹರಿದು ಹೋದಮೇಲೆ ಈಕೆ ಕಟ್ಟೆಯನ್ನು ಕಟ್ಟಲಿಚ್ಛಿಸುವಳೆಂದು ವರ್ಣಿಸಿರುವ ಕಡೆ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಕಲ್ಪಿಸಬೇಕೆಂದು ತಿಳಿಸುವ ಅತಿಶಯೋಕ್ತಿಯನ್ನೇ ಹೇಳಬೇಕೆಂಬ ಆಶಂಕೆಯೂ ತೊಲಗಿತು. ಪರಿಸ್ಥಿತಿ ಹೀಗಿರುವಾಗ "ಕಸ್ತ್ವಂ ಭೋಃ ಕಥಯಾಮಿ" ಎಂಬಲ್ಲಿಯೂ ಸಹ ಮರವನ್ನು ಸಂಬೋಧಿಸುವುದು, ಅಚೇತನದೊಡನೆ ಚೇತನವನ್ನು ವ್ಯವಹರಿಸುವುದು ಈ ಬಗೆಯ ಸನ್ನಿವೇಶವಿರುವುದರಿಂದ ಸಾದೃಶ್ಯಮೂಲಕವಾಗಿ ಪ್ರಕೃತವಾಕ್ಯಾರ್ಥವನ್ನು ತಿಳಿಯಬೇಕೆಂಬುದೇ ವೈಚಿತ್ರ್ಯವೆನಿಸಿರುವ ಪ್ರಯುಕ್ತ ಅದನ್ನು ಬೇರೊಂದು ಅಲಂಕಾರವಾಗಿ ಪರಿಗಣಿಸಿರುವಂತೆ ಇಲ್ಲಿಯೂ ಅದೇ ಪರಿಸ್ಥಿತಿಯು ಸಮಾನವಾಗಿರುವುದರಿಂದ ಲಲಿತಾಲಂಕಾರವು ಎಲ್ಲಾ ಅಲಂಕಾರಗಳಿಗಿಂತಲೂ ವಿಲಕ್ಷಣವಾಗಿ ಶೋಭಿಸುತ್ತಲಿದೆ.

"ವಿಶಾಲವಾದ ಸೂರ್ಯವಂಶವೆಲ್ಲಿ ? ಅಲ್ಪವಿಷಯುಗಳನ್ನು ಮಾತ್ರವೇ ಗ್ರಹಿಸುವ ನನ್ನ ಬುದ್ಧಿ ಎಲ್ಲಿ ? ದಾಟಲಿಕ್ಕಾಗದಿರುವ ಸಾಗರವನ್ನು ವಿವೇಚನೆಯಿಲ್ಲದೆ ದೋಣಿಯಿಂದ ದಾಟಲು ಇಚ್ಛಿಸುತ್ತಿರುವೆನು." ಇಲ್ಲಿಯೂ ನಿದರ್ಶನೆ ಉಂಟೆಂದು ಭ್ರಮಿಸಬಾರದು. ಕೇವಲ ಕೆಲವೇ ವಿಷಯುಗಳನ್ನು ಗ್ರಹಿಸಿರುವ ನನ್ನ ಬುದ್ಧಿಯಿಂದ ಸೂರ್ಯವಂಶವನ್ನು ವರ್ಣಿಸಲು ಇಚ್ಛಿಸಿರುವೆನು ಎಂಬ ಪ್ರಕೃತವೃತ್ತಾಂತವನ್ನು ವರ್ಣನಮಾಡದೆ ಅದಕ್ಕೆ ಸದೃಶವಾದ ದೋಣಿಯಿಂದ ಸಾಗರವನ್ನು ದಾಟಲು ಇಚ್ಛಿಸುವ ಅಪ್ರಕೃತವೃತ್ತಾಂತವನ್ನು ವರ್ಣಿಸಿದ್ದರಿಂದ ಇದರಲ್ಲಿ ಒಂದು ಬಗೆಯ ಚಮತ್ಕಾರವಿರುವ ಪ್ರಯುಕ್ತ ಇದು ಲಲಿತವೆನಿಸಿದೆ. "ಸೂರ್ಯವಂಶವೆಲ್ಲಿ ? ನನ್ನ ಅಲ್ಪಮತಿ ಎಲ್ಲಿ ?" ಎಂದು ಮೊದಲು ವಿಷಮಾ

ಲಂಕಾರವನ್ನು ತಿಳಿಸಿದ್ದರಿಂದ ಅಂತಹ ಅಲ್ಪಬುದ್ಧಿಯಿಂದಲೇ ಸೂರ್ಯವಂಶವನ್ನು ವರ್ಣಿಸುವುದರಲ್ಲಿಯೇ ಕವಿಗೆ ತಾತ್ಪರ್ಯವೆಂಬುದೇ ವ್ಯಂಗ್ಯವಾಗಿ ತೋರುವುದರಿಂದ ವಿಷಮಾಲಂಕಾರದಿಂದ ಲಲಿತಾಲಂಕಾರಕ್ಕೆ ಯಾವ ಬಾಧಕವೂ ಬರುವುದಿಲ್ಲ. ಹಾಗೆಯೇ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಯಾವ ದೇಶಕ್ಕೆ ನೀನು ವಸಂತನಿಲ್ಲದ ಅರಣ್ಯದ ದೀನಾವಸ್ಥೆಯನ್ನು ನೀಡಿರುವೆ ? ನಿನ್ನಲ್ಲಿಯೇ ಸಂಕೇತವನ್ನು ಹೊಂದಿದ್ದರಿಂದ ಧನ್ಯವೆನಿಸಿದ ಯಾವ ಹೆಸರನ್ನು ನನ್ನಂತವಳು ಕೇಳಲರ್ಹಳಲ್ಲ?" ಇಲ್ಲಿ "ಯಾವ ದೇಶವನ್ನು ನೀನು ತೊರೆದು ಬಂದಿರುವೆ.?" ಎಂಬ ಪ್ರಕೃತಾಂಶವನ್ನು ತಿಳಿಸದೆ "ವಸಂತನಿಲ್ಲದ ಅರಣ್ಯದ ಅವಸ್ಥೆಯನ್ನು ಹೊಂದಿಸಿರುವೆ" ಎಂದು ಅದಕೆ ಸದೃಶವಾದ ಅರ್ಥವನ್ನಷ್ಟೇ ತಿಳಿಸಿರುವುದರಿಂದ ಅದರಲ್ಲೂ ಒಂದು ಬಗೆಯ ಚಮತ್ಕಾರವಿರುವ ಪ್ರಯುಕ್ತ ಅದು ಲಲಿತಾಲಂಕಾರವೆನಿಸಿದೆ.

## ೬೭ ಪ್ರಹರ್ಷಣಾಲಂಕಾರ

ಉತ್ಕಂಠಿತಾರ್ಥಸಂಸಿದ್ಧಿರ್ವಿನಾ ಯತ್ನಂ ಪ್ರಹರ್ಷಣಮ್ ।
ತಾಮೇವ ಧ್ಯಾಯತೇ ತಸ್ಮೈ ನಿಸೃಷ್ಟಾ ಸೈವ ದೂತಿಕಾ ॥

ಉತ್ಕಂಠಾ ಇಚ್ಛಾವಿಶೇಷಃ —

ಸರ್ವೇಂದ್ರಿಯಸುಖಾಸ್ವಾದೋ ಯತ್ರಾಸ್ತೀತ್ಯಭಿಮನ್ಯತೇ ॥
ತತ್ಪ್ರಾಪ್ತೀಚ್ಛಾಂ ಸಸಂಕಲ್ಪಾಮುತ್ಕಂಠಾಂ ಕವಯೋ ವಿದುಃ ॥

ಇತ್ಯುಕ್ತಲಕ್ಷಣಾತ್ ತದ್ವಿಷಯಸ್ಯಾರ್ಥಸ್ಯ ತದುಪಾಯಸಂಪಾದನಯತ್ನಂ ವಿನಾ ಸಿದ್ಧಿಃ ಪ್ರಹರ್ಷಣಮ್. ಉದಾಹರಣಂ ಸ್ಪಷ್ಟಮ್. ಯಥಾ ವಾ—

ಮೇಘೈರ್ಮೇದುರಮಂಬರಂ ವನಭುವಃ ಶ್ಯಾಮಾಸ್ತಮಾಲದ್ರುಮೈಃ
ನಕ್ತಂ ಭೀರುರಯಂ ತ್ವಮೇವ ತದಿಮಂ ರಾಧೇ ಗೃಹಂ ಪ್ರಾಪಯ ।
ಇತ್ಥಂ ನಂದನಿದೇಶತಶ್ಚಲಿತಯೋಃ ಪ್ರತ್ಯಧ್ವಕುಂಜದ್ರುಮಂ
ರಾಧಾಮಾಧವಯೋರ್ಜಯಂತಿ ಯಮುನಾಕೂಲೇ ರಹಃಕೇಲಯಃ॥

ಅತ್ರ ರಾಧಾಮಾಧವಯೋಃ ಪರಸ್ಪರಮುತ್ಕಂಠಿತತ್ವಂ ಪ್ರಸಿದ್ಧತರಮಗ್ರೇ ಚ ಗ್ರಂಥಕಾರೇಣ ನಿಬದ್ಧಮಿತ್ಯುದಾಹರಣೇ ಲಕ್ಷಣಾನುಗತಿಃ.

ವಾಂಛಿತಾದಧಿಕಾರ್ಥಸ್ಯ ಸಂಸಿದ್ಧಿಶ್ಚ ಪ್ರಹರ್ಷಣಮ್ ।
ದೀಪಮುದ್ಯೋಜಯೇ ದ್ಯಾವತ್ತಾವದಭ್ಯುದಿತೋ ರವಿಃ ॥

ಸ್ಪಷ್ಟಮ್. ಯಥಾ ವಾ—

ಚಾತಕಸ್ತ್ರಿಚತುರಾನ್ ಪಯಃಕಣಾನ್ಯಾಚತೇ ಜಲಧರಂ ಪಿಪಾಸಯಾ।
ಸೋಽಪಿ ಪೂರಯತಿ ವಿಶ್ವಮಂಭಸಾ ಹಂತ ಹಂತ ಮಹತಾಮುದಾರತಾ ॥

ಯತ್ನಾದುಪಾಯಸಿದ್ಧ್ಯರ್ಥಾತ್ ಸಾಕ್ಷಾಲ್ಲಾಭಃ ಫಲಸ್ಯ ಚ ।
ನಿಧ್ಯಂಜನೌಷಧೀಮೂಲಂ ಖನತಾ ಸಾಧಿತೋ ನಿಧಿಃ ॥

ಫಲೋಪಾಯಸಿದ್ಧ್ಯರ್ಥಾದ್ಯತ್ನಾನ್ಮಧ್ಯೇ ಉಪಾಯಸಿದ್ಧಿಮನಪೇಕ್ಷ್ಯ ಸಾಕ್ಷಾತ್ಫಲಸ್ಯೈವ ಲಾಭೋಽಪಿ ಪ್ರಹರ್ಷಣಮ್. ಯಥಾ ನಿಧ್ಯಂ ಜನಸಿದ್ಧ್ಯರ್ಥಂ ಮೂಲಿಕಾಂ ಖನತಸ್ತತ್ರೈವ ನಿಧೇರ್ಲಾಭಃ ಯಥಾ ವಾ—

ಉಚ್ಚಿತ್ಯ ಪ್ರಥಮಮಧಃಸ್ಥಿತಂ ಮೃಗಾಕ್ಷೀ
ಪುಷ್ಪೌಘಂ ಶ್ರಿತವಿಟಪಂ ಗ್ರಹೀತುಕಾಮಾ ।
ಆರೋಢುಂ ಪದಮದಧಾದಶೋಕಯಷ್ಟ್ಯಾ
ಆಮೂಲಂ ಪುನರಪಿ ತೇನ ಪುಷ್ಪಿತಾಽಭೂತ್ ॥

ಅತ್ರ ಪುಷ್ಪಗ್ರಹಣೋಪಾಯಭೂತಾರೋಹಣಸಿದ್ಧ್ಯರ್ಥಾತ್ ಪದನಿಧಾನಾತ್ ತತ್ರೈವ ಪುಷ್ಪಗ್ರಹಣಲಾಭಃ.

ಮನಸ್ಸಿನಲ್ಲಿ ಅಪೇಕ್ಷಿಸಿದ ವಸ್ತುವನ್ನು ಪ್ರಯತ್ನವಿಲ್ಲದೆಯೇ ಪಡೆಯುವುದು ಪ್ರಹರ್ಷಣಾಲಂಕಾರವೆನಿಸುತ್ತದೆ. "ಅವನು ಆಕೆಯನ್ನು ನೆನೆಸುತ್ತಿರುವಾಗಲೇ ಆಕೆಯೇ ದೂತಿಯನ್ನು ಅವನ ಬಳಿಗೆ ಕಳುಹಿಸಿದಳು". ಇಲ್ಲಿ ಉತ್ಕಂಠಿತವಾದ ಕಾರ್ಯವು ಅನಾಯಾಸವಾಗಿ ಯಾವ ಪ್ರಯತ್ನವೂ ಇಲ್ಲದೆ ನಡೆದುದಾಗಿ ತಿಳಿಸಲಾಗಿದೆ. ಉತ್ಕಂಠೆ ಎಂದರೆ ಇಚ್ಛಾವಿಶೇಷವೆಂದು ಅರ್ಥ. "ಎಲ್ಲಾ ಇಂದ್ರಿಯಗಳಿಂದಲೂ ಬರುವ ಸುಖಗಳ ಅನುಭವವು ಎಲ್ಲಿ ಇರುವುದೆಂದು ನಮಗೆ ತಿಳಿದಿದೆಯೋ ಅದನ್ನೇ ಹೊಂದಬೇಕೆಂಬ ಮನಸ್ಸಿನ ಸಂಕಲ್ಪದಿಂದ ಕೂಡಿದ ಇಚ್ಛೆಯೇ ಉತ್ಕಂಠೆ ಎನಿಸುವುದು." ಹೀಗೆ ಲಕ್ಷಣವನ್ನು ತಿಳಿಸಿದ್ದರಿಂದ ಆ ಬಗೆಯ ಇಚ್ಛೆಗೆ ವಿಷಯವಾದ ವಸ್ತುವು ಅದರ ಬಗ್ಗೆ ಉಪಾಯವನ್ನೂ ಅದನ್ನು ಸಂಪಾದಿಸುವ ಪ್ರಯತ್ನವನ್ನೂ ಅಪೇಕ್ಷಿಸದೆ ತಾನಾಗಿಯೇ ಸಿದ್ಧಿಸುವುದರಿಂದ ಆ ಬಗೆಯ ಸಿದ್ಧಿಯು ಪ್ರಹರ್ಷಣವೆನಿಸುತ್ತದೆ. "ಆಕಾಶವು ಮೇಘಗಳಿಂದ ತುಂಬಿದೆ. ವನಪ್ರದೇಶವು ಹೊಂಗೆ ಮರಗಳಿಂದ ಕಪ್ಪಾಗಿದೆ. ರಾತ್ರಿ ವೇಳೆ ಈತನು ತುಂಬ ಹೆದರುವನು. ಆದ್ದರಿಂದ ರಾಧೆಯೇ, ಇವನನ್ನು ನೀನೇ ಮನೆಗೆ ಕರೆದೊಯ್ಯಬೇಕು." ಹೀಗೆ ನಂದನ ಅಪ್ಪಣೆಯಂತೆ ಹೊರಟ ರಾಧಾಕೃಷ್ಣರು ದಾರಿಯಲ್ಲಿರುವ ಪ್ರತಿಯೊಂದು ಲತಾಗೃಹದಲ್ಲೂ ನಡೆಸಿದ ಏಕಾಂತವಿಹಾರಗಳು ಸರ್ವೋತ್ಕೃಷ್ಟವಾಗಿ ಕಂಗೊಳಿಸಲಿ". ಇಲ್ಲಿ ರಾಧೆ ಕೃಷ್ಣ ಇವರಿಗೆ ಪರಸ್ಪರವಾಗಿ ಉತ್ಕಂಠೆ ಇತ್ತೆಂಬುದು ಪ್ರಸಿದ್ಧವಾದ ಅಂಶ. ಮುಂದೆಯೂ

ಗೀತಗೋವಿಂದದಲ್ಲಿ ಗ್ರಂಥಕಾರನು ರಾಧಾಕೃಷ್ಣರಿಗೆ ಸಂಬಂಧಿಸಿದ ಉತ್ಕಂಠೆಯನ್ನು ವಿಶೇಷವಾಗಿ ವರ್ಣಿಸಿರುವುದರಿಂದ ಇಲ್ಲಿ ಲಕ್ಷಣವು ಲಲಿತವಾಗಿ ಹೋದುತ್ತದೆ.

ಅಪೇಕ್ಷಿಸಿದ್ದಕ್ಕಿಂತಲೂ ಹೆಚ್ಚು ಫಲವು ಸಿದ್ಧಿಸಿದುದಾಗಿ ವರ್ಣಿಸುವುದೂ ಪ್ರಹರ್ಷಣದ ಎರಡನೆಯ ಬಗೆ ಎನಿಸುವುದು. "ಎಷ್ಟರೊಳಗೆ ದೀಪವನ್ನು ಬೆಳಗುವಂತೆ ಮಾಡಿದನೋ ಅಷ್ಟರೊಳಗೆ ಸೂರ್ಯನು ಉದಯಿಸಿದನು." ಇಲ್ಲಿ ದೀಪದ ಪ್ರಕಾಶಕ್ಕಿಂತಲೂ ಹೆಚ್ಚಿನ ಬೆಳಕು ಬಂದಿತೆಂದು ತಿಳಿಸಿದ್ದರಿಂದ ಅಪೇಕ್ಷಿಸಿದ್ದಕ್ಕಿಂತಲೂ ಹೆಚ್ಚಿನ ಫಲವು ದೊರೆಯಿತೆಂದು ವರ್ಣಿಸಿದೆ. ಬೇರೆ ಉದಾಹರಣವು ಹೀಗಿದೆ. "ಚಾತಕಪಕ್ಷಿಯು ಬಾಯಾರಿಕೆಯಿಂದ ಮೇಘವನ್ನು ಮೂರು ನಾಲ್ಕು ಹನಿ ನೀರಿಗಾಗಿ ಬೇಡುತ್ತದೆ. ಆ ಮೇಘವಾದರೋ ವಿಶ್ವವೆಲ್ಲವನ್ನೂ ನೀರಿನಿಂದ ತುಂಬಿಸುತ್ತದೆ. ಆಹಾ! ಮಹಾತ್ಮರ ಔದಾರ್ಯವು ಎಷ್ಟು ಹೆಚ್ಚಿನದು!" ಇಲ್ಲಿ ಚಾತಕಪಕ್ಷಿಯು ಬಯಸಿದ್ದಕ್ಕಿಂತ ಹೆಚ್ಚು ನೀರು ದೊರೆಯಿತೆಂದು ವರ್ಣಿಸಿದ್ದರಿಂಧ ಇದೇ ಪ್ರಹರ್ಷಣದ ಉದಾಹರಣವೆನಿಸಿದೆ.

ಫಲವನ್ನು ದೊರಕಿಸುವ ಉಪಾಯವನ್ನು ಚಿಂತಿಸುವ ಪ್ರಯತ್ನದಲ್ಲಿ ಒಬ್ಬನು ತೊಡಗಿರುವಾಗ ಮಧ್ಯದಲ್ಲಿ ಉಪಾಯಸಿದ್ಧಿಯನ್ನು ಅಪೇಕ್ಷಿಸದೆ ಇದ್ದರೂ ನೇರವಾಗಿ ಫಲವೇ ದೊರೆಯುವುದಾದರೆ ಅದೂ ಸಹ ಪ್ರಹರ್ಷಣವೇ ಆಗುವುದು. "ನಿಧಿಯನ್ನು ಹುಡುಕಲು ಬೇಕಾದ ಅಂಜನವನ್ನು ದೊರಕಿಸುವ ಓಷಧೀಲತೆಯ ಬೇರಿಗಾಗಿ ನೆಲವನ್ನು ಅಗೆಯುತ್ತಿರುವವನಿಗೆ ನಿಧಿಯೇ ದೊರೆಯಿತು." ನಿಧಿಯನ್ನು ಹುಡುಕಲು ಬೇಕಾದ ಅಂಜಿನಕ್ಕಾಗಿ ಮೂಲಿಕೆಯನ್ನು ಅಗೆಯುತ್ತಿದ್ದವನಿಗೆ ಅಲ್ಲಿಯೇ ನಿಧಿಯು ದೊರೆತದ್ದರಿಂದ ಇದೇ ಪ್ರಹರ್ಷಣದ ಮೂರನೆಯ ಬಗೆ ಎನಿಸಿದೆ. ಹಾಗೆಯೇ ಬೇರೆ ಉದಾಹರಣವೂ ಇದೆ. "ಮೃಗನೇತ್ರೆ ಎನಿಸಿದ ಪ್ರೇಯಸಿಯು ಮರದ ಕೆಳಗಡೆ ಇದ್ದ ಹೂವೆಲ್ಲವನ್ನೂ ಮೊದಲು ಕೊಯ್ದು ಮೇಲೆ ಕೊಂಬೆಗಳಲ್ಲಿದ್ದವನ್ನು ಕಿತ್ತುಕೊಳ್ಳಲಿಚ್ಛೆಯಿಂದ ಅಶೋಕವೃಕ್ಷವನ್ನು ಹತ್ತಲು ಅದರ ಕೊಂಬೆಯಲ್ಲಿ ಕಾಲನ್ನಿಟ್ಟಳು. ಅದರಿಂದ ಆ ವೃಕ್ಷವು ಮತ್ತೆ ಬುಡದಿಂದಲೂ ಹೂವನ್ನು ಬಿಟ್ಟಿತು". ಇಲ್ಲಿ ಹೂವನ್ನು ಕೀಳಲು ಉಪಾಯವೆಂದು ಮರವನ್ನು ಹತ್ತಲಿಕ್ಕಾಗಿ ಮರದಲ್ಲಿ ಹೆಜ್ಜೆಯನ್ನಿಟ್ಟದ್ದರಿಂದ ಅಲ್ಲಿಯೇ ಮರವು ವಿಕಾಸಗೊಂಡು ಪುಷ್ಪಗಳು ಆಕೆಗೆ ದೊರೆತವೆಂದು ವರ್ಣಿಸಿದೆ.

## ೬೮ ವಿಷಾದನಾಲಂಕಾರ

ಇಷ್ಯಮಾಣವಿರುದ್ಧಾರ್ಥಸಂಪ್ರಾಪ್ತಿಸ್ತು ವಿಷಾದನಮ್ ।
ದೀಪಮುದ್ಯೋಜಯೇದ್ಯಾವತ್ ನಿರ್ವಾಣಸ್ತಾವದೇವ ಸಃ ॥೧೩೭॥

ಯಥಾ ವಾ— ರಾತ್ರಿರ್ಗಮಿಷ್ಯತಿ ಭವಿಷ್ಯತಿ ಸುಪ್ರಭಾತಂ
ಭಾಸ್ವಾನುದೇಷ್ಯತಿ ಹಸಿಷ್ಯತಿ ಪಂಕಜಶ್ರೀಃ |
ಇತ್ಥಂ ವಿಚಿಂತಯತಿ ಕೋಶಗತೇ ದ್ವಿರೇಫೇ
ಹಾ ಹಂತ ಹಂತ ನಲಿನೀಂ ಗಜ ಉಜ್ಜಹಾರ ||

ತಾನು ಇಚ್ಛಿಸಿದ್ದಕ್ಕೆ ವಿರುದ್ಧವಾದ ಫಲವನ್ನು ಪಡೆಯುವುದೇ ವಿಷಾದನಾಲಂಕಾರವೆನಿಸುತ್ತದೆ. "ಎಷ್ಟರೊಳಗೆ ದೀಪವನ್ನು ಉರಿಯುವಂತೆ ಮಾಡಿದನೋ ಅಷ್ಟರೊಳಗೆ ಅದು ಆರಿಹೋಯಿತು. " ದೀಪವನ್ನು ಪ್ರಜ್ವಲಿಸುವಂತೆ ಮಾಡಬೇಕೆಂಬುದೇ ಇಷ್ಟವಾದ ಫಲ. ಅದಕ್ಕಾಗಿ ಪ್ರಯತ್ನವೂ ನಡೆಯಿತು. ಆದರೆ ಅದಕ್ಕೆ ವಿರುದ್ಧವಾದ ಫಲವೇ ದೊರೆಯುವುದಾಗಿ ಇಲ್ಲಿ ತಿಳಿಸಲಾಗಿದೆ. ಇದರಲ್ಲಿರುವ ಚಮತ್ಕಾರವು ವಿಷಾದನಾಲಂಕಾರವೆನಿಸಿದೆ.

ಸಂಜೆ ಕಮಲದ ಮೊಗ್ಗಿನೊಳಗೆ ಸೇರಿಕೊಂಡ ದುಂಬಿಯು ಹೀಗೆ ಚಿಂತಿಸುತ್ತದೆ. " ರಾತ್ರಿ ಕಳೆಯುವುದು. ಆಗ ಸುಪ್ರಭಾತವೂ ಒದಗಿಬರುವುದು. ಅಷ್ಟರೊಳಗೆ ಸೂರ್ಯನು ಉದಯಿಸುವನು. ಆಗ ಕಮಲಗಳು ಅರಳಿ ಅವುಗಳ ಕಾಂತಿಯು ಪ್ರಜ್ವಲಿಸುವುದು. ಆ ಕೂಡಲೆ ನಾನು ಮತ್ತಷ್ಟು ಪುಷ್ಪರಸವನ್ನು ಕುಡಿದು ಸಂತೋಷದಿಂದ ಹೊರಗೆ ಹೋಗುವೆನು" ಹೀಗೆ ಮೊಗ್ಗಿನೊಳಗೆ ರಾತ್ರಿ ಸೇರಿದ್ದ ದುಂಬಿಯು ಆಲೋಚಿಸುತ್ತಿರಲು ಬೆಳಗಾಗುವಾಗ ಕಮಲದ ಗಿಡವನ್ನೇ ಬುಡಸಹಿತವಾಗಿ ಆನೆಯು ನುಂಗಿತು. ಆಹಾ ! ಎಂತಹ ವಿಪತ್ತು ಒದಗಿತು !" ಇಲ್ಲಿ ದುಂಬಿಯು ಹೊರಗೆ ಹೋಗಬೇಕೆಂದು ಇಚ್ಛಿಸಿತ್ತು. ಆದರೆ ಆದಕ್ಕೆ ವಿರುದ್ಧವಾಗಿ ಆದಕ್ಕೇ ಪ್ರಾಣಹಾನಿಯುಂಟಾಯಿತೆಂದು ಇಲ್ಲಿ ತಿಳಿಸಲಾಗಿದೆ.

## ೬೯ ಉಲ್ಲಾಸಾಲಂಕಾರ

ಏಕಸ್ಯ ಗುಣದೋಷಾಭ್ಯಾಂ ಉಲ್ಲಾಸೋಽನ್ಯಸ್ಯ ತೌ ಯದಿ ।
ಅಪಿ ಮಾಂ ಪಾವಯೇತ್ಸಾಧ್ವೀ ಸ್ನಾತ್ವೇತೀಚ್ಛತಿ ಜಾಹ್ನವೀ ॥
ಕಾಠಿನ್ಯಂ ಕುಚಯೋಃ ಸ್ರಷ್ಟುಂ ವಾಂಛಂತ್ಯಃ ಪಾದಪದ್ಮಯೋಃ ।
ನಿಂದಂತಿ ಚ ವಿಧಾತಾರಂ ತ್ವದ್ಧಾಟೀಷ್ವರಿಯೋಷಿತಃ ॥
ತದಭಾಗ್ಯಂ ಧನಸ್ಯೈವ ಯನ್ನಾಶ್ರಯತಿ ಸಜ್ಜನಮ್ ।
ಲಾಭೋಽಯಮೇವ ಭೂಪಾಲಸೇವಕಾನಾಂ ನ ಚೇದ್ವಧಃ ॥

ಯತ್ರ ಕಸ್ಯಚಿದ್ಗುಣೇನ ಅನ್ಯಸ್ಯ ಗುಣೋ, ದೋಷೇಣ ದೋಷೋ, ಗುಣೇನ ದೋಷೋ, ದೋಷೇಣ ಗುಣೋ ವಾ ವರ್ಣ್ಯತೇಸ ಉಲ್ಲಾಸಃ. ದ್ವಿತೀ

ಪೂರ್ವಾರ್ಧಸ್ಯೋದಾಹರಣಮ್. ತತ್ರ ಪತಿವ್ರತಾಮಹಿಮಗುಣೇನ ತದೀಯಸ್ನಾನತೋ ಗಂಗಾಯಾಃ ಪಾವನತ್ವಗುಣೋ ವರ್ಣಿತಃ. ದ್ವಿತೀಯ ಶ್ಲೋಕೋ ದ್ವಿತೀಯಸ್ಯೋದಾಹರಣಮ್. ತತ್ರ ರಾಜ್ಞೋಽಧಾಟೀಷು ವನೇ ಪಲಾಯಮಾನಾನಾಂ ಅರಾತಿಯೋಷಿತಾಂ ಪಾದಯೋರ್ಧಾವನಪರಿಪಂಥಿ ಪಾದದೋಷೇಣ ತಯೋಃ ಕಾಠಿನ್ಯಮಸ್ಪೃಷ್ಟ್ವಾ ವ್ಯರ್ಥಂ ಕುಚಯೋಸ್ತತ್ಸ್ಪೃಷ್ಟವತೋ ಧಾತುರ್ನಿರ್ದ್ವ್ಯತ್ವದೋಷೋ ವರ್ಣಿತಃ, ತೃತೀಯ ಶ್ಲೋಕಸ್ತೃತೀಯಚತುರ್ಥಯೋರುದಾಹರಣಮ್. ತತ್ರ ಸಜ್ಜನಮಹಿಮ ಗುಣೇನ ಧನಸ್ಯ ತದನಾಶ್ರಯಣಂ ದೋಷತ್ವೇನ ರಾಜ್ಞಃ ಕ್ರೌರ್ಯದೋಷೇಣ ತತ್ಸೇವಕಾನಾಂ ವಧಂ ವಿನಾ ವಿನಿರ್ಗಮನಂ ಗುಣತ್ವೇನ ವರ್ಣಿತಮ್. ಅನೇನೈವ ಕ್ರಮೇಣೋದಾಹರಣಾಂತರಾಣಿ.

ಯದಯಂ ರಥಸಂಕ್ಷೋಭಾದಂಸೇನಾಂಸೋ, ನಿಪೀಡಿತಃ ।
ಏಕಃ ಕೃತೀ ಮದಂಗೇಷು ಶೇಷಮಂಗಂ ಭುವೋ ಭರಃ ॥

ಅತ್ರ ನಾಯಿಕಾಸೌಂದರ್ಯಗುಣೇನ ತದಂಸನಿಪೀಡಿತಸ್ಯ ಸ್ವಾಂಸಸ್ಯ ಕೃತಿತ್ವಗುಣೋ ವರ್ಣಿತಃ.

ಲೋಕಾನಂದನ ಚಂದನದ್ರುಮ ಸಖೇ ನಾಸ್ಮಿನ್ವನೇ ಸ್ಥೀಯತಾಂ
ದುರ್ವಂಶೈಃ ಪರುಷೈರಸಾರಹೃದಯೈರಾಕ್ರಾಂತಮೇತದ್ವನಮ್ ।
ತೇ ಹ್ಯನ್ಯೋನ್ಯಘರ್ಷಜಾತದಹನಜ್ವಾಲಾವಲೀಸಂಕುಲಾ
ನ ಸ್ವಾನ್ಯೇವ ಕುಲಾನಿ ಕೇವಲಮಹೋ ಸರ್ವಂ ದಹೇಯುರ್ವನಮ್ ॥

ಅತ್ರ ವೇಣೂನಾಂ ಪರಸ್ಪರಸಂಘರ್ಷಣಸಂಜಾತದಹನಸಂಕುಲತ್ವ ದೋಷೇಣ ವನನಾಶರೂಪದೋಷೋ ವರ್ಣಿತಃ.

ದಾನಾರ್ಥಿನೋ ಮಧುಕರಾ ಯದಿ ಕರ್ಣತಾಲೈಃ
ದೂರೀಕೃತಾಃ ಕರಿವರೇಣ ಮದಾಂಧಬುದ್ಧ್ಯಾ ।
ತಸ್ಯೈವ ಗಂಡಯುಗಮಂಡನಹಾನಿರೇಷಾ
ಭೃಂಗಾಃ ಪುನರ್ವಿಕಚಪದ್ಮವನೇ ಚರಂತಿ ॥

ಅತ್ರ ಭ್ರಮರಾಣಾಮಲಂಕರಣತ್ವಗುಣೇನ ಗಜಸ್ಯ ತತ್ಪ್ರತಿಕ್ಷೇಪೋ ದೋಷತ್ವೇನ ವರ್ಣಿತಃ.

ಆಘ್ರಾತಂ ಪರಿಚುಂಬಿತಂ ಪರಿ ಮುಹುರ್ಲೀಢಂ ಪುನಶ್ಚರ್ವಿತಂ
ತ್ಯಕ್ತಂ ವಾ ಭುವಿ ನೀರಸೇನ ಮನಸಾ ತತ್ರ ವ್ಯಥಾಂ ಮಾ ಕೃಥಾಃ ।
ಹೇ ಸದ್ರತ್ನ ತವೈತದೇವ ಕುಶಲಂ ಯದ್ವಾನರೇಣಾದರಾತ್
ಅಂತಸ್ಸಾರವಿಲೋಕನವ್ಯಸನಿನಾ ಚೂರ್ಣೀಕೃತಂ ನಾಶ್ಮನಾ ॥

ಅತ್ರ ವಾನರಸ್ಯ ಚಾಪಲದೋಷೇಣ ರತ್ನಸ್ಯ ಚೂರ್ಣನಾಭಾವಃ ಗುಣತ್ವೇನ ವರ್ಣಿತಃ. ಅತ್ರ ಪ್ರಥಮಚತುರ್ಥಯೋರುಲ್ಲಾಸೋಽನ್ವರ್ಥಃ ಮಧ್ಯಮಯೋಃ ಛತ್ರಿನ್ಯಾಯೇನ ಲಾಕ್ಷಣಿಕಃ.

ಒಬ್ಬನ ಗುಣದೋಷಗಳಿಂದ ಮತ್ತೊಬ್ಬನಲ್ಲೂ ಅವೇ ಗುಣದೋಷಗಳು ಸಂಭವಿಸವುದಾಗಿ ವರ್ಣಿಸುವುದೇ ಉಲ್ಲಾಸಾಲಂಕಾರವೆನಿಸುವುದು. ಪತಿವ್ರತಾ ಸ್ತ್ರೀಯಳು ಬಂದು ಸ್ನಾನಮಾಡಿ ತನ್ನನ್ನು ಪಾವನಗೊಳಿಸಿಯಾಳೆಂದು ಗಂಗಾ ನದಿಯು ಇಚ್ಛಿಸುತ್ತದೆ. ರಾಜನ ಯುದ್ಧಯಾತ್ರೆಯಲ್ಲಿ ಶತ್ರುಸ್ತ್ರೀಯರು ಕುಚ ಗಳಲ್ಲಿರುವ ಕಾಠಿನ್ಯವನ್ನು ಪಾದಕಮಲಗಳಲ್ಲಿ ಸೃಷ್ಟಿಸುವಂತೆ ಇಚ್ಛಿಸುತ್ತ ಅಲ್ಲಿ ಅದನ್ನು ಸೃಷ್ಟಿಸಿದ ಬ್ರಹ್ಮನನ್ನು ನಿಂದಿಸುತ್ತಾರೆ. ಸತ್ಪುರುಷನನ್ನಾಶ್ರಯಿಸದಿರುವುದು ಹಣದ ದೌರ್ಭಾಗ್ಯವೇ ಸರಿ. ರಾಜನ ಸೇವಕರಿಗೆ ಕೊಲೆಯಾಗದಿದ್ದರೆ ಅದೇ ಒಂದು ಲಾಭ.

ಯಾವನಾದರೊಬ್ಬನ ಗುಣದಿಂದ ಬೇರೊಬ್ಬನ ಗುಣವೂ ಒಬ್ಬನ ದೋಷದಿಂದ ಮತ್ತೊಬ್ಬನ ದೋಷವೂ, ಅದರಂತೆಯೇ ಒಬ್ಬನ ಗುಣದಿಂದ ಮತ್ತೊಬ್ಬನ ದೋಷವೂ, ಒಬ್ಬನ ದೋಷದಿಂದ ಮತ್ತೊಬ್ಬನ ಗುಣವೂ ವರ್ಣಿತ ವಾಗುವುದೇ ಉಲ್ಲಾಸವೆನಿಸುವುದು. ಮೂಲಶ್ಲೋಕದ ದ್ವಿತೀಯಾರ್ಧವು ಮೊದ ಲನೆಯದಕ್ಕೆ ಉದಾಹರಣವಾಗುತ್ತದೆ. ಪತಿವ್ರತೆಯ ಮಹಿಮೆ ಎಂಬ ಗುಣದಿಂದ ಆಕೆಯ ಸ್ನಾನದ ಫಲವಾಗಿ ಗಂಗೆಯು ಪಾವನಳಾದಳೆಂದು ಆಕೆಯ ಗುಣವನ್ನು ವರ್ಣಿಸಲಾಗಿದೆ. ಎರಡನೆಯ ಶ್ಲೋಕವು ಎರಡನೆಯದಕ್ಕೆ ಉದಾಹರಣವಾಗಿದೆ ರಾಜನ ಯುದ್ಧಯಾತ್ರೆಯಲ್ಲ ಕಾಡಿನಲ್ಲಿ ಓಡುತ್ತಿದ್ದ ಶತ್ರುಸ್ತ್ರೀಯರ ಪಾದಕಮ ಲಗಳಲ್ಲಿ ಓಡಲಿಕ್ಕೆ ವಿರುದ್ಧವಾಗಿ ಮಾರ್ದವದೋಷವಿತ್ತು. ಆದರೆ ಅವುಗಳಲ್ಲಿ ಕಾಠಿನ್ಯವನ್ನು ಸೃಷ್ಟಿಸದೆ ಕಂಚಗಳಲ್ಲಿ ಕಾಠಿನ್ಯವನ್ನು ವ್ಯರ್ಥವಾಗಿ ಸೃಷ್ಟಿಸಿದ ಬ್ರಹ್ಮನ ನಿಂದ್ಯನೆಂದು ಅವನಲ್ಲಿ ದೋಷವನ್ನು ವರ್ಣಿಸಲಾಗಿದೆ. ಮೂರನೆ ಶ್ಲೋಕವು ಮೂರು ನಾಲ್ಕನೆಯ ಬಗೆಗಳಿಗೆ ಉದಾಹರಣವಾಗಿದೆ. ಸಜ್ಜನರ ಮಹಿಮೆ ಎಂಬ ಗುಣದಿಂದ ಹಣವು ಅವರನ್ನಾಶ್ರಯಿಸದಿರುವುದು ಅದರ ದೋಷವೆಂದು ವರ್ಣಿತ ವಾಗಿದೆ. ರಾಜನಲ್ಲಿರುವ ಕ್ರೂರತನವೆಂಬ ದೋಷದಿಂದ ಅವನ ಸೇವಕರು ಕೊಲೆ ಯಿಲ್ಲದೆಯೇ ಹಿಂತಿರುಗಿದರೆಂದು ಹೇಳಿ ಹಾಗೆ ಹಿಂತಿರುಗಿದುದು ಅವರಲ್ಲಿ ಗುಣ ವೆಂದು ವರ್ಣಿಸಲಾಗಿದೆ. ಹಾಗೆಯೇ ಒಬ್ಬನ ಗುಣದೋಷಗಳ ಮೂಲಕ ಮತ್ತೊಬ್ಬ

ನಲ್ಲೂ ಅವನ್ನು ಸಂಬಂಧಪಡಿಸುವ ಪ್ರಯುಕ್ತ ಇದು ಉಲ್ಲಾಸಾಲಂಕಾರವೆನಿಸಿದೆ. ಇದೇ ಕ್ರಮದಿಂದ ಉದಾಹರಣೆಗಳನ್ನು ಕೊಡಲಾಗಿದೆ. "ರಥವನ್ನು ಅಲ್ಲಾಡಿಸಿದ್ದರಿಂದ ಈ ನನ್ನ ತೋಳು ಪ್ರೇಯಸಿಯ ತೋಳಿಗೆ ತಗುಲಿದ ಪ್ರಯುಕ್ತ ನನ್ನ ಅವಯವಗಳಲ್ಲಿ ಈ ತೋಳೊಂದೇ ಧನ್ಯವಾದುದು. ಉಳಿದವು ಭೂಮಿಗೆ ಭಾರವೆನಿಸಿವೆ." ಇಲ್ಲಿ ನಾಯಿಕೆಯ ಸೌಂದರ್ಯದ ಗುಣದಿಂದ ಆಕೆಯ ತೋಳಿಗೆ ತಗಲಿದ ತನ್ನ ತೋಳು ಧನ್ಯವಾಯಿತೆಂದು ಅದರ ಗುಣವನ್ನು ವರ್ಣಿಸಲಾಗಿದೆ.

"ಲೋಕಕ್ಕೆ ಆನಂದವನ್ನುಂಟುಮಾಡುವ ಶ್ರೀಗಂಧವೃಕ್ಷವೇ, ಈ ಕಾಡಿನಲ್ಲಿ ನೀನು ಇರಬೇಡ. ಈ ಕಾಡು ಕಠಿನವೂ ದುಷ್ಟವೂ ನೀರಸವೂ ಆದ ಬಿದುರುಮೆಳೆಗಳಿಂದ ತುಂಬಿಹೋಗಿವೆ. ಅವು ಒಂದಕ್ಕೊಂದು ತಿಕ್ಕಾಡುವಾಗ ಹುಟ್ಟುವ ಬೆಂಕಿಯ ಜ್ವಾಲೆಯಿಂದ ಕೂಡಿಕೊಂಡು ತಮ್ಮ ವಂಶಗಳಷ್ಟನ್ನೇ ಅಲ್ಲದೆ ವನವೆಲ್ಲವನ್ನೂ ಸುಡಬಲ್ಲವು." ಇಲ್ಲಿ ಬಿದುರುಮೆಳೆಗಳು ಒಂದಕ್ಕೊಂದು ತಿಕ್ಕಾಡುವುದರಿಂದ ಹುಟ್ಟುವ ಬೆಂಕಿಯ ವ್ಯಾಪ್ತಿ ಎಂಬ ದೋಷದಿಂದ ಕಾಡೆಲ್ಲವೂ ನಾಶವಾಯಿತೆಂದು ಅದರ ನಾಶವನ್ನು ವರ್ಣಿಸಲಾಗಿದೆ. "ಮದೋದಕವನ್ನು ಬಯಸಿ ಬರುತ್ತಿರುವ ದುಂಬಿಗಳನ್ನು ಮದಗಜವು ಮದಾಂಧತೆಯ ಮೂಲಕ ತನ್ನ ಕಿವಿಗಳಿಂದ ದೂರ ಮಾಡುವುದಾದರೆ ಆಗ ಅದರ ಕಪೋಲಸ್ಥಳಗಳಿಗೇ ಅಲಂಕಾರವಿಲ್ಲದಂತಾಗುತ್ತದೆ. ದುಂಬಿಗಳಂತೂ ವಿಕಸಿತವಾದ ಪದ್ಮಗಳಿಂದ ಕೂಡಿದ ಅರಣ್ಯದಲ್ಲಿ ಸಂಚರಿಸುತ್ತವೆ." ಇಲ್ಲಿ ದುಂಬಿಗಳು ಮದೋದಕವನ್ನು ಕುಡಿಯಲಿಕ್ಕಾಗಿ ಆನೆಯಲ್ಲಿಗೆ ಹೋದರೂ ಅದರ ಕಪೋಲಕ್ಕೆ ಅಲಂಕಾರವಾಗಿದ್ದವು. ಅವು ಅಲ್ಲಿಗೆ ಹೋಗುತ್ತಿದ್ದುದೇ ಆನೆಗೆ ಒಂದು ಗುಣವಾಗಿತ್ತು. ಆದರೆ ಆನೆ ಅವನ್ನು ದೂರಮಾಡಿದ್ದುದೇ ಅದಕ್ಕೆ ಒಂದು ದೋಷವಾಗಿ ಪರಿಣಮಿಸಿತು. "ಎಲೈ ರತ್ನವೇ, ಕೋತಿಯು ನಿನ್ನನ್ನು ಮುಟ್ಟಿ ನೋಡಿತು, ಮೂಸಿನೋಡಿತು, ಮತ್ತೆ ಮತ್ತೆ ಬಾಯಿಂದ ನೆಕ್ಕಿತು ಮತ್ತೆ ನಾಲಿಗೆಯಲ್ಲಿ ಚಪ್ಪರಿಸಿತು. ಅಷ್ಟರಿಂದ ಮನಸ್ಸಿಗೆ ಸಂತೋಷವಾಗದ ಪ್ರಯುಕ್ತ ನಿನ್ನನ್ನು ನೆಲದ ಮೇಲೆ ಬಿಸಾಡಿತು. ಆ ಬಗ್ಗೆ ನೀನು ವ್ಯಥೆಪಡಬೇಡ. ಆದರೆ ನಿನ್ನೊಳಗೆ ಏನೋ ಸಾರವಿದೆ ಎಂದು ನೋಡುವ ಇಚ್ಛೆಯಿಂದ ನಿನ್ನನ್ನು ಕಲ್ಲಿನಿಂದ ಚಚ್ಚಿ ಪುಡಿಮಾಡದೇ ಇದ್ದುದೇ ನಿನಗೆ ಒಂದು ಪುಣ್ಯ." ಇಲ್ಲಿ ಕೋತಿಯು ಚಾಪಲ ದೋಷದಿಂದ ರತ್ನವನ್ನು ಚೂರುಮಾಡದೇ ಇದ್ದುದೇ ಒಂದು ಗುಣವೆಂದು ವರ್ಣಿತವಾಗಿದೆ. ಇಲ್ಲಿ ಮೂಲದ ಒಂದು ನಾಲ್ಕನೆಯ ಉದಾಹರಣೆಗಳಲ್ಲಿ ಬಂದಿರುವ ಉಲ್ಲಾಸವು ಅರ್ಥಾನುಗುಣವಾಗಿದೆ. ಉಲ್ಲಾಸವೆಂಬ ಹೆಸರು ಅದಕ್ಕೆ ಸಾರ್ಥಕವಾಗಿ ಅನ್ವಯಿಸುತ್ತದೆ. ಮಧ್ಯದಲ್ಲಿರುವ ಎರಡು ಉದಾಹರಣೆಗಳಲ್ಲಿ ದೋಷದಿಂದ ದೋಷವನ್ನೂ ಗುಣದಿಂದ ದೋಷವನ್ನೂ ತಿಳಿಸುವುದರಿಂದ ಉಲ್ಲಾಸವು ಛತ್ರಿನ್ಯಾಯದಿಂದ ಗುಣವೆನಿಸಿದೆ. ನಾಲ್ಕು ಜನರು ದಾರಿಯಲ್ಲಿ ಹೋಗುತ್ತಿರುವಾಗ

ಒಬ್ಬನು ಛತ್ರಿಯನ್ನು ಹಿಡಿದಿದ್ದರೆ ಎಲ್ಲರೂ ಹಿಡಿದಿರುವರೆಂದು ಹೇಳುವಂತೆ ಒಂದು ನಾಲ್ಕರಲ್ಲಿ ಉಲ್ಲಾಸವಿದ್ದುದರಿಂದ ಎರಡು ಮೂರನೆಯದರಲ್ಲಿ ಉಲ್ಲಾಸವು ಪ್ರಧಾನವಾಗಿಲ್ಲದಿದ್ದರೂ ಗೌಣವಾಗಿದೆ.

## ೭೦ ಅವಜ್ಞಾಲಂಕಾರ

ತಾಭ್ಯಾಂ ತೌ ಯದಿ ಸ್ಯಾತಾಂ ಅವಜ್ಞಾಲಂಕೃತಿಸ್ತು ಸಾ ।
ಸ್ವಲ್ಪಮೇವಾಂಬು ಲಭತೇ ಪ್ರಸ್ಥಂ ಪ್ರಾಪ್ಯಾಪಿ ಸಾಗರಮ್ ॥
ಮೀಲಂತಿ ಯದಿ ಪದ್ಮಾನಿ ಕಾ ಹಾನಿರಮೃತದ್ಯುತೇಃ ॥ ೧೩೫ ॥

ತಾಭ್ಯಾಂ ಗುಣದೋಷಾಭ್ಯಾಂ ತೌ ಗುಣದೋಷೌ ಅತ್ರ ಕಸ್ಯಚಿತ್ ಗುಣೇನ ಅನ್ಯಸ್ಯ ಗುಣಾಲಾಭೇ ದ್ವಿತೀಯಾರ್ಧಮುದಾಹರಣಮ್. ದೋಷೇಣ ದೋಷಸ್ಯಾಪ್ರಾಪ್ತೌ ತೃತೀಯಾರ್ಧಮ್. ಯಥಾ —

ಮದುಕ್ತಿಶ್ಚೇದಂತರ್ಮದಯತಿ ಸುಧೀಭೂಯ ಸುಧಿಯಃ
ಕಿಮಸ್ಯಾ ನಾಮ ಸ್ಯಾದಲಸಪುರುಷಾನಾದರಭರೈಃ ।
ಯಥಾ ಯೂನಸ್ತದ್ವತ್ಪರಮರಮಣೀಯಾಪಿ ರಮಣೀ
ಕುಮಾರಾಣಾಮಂತಃಕರಣಹರಣಂ ನೈವ ಕುರುತೇ ॥

ತ್ವಂ ಚೇತ್ಸಂಚರಸೇ ವೃಷೇಣ ಲಘುತಾ ಕಾ ನಾಮ ದಿಗ್ದಂತಿನಾಂ
ವ್ಯಾಲೈಃ ಕಂಕಣಭೂಷಣಾನಿ ಕುರುಷೇ ಹಾನಿರ್ನ ಹೇಮ್ನಾಮಪಿ ।
ಮೂರ್ಧನ್ಯಂ ಕುರುಷೇ ಸಿತಾಂಶುಮಯಶಃ ಕಿಂ ನಾಮ ಲೋಕತ್ರಯೀ-
ದೀಪಸ್ಯಾಂಬುಜಬಾಂಧವಸ್ಯ ಜಗತಾಮೀಶೋಽಸಿ ಕಿಂ ಬ್ರೂಮಹೇ ॥

ಅತ್ರಾದ್ಯೇ ಕವಿತಾರಮಣೀಗುಣಾಭ್ಯಾಮರಸಬಾಲಕಯೋರ್ಹೃದಯೋಲ್ಲಾಸರೂಪಗುಣಾಭಾವೋ ವರ್ಣಿತಃ. ದ್ವಿತೀಯೇ ಪರಮೇಶ್ವರಾನಂಗೀಕರಣದೋಷೇಣ ದಿಗ್ಗಜಾದೀನಾಂ ಲಘುತಾದಿದೋಷಾಭಾವೋ ವರ್ಣಿತಃ.

ಒಬ್ಬನ ಗುಣದೋಷಗಳಿಂದ ಮತ್ತೊಬ್ಬನಲ್ಲಿ ಗುಣದೋಷಗಳು ಸಂಭವಿಸದಿರುವುದೇ ಅವಜ್ಞೆ ಎನಿಸುವುದು. "ಬಳ್ಳವು ಸಾಗರಕ್ಕೆ ಹೋದರೂ ಸ್ವಲ್ಪವೇ ನೀರನ್ನು ತರುತ್ತದೆ. ಪದ್ಮಗಳು ತಮ್ಮ ದಳಗಳನ್ನು ಮುಚ್ಚಿಕೊಂಡ ಮಾತ್ರದಿಂದ ಚಂದ್ರನಿಗೆ ಆದ ನಷ್ಟವೇನು? ಹೀಗೆ ಒಬ್ಬನ ಗುಣದಿಂದ ಮತ್ತೊಬ್ಬನಲ್ಲಿ ಗುಣವು ದೊರಕದೇ ಇರುವುದಕ್ಕೆ ಮೂಲದಲ್ಲಿ ದ್ವಿತೀಯಾರ್ಧವು ಉದಾಹರಣವೆನಿಸಿದೆ. ಒಬ್ಬನ ದೋಷದಿಂದ ಮತ್ತೊಬ್ಬನಲ್ಲಿ ದೋಷವು ಸಂಭವಿಸದೇ ಇರುವುದಕ್ಕೆ ತೃತೀಯಾರ್ಧವು ಉದಾಹರಣವಾಗಿದೆ. "ನನ್ನ ಕವಿತೆಯು ಅಮೃತವೆನಿಸಿ ವಿದ್ವಾಂಸರ

ಅಂತಃಕರಣವನ್ನು ಸಂತೋಷಪಡಿಸಿದರೆ ಆಗ ಅದಕ್ಕೆ ಅರಸಿಕರಾದ ಜನರಿಂದ ಉಂಟಾಗುವ ತಿರಸ್ಕಾರದಿಂದ ಏನಾದೀತು ? ಸುಂದರಿಯಾದ ಸ್ತ್ರೀಯು ಯುವಕನ ಅಂತಃಕರಣವನ್ನು ಅಪಹರಿಸುವಂತೆ ಹುಡುಗರ ಅಂತಃಕರಣವನ್ನು ಅಪಹರಿಸುವು ದಿಲ್ಲ." ಶಿವನಿಗೆ ಒಬ್ಬ ಭಕ್ತನು ಹೀಗೆ ಹೇಳುವನು : "ನೀನು ಎತ್ತಿನ ಮೇಲೆ ಸಂಚರಿಸಿದ್ದರಿಂದ ದಿಗ್ಗಜಗಳಿಗೆ ಆಗುವ ಲಾಘವ (ಅಗೌರವ) ಎಂತಹುದು? ನೀನು ಸರ್ಪಗಳನ್ನು ಮೈಗೆ ಆಭರಣವಾಗಿ ಮಾಡಿಕೊಂಡರೆ ಬಂಗಾರಕ್ಕೆ ಆದ ಹಾನಿ ಏನು ? ನೀನು ಚಂದ್ರನನ್ನು ಶಿರೋಭೂಷಣವನ್ನಾಗಿ ಮಾಡಿಕೊಂಡಿದ್ದರಿಂದ ಮೂರು ಲೋಕಗಳನ್ನೂ ಪ್ರಕಾಶಪಡಿಸುವ ಸೂರ್ಯನಿಗೆ ಆದ ನಷ್ಟವೇನು ? ನೀನು ಮೂರು ಲೋಕಗಳಿಗೂ ಪ್ರಭುವೆನಿಸಿರುವುದರಿಂದ ನಾನು ನಿನಗೆ ಹೇಳುವುದೇನಿದೆ?" ಇಲ್ಲಿ ಮೊದಲನೆಯ ಉದಾಹರಣದಲ್ಲಿ ಕವಿತೆ ಮತ್ತು ರಮಣಿ ಇವರ ಗುಣಗಳಿಂದ ಅರಸಿಕರು ಮತ್ತು ಹುಡುಗರು ಇವರ ಹೃದಯಗಳಲ್ಲಿ ಯಾವ ಬಗೆಯ ಗುಣಗಳೂ ಕಂಡುಬರಲಿಲ್ಲವೆಂದು ವರ್ಣಿತವಾಗಿದೆ. ಒಂದರ ಗುಣದಿಂದ ಮತ್ತೊಂದರಲ್ಲಿ ಗುಣವಿಲ್ಲದ ಸ್ಥಿತಿಯು ಕಂಡುಬರುವುದಕ್ಕೆ ಇದು ಉದಾಹರಣವೆನಿಸಿದೆ. ಎರಡನೆ ಯದರಲ್ಲಿ ಪರಮೇಶ್ವರನು ದಿಗ್ಗಜ ಸೂರ್ಯ ಬಂಗಾರ ಇವುಗಳನ್ನು ಪುರಸ್ಕರಿ ಸದೇ ಇದ್ದ ದೋಷದಿಂದ ಅವಕ್ಕೆ ಲಾಘವ ಮೊದಲಾದ ದೋಷಗಳೇನೂ ಸಂಭವಿ ಸಲಿಲ್ಲವೆಂದು ದೋಷದಿಂದ ದೋಷಾಭಾವವನ್ನು ವರ್ಣಿಸಲಾಗಿದೆ.

## ೭೧. ಅನುಜ್ಞಾಲಂಕಾರ

ದೋಷಸ್ಯಾಭ್ಯರ್ಥನಾನುಜ್ಞಾ ತತ್ರೈವ ಗುಣದರ್ಶನಾತ್ ।
ವಿಪದಃ ಸಂತು ನಃ ಯಾಸು ಸಕೀರ್ತ್ಯತೇ ಹರಿಃ ॥ ೧೩೭ ॥

ಯಥಾ ವಾ—

ಮಯ್ಯೇವ ಜೀರ್ಣತಾಂ ಯಾತು ಯತ್ತ್ವಯೋಪಕೃತಂ ಹರೇ ।
ನರಃ ಪ್ರತ್ಯುಪಕಾರಾರ್ಥೀ ವಿಪತ್ತಿಮಭಿಕಾಂಕ್ಷತಿ ॥

ಇಯಂ ಹನುಮಂತಂ ಪ್ರತಿ ರಾಘವಸ್ಯೋಕ್ತಿಃ. ಅತ್ರ ಪ್ರತ್ಯುಪಕಾರಾಭಾವೋ ದೋಷಸ್ತದಭ್ಯುಪಗಮೋ ಹೇತುರ್ಗುಣೋ ವಿಪತ್ತ್ಯಾಕಾಂಕ್ಷಾಯಾ ಅಪ್ರಸಕ್ತಿಃ ಸಾ ಚ ವ್ಯತಿರೇಕಮುಖಪ್ರವೃತ್ತೇನ ಸಾಮಾನ್ಯೇನ ವಿಶೇಷಸಮರ್ಥನರೂಪೇಣಾರ್ಥಾಂತರ ನ್ಯಾಸೇನ ದರ್ಶಿತಾ ಯಥಾ ವಾ—

ವ್ರಜೇಮ ಭವದಂತಿಕಂ ಪ್ರಕೃತಿಮೇತ್ಯ ಪೈಶಾಚಿಕೀಂ
ಕಿಮಿತ್ಯಮರಸಂಪದಃ ಪ್ರಮಥನಾಥ ! ನಾಥಾಮಹೇ ।
ಭವದ್ಭವನದೇಹಲೀವಿಕಟತುಂಡದಂಡಾಹತಿ-
ತ್ರುಟನ್ಮುಕುಟಕೋಟಿಭಿರ್ಮಘವದಾದಿಭಿರ್ಭೂಯತೇ ॥

ದೋಷವನ್ನು ತಿಳಿಸಿ ಅವರಲ್ಲಿಯೇ ಗುಣವನ್ನು ಕಂಡು ಆ ದೋಷವೇ ತನ್ನ ಇರಲೆಂದು ಇಚ್ಛಿಸುವುದೇ ಅನುಜ್ಞೆ ಎನಿಸುವುದು. ಇದರಲ್ಲೂ ಒಂದು ಬಗೆಯ ಸ್ವಾರಸ್ಯವಿರುವುದರಿಂದ ಇದು ಅಲಂಕಾರವೆನಿಸುತ್ತದೆ. "ನಮಗೆ ಯಾವಾಗಲೂ ದುಃಖವೇ ಇರಲಿ ; ಯಾಕೆಂದರೆ ಆಗಲೇ ಪರಮಾತ್ಮನನ್ನು ಸ್ಮರಿಸಲಿಕ್ಕೆ ಸಾಧ್ಯವಾಗುತ್ತದೆ" ಇಲ್ಲಿ ವಿಪತ್ತು ಬರಲೆಂದು ಬಯಸುವುದು ದೋಷವೇ ಆದರೂ ಅದರಲ್ಲಿಯೇ ಭಗವತ್ಕೀರ್ತನಕ್ಕೆ ಅವಕಾಶವಿರುವ ಪ್ರಯುಕ್ತ ಈ ಬಗೆಯ ಗುಣವಿರುವುದರಿಂದ ದೋಷವನ್ನು ಬಯಸಿದ್ದು ಸ್ವಾರಸ್ಯವೆನಿಸಿದೆ. ಆದ್ದರಿಂದಲೇ ಈ ಬಗೆಯ ಬಯಕೆ ಅನುಜ್ಞಾಲಂಕಾರವೆನಿಸಿದೆ. "ಆಂಜನೇಯನೇ, ನೀನು ಮಾಡಿದ ಉಪಕಾರವು ನನ್ನಲ್ಲಿಯೇ ಸೇರಿಹೋಗಲಿ. ಪ್ರತ್ಯುಪಕಾರವನ್ನು ಬಯಸುವವನು ವಿಪತ್ತನ್ನು ಇಚ್ಛಿಸುತ್ತಾನೆ" ಹನುಮಂತನಿಗೆ ರಾಮನು ಹೇಳುವ ಮಾತಿದು. "ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ನಾನು ಮಾಡಲಿಕ್ಕಾಗಿಲ್ಲವೆಂಬುದೇನೋ ದೋಷವೇ ಆದರೂ ಅದರಿಂದ ನಿನಗೆ ಒಳ್ಳೆಯದೇ ಆಗಿದೆ" ಎಂದು ರಾಮನು ಹೇಳುತ್ತಾನೆ. "ನಿನಗೆ ಪ್ರತ್ಯುಪಕಾರವನ್ನು ಮಾಡಬೇಕಾದರೆ ಮೊದಲು ವಿಪತ್ತು ಬಂದಿರಬೇಕು. ಹಾಗೆ ಬಂದಿರುವ ವಿಪತ್ತನ್ನು ತೊಲಗಿಸಲಿಕ್ಕಾಗಿ ನಾನು ನಿನಗೆ ಪ್ರತ್ಯುಪಕಾರವನ್ನು ಮಾಡಬೇಕಾಗುತ್ತದೆ. ನಾನು ಪ್ರತ್ಯುಪಕಾರವನ್ನು ಮಾಡಬೇಕಾಗಿಯೇ ಇಲ್ಲವೆಂದಮೇಲೆ ನಿನಗೆ ವಿಪತ್ತೇ ಬರಲಿಕ್ಕಿಲ್ಲವೆಂಬುದು ಸ್ವತಸ್ಸಿದ್ಧವಾಗುತ್ತದೆ. ನಿನಗೆ ವಿಪತ್ತು ಬಾರದಿರಲೆಂಬ ಗುಣದಿಂದಲೇ ಪ್ರತ್ಯುಪಕಾರವನ್ನು ಮಾಡಬಾರದೆಂಬ ದೋಷವನ್ನು ಬಯಸಲಾಗಿದೆ. ಈ ಪದ್ಯದಲ್ಲಿ ಸಾಮಾನ್ಯ ವಾಕ್ಯದಿಂದ ವಿಶೇಷಾರ್ಥವನ್ನು ಸಮರ್ಥನಮಾಡುವಾಗ ಉಪಯೋಗಿಸಬಹುದಾದ ಅರ್ಥಾಂತರನ್ಯಾಸವೂ ಸೇರಿಕೊಂಡಿದೆ. ಆದರೆ ಅದು ವ್ಯತಿರೇಕದ ಮೂಲಕವಾಗಿ ಬಂದಿದೆ. ಇದಕ್ಕೆ ಬೇರೊಂದು ಉದಾಹರಣವೂ ಇದೆ. "ಪ್ರಮಥಾಧಿಪತಿಯಾದ ಶಿವನೇ, ಪಿಶಾಚಭಾವವನ್ನು ಹೊಂದಿ ನಿನನ್ನಲ್ಲಿಗೆ ಬಂದು ದೇವಲೋಕದ ಸಂಪತ್ತನ್ನು ಏಕೆ ಯಾಚಿಸಬೇಕು ? ಇಂದ್ರಾದಿದೇವತೆಗಳೆಲ್ಲರೂ ನಿನ್ನ ಮನೆಯ ಹೊಸ್ತಿಲಲ್ಲಿ ನಿನ್ನ ಮಗನಾದ ಗಣಪತಿಯ ದೊಣ್ಣೆಯ ಪೆಟ್ಟುಗಳ ಹೊಡೆತಕ್ಕೆ ಸಿಲುಕಿ ತಲೆಯ ಮೇಲಿನ ಕಿರೀಟಗಳನ್ನು ಚೂರುಮಾಡಿಸಿಕೊಂಡಿರುವರು." ಇಲ್ಲಿ "ಪಿಶಾಚರಾಗಿ ಸ್ಮಶಾನಕ್ಕೆ ಬಂದು ನಿನ್ನನ್ನು ಯಾಚಿಸುವುದು ಬೇಕಿಲ್ಲ" ವೆಂಬ ದೋಷವನ್ನು ತಿಳಿಸಿ ಅದರಲ್ಲಿ "ಹಾಗೆ ಹೋಗಿ ಯಾಚಿಸಿದರೂ ನಿನ್ನ ಮಗನ ಕೈಲಿ ಹೊಡಿಸಿಕೊಳ್ಳಬೇಕಾಗುತ್ತದೆ" ಎಂಬ ದೋಷವನ್ನು ಕಲ್ಪಿಸಲಾಗಿದೆ. "ಪಿಶಾಚನಾಗಿ ನಿನ್ನಲ್ಲಿಗೆ ಬಂದು ಯಾಚಿಸದಿದ್ದರೆ ನಿನ್ನ ಮಗನ ಕೈಯಿಂದ ಏಟುಗಳನ್ನು ತಿನ್ನುವುದು ತಪ್ಪುತ್ತದೆ" ಎಂಬುದನ್ನು ವ್ಯತಿರೇಕಮೂಲಕವಾಗಿ ತಿಳಿಸಲಾಗಿದೆ. ಶಿವನನ್ನು ಯಾಚಿಸಬಾರದೆಂಬುದು ದೋಷವೇ ಆದರೂ ಯಾಚಿಸದಿರುವುದರಿಂದ ಹೊಡೆತವು ತಪ್ಪುವುದೆಂಬುದೇ ಒಂದು ಗುಣವಾಗಿರುವ ಪ್ರಯುಕ್ತ ಯಾಚಿಸ

ಬಾರವೆಂಬ ದೋಷವೇ ತನಗೆ ಯಥಾವಾಗಲೂ ಇರಲೆಂದು ಭಕ್ತನು ಅನನ್ಯಭಕ್ತಿ ಯಿಂದ ಪ್ರಾರ್ಥಿಸಿದ್ದು ಸಮಂಜಸವಾಗಿದೆ.

## ೭೨. ಲೇಶಾಲಂಕಾರ

ಲೇಶಃ ಸ್ಯಾದ್ದೋಷಗುಣಯೋರ್ಗುಣದೋಷತ್ವಕಲ್ಪನಮ್—
ಅಖಿಲೇಷು ವಿಹಂಗೇಷು ಹಂತ ಸ್ವಚ್ಛಂದಚಾರಿಷು ।
ಶುಕ ! ಪಂಜರಬಂಧಸ್ತೇ ಮಧುರಾಣಾಂ ಗಿರಾಂ ಫಲಮ್ ॥ ೧೩೭ ॥

ದೋಷಸ್ಯ ಗುಣತ್ವಕಲ್ಪನಂ ಗುಣಸ್ಯ ದೋಷತ್ವಕಲ್ಪನಂ ಚ ಲೇಶಃ. ಉದಾಹರಣಂ ರಾಜ್ಞೋಽಭಿಮತೇ ವಿದುಷಿ ಪುತ್ರೇ ಚಿರಂ ರಾಜಧಾನ್ಯಾಂ ಪ್ರವಸತಿ ತದ್ದರ್ಶನೋತ್ಕಂಠಿತಸ್ಯ ಗೃಹೇ ಸ್ಥಿತಸ್ಯ ಪಿತುರ್ವಚನಮಪ್ರಸ್ತುತಪ್ರಶಂಸಾಪರಮ್. ತತ್ರ ಪ್ರಥಮಾರ್ಧೇ ಇತರವಿಹಗಾನಾಂ ಅವಕ್ತೃತ್ವದೋಷಸ್ಯ ಸ್ವಚ್ಛಂದಚರಣಾನುಕೂಲತಯಾ ಗುಣತ್ವಂ ಕಲ್ಪಿತಮ್. ದ್ವಿತೀಯಾರ್ಧೇ ಮಧುರಭಾಷಿತ್ವಸ್ಯ ಗುಣಸ್ಯ ಪಂಜರಬಂಧಹೇತುತಯಾ ದೋಷತ್ವಂ ಕಲ್ಪಿತಮ್. ನ ಚಾತ್ರ ವ್ಯಾಜಸ್ತುತಿರಾಶಂಕನೀಯಾ, ನ ಹ್ಯತ್ರ ವಿಹಗಾಂತರಾಣಾಂ ಸ್ತುತಿವ್ಯಾಜೇನ ನಿಂದಾಯಾಂ, ಶುಕಸ್ಯ ನಿಂದಾವ್ಯಾಜೇನ ಸ್ತುತೌ ಚ ತಾತ್ಪರ್ಯಮ್, ಕಿಂತು ಪುತ್ರದರ್ಶನೋತ್ಕಂಠಿತಸ್ಯ ದೋಷಗುಣಯೋರ್ಗುಣದೋಷತ್ವಾಭಿಮಾನ ಏವಾತ್ರ ಶ್ಲೋಕೇ ನಿಬದ್ಧಃ.

ಯಥಾ ವಾ—

ಸಂತಃ ಸಚ್ಚರಿತೋದಯವ್ಯಸನಿನಃ ಪ್ರಾದುರ್ಭವದ್ಯಂತ್ರಣಾಃ
ಸರ್ವತ್ರೈವಜನಾಪವಾದಚಕಿತಾ ಜೀವಂತಿ ದುಃಖಂ ಸದಾ ।
ಅವ್ಯುತ್ಪನ್ನಮತಿಃ ಕೃತೇನ ಸತಾ ನೈವಾಸತಾ ವ್ಯಾಕುಲೋ
ಯುಕ್ತಾಯುಕ್ತವಿವೇಕಶೂನ್ಯಹೃದಯೋ ಧನ್ಯೋ ಜನಃ ಪ್ರಾಕೃತಃ ॥

ದಂಡೀತ್ವತ್ರೋದಾಜಹಾರ—

ಯುವೈಷ ಗುಣವಾನ್ರಾಜಾ ಯೋಗ್ಯಸ್ತೇ ಪತಿರೂರ್ಜಿತಃ ।
ರಣೋತ್ಸವೇ ಮನಸ್ಸಕ್ತಂ ಯಸ್ಯ ಕಾಮೋತ್ಸವಾದಪಿ ॥
ಚಪಲೋ ನಿರ್ದಯಶ್ಚಾಸೌ ಜನಃ ಕಿಂ ತೇನ ಮೇ ಸಖಿ ।
ಆಗಃಪ್ರಮಾರ್ಜನಾಯೈವ ಚಾಟವೋ ಯೇನ ಶಿಕ್ಷಿತಾಃ ॥

ಅತ್ರಾದ್ಯಶ್ಲೋಕೇ ರಾಜ್ಞೋ ವೀರ್ಯೋತ್ಕರ್ಷಸ್ತುತಿಃ. ಕನ್ಯಾಯಾಃ ನಿರಂತರ ಸಂಭೋಗನಿವಿವರ್ತಿಷಯಾ ದೋಷತ್ವೇನ ಪ್ರತಿಭಾಸತಾಮಿತ್ಯಭಿಪ್ರೇತ್ಯ ವಿದಗ್ಧಯಾ ಸಖ್ಯಾ ರಾಜಪ್ರಕೋಪಪರಿಜಿಹೀರ್ಷಯಾ ಸ ಏವ ದೋಷೋ ಗುಣತ್ವೇನ ವರ್ಣಿತಃ. ಉತ್ತರಶ್ಲೋಕೇ ಸಖೀಭಿರುಪದಿಷ್ಟಂ ಮಾನಂ ಕರ್ತುಮಶಕ್ತಯಾಪಿ ತದಗ್ರತೋ ಮಾನಪರಿಗ್ರಹಾನುಗುಣ್ಯಂ ಪ್ರತಿಜ್ಞಾಯ ತದನಿರ್ವಾಹಮಾಶಂಕಮಾನಯಾ ಸಖೀನಾಮುಪಹಾಸಂ ಪರಿಜಿಹೀರ್ಷಂತ್ಯಾ ನಾಯಿಕಯಾ ನಾಯಿಕಸ್ಯ ಚಾಟುಕಾರಿತಾಗುಣ ಏವ ದೋಷತ್ವೇನ ವರ್ಣಿತಃ. ನ ಚಾದ್ಯಶ್ಲೋಕೇ ಸ್ತುತಿರ್ನಿಂದಾಪರ್ಯವಸಾಯಿನೀ. ದ್ವಿತೀಯಶ್ಲೋಕೇ ನಿಂದಾ ಸ್ತುತಿಪರ್ಯವಸಾಯಿನೀತಿ ವ್ಯಾಜಸ್ತುತಿರಾಶಂಕನೀಯಾ. ರಾಜಪ್ರಕೋಪಾದಿಪರಿಹಾರಾರ್ಥಮಿಹ ನಿಂದಾಸ್ತುತ್ಯೋರನ್ಯಾವಿದಿತತಯಾ ಲೇಶತ ಏವೋದ್ಘಾಟನೇನ ತತೋ ವಿಶೇಷಾದಿತಿ. ವಸ್ತುತಸ್ತ್ವಿಹ ವ್ಯಾಜಸ್ತುತಿ ಸದ್ಭಾವೇऽಪಿ ನ ದೋಷಃ. ನ ಹ್ಯೇತಾವತಾಲೇಶಮಾತ್ರಸ್ಯ ವ್ಯಾಜಸ್ತುತ್ಯಂತರ್ಭಾವಃ ಪ್ರಸಜ್ಜತೇ ತದಸಂಕೀರ್ಣಯೋರಪಿ ಲೇಶೋದಾಹರಣಯೋಃ ದರ್ಶಿತತ್ವಾತ್. ನಾಪಿ ವ್ಯಾಜಸ್ತುತಿಮಾತ್ರಸ್ಯ ಲೇಶಾಂತರ್ಭಾವಃ ಪ್ರಸಜ್ಜತೇ ಭಿನ್ನವಿಷಯವ್ಯಾಜಸ್ತುತ್ಯುದಾಹರಣೇಷು 'ಕಸ್ತ್ವಂವಾನರ' ಇತ್ಯಾದಿಷು ದೋಷಗುಣೀಕರಣಸ್ಯ ಗುಣದೋಷೀಕರಣಸ್ಯ ಚ ಅಭಾವಾತ್ ತತ್ರ ಅನ್ಯಗುಣದೋಷಾಭ್ಯಾಂ ಅನ್ಯತ್ರ ಗುಣದೋಷಯೋಃ ಪ್ರತೀತೇಃ. ವಿಷಯೈಕ್ಯೇऽಪಿ

> ಇಂದೋರ್ಲಕ್ಷ್ಮ ತ್ರಿಪುರಜಯಿನಃ ಕಂಠಮೂಲಂ ಮುರಾರಿಃ
> ದಿಙ್ನಾಗಾನಾಂ ಮದಜಲಮಷೀಭಾಂಜಿಗಂಡಸ್ಥಲಾನಿ
> ಅದ್ಯಾಪ್ಯುರ್ವೀವಲಯತಿಲಕ ಶ್ಯಾಮಲಿಮ್ನಾನುಲಿಪ್ತಾ
> ನ್ಯಾಭಾಸಂತೇ ವದ ಧವಲಿತಂ ಕಿಂ ಯಶೋಭಿಸ್ತ್ವದೀಯೈಃ ॥

ಇತ್ಯಾದ್ಯುದಾಹರಣೇಷು ಲೇಶಾಸ್ಪರ್ಶನಾತ್. ತತ್ರ ಹಿ ಇಂದುಲಕ್ಷ್ಮಾದೀನಾಂ ಧವಲೀಕರಣಾಭಾವದೋಷ ಏವ ಗುಣತ್ವೇನ ನ ಪರ್ಯವಸ್ಯತಿ ಕಿಂತು ಪರಿಸಂಖ್ಯಾ ರೂಪೇಣ ತತೋऽನ್ಯತ್ಸರ್ವಂ ಧವಲಿತಮಿತ್ಯನ್ಯೋ ಗುಣಃ ಪ್ರತೀಯತೇ ಕ್ವಚಿತ್ ವ್ಯಾಜಸ್ತುತ್ಯುದಾಹರಣೇ ಗುಣದೋಷೀಕರಣಸತ್ತ್ವೇऽಪಿ ಸ್ತುತೇರ್ವಿಷಯಾಂತರಮಪಿ ದೃಶ್ಯತೇ.

ಯಥಾ—

> ಸರ್ವದಾ ಸರ್ವದೋऽಸೀತಿ ಮಿಥ್ಯಾ ಸಂಸ್ತೂಯತೇಬುಧೈಃ ।
> ನಾರಯೋ ಲೇಭಿರೇ ಪೃಷ್ಠಂ ನ ವಕ್ಷಃ ಪರಯೋಷಿತಃ ॥

ಅತ್ರ ಹಿ ವಾಚ್ಯಯಾ ನಿಂದಯಾ ಪರಿಸಂಖ್ಯಾರೂಪೇಣ ಶಕ್ರೋಽನ್ಯತ್ಸರ್ವಂ ಅರ್ಥಿನಾಮಭಿಮತಂ ಭೇನಾರಾದಿ ದೀಯತ ಇತಿ ಸ್ತುತ್ಯಂತರಮಪಿ ಪ್ರತೀಯತೇ. ಏವಂ ಚ ಯೇಷೂದಾಹರಣೇಷು "ಕಸ್ತೇ ಶೌರ್ಯಮದೋ ಯೋದ್ಧುಮ್." ಇತ್ಯಾದಿಷು ಗುಣದೋಷಾದಿಷು ಗುಣದೋಷೀಕರಣಾದಿಕಮೇವ ವ್ಯಾಜಸ್ತುತಿರೂಪ ತಯಾಽವತಿಷ್ಠತೇ, ತತ್ರ ಲೇಶವ್ಯಾಜಸ್ತುತ್ಯೋಃ ಸಂಕರೋಽಸ್ತು. ಇತ್ಥಮೇವ ಹಿ ವ್ಯಾಜಸ್ತುತ್ಯಪ್ರಸ್ತುತಪ್ರಶಂಸಯೋರಪಿ ಪ್ರಾಕ್ಸಂಕರೋ ವರ್ಣಿತಃ.

ದೋಷವನ್ನು ಗುಣವೆಂದೂ, ಗುಣವನ್ನು ದೋಷವೆಂದೂ ಕಲ್ಪಿಸುವುದೇ ಲೇಶಾಲಂಕಾರವೆನಿಸುವುದು. "ಪಕ್ಷಿಗಳೆಲ್ಲವೂ ಸ್ವತಂತ್ರವಾಗಿ ವಿಹರಿಸುತ್ತಿರಲು ಗಿಳಿಯೇ, ನಿನಗೆ ಮಾತ್ರ ಈ ಪಂಜರದಲ್ಲಿ ಬಂಧನವಾಗಿದೆ. ಇದು ನಿನ್ನ ಇಂಪಾದ ಮಾತಿನ ಫಲ.'' ರಾಜನಿಗೆ ಇಷ್ಟನೂ ಜ್ಞಾನಿಯೂ ಎನಿಸಿದ ಮಗನು ಬಹು ಕಾಲ ರಾಜಧಾನಿಯಲ್ಲಿಯೇ ನೆಲಸಿರಲು ಅವನನ್ನು ನೋಡಲಿಚ್ಛಿಸಿದ ತಂದೆಯು ಮನೆಯಲ್ಲಿ ಅಪ್ರಕೃತವಾದ ಗಿಳಿಯನ್ನು ಉದ್ದೇಶಿಸಿ ಹೇಳುತ್ತಾನೆ. ಇಲ್ಲಿ ಪ್ರಥಮಾರ್ಧದಲ್ಲಿ ಬೇರೆ ಪಕ್ಷಿಗಳಿಗೆ ಮಾತನಾಡಲು ಬಾರದೆ ಇರುವ ದೋಷವನ್ನು ಅವಕ್ಕೆ ಸ್ವೇಚ್ಛೆಯಿಂದ ಸಂಚರಿಸಲು ಅನುಕೂಲವಾಗಿದೆ ಎಂದು ಗುಣವಾಗಿ ಕಲ್ಪಿಸಲಾಗಿದೆ. ದೋಷದಿಂದಲೇ ಅವಕ್ಕೆ ಒಳ್ಳೆಯದಾಗಿರುವುದರಿಂದ ಅಲ್ಲಿ ದೋಷವೇ ಗುಣವೆನಿಸಿದೆ. ದ್ವಿತೀಯಾ ರ್ಧದಲ್ಲಿ ಗಿಳಿಯು ಇಂಪಾಗಿ ಮಾತನಾಡುವುದೆಂಬ ಗುಣವು ಪಂಜರಬಂಧನಕ್ಕೆ ಹೇತುವೆನಿಸಿದ್ದರಿಂದ ಗುಣವೇ ದೋಷವಾಗಿ ಪರಿಣಮಿಸಿದೆ. ಇಲ್ಲಿ ವ್ಯಾಜಸ್ತುತಿ ಯನು ಆಶಂಕಿಸಬಾರದು. ಬೇರೆ ಪಕ್ಷಿಗಳನ್ನು ಸ್ತುತಿಸುವ ನೆಪದಿಂದ ಗಿಳಿಯನ್ನು ನಿಂದಿಸುವುದರಲ್ಲೂ, ಗಿಳಿಯನ್ನು ನಿಂದಿಸುವ ನೆಪದಿಂದ ಅದನ್ನು ಸ್ತುತಿಸುವುದರಲ್ಲೂ ಕವಿಗೆ ತಾತ್ಪರ್ಯವಿಲ್ಲ. ಆದರೆ ಮಗನನ್ನು ನೋಡಲಿಚ್ಛಿಸಿದ ತಂದೆಯು ಹೇಳುವಂತೆ ರಾಜನಿಗೆ ಪ್ರಿಯನೂ ವಿದ್ವಾಂಸನೂ ಆಗಿರುವುದು ತನ್ನ ಮಗನಲ್ಲಿ ಗುಣವೇ ಆಗಿದೆ. ಆದರೂ ಅದರಿಂದ ಅವನು ಅರಮನೆಯಲ್ಲಿಯೇ ನೆಲಸಬೇಕಾದ ನಿರ್ಬಂಧವುಂಟಾಗಿ ತಂದೆಯನ್ನು ಕಾಣಲಿಕ್ಕಾಗದೇ ಇದ್ದ ಪ್ರಯುಕ್ತ ತಂದೆಯು ಅದನ್ನು ದೋಷವೆಂದು ಕಲ್ಪಿಸಿದ್ದಾನೆ. ಹೀಗೆ ಗುಣವನ್ನು ದೋಷವೆಂದು ಕಲ್ಪಿಸುವುದಷ್ಟೇ ಇಲ್ಲಿ ಕವಿಗೆ ಇಷ್ಟವಾದ ಪ್ರಯುಕ್ತ ಬೇರೆ ಯಾವ ಅಲಂಕಾರವೂ ಪ್ರವರ್ತಿಸವಂತಿಲ್ಲ. ಈ ಬಗ್ಗೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ.

"ಸತ್ಪುರುಷರು ಸದ್ವರ್ತನವನ್ನು ಹೆಚ್ಚಿಸಿಕೊಳ್ಳುವುದರಲ್ಲಿಯೇ ಆಸಕ್ತರು ; ಶಾಸ್ತ್ರೀಯವಾದ ನಿರ್ಬಂಧಕ್ಕೆ ಒಳಪಟ್ಟವರು ; ಎಲ್ಲಡೆಯಲ್ಲೂ ಬರಬಹುದಾದ ಜನಗಳ ಅಪವಾದಕ್ಕೆ ಹೆದರಿ ಯಾವಾಗಲೂ ದುಃಖದಿಂದಲೇ ಬಾಳುವವರು. ಒಳ್ಳೆಯದನ್ನು ಮಾಡಿದ್ದರಿಂದ ಸಂತೋಷವಿಲ್ಲದೆಯೂ, ಕೆಟ್ಟದ್ದನ್ನು ಮಾಡಿದ್ದರಿಂದ

ವ್ಯಾಕುಲಗೊಳ್ಳದೆಯೂ ಯುಕ್ತಾಯುಕ್ತ ವಿವೇಚನೆ ಇಲ್ಲದೆ ನೀಚನೂ ಜಡನೂ ಆದವನೇ ಧನ್ಯನು." ಹೀಗೆ ಯುಕ್ತಾಯುಕ್ತವಿವೇಕವಿಲ್ಲದೇ ಇರುವುದು ವಾಸ್ತವವಾಗಿ ದೋಷವಾದರೂ ಅದನ್ನು ಇಲ್ಲಿ ಗುಣವೆಂದು ಕಲ್ಪಿಸಲಾಗಿದೆ. ಸಚ್ಚರಿತ್ರೋದಯ ವ್ಯಸನ ವೊದಲಾದವು ವಾಸ್ತವವಾಗಿ ಗುಣವೇ ಆಗಿದ್ದರೂ ಅದನ್ನು ಇಲ್ಲಿ ದೋಷ ವೆಂದು ಕಲ್ಪಿಸಲಾಗಿದೆ. ಸತ್ಪುರುಷರು ಯಾವಾಗಲೂ ದುಃಖದಲ್ಲಿಯೇ ಇರುವುದಕ್ಕೆ ಅವು ಕಾರಣವೆನಿಸಿವೆ.

ದಂಡಿ ಇಲ್ಲಿ ಹೀಗೆ ಹೇಳಿರುವನು. "ಈ ರಾಜನು ಯುವಕನೂ ಗುಣ ಶೀಲನೂ ಬಲಿಷ್ಠನೂ ಆಗಿ ನಿನಗೆ ಯೋಗ್ಯಪತಿ ಎನಿಸಿರುವನು. ಆದರೆ ಇವನಿಗೆ ಸುರತೋತ್ಸವಕ್ಕಿಂತಲೂ ರಣೋತ್ಸವದಲ್ಲಿ ಮನಸ್ಸು ಅಂಟಿಕೊಂಡಿರುವುದು." "ಇವನು ಚಪಲನೂ ನಿರ್ದಯನೂ ಆಗಿರುವನು. ಇವನಿಂದ ನನಗೇನು ಫಲ ವಾದೀತು ? ಸಖಿ, ತನ್ನ ಅಪರಾಧವನ್ನು ಮುಚ್ಚಿಕೊಳ್ಳಲಿಕ್ಕಾಗಿ ಇವನು ನಾಲ್ಕು ಮಾತುಗಳನ್ನಾಡುವುದನ್ನು ಕಲಿತಿರುವನು". ಇವೆರಡರಲ್ಲಿ ಮೊದಲನೆಯ ಪದ್ಯದಲ್ಲಿ ರಾಜನ ವೀರ್ಯವನ್ನು ಪ್ರಶಂಸಿಸಲಾಗಿದೆ. ರಾಜನು ಬಲಿಷ್ಠನೂ ಗುಣಶಾಲಿಯೂ ಆದರೂ ಅವನಿಗೆ ಸುರತದ ಇಚ್ಛೆ ಇಲ್ಲದೆ ಯುದ್ಧದಲ್ಲಿಯೇ ಮನಸ್ಸು ಅಂಟಿ ಕೊಂಡಿರುವುದರಿಂದ ಕನ್ಯೆಗೆ ಅವನೊಡನೆ ನಿರಂತರವೂ ಸಂಭೋಗಿಸಬೇಕೆಂಬ ಇಚ್ಛೆಯನ್ನು ತೊಲಗಿಸಲಿಕ್ಕಾಗಿ ಅವನಲ್ಲಿರುವ ಯುದ್ಧ ಮಾಡಬೇಕೆಂಬ ಗುಣವೇ ಹೀಗೆ ಸಂಭೋಗದ ಇಚ್ಛೆಯನ್ನು ತಪ್ಪಿಸುತ್ತ ದೋಷವಾಗಿ ಕಾಣಲೆಂದು ಭಾವಿಸಿ ನಿಪುಣೆಯಾದ ಸಖಿಯು ರಾಜನ ಕೋಪವನ್ನು ಪರಿಹರಿಸುವ ಇಚ್ಛೆಯಿಂದ ಅವನಿಗೆ ಸಂಭೋಗದ ಇಚ್ಛೆ ಇಲ್ಲವೆಂಬ ದೋಷವನ್ನೇ ಯುದ್ಧದಲ್ಲಿ ಮನಸ್ಸು ಅಂಟಿದೆ ಎಂದು ಹೇಳುತ್ತ ಗುಣವೆಂದು ವರ್ಣಿಸುತ್ತಾಳೆ. ಎರಡನೆಯ ಶ್ಲೋಕದಲ್ಲಿ ಯುವಕನೊಬ್ಬನನ್ನು ಗೌರವಿಸುವಂತೆ ನಾಯಿಕೆಗೆ ಸಖಿಯರು ಬಹಳವಾಗಿ ಉಪದೇಶಿಸಿದ್ದರೂ ಅವನು ಚಪಲನೂ ನಿರ್ದಯನೂ ಆದ್ದರಿಂದ ಅವನನ್ನು ಗೌರವಿಸಲಿಕ್ಕಾಗದೇ ಇದ್ದ ಪ್ರಯುಕ್ತ ಆ ನಾಯಿಕೆಯು ಸಖಿಯರೆದುರಿಗೆ ಅವನನ್ನು ಗೌರವಿಸಲು ಅನುಕೂಲವಾಗುವಂತೆ ಪ್ರತಿಜ್ಞೆಯನ್ನು ಮಾಡಿ ಹಾಗೆ ಗೌರವಿಸಲಿಕ್ಕೆ ಅವನಲ್ಲಿ ಯೋಗ್ಯತೆ ಇಲ್ಲವೆಂದು ಭಾವಿಸಿ ಸಖಿಯರು ಹಾಸ್ಯಮಾಡು ವುದನ್ನು ತಪ್ಪಿಸಿಕೊಳ್ಳುವ ಇಚ್ಛೆಯಿಂದ ನಾಯಕನು ಒಳ್ಳೆಯ ಮಾತುಗಳನ್ನಾಡುತ್ತಿ ರುವನೆಂಬ ಅವನ ಗುಣವನ್ನೇ ತನ್ನ ಅಪರಾಧವನ್ನು ಮುಚ್ಚಲಿಕ್ಕಾಗಿಯೇ ಹೀಗೆ ಹೇಳುತ್ತಿರುವುದಾಗಿ ದೋಷವೆಂದು ಇಲ್ಲಿ ವರ್ಣಿಸಿದ್ದಾಳೆ. ಮೊದಲನೆಯ ಶ್ಲೋಕದಲ್ಲಿ ನಿಂದೆಯಲ್ಲಿ ಕೊನೆಗಾಣುವ ಸ್ತುತಿಯೂ, ಎರಡನೆಯ ಶ್ಲೋಕದಲ್ಲಿ ಸ್ತುತಿಯಲ್ಲಿ ಕೊನೆ ಗಾಣುವ ನಿಂದೆಯೂ ಇವೆ ಎಂದು ಇಲ್ಲಿ ವ್ಯಾಜಸ್ತುತಿಯನ್ನು ಆಶಂಕಿಸಬಾರದು. ರಾಜನ ಕೋಪವನ್ನೂ, ಯುವಕನ ಆಗ್ರಹವನ್ನೂ ಸಂಹರಿಸಲಿಕ್ಕಾಗಿಯೇ ಇಲ್ಲಿ ನಿಂದಾ

ಸ್ತುತಿಗಳನ್ನು ಬೇರೆಯವರಿಗೆ ಸ್ಪಷ್ಟವಾಗಿ ತಿಳಿದುಬರದಂತೆ ಮಿತವಾಗಿಯೇ ತಿಳಿಸುವುದರಿಂದ ವ್ಯಾಜಸ್ತುತಿ, ವ್ಯಾಜನಿಂದೆಗಳಿಗಿಂತಲೂ ಇದರಲ್ಲಿ ಒಂದು ವೈಶಿಷ್ಟ್ಯವಿರುವುದಾಗಿ ಕಂಡುಬರುತ್ತದೆ. ವಾಸ್ತವವಾಗಿ ಇಲ್ಲಿ ವ್ಯಾಜಸ್ತುತಿ ಇದ್ದರೂ ಸಹ ದೋಷವಿಲ್ಲ. ಇಷ್ಟರಿಂದಲೇ ಲೇಶಾಲಂಕಾರಕ್ಕೆ ಸಂಬಂಧಿಸಿದ ಅಂಶವಷ್ಟನ್ನೂ ವ್ಯಾಜಸ್ತುತಿಯಲ್ಲಿ ಸೇರಿಸುವ ಆವಶ್ಯಕತೆಯಿಲ್ಲ. ವ್ಯಾಜಸ್ತುತಿಯ ಸಂಪರ್ಕವೇ ಇಲ್ಲದ ಲೇಶಾಲಂಕಾರದ ಉದಾಹರಣಗಳನ್ನು ಹಿಂದೆ ತೋರಿಸಿಯಾಗಿದೆ. ವ್ಯಾಜ ಸ್ತುತಿಗೆ ಸೇರಿದ ಅಂಶವನ್ನು ಲೇಶಾಲಂಕಾರದಲ್ಲಿ ಸೇರಿಸಲಿಕ್ಕೂ ಆಗುವುದಿಲ್ಲ.– ಲೇಶಾಲಂಕಾರಕ್ಕಿಂತ ಬೇರೆಯಾಗಿ ವ್ಯಾಜಸ್ತುತಿಗೆ ಕೊಟ್ಟಿರುವ ಉದಾಹರಣದಲ್ಲಿ ಒಬ್ಬನಲ್ಲಿಯೇ ದೋಷವನ್ನು ಗುಣವೆಂದೂ, ಗುಣವನ್ನು ದೋಷವೆಂದೂ ಕಲ್ಪಿಸುವ ಸನ್ನಿವೇಶವೇ ಕಂಡುಬರುವುದಿಲ್ಲ. 'ಕಸ್ತ್ವಂ ವಾನರ' ಎಂಬ ಪದ್ಯದಲ್ಲಿ ಒಬ್ಬ ಕಪಿಯ ನಿಂದೆಯಿಂದ ಬೇರೆ ಕಪಿಗಳ ಸ್ತೋತ್ರವು ಸ್ಪಷ್ಟವಾಗಿ ತಿಳಿದುಬರುವ ಪ್ರಯುಕ್ತ ಅದು ವ್ಯಾಜಸ್ತುತಿ ಎನಿಸಿದೆ. ಆದರಲ್ಲಿ ಲೇಶಾಲಂಕಾರದ ವಾಸನೆಯೇ ಕಂಡು ಬರುವುದಿಲ್ಲ. ಅಲ್ಲಿ ಒಬ್ಬನ ಗುಣದೋಷಗಳಿಂದ ಬೇರೊಬ್ಬನ ಗುಣದೋಷಗಳೇ ತೋರಿಬರುತ್ತವೆ. ಹನುಮಂತನ ದೋಷದಿಂದ ಬೇರೆ ಕಪಿಗಳ ಗುಣವು ತೋರಿ ಬರುತ್ತದೆ. ಗಿಳಿಯ ವಾಕ್ಚಾತುರ್ಯವೆಂಬ ಗುಣದಿಂದ ಅದೇ ಗಿಳಿಗೆ ಬಂಧನವೆಂಬ ದೋಷವು ಸಂಭವಿಸಿರುವಂತೆ ವ್ಯಾಜಸ್ತುತಿಯಲ್ಲಿ ಕಂಡುಬರುವುದಿಲ್ಲ.–

ವ್ಯಾಜಸ್ತುತಿಯಲ್ಲೂ ಕೆಲವು ಕಡೆಗಳಲ್ಲಿ ಒಂದೇ ವ್ಯಕ್ತಿಯಲ್ಲಿಯೇ ಗುಣವನ್ನು ದೋಷವೆಂದೂ, ದೋಷವನ್ನು ಗುಣವೆಂದೂ ಕಲ್ಪಿಸುವುದಕ್ಕೆ ಅವಕಾಶವಿರುವುದರಿಂದ ಅಂತಹ ಕಡೆಗಳಲ್ಲಿ ಲೇಶಾಲಂಕಾರವನ್ನು ಸೇರಿಸೋಣವೆಂದು ಒಂದೇ ಕಡೆಯಲ್ಲಿ ಗುಣವನ್ನು ದೋಷವೆಂದು ಕಲ್ಪಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಚಂದ್ರನ ಕಳಂಕ, ಈಶ್ವರನ ಕುತ್ತಿಗೆ, ಕೃಷ್ಣ, ದಿಗ್ಗಜಗಳ ಕಪೋಲ ಸ್ಥಳ ಇವಿಷ್ಟಕೂ ಮದೋದಕವೆಂಬ ಮಸಿಯನ್ನು ಬಳಿದಿರುವಂತೆ ಕಾಣುತ್ತದೆ. ಹಾಗಾದರೆ ಮಹಾರಾಜನೇ, ನಿನ್ನ ಯಶಸ್ಸಿನಿಂದ ಬೆಳ್ಳಗಾದದ್ದು ಯಾವುದು ?'' ಇಲ್ಲಿ ಹೇಳಿದ ನಾಲ್ಕನ್ನು ಬೆಳ್ಳಗೆ ಮಾಡದೆ ಇದ್ದುದು ರಾಜನ ಕೀರ್ತಿಗೆ ದೋಷವೇ ಆದರೂ ಅದು ಗುಣವಾಗಿ ಕೊನೆಗಾಣದೇ ಇರುವ ಪ್ರಯುಕ್ತ ಇಲ್ಲಿ ಲೇಶಾಲಂಕಾರವಿಲ್ಲ. ಹೀಗೆ ಇಲ್ಲಿ ದೋಷವನ್ನು ಗುಣವನ್ನಾಗಿಯೂ, ಗುಣವನ್ನು ದೋಷವನ್ನಾಗಿಯೂ ಕಲ್ಪಿಸಿಲ್ಲ ವಾದ್ದರಿಂದ ಲೇಶಾಲಂಕಾರದ ಸ್ಪರ್ಶವೇ ಇಲ್ಲ; ಚಂದ್ರನ ಕಳಂಕ, ಈಶ್ವರನ ಕುತ್ತಿಗೆ, ಕೃಷ್ಣ, ದಿಗ್ಗಜಗಳ ಕಪೋಲಸ್ಥಳ ಇವಿಷ್ಟನ್ನು ಬಿಟ್ಟು ಲೋಕದಲ್ಲಿ ಉಳಿದಿರುವ ಪದಾರ್ಥಗಳೆಲ್ಲವೂ ಬೆಳ್ಳಗಾದವು, ಆದರೆ ಇವಿಷ್ಟು ಮಾತ್ರ ಆಗಲಿಲ್ಲ. ಎಲ್ಲವೂ ಬೆಳ್ಳಗಾಗಿ ಇವಿಷ್ಟು ಕಪ್ಪುಬಣ್ಣದಿಂದ ದೋಷವಾಗಿಯೇ ಉಳಿದವು. ಇವಿಷ್ಟು ಬೆಳ್ಳಗಾಗಲಿಲ್ಲವೆಂಬ ದೋಷವು ದೋಷವಾಗಿ ಉಳಿಯಿತೇ ಹೊರತು ಗುಣ

ವಾಗಿ ಕೊನೆಗಾಣುವುದಿಲ್ಲ. ಇವುಗಳ ಕಪ್ಪು ಬಣ್ಣವು ಕಪ್ಪಾಗಿಯೇ ಉಳಿದಿದ್ದರಿಂದ ದೋಷವು ದೋಷವಾಗಿಯೇ ಉಳಿದು ಬೇರೆ ವಸ್ತುಗಳು ಬೆಳ್ಳಗಾದವೆಂದು ಎಣಿಕೆ ಮಾಡಿದ್ದರಿಂದ ಅವುಗಳ ಗುಣವೇ ಇಲ್ಲಿ ತೋರುತ್ತದೆ.

ಕೆಲವು ಕಡೆ ವ್ಯಾಜಸ್ತುತಿಯ ಉದಾಹರಣದಲ್ಲಿ ಗುಣವನ್ನು ದೋಷವಾಗಿ ಮಾರ್ಪಡಿಸುವ ಪರಿಸ್ಥಿತಿ ಇದ್ದರೂ ಸಹ ಸ್ತುತಿಗೆ ಬೇರೊಂದು ವಿಷಯವೂ ಇರುವುದಾಗಿ ಕಂಡುಬರುತ್ತದೆ. "ನೀನು ಯಾವಾಗಲೂ ಎಲ್ಲರಿಗೂ ಎಲ್ಲವನ್ನೂ ಕೊಡುವವನೇ ಆಗಿರುವೆ ಎಂದು ವಿದ್ವಾಂಸರು ನಿನ್ನನ್ನು ಸುಳ್ಳಾಗಿ ಸ್ತುತಿಸುವರು. ಆದರೆ ನೀನು ಶತ್ರುಗಳಿಗೆ ನಿನ್ನ ಹಿಂಭಾಗವನ್ನು ತೋರಿಸಿಯೇ ಇಲ್ಲ. ಹಾಗೆಯೇ ಶತ್ರುಸ್ತ್ರೀಯರು ನಿನ್ನ ವಕ್ಷಸ್ಥಳವನ್ನು ಹೊಂದಿಯೇ ಇಲ್ಲ. ಎಲ್ಲರಿಗೂ ಎಲ್ಲವನ್ನೂ ಕೊಟ್ಟಿದ್ದರೂ ಶತ್ರುಗಳಿಗೆ ಬೆನ್ನನ್ನೂ ಶತ್ರುಸ್ತ್ರೀಯರಿಗೆ ವಕ್ಷಸ್ಥಳವನ್ನೂ ನೀನು ಕೊಟ್ಟಿಲ್ಲ" ಹೀಗೆ ರಾಜನ ಬಗ್ಗೆ ವಾಚ್ಯವಾದ ನಿಂದೆಯಿದೆ. ಇಲ್ಲಿ ಬೇರೊಂದು ಸ್ತುತಿಯೂ ತೋರುತ್ತದೆ. ಶತ್ರು ಮತ್ತು ಶತ್ರುಸ್ತ್ರೀಯರು ಇವರಿಬ್ಬರನ್ನು ಬಿಟ್ಟು ಉಳಿದ ಅರ್ಥಿಗಳೆಲ್ಲರಿಗೂ ಸುವರ್ಣ ಮೊದಲಾದ ಎಲ್ಲವನ್ನೂ ಕೊಟ್ಟಿರುವೆ ಎಂದು ರಾಜನ ಸ್ತೋತ್ರವೂ ತೋರುತ್ತದೆ. ರಾಜನು ದಾನಶೂರನೆಂಬ ಗುಣವು ಶತ್ರುವಿಗೂ ಶತ್ರುಸ್ತ್ರೀಯರಿಗೂ ಅನ್ವಯಿಸದಿರುವುದರಿಂದ ದೋಷವಾಗಿ ಪರಿಣಮಿಸುವ ಪ್ರಯುಕ್ತ ಈ ವ್ಯಾಜಸ್ತುತಿಯ ಉದಾಹರಣದಲ್ಲಿ ರಾಜನ ಔದರ್ಯವೇ ದೋಷವಾಗಿ ಪರಿಣಮಿಸಿದ್ದು ಲೇಶಾಲಂಕಾರವಿದ್ದರೂ "ಅವರಿಬ್ಬರಿಗೆ ಮಾತ್ರವೇ ಕೇಳಿದ್ದನ್ನು ಕೊಡದೇ ಇದ್ದರೂ ಬೇರೆ ಎಲ್ಲರಿಗೂ ಇಷ್ಟಾರ್ಥವನ್ನು ಸಲ್ಲಿಸಿರುವೆ" ಎಂದು ರಾಜನ ಸ್ತುತಿಯೂ ಇರುವುದಾಗಿ ಕಂಡುಬಂದಿದೆ. ಅವರಿಬ್ಬರಿಗೆ ಬೆನ್ನು, ವಕ್ಷಸ್ಸು ಇವನ್ನು ಕೊಡದೆ ಇರುವುದರಿಂದ ಎಲ್ಲರಿಗೂ ಎಲ್ಲವನ್ನೂ ಕೊಡುವೆ ಎಂಬುದು ಸುಳ್ಳಾಯಿತು. ಹೀಗಿದ್ದರೂ ರಣರಂಗದಿಂದ ಹಿಮ್ಮೆಟ್ಟದಿರುವುದು, ಶತ್ರುಸ್ತ್ರೀಯರನ್ನು ಆಲಿಂಗಿಸಿ ಕೊಳ್ಳದಿರುವುದು ಇವೆರಡು ಗುಣಗಳಿರುವುದರಿಂದ ರಾಜನ ಗುಣವು ಪ್ರಶಂಸೆಯೇ ಆಗಿದೆ. ಹೀಗೆ 'ಕಸ್ತ್ರೇಶೌರ್ಯಮುದೋ ಯೋದ್ಧುಂ' ಇದೇ ಮೊದಲಾದ ವ್ಯಾಜ ಸ್ತುತಿಯ ಉದಾಹರಣಗಳಲ್ಲಿ ನಿಂದೆಯಿಂದ ಸ್ತುತಿಯು ತಿಳಿದು ಬರುವುದರಿಂದ ಹೀಗೆ ದೋಷವನ್ನು ಗುಣವೆಂದು ಕಲ್ಪಿಸುವ ಅಂಶವೇ ವ್ಯಾಜಸ್ತುತಿಯ ರೂಪದಲ್ಲಿ ಕಂಡು ಬರುತ್ತದೆ. ಅಂತಹ ಕಡೆಗಳಲ್ಲಿ ಮಾತ್ರ ಲೇಶ ಮತ್ತು ವ್ಯಾಜಸ್ತುತಿ ಇವೆರಡೂ ಸಹ ಸೇರಿರುತ್ತವೆ. ಇವುಗಳಿಗೆ ಸಾಕರ್ಯವನ್ನು ಒಪ್ಪಬಹುದು. ಹೀಗೆಯೇ ವ್ಯಾಜಸ್ತುತಿ ಅಪ್ರಸ್ತುತಪ್ರಶಂಸೆಗಳಲ್ಲೂ ಸಹ ಸಾಕರ್ಯ ಉಂಟೆಂಬುದನ್ನು ಹಿಂದೆಯೇ ತಿಳಿಸಿದೆ.

## ೭೩. ಮುದ್ರಾಲಂಕಾರ

ಸೂಚ್ಯಾರ್ಥಸೂಚನಂ ಮುದ್ರಾ ಪ್ರಕೃತಾರ್ಥಪರೈಃ ಪದೈಃ ।
ನಿತಂಬಗುರ್ವೀ ತರುಣೀ ದೃಗ್ಯುಗ್ಮವಿಪುಲಾ ಚ ಸಾ ॥

ಅತ್ರ ನಾಯಿಕಾವರ್ಣನಪರೇಣ ಯುಗ್ಮವಿಪುಲಾಪದೇನ ಅಸ್ಯ ಅನುಷ್ಟುಭೋ ಯುಗ್ಮವಿಪುಲಾನಾಮತ್ವರೂಪಸೂಚ್ಯಾರ್ಥಸೂಚನಂ ಮುದ್ರಾ. ಯದ್ಯಪ್ಯತ್ರ ಗ್ರಂಥೇ ವೃತ್ತನಾಮ್ನೋ ನಾಸ್ತಿ ಸೂಚನೀಯತ್ವಂ ತಥಾಪ್ಯಸ್ಯೋತ್ತರಾರ್ಧಸ್ಯ ಲಕ್ಷ್ಯಲಕ್ಷಣಯುಕ್ತಛಂದಶ್ಶಾಸ್ತ್ರಮಧ್ಯಪಾತಿತ್ವೇನ ತಸ್ಯ ಸೂಚನೀಯತ್ವಮಸ್ತೀತಿ ತದಭಿಪ್ರಾಯೇಣ ಲಕ್ಷಣಂ ಯೋಜ್ಯಮ್. ಏವಂ ನವರತ್ನಮಾಲಾಯಾಂ ತತ್ತದ್ರತ್ನನಾಮನಿವೇಶೇನ ತತ್ತನ್ನಾಮಕಜಾತಿಸೂಚನಮ್. ನಕ್ಷತ್ರಮಾಲಾಯಾಂ ಅಗ್ನಿದೇವತಾನಾಮಭಿಃ ನಕ್ಷತ್ರಸೂಚನಮಿತ್ಯಾದೌ ಅಯಮೇವಾಲಂಕಾರಃ. ಏವಂ ನಾಟಕೇಷು ವಕ್ಷ್ಯಮಾಣಾರ್ಥಸೂಚನೇಷ್ವಪಿ.

ಪ್ರಕೃತವಿಷಯಕ್ಕೆ ಅನ್ವಯಿಸುವ ಪದಗಳಿಂದ ಸೂಚಿಸಬೇಕಾಗಿರುವ ಅರ್ಥವನ್ನು ಸೂಚಿಸುವುದೇ ಮುದ್ರಾಲಂಕಾರವೆನಿಸುವುದು. ಸೂಚಿಸಬೇಕಾಗಿರುವ ಅರ್ಥವನ್ನು ಒಳಗೆ ಅಡಗಿಸಿಕೊಂಡು ಹೊರಗಡೆ ಪ್ರಕೃತಸಂದರ್ಭಕ್ಕೆ ಅನುಗುಣವಾದ ಅರ್ಥವನ್ನು ವರ್ಣಿಸುವುದೇ ಈ ಬಗೆಯ ಅಲಂಕಾರವೆಂದು ಹೇಳಿದಂತಾಯಿತು. " ಈ ನಾಯಿಕೆಯ ಕಟಿಪಶ್ಚಾದ್ಭಾಗವು ಸ್ಥೂಲವಾಗಿದೆ. ಹೀಗೆಯೇ ಕಣ್ಣುಗಳೆರಡೂ ವಿಶಾಲವಾಗಿವೆ ". ಇದು ನಾಯಿಕೆಯನ್ನು ವರ್ಣನಮಾಡುವ ಪ್ರಕರಣದಲ್ಲಿ ಬಂದಿದೆ, ಆಕೆಯ ಕಣ್ಣುಗಳೆರಡರ ವೈಶಾಲ್ಯವನ್ನು ತಿಳಿಸಲು ಯುಗ್ಮವಿಪುಲಾ ಎಂಬ ಪದವನ್ನು ಉಪಯೋಗಿಸಲಾಗಿದೆ. ಯುಗ್ಮವಿಪುಲೆ ಎಂಬುದು ಅನುಷ್ಟುಪ್‌ಛಂದಸ್ಸಿನಲ್ಲಿ ಬರುವ ಒಂದು ವೃತ್ತದ ಹೆಸರು. ಈ ಪ್ರಕರಣದಲ್ಲಿ ಬಂದಿರುವ ಈ ಪದ್ಯವು ಇದೇ ವೃತ್ತದಲ್ಲಿರುವುದೆಂಬ ಅರ್ಥವನ್ನು ಯುಗ್ಮವಿಪುಲಾಪದವು ಸೂಚಿಸುತ್ತದೆ. ಆ ಪದವನ್ನು ಪ್ರಯೋಗಿಸಿದ್ದರಿಂದ ಆದರೊಡಗೂಡಿದ ಪದ್ಯವೂ ಅದೇ ವೃತ್ತದಲ್ಲಿದೆ ಎಂಬುದೇ ಇಲ್ಲಿ ಸೂಚನೀಯವಾದ ಅರ್ಥ. ಇದನ್ನು ಅದಕ್ಕನುಗುಣವಾದ ಪದದಿಂದಲೇ ಇಲ್ಲಿ ಸೂಚಿಸಲಾಗಿದೆ. ಈ ಅಲಂಕಾರ ಗ್ರಂಥದಲ್ಲಿ ವೃತ್ತದ ಹೆಸರನ್ನು ಸೂಚಿಸಬೇಕಾದ ಆವಶ್ಯಕತೆಯಿಲ್ಲ. ಆದರೂ ಇಲ್ಲಿ ಉತ್ತರಾರ್ಧವು ಅನುಷ್ಟುಪ್ ಛಂದಸ್ಸಿನಲ್ಲಿದ್ದು ಅದಕ್ಕೆ ಲಕ್ಷ್ಯ (ಉದಾಹರಣ) ವೆನಿಸಿದ್ದರಿಂದ ಛಂದಶ್ಶಾಸ್ತ್ರದೊಳಗೆ ಬರುವ ಅನುಷ್ಟುಪ್ ಛಂದಸ್ಸಿನ ಲಕ್ಷಣ ಮತ್ತು ಲಕ್ಷ್ಯದಲ್ಲಿ ಸಮನ್ವಯಕ್ಕೆ ಇಲ್ಲಿಯೂ ಸಹ ಅನುಷ್ಟುಪ್ ಛಂದಸ್ಸಿನ ವಿಷಯವನ್ನು ಆ ಪದದಿಂದಲೇ ಸೂಚಿಸಬೇಕಾಯಿತು, ಈ ದೃಷ್ಟಿಯಿಂದ ಮುದ್ರಾಲಂಕಾರದ ಲಕ್ಷಣವನ್ನು ಇಲ್ಲಿ ಅನ್ವಯಿಸಲಾಗಿದೆ. ಹೀಗೆಯೇ ನವರತ್ನಮಾಲೆಯ ಒಂಬತ್ತು ಪದ್ಯಗಳಲ್ಲೂ ಪರಮಾತ್ಮನ ಸ್ತುತಿಯೇ ಬಂದಿರುತ್ತದೆ. ಒಂದೊಂದು ಪದ್ಯವೂ ಪರಮಾತ್ಮನ ದಿವ್ಯಶಕ್ತಿವೈಭವವನ್ನು ಪ್ರಶಂಸಿಸುತ್ತಲೇ ರತ್ನಗಳ ಸ್ವರೂಪವನ್ನು ತಿಳಿಸುತ್ತದೆ. ಒಂದೊಂದು ರತ್ನದ ಹೆಸರನ್ನು ಅಲ್ಲಿ ಹೇಳುವುದರಿಂದ ಆಯಾಯ ರತ್ನದ ಜಾತಿಯನ್ನು ಸೂಚಿಸಿದಂತಾಗುವುದು. ನಕ್ಷತ್ರಮಾಲೆಯಲ್ಲಿ ಅಗ್ನಿ ಮೊದಲಾದ ದೇವತೆಗಳ ಹೆಸರಿನಿಂದ ಅಶ್ವಿನಿ

ಮೊದಲಾದ ನಕ್ಷತ್ರಗಳನ್ನು ಸೂಚಿಸಿದಂತಾಗುವುದು. ಅಂತಹ ಕಡೆಗಳಲ್ಲೂ ಇದೇ ಅಲಂಕಾರವಿರುತ್ತದೆ. ಹೀಗೆಯೇ ನಾಟಕಗಳಲ್ಲಿ ಮುಂದಿನ ಕಥೆಗೆ ಸಂಬಂಧಿಸಿದ ಪಾತ್ರಗಳ ಹೆಸರನ್ನು ತಿಳಿಸುವ ಪದಗಳಿಂದ ಮುಂದೆ ತಿಳಿಸಬೇಕಾಗಿರುವ ಕಥೆಯನ್ನು ಸೂಚಿಸುವುದು ಸಹ ಮುದ್ರಾಲಂಕಾರವೇ ಆಗುತ್ತದೆ.

## ೭೪. ರತ್ನಾವಳ್ಯಲಂಕಾರ

ಕ್ರಮಿಕಂ ಪ್ರಕೃತಾರ್ಥಾನಾಂ ನ್ಯಾಸಂ ರತ್ನಾವಳೀಂ ವಿದುಃ ।
ಚತುರಾಸ್ಯಃ ಪತಿರ್ಲಕ್ಷ್ಮ್ಯಾಃ ಸರ್ವಜ್ಞಸ್ತ್ವಂ ಮಹೀಪತೇ ॥ ೧೪೫ ॥

ಅತ್ರ ಚತುರಾಸ್ಯಾದಿಪದ್ಯೈಃ ವರ್ಣನೀಯಸ್ಯ ಬ್ರಹ್ಮವಿಷ್ಣುರುದ್ರಾತ್ಮತಾ ಪ್ರತೀಯತ ಇತಿ ಪ್ರಸಿದ್ಧಸಹಪಾಠಾನಾಂ ಕ್ರಮೇಣ ನಿವೇಶನಂ ರತ್ನಾವಳೀ.

ಯಥಾ ವಾ—

ರತ್ನ್ಯಾಸ್ತಪ್ರಿಯಲಾಂಛನೇ ಕಠಿನತಾವಾಸೇ ರಸಾಲಿಂಗಿತೇ
ಪ್ರಹ್ಲಾದೈಕರಸೇ ಕ್ರಮಾದುಪಚಿತೇ ಭೂಭೃದ್ಗುರಂತ್ವಾಪಹೇ ।
ಕೋಕಸ್ಪರ್ಧಿನಿ ಭೋಗಭಾಜಿ ಜನಿತಾನಂಗೇ ಖಲೀನೋನ್ಮುಖೇ
ಭಾತಿ ಶ್ರೀರಮಣಾವತಾರದಶಕಂ ಬಾಲೇ ! ಭವತ್ಯಾಃ ಸ್ತನೇ ॥

ಯಥಾ ವಾ....

ಲೀಲಾಬ್ಜಾನಾಂ ನಯನಯುಗಲದ್ರಾಘಿಮಾದತ್ತಪತ್ರಃ
ಕುಂಭಾವೇತೌ ಕುಚಪರಿಕರಃ ಪೂರ್ವಪಕ್ಷೀಚಕಾರ ।
ಭ್ರೂವಿಭ್ರಾಂತಿರ್ಮದನಧನುಷೋ ವಿಭ್ರಮಾನನ್ವವಾದಿತ್
ವಕ್ತ್ರಜ್ಯೋತ್ಸ್ನಾ ಶಶಧರರುಚಂ ದೂಷಯಾಮಾಸ ಯಸ್ಯಾಃ ॥

ಅತ್ರ ಪತ್ರದಾನಪೂರ್ವಪಕ್ಷೋಪನ್ಯಾಸಾನುವಾದದೂಷಣೋದ್ಭಾವನಾನಿ ಬುಧಜನಪ್ರಸಿದ್ಧಕ್ರಮೇಣ ನ್ಯಸ್ತಾನಿ. ಪ್ರಸಿದ್ಧಸಹಪಾಠಾನಾಂ ಪ್ರಸಿದ್ಧಕ್ರಮಾನನು ಸರಣೇಽಪ್ಯಯಮೇವಾಲಂಕಾರಃ. ಯಥಾ ವಾ '' ಯಸ್ಯ ವಹ್ನಿಮಯೋ ಹೃದಯೇಷು ಜಲಮಯೋ ಲೋಚನಪುಟೇಷು ಮಾರುತಮಯಃ ಶ್ವಾಸೇಷು ಪಂಚಮಹಾಭೂತ-ಮಯೋ ಮೂರ್ತ ಇವಾದೃಶ್ಯತ ನಿಹತಪ್ರತಿಸಾಮಂತಾಂತಃಪುರೇಷು ಪ್ರತಾಪಃ .'' ಏವಂ ಅಷ್ಟಲೋಕಪಾಲನವಗ್ರಹಾದೀನಾಂ ಪ್ರಸಿದ್ಧಸಹಪಾಠಾನಾಂ ಯಥಾ ಕಥಂಚಿತ್ ಪ್ರಕೃತೋಪಮಾನೋಪರಂಜಕತಾದಿಪ್ರಕಾರೇಣ ನಿವೇಶನೇ ರತ್ನಾವಳ್ಯಲಂಕಾರಃ. ಪ್ರಕೃತಾನ್ವಯಂ ವಿನಾ ಕ್ರಮಿಕತತ್ತನ್ನಾಮ್ನಾ ಶ್ಲೇಷಭಂಗ್ಯಾ ನಿವೇಶನೇಕ್ರಮಪ್ರಸಿದ್ಧಿ-

ರಚಿತಾನಾಂ ಪ್ರಸಿದ್ಧ ಸಹಪಾಠಾನಾಂ ನವರತ್ನಾದೀನಾಂ ನಿವೇಶನೇऽಪ್ಯಯಮೇ-ವಾಲಂಕಾರಃ.

ಲೋಕಪ್ರಸಿದ್ಧವಾದ ವಿಷಯಗಳನ್ನು ಕ್ರಮಾನುಗುಣವಾಗಿ ಸೇರಿಸುವುದೇ ರತ್ನಾವಳ್ಯಲಂಕಾರವೆನಿಸುವುದು. "ಎಲೈ ಮಹಾರಾಜನೇ, ನೀನು ಬ್ರಹ್ಮನೂ ವಿಷ್ಣುವೂ ಮಹೇಶ್ವರನೂ ಆಗಿರುವೆ": ಇಲ್ಲಿ ಬ್ರಹ್ಮ ವಿಷ್ಣು ರುದ್ರರ ಹೆಸರನ್ನು ಕ್ರಮವಾಗಿ ತಿಳಿಸಿ ಮಹಾರಾಜನನ್ನು ತ್ರಿಮೂರ್ತಿಸ್ವರೂಪನೆಂದು ಸೂಚಿಸಲಾಗಿದೆ. ಹೀಗೆ ಕ್ರಮಬದ್ಧವಾಗಿ ಹೆಸರನ್ನು ಜೋಡಿಸುವುದೇ ರತ್ನಾವಳಿ ಎನಿಸಿದೆ. "ಎಲೈ ತರುಣಿ, ನಿನ್ನ ಸ್ತನದಲ್ಲಿ ವಿಷ್ಣುವಿನ ದಶಾವತಾರಲೀಲೆಯು ಕಂಗೊಳಿಸುತ್ತಿದೆ. ರತಿಕಾಲದಲ್ಲಿ ಪ್ರಿಯನು ಉಗುರುಗಳಿಂದ ಜಿಗುಟಿದ ಗುರುತುಗಳಿರುವುದರಿಂದ ನಿನ್ನ ಸ್ತನವು ಮತ್ಸ್ಯರೂಪವಾಗಿ ಕಾಣುತ್ತಿದೆ, ನಿನ್ನ ಸ್ತನವು ರತಿಗೆ ಆಪ್ತನೂ ಪ್ರಿಯನೂ ಆದ ಮನ್ಮಥನ ಗುರುತೆನಿಸಿದ ಮೀನಿನಂತೆ ಕಾಣುತ್ತಿದೆ.(ಮತ್ಸ್ಯಾವತಾರ). ಕಾಠಿನ್ಯಕ್ಕೆ ಆಶ್ರಯವಾಗಿರುವುದರಿಂದ ಆಮೆಯು ರೂಪದಲ್ಲಿ ಕಾಣುತ್ತಿದೆ (ಕೂರ್ಮಾವತಾರ). ಪ್ರೀತಿಯಿಂದ ಪತಿಯು ಅದನ್ನು ಆಲಿಂಗಿಸಿದ್ದರಿಂದ ಭೂಮಿಯು ಉದ್ಧಾರಕ್ಕಾಗಿ ಅದನ್ನು ಆಲಿಂಗಿಸಿದ್ದ ಹಂದಿಯ ರೂಪದಲ್ಲಿ ಕಾಣುತ್ತಿದೆ. (ವರಾಹಾವತಾರ). ಪತಿಗೆ ಸಂತೋಷವನ್ನೇ ಪ್ರಧಾನವಾಗಿ ಕೊಡುತ್ತಿರುವುದರಿಂದ ಇದು ಪ್ರಹ್ಲಾದನಿಗೆ ಮಾತ್ರವೇ ಆನಂದವನ್ನು ಕೊಡುವ ನೃಸಿಂಹನಾಗಿ ಕಾಣುತ್ತಿದೆ (ನೃಸಿಂಹಾವತಾರ). ಯೌವನಕ್ಕೆ ಅನುಗುಣವಾಗಿ ಬೆಳೆದಿರುವುದರಿಂದ ಇದು ಹೆಜ್ಜೆಯೆನ್ನಿಟ್ಟಂತೆ ಬೆಳೆದ ವಾಮನಮೂರ್ತಿಯಂತೆ ಕಾಣುತ್ತಿದೆ. (ವಾಮನಾವತಾರ). ಪರ್ವತಕ್ಕಿಂತಲೂ ಭಾರವಾಗಿರುವುದರಿಂದ ಇದು ರಾಜರ ಹೊರೆಯನ್ನು ತೊಲಗಿಸಿದ ಪರಶುರಾಮನಂತೆ ಕಾಣುತ್ತಲಿದೆ (ಪರಶುರಾಮಾವತಾರ). ಹಾಗೆಯೇ ಚಕ್ರವಾಕಪಕ್ಷಿಗೆ ಸದೃಶವಾಗಿರುವುದರಿಂದ ಇದು ಸೀತಾವಿಯೋಗದಿಂದ ಚಕ್ರವಾಕಪಕ್ಷಿಯ ಅವಸ್ಥೆಯನ್ನು ಹೊಂದಿದ್ದ ದಶರಥರಾಮನಂತೆ ಕಾಣುತ್ತಲಿದೆ (ರಾಮಾವತಾರ). ಭೋಗದಿಂದ ಸುಖವಾಗಿ ಬೆಳೆದಿರುವುದರಿಂದ ಹೆಡೆಯುಳ್ಳ ಆದಿಶೇಷನ ಅವತಾರವೆನಿಸಿದ ಬಲರಾಮನಂತೆ ಕಾಣುತ್ತಿದೆ. (ಬಲರಾಮಾವತಾರ) ಪತಿಗೆ ಕಾಮೋದ್ರೇಕವನ್ನುಂಟುಮಾಡುತ್ತಿರುವುದರಿಂದ ಇದು ಶರೀರಕ್ಕೆ ವಿರುದ್ಧವಾಗಿ ಭೋಗತ್ಯಾಗದಿಂದ ಮೌನವನ್ನಾಚರಿಸಿದ ಬುದ್ಧನಂತೆ ಕಾಣುತ್ತಿದೆ (ಬುದ್ಧಾವತಾರ). ಇಂದ್ರಿಯಸುಖಗಳಲ್ಲಾಸಕ್ತನಾದ ನಾಯಕನಿಗೆ ಯಾವಾಗಲೂ ಸಂತೋಷಪಡಿಸಲು ಉನ್ಮುಖವಾಗಿರುವುದರಿಂದ ಇದು ದುಷ್ಟರ ಸಂಹಾರಕ್ಕಾಗಿ ಕುದುರೆಯ ಮೇಲೆ ಕುಳಿತು ಲಗಾಮನ್ನು ಹಿಡಿದು ಸಂಚರಿಸುವ ಕಲ್ಕಿಯಂತೆ ಕಾಣುತ್ತಿದೆ (ಕಲ್ಕಿಅವತಾರ). ಹೀಗೆ ಇಲ್ಲಿ ಸ್ತನದಲ್ಲಿ ವಿಷ್ಣುವಿನ ದಶಾವತಾರಗಳ ತಾದಾತ್ಮ್ಯವನ್ನು ಪುರಾಣಗಳಲ್ಲಿ ಹೇಳಿರುವ ಕ್ರಮದಲ್ಲಿ ತಿಳಿಸಿರುವುದರಿಂದ ಇದು ರತ್ನಾವಳಿ ಎನಿಸಿದೆ.

ಇದಕ್ಕೆ ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ,

"ನೇತ್ರಗಳ ವೈಶಾಲ್ಯವು ಆ ನಾಯಿಕೆಯ ಕೈಯಲ್ಲಿ ವಿನೋದಕ್ಕಾಗಿ ಇಟ್ಟು ಕೊಂಡಿರುವ ಕಮಲಗಳಿಗೆ ಆಶ್ರಯವನ್ನು ಕೊಟ್ಟಿತ್ತು. ಕುಚಗಳ ವೈಶಾಲ್ಯವು ಎರಡು ಗಡಿಗೆಗಳನ್ನು ನಿರಾಕರಿಸಲರ್ಹವನ್ನಾಗಿ ಮಾಡಿಕೊಡುತ್ತಿತ್ತು. ಹುಬ್ಬುಗಳ ಚಲನವು ಮನ್ಮಥನ ಧನುಸ್ಸಿನ (ಕಾಮನಬಿಲ್ಲಿನ) ವಿಲಾಸಗಳನ್ನು ಅನುಕರಿಸುತ್ತಿತ್ತು. ಮುಖದ ಪ್ರಕಾಶವು ಚಂದ್ರನ ಕಾಂತಿಯನ್ನು ದೂಷಿಸುತ್ತಿತ್ತು." ಇದು ನಾಯಿಕೆಯ ಅಂಗಸೌಷ್ಠವವನ್ನು ವರ್ಣಿಸುವ ಪ್ರಸಂಗ. ಇಲ್ಲಿಯೂ ವಾದಪ್ರಸ್ಥಾನದಲ್ಲಿ ನಡೆಯುವ ವಿಹಿತ ಕ್ರಮವನ್ನು ಅನುಸರಿಸಲಾಗಿದೆ. ವಾದಗಳು ಆರಂಭವಾಗುವ ಮುನ್ನ ಚರ್ಚಿಸಬೇಕಾದ ಅಂಶವನ್ನು ಮೊದಲು ಕಾಗದದಲ್ಲಿ ಬರೆದುಕೊಡಬೇಕು. ಇದಕ್ಕೆ ಪತ್ರದಾನವೆಂದು ಕರೆಯಲಾಗಿದೆ. ಅದಾದ ಮೇಲೆ ಪೂರ್ವಪಕ್ಷವನ್ನು ತಿಳಿಸಬೇಕು. ಆಮೇಲೆ ಅದನ್ನು ಅನುವಾದಮಾಡಿ ದೂಷಿಸಬೇಕು. ಇದು ಅಲ್ಲಿ ಅನುಸರಿಸಬೇಕಾದ ನಿಯಮ. ಇದನ್ನು ಅನುಸರಿಸಿಕೊಂಡೇ ನಾಯಿಕೆಯ ಶರೀರಸೌಂದರ್ಯದ ವರ್ಣನವು ಬಂದಿದೆಯಾದ್ದರಿಂದ ಇದು ರತ್ನಾವಳಿಯ ನಿದರ್ಶನವೆನಿಸಿದೆ, ಒಂದಾದ ಮೇಲೆ ಒಂದರಂತೆ ತಿಳಿಸುವ ಕ್ರಮವು ರೂಢಿಯಲ್ಲಿದ್ದು ಆ ಪ್ರಸಿದ್ಧವಾದ ಕ್ರಮವನ್ನು ಅನುಸರಿಸದಿದ್ದರೂ ಇದೇ ಅಲಂಕಾರವನ್ನು ಹೇಳಬಹುದು. "ಶತ್ರುರಾಜರನ್ನು ಸೋಲಿಸಿರುವ ಮಹಾರಾಜನ ಅಂತಃಪುರದಲ್ಲಿ ಪರಾಕ್ರಮವು ಹೃದಯದಲ್ಲಿ ಭೆಂಕಿಯ ರೂಪದಲ್ಲೂ ಕಣ್ಣುಗಳಲ್ಲಿ ನೀರಿನ ರೂಪದಿಂದಲೂ, ನಿಟ್ಟುಸಿರುಗಳಲ್ಲಿ ಗಾಳಿಯ ರೂಪದಲ್ಲೂ, ಅವಯವಗಳಲ್ಲಿ ದುಃಖವನ್ನು ಸಹಿಸಬಲ್ಲವಾದ್ದರಿಂದ ಭೂಮಿಯ ರೂಪದಲ್ಲೂ, ಅಂತಃಕರಣಗಳಲ್ಲಿ ಆಕಾಶದ ರೂಪದಲ್ಲೂ ಹೀಗೆ ಶರೀರಧಾರಿಯಾದ ಪಂಚಮಹಾಭೂತಗಳೋ ಏನೋ ಎಂಬುವ ಹಾಗೆ ವ್ಯಾಪಿಸಿತ್ತು!" ಇಲ್ಲಿ ಪಂಚ ಮಹಾಭೂತಗಳನ್ನು ತಿಳಿಸಿದ್ದರೂ ವ್ಯವಸ್ಥಿತವಾದ ಕ್ರಮದಲ್ಲಿ ತಿಳಿಸಿಲ್ಲ. ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ ಈ ಕ್ರಮದಲ್ಲಿ ತಿಳಿಸದೆ ಬೆಂಕಿಯಿಂದ ಆರಂಭವಾಗಿ ನೀರು, ಗಾಳಿ, ಭೂಮಿ, ಆಕಾಶ ಹೀಗೆ ಭೂತಗಳನ್ನು ಇಲ್ಲಿ ತಿಳಿಸಿದೆ. ಪ್ರಸಿದ್ಧವಾದ ಕ್ರಮವನ್ನು ಅನುಸರಿಸದೆ ಈ ಐದನ್ನು ಹಿಂದು ಮುಂದಾಗಿ ಹೇಳಿದ್ದರೂ ರತ್ನಾವಳಿ ಅಲಂಕಾರವೇ ಆಗುತ್ತದೆ. ಇದೇ ರೀತಿಯಲ್ಲಿ ಅಷ್ಟದಿಕ್ಪಾಲಕರನ್ನೂ ನವಗ್ರಹಗಳನ್ನೂ ಪ್ರಕೃತೋಪಮೇಯಕ್ಕೆ ಉಪಮಾನವನ್ನಾಗಿ ತಿಳಿಸುವಾಗ ನಿರ್ದಿಷ್ಟಕ್ರಮವನ್ನು ಮೀರಿ ಹಿಂದುಮುಂದಾಗಿ ತಿಳಿಸಿದ್ದರೂ ಇದೇ ಅಲಂಕಾರವನ್ನೇ ಹೇಳಬೇಕು. ಅಪ್ರಕೃತವಸ್ತುವಿನಲ್ಲಿ ಅನ್ವಯವಿಲ್ಲದಿದ್ದರೂ ಒಂದು ಕ್ರಮವನ್ನು ಅನುಸರಿಸಿಕೊಂಡು ಆಯಾಯ ಹೆಸರಿನಿಂದ ತಿಳಿಸಿರುವ ವಸ್ತುಗಳಿಗೆ ಶ್ಲೇಷರೀತಿಯಿಂದ ಒಂದೆಡೆಗೆ ಸೇರಿಸಿದ್ದರೂ ರತ್ನಾವಳಿಯನ್ನೇ ಹೇಳಬೇಕು, ಇಂತಹದೇ ಮೊದಲು ಇರಬೇಕು ಎಂಬ ಕ್ರಮವಿಲ್ಲದೆ ಒಟ್ಟಿಗೆ ತಿಳಿಸುವುದಷ್ಟೇ ರೂಢಿಯಲ್ಲಿರುವ ನವರತ್ನಗಳ ಹೆಸರನ್ನು ತಿಳಿಸುವಾಗಲೂ ಹಿಂದುಮುಂದಾದರೂ ಇದೇ ಅಲಂಕಾರವನ್ನೇ ಹೇಳಬೇಕು,

## ೭೫. ತದ್ಗುಣಾಲಂಕಾರ

ತದ್ಗುಣಃ ಸ್ವಗುಣತ್ಯಾಗಾದನ್ಯದೀಯಗುಣಗ್ರಹಃ ।
ಪದ್ಮರಾಗಾಯತೇ ನಾಸಾಮೌಕ್ತಿಕಂ ತೇಽಧರತ್ವಿಷಾ ॥ ೧೪೦ ॥

ಯಥಾ ವಾ—
ವೀರ ತ್ವದ್ರಿಪುರಮಣೀ ಪರಿಧಾತುಂ ಪಲ್ಲವಾನಿ ಸಂಸ್ಪೃಶ್ಯ ।
ನ ಹರತಿ ವನಭುವಿ ನಿಜಕರರುಹರುಚಿ ಖಚಿತಾನಿ ಪಾಂಡುಪತ್ರಧಿಯಾ ॥

ಒಂದು ವಸ್ತುವು ತನ್ನ ಗುಣವನ್ನು ತೊರೆದು ಬೇರೊಂದು ವಸ್ತುವಿನ ಗುಣವನ್ನು ಸ್ವೀಕರಿಸಿದರೆ ಅದನ್ನು ತದ್ಗುಣಾಲಂಕಾರವೆಂದು ಕರೆಯಲಾಗುವುದು. "ನಿನ್ನ ಮೂಗಿನ ಮುತ್ತು ತುಟಿಯ ಕಾಂತಿಯಿಂದ ಪದ್ಮರಾಗಮಣಿಯಂತೆ ಕಾಣುತ್ತಿದೆ". ಇಲ್ಲಿ ಮುತ್ತು ತನ್ನ ಗುಣವನ್ನು ತೊರೆದು ಪದ್ಮರಾಗದ ಗುಣವನ್ನು ಪಡೆದದ್ದಾಗಿ ತಿಳಿಸಿದೆ. ಹಾಗೆಯೇ ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಎಲೈ ವೀರನೇ, ನಿನ್ನ ಶತ್ರುವಿನ ಹೆಂಡತಿಯು ಅರಣ್ಯಪ್ರದೇಶದಲ್ಲಿ ಹೊದಿಕೆಗಾಗಿ ತಮ್ಮ ಬೆರಳುಗಳ ಕಾಂತಿಯಿಂದ (ಅಂದರೆ ಬಿಳಿಯ ಬಣ್ಣದಿಂದ) ಕೂಡಿದ ಚಿಗುರುಗಳನ್ನು ಕೈಯಿಂದ ಮುಟ್ಟಿ ಅವನ್ನು ಬಿಳಿಯ ಎಲೆಗಳೆಂದು ಭಾವಿಸಿ ತೆಗೆದುಕೊಳ್ಳುತ್ತಿಲ್ಲ." ಇಲ್ಲಿ ಚಿಗುರುಗಳು ತಮ್ಮ ಗುಣವನ್ನು ತೊರೆದು ಬೆರಳಿನ ಕಾಂತಿಯ ಸಂಪರ್ಕದಿಂದ ಪಾಂಡುಪತ್ರದ ಗುಣವನ್ನು ಹೊಂದಿದ್ದವೆಂದು ವರ್ಣಿಸಿರುವುದರಿಂದ ಇದು ತದ್ಗುಣಾಲಂಕಾರವೆನಿಸಿದೆ.

## ೭೬. ಪೂರ್ವರೂಪಾಲಂಕಾರ

ಪುನಃ ಸ್ವಗುಣಸಂಪ್ರಾಪ್ತಿಃ ಪೂರ್ವರೂಪಮುದಾಹೃತಮ್ ।
ಹರಕಂಠಾಂಶುಲಿಪ್ತೋಽಪಿ ಶೇಷಸ್ತ್ವದ್ಯಶಸಾ ಸಿತಃ ॥ ೧೪೧ ॥

ಯಥಾ ವಾ—
ವಿಭಿನ್ನವರ್ಣಾ ಗರುಡಾಗ್ರಜೇನ ಸೂರ್ಯಸ್ಯ ರಥ್ಯಾಃ ಪರಿತಃಸ್ಫುರಂತ್ಯಾ ।
ರತ್ನೈಃ ಪುನರ್ಯತ್ರ ರುಚಾ ರುಚಂ ಸ್ವಾಮಾನಿನ್ಯಿರೇ ವಂಶಕರೀರನೀಲೈಃ ॥

ಅಯಮೇವ ತದ್ಗುಣ ಇತಿ ಕೇಚಿದ್ವ್ಯಾಜಹ್ರುಃ.
ಪೂರ್ವಾವಸ್ಥಾನುವೃತ್ತಿಶ್ಚ ವಿಕೃತೇ ಸತಿ ವಸ್ತುನಿ ।
ದೀಪೇ ನಿರ್ವಾಪಿತೇಽಪ್ಯಾಸೀತ್ಕಾಂಚೀರತ್ನೈರ್ಮಹನ್ಮಹಃ ॥ ೧೪೨ ॥

ಲಕ್ಷಣೇ ಚಕಾರಾತ್ಪೂರ್ವರೂಪಮಿತಿ ಲಕ್ಷ್ಯವಾಚಕಪದಾನುವೃತ್ತಿಃ.

ಯಥಾ ವಾ—

ದ್ವಾರಂ ಖಡ್ಗಿಭಿರಾವೃತಂ ಬಹಿರಪಿ ಪ್ರಸ್ವಿನ್ನಗಂಡೈರ್ಗಜೈಃ
ಅಂತಃಕಂಚುಕಿಭಿಃ ಸ್ಫುರನ್ಮಣಿಧರೈರಧ್ಯಾಸಿತಾ ಭೂಮಯಃ ।
ಆಕ್ರಾಂತಂ ಮಹಿಷೀಭಿರೇವ ಶಯನಂ ತದ್ವಿದ್ವಿಷಾಂ ಮಂದಿರೇ
ರಾಜನ್ ಸೈವ ಚಿರಂತನಪ್ರಣಯಿನೀ ಶೂನ್ಯೇಽಪಿ ರಾಜ್ಯಸ್ಥಿತಿಃ ॥

ಒಂದು ವಸ್ತುವು ತನ್ನ ಗುಣವನ್ನು ತೊರೆದು ಮತ್ತೆ ಅದೇ ಗುಣವನ್ನು ಪಡೆಯುವುದೇ ಪೂರ್ವರೂಪಾಲಂಕಾರವೆನಿಸುವುದು. ಆದಿಶೇಷನು ಶಿವನ ಕುತ್ತಿಗೆಯ ಕಪ್ಪುಬಣ್ಣವನ್ನು ಲೇಪಿಸಿಕೊಂಡರೂ ನಿನ್ನ ಯಶಸ್ಸಿನಿಂದ ಬೆಳ್ಳಗೇ ಇರುವನು. ಇಲ್ಲಿ ಆದಿಶೇಷನು ಶಿವನ ಕುತ್ತಿಗೆಯಲ್ಲಿರುವ ಕಪ್ಪುಬಣ್ಣದ ಸಂಪರ್ಕದಿಂದ ತನ್ನ ಬಿಳುಪನ್ನು ಕಳೆದುಕೊಂಡರೂ ಯಶಸ್ಸಿನ ಸಂಪರ್ಕದಿಂದ ಬಿಳಿಯ ಬಣ್ಣವನ್ನು ಪಡೆದನೆಂದು ಹೇಳಿರುವುದರಿಂದ ಇದು ಪೂರ್ವರೂಪಾಲಂಕಾರವೆನಿಸಿದೆ. ಮಾಘದಲ್ಲಿ ರೈವತಕಪರ್ವತವನ್ನು ವರ್ಣಿಸುವ ಸನ್ನಿವೇಶದಲ್ಲಿ ಹೀಗೆ ಹೇಳಿದೆ: "ಹಸುರು ಬಣ್ಣದ ಅರುಣನ ಕಿರಣಗಳ ಸಂಪರ್ಕದಿಂದ ಹಸುರು ಕೆಂಪು ಇವುಗಳಿಂದ ಕೂಡಿದ ಸೂರ್ಯನ ಕುದುರೆಗಳು ಬೇರೆ ಬಣ್ಣವನ್ನು ಹೊಂದಿದ್ದು ರೈವತಕ ಪರ್ವತದಲ್ಲಿ ಬೆಳೆದಿರುವ ಬಿದುರಿನ ಪೊಳಕೆಯಂತೆ ನೀಲವರ್ಣದ ರತ್ನಗಳಿಂದ ಹೊರಗೆಬರುವ ಕಾಂತಿಯ ಸಂಪರ್ಕದಿಂದ ತಮ್ಮ ಮೊದಲಿನ ನೀಲವರ್ಣವನ್ನೇ ಹೊಂದಿದವು.'' ರತ್ನದ ಕಿರಣಗಳ ಸಂಪರ್ಕದಿಂದ ಕುದುರೆಗಳಿಗೆ ಹಿಂದಿನ ರೂಪವೇ ಮತ್ತೆ ಬಂದಿತೆಂದು ತಿಳಿಸಿ ಇದನ್ನೂ ಸಹ ತದ್ಗುಣವೆಂದು ಕೆಲವರು ಹೇಳುತ್ತಾರೆ.

ಒಂದು ವಸ್ತುವು ಬೇರೊಂದು ವಿಕಾರವನ್ನು ಹೊಂದಿದ್ದರೂ ಸಹ ತನ್ನ ಹಿಂದಿನ ಅವಸ್ಥೆಯನ್ನು ಅನುಸರಿಸುವುದಾದರೆ ಅದೂ ಸಹ ಪೂರ್ವರೂಪವೇ ಆಗುತ್ತದೆ. "ದೀಪವನ್ನು ಆರಿಸಿದ್ದರೂ ಸಹ ಡಾಬಿನಲ್ಲಿ ಕೆತ್ತಿದ್ದ ರತ್ನಗಳಿಂದ ಮನೆಯೆಲ್ಲೆಲ್ಲಾ ಹೆಚ್ಚು ಪ್ರಕಾಶವುಂಟಾಯಿತು". ಇಲ್ಲಿ ದೀಪವನ್ನು ಆರಿಸಿದ್ದರಿಂದ ಅದಕ್ಕೆ ಒಂದು ವಿಕಾರವೇನೋ ಆಯಿತು. ಆದರೂ ಅದಕ್ಕೆ ಮೊದಲೂ ಪ್ರಕಾಶವಿತ್ತು. ಆ ಅವಸ್ಥೆಯೇ ದೀಪವನ್ನು ಆರಿಸಿದ ಮೇಲೂ ಡಾಬಿನಲ್ಲಿದ್ದ ರತ್ನಗಳ ಕಾಂತಿಯಿಂದ ಉಂಟಾಗಿ ದೀಪವಿದ್ದರೆ ಯಾವ ಪ್ರಕಾಶವಿತ್ತೋ ಅದೇ ಆಮೇಲೂ ಇತ್ತು. ಲಕ್ಷಣದಲ್ಲಿ ಚಕಾರವನ್ನು ಹೇಳಿರುವುದರಿಂದ ಇಲ್ಲಿ ಹೇಳಿರುವ ಲಕ್ಷಣವು ಪೂರ್ವರೂಪವೆಂಬ ಲಕ್ಷ್ಯದಲ್ಲಿಯೂ ಅನ್ವಯಿಸುವುದಾಗಿ ತಿಳಿಯಬೇಕು. "ಎಲೈ ರಾಜನೇ, ನಿನ್ನ ಶತ್ರುಗಳ ರಾಜಧಾನಿಯು ಶೂನ್ಯವಾಗಿದ್ದರೂ ರಾಜ್ಯದ ಎಲ್ಲ ಕಟ್ಟು ಮಾಮೂಲಿನಂತೆಯೇ ಇದೆ. ಯಾಕೆಂದರೆ ಬಾಗಿಲಿನಲ್ಲಿ ಖಡ್ಗಧಾರಿಪುರುಷರೆನಿಸಿದ ಖಡ್ಗಮೃಗಗಳಿವೆ. ಹೊರಗಡೆಯೂ ಸಹ ಕಪೋಲಸ್ಥಳದಿಂದ ಮದೋದಕವನ್ನು ಸುರಿಸುವ ಆನೆಗಳಿವೆ. ಒಳಗಿನ ಅಂತಃಪುರಪ್ರದೇಶಗಳಲ್ಲಿ ಪ್ರಕಾಶಮಯವಾದ ಮಣಿಗಳನ್ನು ಧರಿಸಿದ ಕಾಂಚುಕೀಯರೆಂಬ ಸರ್ಪಗಳು ಮುತ್ತಿಕೊಂಡಿರುವವು.

ಹಾಸಿಗೆಯಾದರೋ ಪಟ್ಟಮಹಿಷಿಗಳೆಂಬ ಎಮ್ಮೆಗಳಿಂದ ತುಂಬಿಕೊಂಡಿದೆ. ಹಿಂದೆ ಇದ್ದ ಪ್ರೀತಿಯಿಂದಲೇ ಕೂಡಿದ ರಾಜ್ಯದ ಮರ್ಯಾದೆಯೇ ಈಗಲೂ ಇದೆ. ಖಡ್ಗಮೃಗಗಳ ವ್ಯಾಪ್ತಿ, ಸರ್ಪಗಳ ವ್ಯಾಪ್ತಿ, ಪಕ್ಷಿವ್ಯಾಪ್ತಿ ಈ ರೀತಿಯಲ್ಲಿ ರಾಜ್ಯದಲ್ಲಿ ಮಾಮೂಲಿನ ಸ್ಥಿತಿಯೇ ಇದೆ. ಅಲ್ಲಿ ಯಾವುದೂ ಖಾಲಿಯಾಗಿಲ್ಲವೆಂದು ತಿಳಿಸಿದೆ.

## ೭೭. ಅತದ್ಗುಣಾಲಂಕಾರ

ಸಂಗತಾನ್ಯಗುಣಾನಂಗೀಕಾರಮಾಹುರತದ್ಗುಣಮ್ ।
ಚಿರಂ ರಾಗಿಣಿ ಮಚ್ಚಿತ್ತೇ ನಿಹಿತೋಽಪಿ ನ ರಂಜಸಿ ॥ ೧೪೩ ॥

ಯಥಾ ವಾ—

ಗಂಡಾಭೋಗೇ ವಿಹರತಿ ಮದೈಃ ಪಿಚ್ಛಿಲೇ ದಿಗ್ಗಜಾನಾಂ
ವೈರಿಸ್ತ್ರೀಣಾಂ ನಯನಕಮಲೇಷ್ವಂಜನಾನಿ ಪ್ರಮಾರ್ಷ್ಟಿ ।
ಯದ್ಯಪ್ಯೇಷಾ ಹಿಮಕರಕರಾದ್ವೈತಸೌವಸ್ತಿಕೀ ತೇ
ಕೀರ್ತಿರ್ದಿಕ್ಷು ಸ್ಫುರತಿ ತದಪಿ ಶ್ರೀ ನೃಸಿಂಹಕ್ಷಿತೀಂದ್ರ ॥

ನನು ಚ ಅನ್ಯಗುಣೇನಾನ್ಯತ್ರ ಗುಣೋದಯಾನುರೂಪಾಭ್ಯಾಂ ಉಲ್ಲಾಸಾವಜ್ಞಾಲಂಕಾರಾಭ್ಯಾಂ ತದ್ಗುಣಾತದ್ಗುಣಯೋಃ ಕೋ ಭೇದಃ ಉಚ್ಯತೇ. ಉಲ್ಲಾಸಾವಜ್ಞಾಲಕ್ಷಣಯೋಃ ಗುಣಶಬ್ದೋ ದೋಷಪ್ರತಿಪಕ್ಷವಾಚೀ. ಅನ್ಯಗುಣೇನಾನ್ಯತ್ರ ಗುಣೋದಯಾಽನುದಯೌ ನ ಚ ತಸ್ಯೈವ ನ ಗುಣಸ್ಯ ಸಂಕ್ರಮಣಾಸಂಕ್ರಮಣೇ ; ಕಿಂತು ಸದ್ಗುಣರೂಪದೇಶೇನ ಸದಸಚ್ಛಿಷ್ಯಯೋಃ ಜ್ಞಾನೋತ್ಪತ್ತ್ಯನುತ್ಪತ್ತಿವತ್ ತದ್ಗುಣಜನ್ಯತ್ವೇನ ಸಂಭಾವಿತಯೋಃ ಗುಣಾಂತರಯೋಃ ಉತ್ಪತ್ತ್ಯನುತ್ಪತ್ತೀ. ತದ್ಗುಣಾತದ್ಗುಣಯೋಃ ಪುನರ್ಗುಣಶಬ್ದೋ ರೂಪರಸಗಂಧಾದಿಗುಣವಾಚೀ. ತತ್ರ ಅನ್ಯದೀಯಗುಣಗ್ರಹಣಾಗ್ರಹಣೇ ರಕ್ತಸ್ಫಟಿಕವಸ್ತ್ರಮಾಲಿನ್ಯಾನಯೇನ ಅನ್ಯಾದೀಯಗುಣೇನೈವ ಅನುರಂಜನಾಽನನಾನುರಂಜನೇ ವಿವಕ್ಷಿತೇ. ತಥೈವಚೋದಾಹರಣಾನಿ ದರ್ಶಿತಾನಿ. ಯದ್ಯಪ್ಯವಜ್ಞಾಲಂಕೃತಿರತದ್ಗುಣಶ್ಚ ವಿಶೇಷೋಕ್ತಿವಿಶೇಷಾವೇವ " ಕಾರ್ಯಾಜನಿರ್ವಿಶೇಷೋಕ್ತಿಃ ಸತಿ ಪುಷ್ಕಲಕಾರಣೇ," ಇತಿ ತತ್ಸಾಮಾನ್ಯಲಕ್ಷಣಾಕ್ರಾಂತತ್ವಾತ್. ತಥಾಪ್ಯುಲ್ಲಾಸತದ್ಗುಣಪ್ರತಿದ್ವಂದ್ವಿನಾ ವಿಶೇಷಾಕಾರೇಣ ಅಲಂಕಾರಾಂತರತಯಾ ಪರಿಗಣಿತಾವಿತಿ ಧ್ಯೇಯಮ್.

ಒಂದು ವಸ್ತುವು ತನಗೆ ಸಂಬಂಧಿಸಿದ ಬೇರೊಂದು ವಸ್ತುವಿನ ಗುಣವನ್ನು ಅಂಗೀಕರಿಸದೆ ಇರುವುದೇ ಅತದ್ಗುಣಾಲಂಕಾರವೆನಿಸುವುದು. "ಅನುರಾಗವುಳ್ಳ ನನ್ನ ಹೃದಯದಲ್ಲಿ ಬಹಳ ಕಾಲದಿಂದಲೂ ನಿನ್ನನ್ನು ಚಿಂತಿಸುತ್ತಿದ್ದರೂ ನೀನು ನನ್ನನ್ನು ಪ್ರೀತಿಸುತ್ತಿಲ್ಲ" ನಾಯಿಕೆಯ ಹೃದಯದಲ್ಲಿ ನಾಯಕನ ಬಗ್ಗೆ ಅನುರಾಗವು ತುಂಬಿದೆ. ಅಂತಹ ಹೃದಯದಲ್ಲಿ ಆ ನಾಯಕನನ್ನೇ ಆಕೆಯು ಚಿಂತಿಸುತ್ತಿರುವಳು. ಅಲ್ಲಿ ಅವನಿಗೆ ಅವಕಾಶವು ಸಿಕ್ಕಿದೆ. ಅವನು ಹೃದಯದ ಸಂಪರ್ಕವನ್ನು ಹೊಂದಿದ್ದರೂ ಅದರ ಗುಣವೆನಿಸಿದ ಅನುರಾಗವನ್ನು ಮಾತ್ರ ಪಡೆಯಲಿಲ್ಲ. ಅವನು ತನಗೆ ಸಂಗತವಾದ ಹೃದಯದ ಅನುರಾಗವನ್ನು ಒಪ್ಪಿಕೊಳ್ಳಲಿಲ್ಲ. ಹೀಗೆ ತನ್ನ ಜೊತೆಯವನ ಗುಣವನ್ನು ಪಡೆಯದಿರುವುದೇ ಅತದ್ಗುಣವೆನಿಸುವುದು. ಇದಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ನೃಸಿಂಹಮಹಾರಾಜನೇ, ನಿನ್ನ ಈ ಕೀರ್ತಿಯು ಮದೋದಕದಿಂದ ತುಂಬಿರುವ ದಿಗ್ಗಜಗಳ ಕಪೋಲಪ್ರದೇಶದಲ್ಲಿ ವಿಹರಿಸುತ್ತಿದೆ ; ಶತ್ರುಸ್ತ್ರೀಯರ ನೇತ್ರಕಮಲಗಳಲ್ಲಿ ಹಚ್ಚಿರುವ ಕಪ್ಪುಬಣ್ಣವನ್ನು ಅಳಿಸುತ್ತಿದೆ. ಆದರೂ ಚಂದ್ರನ ಕಿರಣಗಳಿಗೆ ಸದೃಶವೆನಿಸಿ ಪ್ರಕಾಶಿಸುತ್ತಿದೆ" ಇಲ್ಲಿ ಕೀರ್ತಿಯು ಬೆಳ್ಳಗಿದ್ದರೂ ಸಹ ದಿಗ್ಗಜಗಳ ಕಪೋಲದಲ್ಲಿರುವ ಮದೋದಕ, ಕಣ್ಣುಗಳಲ್ಲಿರುವ ಕಪ್ಪುಬಣ್ಣ ಇವುಗಳೊಡನೆ ಸೇರಿದ್ದರೂ ಅವುಗಳ ಮಸಿಯನ್ನು ಬಳಿದುಕೊಳ್ಳದೆ ಚಂದ್ರನ ಪ್ರಕಾಶಕ್ಕೆ ಸದೃಶವಾಗಿದೆ. ಹೀಗೆ ಜೊತೆಯ ವಸ್ತುಗಳ ಗುಣವನ್ನು ಕೀರ್ತಿಯು ಬಳಿದುಕೊಳ್ಳದೇ ಇರುವುದರಿಂದ ಇದು ಅತದ್ಗುಣವೆನಿಸಿದೆ.

ಒಂದು ವಸ್ತುವಿನ ಗುಣದಿಂದ ಬೇರೊಂದು ವಸ್ತುವಿನಲ್ಲೂ ಆ ಗುಣವು ಹುಟ್ಟುವುದೇ ತದ್ಗುಣಾಲಂಕಾರ. ಒಂದು ವಸ್ತುವಿನ ಗುಣದಿಂದ ಬೇರೊಂದರಲ್ಲಿ ಆ ಗುಣವು ಹುಟ್ಟದಿರುವುದೇ ಅತದ್ಗುಣಾಲಂಕಾರ. ಈ ಸ್ಥಿತಿಯಲ್ಲೇ ಉಲ್ಲಾಸ ಮತ್ತು ಅವಜ್ಞಾ ಅಲಂಕಾರಗಳು ಇರುವ ಪ್ರಯುಕ್ತ ಇವೆರಡಕ್ಕೂ ತದ್ಗುಣ ಅತದ್ಗುಣಗಳಿಗೂ ಭೇದವೇನು ? ಅದನ್ನು ಈಗ ತಿಳಿಸಲಾಗುವುದು. ಉಲ್ಲಾಸ ಮತ್ತು ಅವಜ್ಞಾ ಇವೆರಡರಲ್ಲಿರುವಂತೆ ತದ್ಗುಣ ಅತದ್ಗುಣಗಳಲ್ಲೂ ಗುಣ ಶಬ್ದವು ಬಂದಿದೆ ; ಆದರೆ ಇವೆರಡಕ್ಕೂ ಅರ್ಥದಲ್ಲಿ ವ್ಯತ್ಯಾಸವಿದೆ. ಉಲ್ಲಾಸ ಮತ್ತ ಅವಜ್ಞಾ ಈ ಅಲಂಕಾರಗಳಲ್ಲಿ ಗುಣಶಬ್ದವು ನಾಮಪದವೆನಿಸಿ ದೋಷಕ್ಕೆ ಎದುರಾಳಿಯಾಗಿದೆ. ಒಂದು ವಸ್ತುವಿನ ಗುಣದಿಂದ ಬೇರೊಂದು ವಸ್ತುವಿನಲ್ಲಿ ಗುಣವು ಹುಟ್ಟುವುದು ಅಥವಾ ಹುಟ್ಟದಿರುವುದು ಅಂದರೆ ಅದೇ ಗುಣವೇ ಬೇರೊಂದು ವಸ್ತುವಿನಲ್ಲಿ ಪ್ರವೇಶಿಸುವುದು ಅಥವಾ ಪ್ರವೇಶಿಸದಿರುವುದು ಎಂದು ಅರ್ಥವಲ್ಲ ; ಆದರೆ ಸದ್ಗುರುವಿನ ಉಪದೇಶದಿಂದ ಒಳ್ಳೆಯ ಸ್ವಭಾವದ ಶಿಷ್ಯನಿಗೆ ಜ್ಞಾನವು ಹುಟ್ಟುವಂತೆಯೂ, ಕೆಟ್ಟ ಸ್ವಭಾವದವನಿಗೆ ಜ್ಞಾನವು ಹುಟ್ಟದೇ ಇರುವಂತೆಯೂ ಒಂದು ವಸ್ತುವಿನ ಗುಣದಿಂದ ಹುಟ್ಟಿದ್ದೆಂದು ಭಾವಿಸಲ್ಪಟ್ಟ

ಬೇರೊಂದು ಗುಣವು ಮತ್ತೊಂದು ವಸ್ತುವಿನಲ್ಲಿ ಹುಟ್ಟುವುದೇ ಉಲ್ಲಾಸವೆಂದೂ. ಹಾಗೆ ಹುಟ್ಟದೇ ಇರುವುದೇ ಅವಜ್ಞೆ ಎಂದೂ ಹೇಳುವುದೇ ಗುಣೋದಯ, ತದನುದಯ ಈ ಪದಗಳಿಗೆ ಅರ್ಥವೆನಿಸಿದೆ. ತದ್ಗುಣ ಅತದ್ಗುಣ ಅಲಂಕಾರಗಳೆಲ್ಲಾದರೋ ಗುಣಶಬ್ದವು ರೂಪ ರಸ ಗಂಧ ಮೊದಲಾದ ಗುಣಗಳಂತೆ ಗುಣವಾಚಕವೆನಿಸಿದೆ. ಇಲ್ಲಿ ಒಂದು ವಸ್ತುವು ಮತ್ತೊಂದು ವಸ್ತುವಿನ ಗುಣವನ್ನು ಗ್ರಹಿಸುವುದು ಅಥವಾ ಗ್ರಹಿಸದಿರುವುದು ಎಂಬುದಕ್ಕೆ ಸ್ಫಟಿಕಮಣಿಯ ಹತ್ತಿರ ಕೆಂಪು ಹೂವನ್ನು ಇಟ್ಟರೆ ಮಣಿಯು ಕೆಂಪಾಗುವಂತೆಯೂ. ಕೊಳೆಯೊಡನೆ ಬೇರೊಂದು ವಸ್ತುವು ಸೇರಿದರೆ ಆ ವಸ್ತುವಿಗೆ ಬಟ್ಟೆಯ ಗುಣವು ಅಂಟದಿರುವಂತೆಯೂ ಇಲ್ಲಿ ಇಷ್ಟೇ ಅರ್ಥವನ್ನು ಹೇಳಬೇಕು. ಒಂದು ವಸ್ತುವಿನ ಗುಣದಿಂದ ಮತ್ತೊಂದು ವಸ್ತುವಿಗೆ (ಅನುರಂಜನ) ಪರಿಣಾಮವುಂಟಾಗುವುದೇ ತದ್ಗುಣವೆಂದೂ. ಆ ವಸ್ತುವಿನ ಗುಣದಿಂದ ಮತ್ತೊಂದು ವಸ್ತುವಿಗೆ ಪರಿಣಾಮವಾಗದಿರುವುದೇ ಅತದ್ಗುಣವೆಂದೂ ಇಲ್ಲಿ ತಿಳಿದುಬರುತ್ತದೆ. ಹಾಗೆಯೇ ಇಲ್ಲಿ ಉದಾಹರಣೆಗಳನ್ನು ತಿಳಿಸಿಯಾಗಿದೆ. ಅವಜ್ಞಾಲಂಕಾರ ಮತ್ತು ಅತದ್ಗುಣಾಲಂಕಾರ ಇವೆರಡೂ ವಿಶೇಷೋಕ್ತಿಯ ಬಗೆಗಳೆಂದು ಕಂಡುಬರುತ್ತದೆ. "ಪುಷ್ಕಲವಾದ ಕಾರಣವಿದ್ದರೂ ಕಾರ್ಯವು ಹುಟ್ಟದಿರುವುದೇ ವಿಶೇಷೋಕ್ತಿ ಎನಿಸುತ್ತದೆ." ಎಂಬ ಈ ಬಗೆಯ ಲಕ್ಷಣವು ಅಲ್ಲಿ ಅನ್ವಯಿಸುತ್ತದೆ. ಒಂದು ವಸ್ತುವಿನ ಜೊತೆಯಲ್ಲಿ ಮತ್ತೊಂದು ವಸ್ತುವಿದ್ದರೂ ಇದಕ್ಕೆ ಅದರ ಗುಣದಿಂದ ಏನೊಂದು ಪರಿಣಾಮವೂ ಆಗದೇ ಇರುವುದರಿಂದ ಇವು ವಿಶೇಷೋಕ್ತಿಯ ವಿಶೇಷಗಳೆನಿಸಲರ್ಹವಾಗಿವೆ. ಆದರೂ ಉಲ್ಲಾಸಕ್ಕೂ ತದ್ಗುಣಕ್ಕೂ ಎದುರಾಳಿಯಾಗಿರುವುದರಿಂದ ಇವು ಬೇರೆ ಅಲಂಕಾರಗಳೆನಿಸಿವೆ.

## ೭೮ ಅನುಗುಣಾಲಂಕಾರ

ಪ್ರಾಕ್ಸಿದ್ಧಸ್ವಗುಣೋತ್ಕರ್ಷೋಽನುಗುಣಃ ಪರಸನ್ನಿಧೇಃ ।
ನೀಲೋತ್ಪಲಾನಿ ದಧತೇ ಕಟಾಕ್ಷೈರತಿನೀಲತಾಮ್ ॥ ೧೪೪ ॥

ಯಥಾ—

ಕಪಿರಪಿ ಚ ಕಾಪಿಶಾಯನಮದಮತ್ತೋ ವೃಶ್ಚಿಕೇನ ಸಂದಷ್ಟಃ ।
ಅಪಿ ಚ ಪಿಶಾಚಗ್ರಸ್ತಃ ಕಿಂ ಬ್ರೂಮೋ ವೈಕೃತಂ ತಸ್ಯ ॥
ಅತ್ರ ಕಪಿತ್ವಜಾತ್ಯಾ ಸ್ವತಃಸಿದ್ಧಸ್ಯ ವೈಕೃತಸ್ಯ ಮದ್ಯಾದಿಭಿರುತ್ಕರ್ಷಃ

ಒಂದು ವಸ್ತುವು ಬೇರೊಂದು ವಸ್ತುವಿನ ಜೊತೆಯಲ್ಲಿದ್ದು ತನ್ನ ಹಿಂದಿನ ಗುಣವನ್ನು ಹೆಚ್ಚಿಸಿಕೊಳ್ಳುವುದೇ ಅನುಗುಣಾಲಂಕಾರವೆನಿಸುವುದು. "ಕಣ್ಣೈದಿಲೆಗಳು ಓರೆನೋಟಗಳ ಸಂಪರ್ಕದಿಂದ ಹೆಚ್ಚುನೀಲವರ್ಣವನ್ನು ಪಡೆದಿವೆ" ಇಲ್ಲಿ

ಕನ್ನೈದಿಲೆಗಳು ಮೊದಲೇ ನೀಲವರ್ಣದಲ್ಲಿದ್ದು ಓರೆನೋಟಗಳ ಸಂಪರ್ಕದಿಂದ ತಮ್ಮ ನೀಲವರ್ಣವನ್ನೇ ಹೆಚ್ಚಿಸಿಕೊಳ್ಳುವುದರಿಂದ ಇದು ಅನುಗುಣಾಲಂಕಾರವೆನಿಸಿದೆ. "ಕಪಿಯು ಹೆಂಡದ ಮದದಿಂದ ಮದಿಸಿ ಚೇಳಿನಿಂದ ಕಡಿಸಿಕೊಂಡು ಪಿಶಾಚಿಯ ಕೈಗೆ ಸಿಕ್ಕಿದರೆ ಅದರ ವಿಕಾರವನ್ನು ಏನೆಂದು ಹೇಳೋಣ". ಇಲ್ಲಿ ಕಪಿಯು ಚೇಳು ಪಿಶಾಚಿಗಳ ಸಂಪರ್ಕದಿಂದ ತನ್ನ ಜಾತಿಗೆ ಸಹಜವಾದ ವಿಕಾರವನ್ನು ಹೆಚ್ಚಿಸಿಕೊಳ್ಳುವ ಪ್ರಯುಕ್ತ ಇದು ಅನುಗುಣಾಲಂಕಾರವೆನಿಸಿದೆ.

## ೭೯. ಮೀಲಿತಾಲಂಕಾರ

ಮೀಲಿತಂ ಯದಿ ಸಾದೃಶ್ಯಾತ್ ಭೇದ ಏವ ನ ಲಕ್ಷ್ಯತೇ ।
ರಸೋ ನಾಲಕ್ಷಿ ಲಾಕ್ಷಾಯಾಶ್ಚರಣೇ ಸಹಜಾರುಣೇ ॥ ೧೪೫ ॥

ಯಥಾ ವಾ—

ಮಲ್ಲಿಕಾಮಾಲಭಾರಿಣ್ಯಃ ಸರ್ವಾಂಗೀಣಾರ್ದ್ರಚಂದ್ರನಾಃ ।
ಕ್ಷಾಮವತ್ಯೋ ನ ಲಕ್ಷ್ಯಂತೇ ಜ್ಯೋತ್ಸ್ನಾಯಾಮಭಿಸಾರಿಕಾ ॥

ಅತ್ರ ಆದ್ಯೇ ಚರಣಾಲಕ್ತರಸಯೋಃ ಅರುಣಿಮಗುಣಸಾಮ್ಯಾತ್ ಭೇದಾನ-ಧ್ಯವಸಾಯಃ. ದ್ವಿತೀಯೋದಾಹರಣೇ ಚಂದ್ರಿಕಾಭಿಸಾರಿಕಾಣಾಂ ಧವಲಿಮಗುಣ-ಸಾಮ್ಯಾತ್ ಭೇದಾನಧ್ಯವಸಾಯಃ.

ಎರಡು ವಸ್ತುಗಳಿಗೆ ಅನೇಕ ಅಂಶಗಳಲ್ಲಿ ಸಾದೃಶ್ಯವಿರುವುದರಿಂದ ಪರಸ್ಪರ ಭೇದವು ಕಾಣದಿರುವುದೇ ಮೀಲಿತಾಲಂಕಾರವೆನಿಸುವುದು. ಎರಡಕ್ಕೂ ಭೇದ ವಿದ್ದರೂ ಸಾದೃಶ್ಯದಿಂದ ಭೇದವು ಕಾಣದಂತೆ ಸೇರುವುದೇ ಒಂದು ವಿಚಿತ್ರ' ಅದನ್ನು ಇಲ್ಲಿ ಕಾಣಬಹುದು. "ಕಾಲ ಸಹಜವಾಗಿ ಕೆಂಪಾಗಲು ಅದಕ್ಕೆ ಹಚ್ಚಿದ ಲಾಕ್ಷಾರಸವೇ ಕಾಣುವುದಿಲ್ಲ" ಕಾಲು ಕೆಂಪಾಗಲು ರಸವನ್ನು ಹಚ್ಚಬೇಕು, ಅದು ಕೆಂಪಾಗಿಯೇ ಇರುವುದರಿಂದ ಅದಕ್ಕೂ ಲಾಕ್ಷಾರಸಕ್ಕೂ ಕೆಂಪು ಬಣ್ಣದ ಸಾದೃಶ್ಯವಿರುವ ಪ್ರಯುಕ್ತ ಅವೆರಡಕ್ಕೂ ಭೇದವೇ ಕಾಣುವುದಿಲ್ಲ. "ಬೆಳದಿಂಗಳಿನಲ್ಲಿ ಅಭಿಸಾರಿಕಾ ಸ್ತ್ರೀಯರು ಮಲ್ಲಿಗೆ ಹೂವಿನ ಮಾಲೆಯನ್ನು ಧರಿಸಿ ದೇಹದ ಎಲ್ಲಾ ಅವಯವಗಳಲ್ಲೂ ಶ್ರೀಗಂಧವನ್ನು ಹಚ್ಚಿಕೊಂಡು ಬಿಳಿಯ ಬಟ್ಟೆಯನ್ನು ಧರಿಸಿ ಬೇರೆಯಾಗಿ ಕಾಣ ಬರುವುದಿಲ್ಲ." ಇಲ್ಲಿ ಅಭಿಸಾರಿಕೆಯರು ಬಿಳಿಯ ಬಟ್ಟೆಯನ್ನು ಧರಿಸಿ ಬೆಳ್ಳಗಿರುವುದರಿಂದ ಅವರಿಗೂ ಚಂದ್ರಿಕೆಗೂ ಸಾದೃಶ್ಯವಿರುವ ಪ್ರಯುಕ್ತ ಅವರಿಗೂ ಅದಕ್ಕೂ ಭೇದವೇ ಕಾಣುವುದಿಲ್ಲ. ಮೊದಲನೆಯ ಉದಾಹರಣದಲ್ಲಿ ಪಾದಕ್ಕೂ ಅಲಕ್ತಕರಸಕ್ಕೂ

ಕೆಂಪು ಬಣ್ಣದ ಸಾಮ್ಯವಿರುವುದರಿಂದ ಭೇದವು ತೋರುವುದಿಲ್ಲ. ಎರಡನೆಯ ಉದಾಹರಣದಲ್ಲಿ ಚಂದ್ರಿಕೆಗೂ ಅಭಿಸಾರಿಕೆಯರಿಗೂ ಧಾವಲ್ಯವೆಂಬ ಗುಣವು ಸಮಾನವಾಗಿರುವುದರಿಂದ ಭೇದವು ಕಾಣುವುದಿಲ್ಲ.

## ೮೦ ಸಾಮಾನ್ಯಾಲಂಕಾರ

ಸಾಮಾನ್ಯಂ ಯದಿ ಸಾದೃಶ್ಯಾದ್ವಿಶೇಷೋ ನೋಪಲಕ್ಷ್ಯತೇ ।
ಪದ್ಮಾಕರಪ್ರವಿಷ್ಟಾನಾಂ ಮುಖಂ ನಾಲಕ್ಷಿ ಸುಭ್ರುವಾಮ್ ॥ ೧೪೬ ॥

ಯಥಾ ವಾ—

ರತ್ನಸ್ತಂಭೇಷು ಸಂಕ್ರಾಂತೈಃ ಪ್ರತಿಬಿಂಬಶತೈರ್ವೃತಃ ।
ಲಂಕೇಶ್ವರಃ ಸಭಾಮಧ್ಯೇ ನ ಜ್ಞಾತೋ ವಾಲಿಸೂನುನಾ ॥

ಮೀಲಿತಾಲಂಕಾರೇ ಏಕೇನ ಅಪರಸ್ಯ ಭಿನ್ನಸ್ವರೂಪಾನವಭಾಸರೂಪಂ ಮೀಲನಂ ಕ್ರಿಯತೇ. ಸಾಮಾನ್ಯಾಲಂಕಾರೇ ತು ಭಿನ್ನಸ್ವರೂಪಾವಭಾಸೇಽಪಿ ವ್ಯಾವರ್ತಕವಿಶೇಷೋ ನೋಪಲಕ್ಷ್ಯತ ಇತಿ ಭೇದಃ. ಮೀಲಿತೋದಾಹರಣೇ ಹಿ ಚರಣಾದೇರ್ವಸ್ತ್ವಂತರತ್ವೇನ ಆಗಂತುಕಂ ಯಾವಕಾದಿ ನ ಭಾಸತೇ. ಸಾಮಾನ್ಯೋದಾಹರಣೇ ತು ಪದ್ಮಾನಾಂ ಮುಖಾನಾಂ ಚ ವ್ಯಕ್ತ್ಯಂತರತಯಾ ಭಾನಮಸ್ತ್ಯೇವ, ಯಥಾ ರಾವಣದೇಹಸ್ಯ ತತ್ಪ್ರತಿಬಿಂಬಾನಾಂ ಚ, ಕಿಂತು 'ಇದಂ ಪದ್ಮಂ ಇದಂ ಮುಖಂ, ಅಯಂ ಬಿಂಬೋಽಯಂ ಪ್ರತಿಬಿಂಬಃ' ಇತಿ ವಿಶೇಷಃ ಪರಂ ನೋಪಲಕ್ಷ್ಯತೇ. ಅತ ಏವ ಭೇದತಿರೋಧಾನಾತ್ ಮೀಲಿತಂ; ತದತಿರೋಧಾನೇಽಪಿ ಸಾಮ್ಯೇನ ವ್ಯಾವರ್ತಕಾನವಭಾಸೇ ಸಾಮಾನ್ಯಮಿತ್ಯುಭಯೋರಪಿ ಅನ್ವರ್ಥತಾ, ಕೇಚಿತ್ತು ವಸ್ತುದ್ವಯಸ್ಯ ಲಕ್ಷಣಸಾಮ್ಯಾತ್ ತಯೋಃ ಕೇನಚಿತ್ ಬಲೀಯಸಾ ಇತರಸ್ಯ ಸ್ವರೂಪತಿರೋಧಾನೇ ಮೀಲಿತಂ ಸ್ವರೂಪಪ್ರತೀತಾವಪಿ ಗುಣಸಾಮ್ಯಾತ್ ಭೇದತಿರೋಧಾನೇ ಸಾಮಾನ್ಯಮ್. ಏವಂ ಚ-

ಅಪಾಂಗತರಲೇ ದೃಶೌ ತರಲವಕ್ರವರ್ಣಾ ಗಿರೋ
ವಿಲಾಸಭರಮಂಥರಾ ಗತಿರತೀವ ಕಾಂತಂ ಮುಖಮ್ ।
ಇತಿಸ್ಫುರಿತಮಂಗಕೇ ಮೃಗದೃಶಾಂ ಸ್ವತೋ ಲೀಲಯಾ
ತದತ್ರ ನ ಮದೋದಯಃ ಕೃತಪದೋಽಪಿ ಸಂಲಕ್ಷ್ಯತೇ ॥

ಇತ್ಯತ್ರ ಮೀಲಿತಮಲಂಕಾರಃ ಅತ್ರ ಹಿ ದೃಕ್ತಾರಲ್ಯಾದೀನಾಂ ನಾರೀವಪುಷಃ ಸಹಜಧರ್ಮತ್ವಾತ್ ಮದೋದಯಕಾರ್ಯತ್ವಾಚ್ಚ ತದುಭಯಸಾಧಾರಣ್ಯಾತ್

ಉತ್ಕೃಷ್ಟತಾರಳ್ಯಾದಿಯೋಗಿನಾ ವಪುಷಾ ಮದೋದಯಸ್ಯ ಸ್ವರೂಪಮೇವ-ತಿರೋಧೀಯತೇ, ಲಿಂಗಸಾಧಾರಣ್ಯೇನ ತದ್ವಾಜ್ಞಾನೋಪಾಯಾಭಾವಾತ್. ಮಲ್ಲಿಕಾ-ಮಾಲಭಾರಿಣ್ಯ ಇತ್ಯಾದಿಷು ತು ಸಾಮಾನ್ಯಾಲಂಕಾರ ಇತ್ಯಾಹುಃ. ತನ್ಮತೇ 'ಪದ್ಮಾ-ಕರಪ್ರವಿಷ್ಟಾನಾಂ' ಇತ್ಯಾದೌ ಭೇದಾಧ್ಯವಸಾಯೇಽಪಿ ವ್ಯಾವರ್ತಕಾಸ್ಫುರಣೇನ ಅಲಂಕಾರಾಂತರೇಣ ಭಾವ್ಯಂ ಸಾಮಾನ್ಯಾಲಂಕಾರಾಂತರಭೇದೇನ ವಾ. ಪೂರ್ವಸ್ಮಿನ್ಮತೇ ಸ್ವರೂಪತಿರೋಧಾನೇ ಅಲಂಕಾರಾಂತರೇಣ ಭಾವ್ಯಂ ಮೀಲಿತಾವಾಂತರ ಭೇದೇನ ವಾ.

ಎರಡು ವಸ್ತುಗಳಿಗೆ ಪರಸ್ಪರ ಸಾದೃಶ್ಯವಿರುವುದರಿಂದ ಅವಕ್ಕೆ ಭೇದವು ಕಾಣಿಸದಿರುವುದೇ ಸಾಮಾನ್ಯಾಲಂಕಾರವೆನಿಸುವುದು. "ಸರೋವರವನ್ನು ಪ್ರವೇಶಿಸಿದ ಸುಂದರಿಯರ ಮುಖವೇ ಕಾಣಿಸುತ್ತಿಲ್ಲ", ಕಮಲಕ್ಕೂ ಮುಖಕ್ಕೂ ಸಾದೃಶ್ಯ ವಿರುವುದರಿಂದ ಇವೆರಡಕ್ಕೂ ಇರುವ ವೈಲಕ್ಷಣ್ಯವು ಕಾಣುತ್ತಿಲ್ಲ. ಆದ್ದರಿಂದ ಇದು ಸಾಮಾನ್ಯಾಲಂಕಾರವೆನಿಸಿದೆ.

"ರತ್ನಸ್ತಂಭಗಳಲ್ಲಿ ಕಾಣಿಸುತ್ತಿದ್ದ ನೂರಾರು ನೆರಳುಗಳಿಂದ ಕೂಡಿದ ರಾವಣನನ್ನು ಸಭೆಯ ಮಧ್ಯದಲ್ಲಿ ಅಂಗದನಿಗೆ ಗುರುತಿಸಲಿಕ್ಕೆ ಆಗಲಿಲ್ಲ." ರಾವಣನಿಗೂ ರತ್ನಸ್ತಂಭಗಳಲ್ಲಿ ಕಾಣಿಸುತ್ತಿದ್ದ ಅವನ ನೆರಳುಗಳಿಗೂ ಸಾದೃಶ್ಯವಿದ್ದುದರಿಂದ ಇವನೇ ರಾವಣನೆಂದು ನಿಷ್ಕರ್ಷಿಸಲಿಕ್ಕೆ ಆಗಲಿಲ್ಲವೆಂದು ಇಲ್ಲಿ ಹೇಳಿದೆ, ಹೀಗೆ ಸಾದೃಶ್ಯದ ಮೂಲಕ ವ್ಯಕ್ತಿವಿಶೇಷವನ್ನು ಗುರುತಿಸಲಿಕ್ಕಾಗಿದೇ ಇರುವ ಪ್ರಯುಕ್ತ ಇದು ಸಾಮಾನ್ಯಾಲಂಕಾರವೆನಿಸಿದೆ. ಮೀಲಿತಾಲಂಕಾರದಲ್ಲಿ ಎರಡು ವಸ್ತುಗಳಿಗೆ ಸ್ವರೂಪವೈಲಕ್ಷಣ್ಯವನ್ನು ತಿಳಿಯಲಿಕ್ಕಾಗದೇ ಇರುವಂತೆ ಅವು ಸೇರಿಕೊಂಡಿರುವುದನ್ನು ಹೇಳಿದೆ. ಸಾಮಾನ್ಯಾಲಂಕಾರದಲ್ಲಾದರೂ ಎರಡು ವಸ್ತುಗಳಿಗೂ ಬೇರೆ ಬೇರೆ ಸ್ವರೂಪವುಂಟೆಂಬುದು ತಿಳಿದರೂ ಸಹ ಒಂದನ್ನು ಮತ್ತೊಂದರಿಂದ ಪ್ರತ್ಯೇಕಿಸುವ ವಿಶೇಷವು ಕಂಡುಬರುವುದಿಲ್ಲ. ಇದೇ ಇವೆರಡಕ್ಕೂ ಇರುವ ಭೇದ. ಮೀಲಿತಾಲಂಕಾರಕ್ಕೆ ಹೇಳಿದ ಉದಾಹರಣದಲ್ಲಿ ಕಾಲಿಗೆ ಲಾಕ್ಷಾರಸವನ್ನು ಹಚ್ಚಿದ್ದರೂ ಅದು ಕಾಲಿನಿಂದ ಬೇರೆ ಎಂಬುದಾಗಿಯೇ ಕಾಣಿಸುವುದಿಲ್ಲ. ಸಾಮಾನ್ಯಾಲಂಕಾರದ ಉದಾಹರಣದಲ್ಲಾದರೋ ಮುಖಗಳಿಗೂ ಕಮಲಗಳಿಗೂ ವೈಯಕ್ತಿಕಭೇದವಿದ್ದೇ ಇದೆ. ರಾವಣನ ದೇಹಕ್ಕೂ ಅದರ ನೆರಳುಗಳಿಗೂ ಭೇದವಿದ್ದೇ ಇದೆ ; ಆದರೂ ಸಹ 'ಇದು ಕಮಲ, ಇದು ಮುಖ,' 'ಇದು ಬಿಂಬ, ಇದು ಪ್ರತಿಬಿಂಬ' ಎಂಬ ಭೇದವು ಮಾತ್ರ ಕಂಡುಬರುವುದಿಲ್ಲ, ಹೀಗೆ ಎರಡು ವಸ್ತುಗಳಿಗೆ ಭೇದವೇ ಮರೆಯಾಗುವುದರಿಂದ ಮೀಲಿತಾಲಂಕಾರವು ಹೊಂದುತ್ತದೆ, ಎರಡು ವಸ್ತುಗಳಿಗೆ

ವೈಯಕ್ತಿಕ ಭೇದವು ತೊಲಗದೆ ಇದ್ದರೂ ಸಹ ಅದಕ್ಕೆ ಸಾದೃಶ್ಯವಿದ್ದು ಆದರಿಂದ ಆವೆರಡು ವಸ್ತುಗಳ ಪ್ರತ್ಯೇಕತೆಯೂ ತೋರದೇ ಇದ್ದರೆ ಆಗ ಸಾಮಾನ್ಯಾಲಂಕಾರವನ್ನೇ ಹೇಳಬೇಕು. ಹೀಗೆ ಎರಡು ಅಲಂಕಾರಗಳೂ ಅನ್ವರ್ಥವೆನಿಸಿವೆ.

ಎರಡು ವಸ್ತುಗಳಿಗೂ ಹೇಳುವ ಗುರುತು ಒಂದೇ ಆಗಿರುವುದರಿಂದ ಅವೆರಡರಲ್ಲಿ ಬಲಿಷ್ಠವಾದ ಒಂದು ವಸ್ತುವಿನಿಂದ ಬೇರೊಂದು ವಸ್ತುವಿನ ಸ್ವರೂಪವು ಮರೆಯಾಗುವುದಾದರೆ ಅಲ್ಲಿ ಮೀಲಿತವನ್ನೂ, ಒಂದರಿಂದ ಬೇರೊಂದು ವಸ್ತುವಿನ ಸ್ವರೂಪವು ಮರೆಯಾಗದೆ ಇದ್ದರೂ ಗುಣಸಾದೃಶ್ಯದಿಂದ ಭೇದವು ತೊಲಗಿದರೆ ಅಲ್ಲಿ ಸಾಮಾನ್ಯಾಲಂಕಾರವನ್ನೂ, ಹೇಳಬೇಕೆಂದು ಕೆಲವರು ತಿಳಿಸಿದ್ದಾರೆ. ಹೀಗೆ ಹೇಳಿದ್ದರಿಂದ ಮುಂದಿನ ಶ್ಲೋಕವು ಮೀಲಿತಾಲಂಕಾರಕ್ಕೆ ಉದಾಹರಣವಾಗುತ್ತದೆ. "ಕಣ್ಣಿನ ಓರೆ ನೋಟದಲ್ಲಿ ಚಾಂಚಲ್ಯವಿದೆ, ಅವಸರದಲ್ಲಿ ಹೇಳಬೇಕಾದ ಮಾತನ್ನು ಹೇಳಿದ್ದರಿಂದ ವಕ್ರೋಕ್ತಿ ಎಂಬ ಚಮತ್ಕಾರವಿದೆ, ಅವಸರದಲ್ಲಿ ಉಚ್ಚರಿಸಿದ್ದರಿಂದ ಮಾತುಗಳು ವಕ್ರವಾಗಿವೆ, ಹಾವಭಾವವಿಲಾಸಗಳಿಂದ ಗಮನವು ಬಿಗಿಯಾಗಿದೆ, ಮುಖವು ಬಹಳ ಸುಂದರವಾಗಿದೆ. ಈ ಪ್ರಕಾಶದಿಂದ ಸ್ತ್ರೀಯರ ಅವಯವದಲ್ಲಿ ಲೀಲೆ ಎಂಬುದು ಸಹಜವಾಗಿ ಹೊರಬಿದ್ದಿದೆ. ಹೀಗೆ ಇಲ್ಲಿ ಮದವು ಅವಕಾಶವನ್ನು ಕಲ್ಪಿಸಿಕೊಂಡು ಬಂದಿದ್ದರೂ ಕಂಡುಬರುತ್ತಿಲ್ಲ" ಇಲ್ಲಿ ಮೀಲಿತಾಲಂಕಾರವಿದೆ. ಇಲ್ಲಿ ನೇತ್ರ ಚಾಪಲ್ಯ ಮೊದಲಾದವು ಸ್ತ್ರೀಯರಲ್ಲಿ ಸಹಜವೆನಿಸಿದ್ದರಿಂದಲೂ ಮದದಿಂದ ಆಗತಕ್ಕವಾದ್ದರಿಂದಲೂ ಇವೆರಡು ಸನ್ನಿವೇಶಗಳಿಗೂ ಅನ್ವಯಿಸುವ ಪ್ರಯುಕ್ತ ಹೆಚ್ಚಿನ ಚಾಪಲ್ಯದಿಂದ ಕೂಡಿರುವ ದೇಹದಿಂದ ಮದೋದಯದ ಸ್ವರೂಪವೇ ಮರೆಯಾಗುತ್ತದೆ. ಆದ್ದರಿಂದ ಇದು ಮೀಲಿತವೇ ಆಗುವುದು.

ಮಲ್ಲಿಕಾಮಾಲಭಾರಿಣ್ಯ: ಎಂಬಲ್ಲಿ ಮಾತ್ರ ಸಾಮಾನ್ಯಾಲಂಕಾರವನ್ನೇ ಹೇಳಬೇಕು. ಹಾಗೆ ಅವರು ಅಭಿಪ್ರಾಯಪಟ್ಟಿರುವರು. ಅವರ ಮತದಲ್ಲಿ 'ಪದ್ಮಾಕರ ಪ್ರವಿಷ್ಟಾನಾಂ' ಎಂಬಲ್ಲಿ ಕಮಲಕ್ಕೂ ಮುಖಕ್ಕೂ ಭೇದಭಾವವಿದ್ದರೂ ಸಹ ಒಂದನ್ನು ಒಂದರಿಂದ ಪ್ರತ್ಯೇಕಿಸುವ ಧರ್ಮವು ಕಾಣದೇ ಇರುವುದರಿಂದ ಅದು ಬೇರೊಂದು ಅಲಂಕಾರವೇ ಆಗಬೇಕು. ಅಥವಾ ಸಾಮಾನ್ಯಾಲಂಕಾರದ ಒಂದು ಬಗೆಯಾಗಬೇಕು. ಚಂದ್ರಾಲೋಕಕಾರನ ಮತದಲ್ಲಿ ಸದೃಶವಸ್ತುವಿನ ಸ್ವರೂಪವು ಮರೆಯಾಗುವುದಾದರೆ ಬೇರೆ ಅಲಂಕಾರವೇ ಆಗಬೇಕು ಅಥವಾ ಮೀಲಿತದ ಒಂದು ಬಗೆಯಾಗಬೇಕು.

## ೮೧/೮೨. ಉನ್ಮೀಲಿತ ವಿಶೇಷಕಾಲಂಕಾರಗಳು

ಭೇದವೈಶಿಷ್ಟ್ಯಯೋಃ ಸ್ಫೂರ್ತಾವುನ್ಮೀಲಿತವಿಶೇಷಕೌ ।
ಹಿಮಾದ್ರಿಂ ತ್ವದ್ಯಶೋಮಗ್ನಂ ಸುರಾಃ ಶೀತೇನ ಜಾನತೇ ॥
ಲಕ್ಷಿತಾನ್ಯುದಿತೇ ಚಂದ್ರೇ ಪದ್ಮಾನಿ ಚ ಮುಖಾನಿ ಚ ॥ ೧೪೭ ॥

ಮೀಲಿತಸಾಮ್ಯಾದೇನ ಭೇದಾನಧ್ಯವಸಾಯೇ ಪ್ರಾಪ್ತೇ ಕುತೋಽಪಿ ಹೇತೋಃ ಭೇದಸ್ಫೂರ್ತೌ ಮೀಲಿತಪ್ರತಿದ್ವಂದ್ವಿ ಉನ್ಮೀಲಿತಮ್. ತಥಾ ಸಾಮಾನ್ಯರೀತ್ಯಾ ವಿಶೇಷಾಸ್ಫುರಣೇ ಪ್ರಾಪ್ತೇ ಕುತಶ್ಚಿತ್ಕಾರಣಾತ್ ವಿಶೇಷಸ್ಫೂರ್ತೌ ತತ್ಪ್ರತಿದ್ವಂದ್ವೀ ವಿಶೇಷಕಃ. ಕ್ರಮೇಣ ಉದಾಹರಣದ್ವಯಮ್. ತದ್ಗುಣರೀತ್ಯಾಪಿ ಭೇದಾನಧ್ಯವಸಾಯಪ್ರಾಪ್ತೌ ಉನ್ಮೀಲಿತಂ ದೃಶ್ಯತೇ.

ಯಥಾ—

ನೃತ್ಯದ್ಭರ್ಗಾಟ್ಟಹಾಸಪ್ರಸರಸಹಚರೈಸ್ತಾವಕೀನೈರ್ಯಶೋಭಿಃ
ಧಾವಳ್ಯಂ ನೀಯಮಾನೇ ತ್ರಿಜಗತಿ ಪರಿತಃ ಶ್ರೀನೃಸಿಂಹಕ್ಷಿತೀಂದ್ರ ।
ನೇದೃಗ್ಯದ್ಯೇಷ ನಾಭೀಕಮಲಪರಿಮಲಪ್ರೌಢಿಮಾಸಾದಯಿಷ್ಯತ್
ದೇವಾನಾಂ ನಾಥವಿಷ್ಯತ್ಕಥಮಪಿ ಕಮಲಾಕಾಮುಕಸ್ಯಾವಬೋಧಃ ॥

ಕಾಕಃ ಕೃಷ್ಣಃ ಪಿಕಃ ಕೃಷ್ಣಃ ಕೋ ಭೇದಃ ಪಿಕಕಾಕಯೋಃ ।
ವಸಂತಸಮಯೇ ಪ್ರಾಪ್ತೇ ಕಾಕಃ ಕಾಕಃ ಪಿಕಃ ಪಿಕಃ ॥

ಇದಂ ವಿಶೇಷಕಸ್ಯೋದಾಹರಣಮ್. ಅತ್ರ ದ್ವಿತೀಯಕಾಕಪಿಕಶಬ್ದೌ ಕಾಕತ್ವೇನ ಜ್ಞಾತಃ ಪಿಕತ್ವೇನ ಜ್ಞಾತಃ ಇತ್ಯರ್ಥಾಂತರಸಂಕ್ರಮಿತವಾಚ್ಯೌ.

ಯಥಾ ವಾ—

ವಾರಾಣಸೀವಾಸವತಾಂ ಜನಾನಾಂ ಸಾಧಾರಣೇ ಶಂಕರಲಾಂಛನೇಽಪಿ ।
ಪಾರ್ಥಪ್ರಹಾರವ್ರಣಮುತ್ತಮಾಂಗಂ ಪ್ರಾಚೀನಮೀಶಂ ಪ್ರಕಟೀಕರೋತಿ ॥

ಎರಡು ವಸ್ತುಗಳಿಗೆ ಪರಸ್ಪರ ಭೇದವು ತೋರುವುದಾದರೆ ಅದು ಉನ್ಮೀಲಿತವೆನಿಸುವುದು. ಹಾಗೆಯೇ ಅವೆರಡಕ್ಕೂ ವಿಜಾತೀಯವೆಂಬ ಭೇದವು ತೋರುವುದಾದರೆ ಅದು ವಿಶೇಷಕವೆನಿಸುವುದು. "ಹಿಮಾಲಯವು ನಿನ್ನ ಕೀರ್ತಿಯೊಳಗೆ ಭೇದವಿಲ್ಲದಂತೆ ಸೇರಿಕೊಂಡಿರುವುದರಿಂದ ಅದನ್ನು ದೇವತೆಗಳು ಶೈತ್ಯದ ಅನುಭವದಿಂದ ತಿಳಿಯುತ್ತಾರೆ. ಚಂದ್ರನು ಉದಯವಾದಾಗಲೇ ಕಮಲಗಳು ಇವು; ಮುಖಗಳು ಇವು ಎಂಬುದು ಸ್ಪಷ್ಟವಾಗುತ್ತದೆ." ಇಲ್ಲಿ ಮೀಲಿತಾಲಂಕಾರದ ಪ್ರಕಾರ ಹಿಮಾಲಯಕ್ಕೂ ರಾಜನ ಕೀರ್ತಿಗೂ ಭೇದವೇ ತಿಳಿಯದೆ, ಇರಲು ಯಾವುದೋ ಒಂದು ಕಾರಣದಿಂದ ಅಂದರೆ ಶೈತ್ಯದಿಂದ ಅವೆರಡಕ್ಕೂ ಭೇದವು ತಿಳಿದುಬರುವ ಪ್ರಯುಕ್ತ ಉನ್ಮೀಲಿತವು ಮೀಲಿತಕ್ಕೆ ಎದುರಾಳಿ ಎನಿಸಿದೆ. ಸಾಮಾನ್ಯಾಲಂಕಾರದ ಪ್ರಕಾರ ಸರೋವರದಲ್ಲಿರುವ ಸ್ತ್ರೀಯರ ಮುಖಕ್ಕೂ ಕಮಲಕ್ಕೂ ವಿಜಾತೀಯವಾದ ಭೇದವೇ ಕಾಣದಿರುವಾಗ ಯಾವುದೋ ಕಾರಣದಿಂದ ಚಂದ್ರೋದಯದ ಮೂಲಕ ಮುಖಕಮಲಗಳೆರಡಕ್ಕೂ ವಿಶೇಷವು (ವಿಜಾತೀಯ ಭೇದವು) ಕಾಣಬರುವುದರಿಂದ ವಿಶೇಷಕವು ಸಾಮಾನ್ಯಕ್ಕೆ

ಎನುರಾಳಿ ಎನಿಸಿದೆ. ಇವೆರಡಕ್ಕೂ ಉದಾಹರಣೆಗಳನ್ನು ಮೂಲದಲ್ಲಿ ಕೊಡಲಾಗಿದೆ. ತದ್ಗುಣಾಲಂಕಾರದ ಪ್ರಕಾರ ಎರಡು ವಸ್ತುಗಳ ಭೇದಜ್ಞಾನವಾಗದಿದ್ದರೆ ಉನ್ಮೀಲ ಕಾಲಂಕಾರವೇ ಆಗುತ್ತದೆ. ಇದಕ್ಕೆ ಉದಾಹರಣವನ್ನು ಕೊಡುತ್ತಾನೆ : "ನರ್ತನ ಮಾಡುವ ಈಶ್ವರನ ಅಟ್ಟಹಾಸದ ವ್ಯಾಪ್ತಿಗೆ ಸದೃಶವಾದ ನಿನ್ನ ಯಶಸ್ಸಿನಿಂದ ಪ್ರಪಂಚವೆಲ್ಲವೂ ಎಲ್ಲಾ ಕಡೆಯಲ್ಲೂ ಬಿಳುಪಾಗಿರುವಾಗ ಇದರಂತೆ ಬಿಳಿಯ ಬಣ್ಣದ ನಾಭಿಕಮಲದ ಸುಗಂಧದ ಪ್ರೌಢಿಮೆಯನ್ನು ವಿಷ್ಣುವು ಹೊಂದದೇ ಹೋಗಿದ್ದರೆ ಅವನ ಎಚ್ಚರಿಕೆಯು ದೇವತೆಗಳಿಗೆ ಹೇಗಾದರೂ ತಿಳಿಯುತ್ತಲೇ ಇರಲಿಲ್ಲ." ಯಶಸ್ಸಿನ ಸಾಮ್ಯವು ನಾರಾಯಣನಲ್ಲಿ ಬಂದಿತ್ತಾದರೂ ಅವರಿಬ್ಬರಿಗೂ ಭೇದವುಂಟೆಂಬುದು ದೇವತೆಗಳಿಗೂ ತಿಳಿದಿರಲಿಲ್ಲ. ನಾಭಿಕಮಲದ ಸುಗಂಧದಿಂದ ಇವನು ವಿಷ್ಣು; ಯಶಸ್ಸಲ್ಲ ಎಂಬ ಭೇದ ಉಂಟಾಯಿತು. "ಕಾಗೆಯು ಕಪ್ಪು ಕೋಗಿಲೆಯು ಕಪ್ಪು, ಅವೆರಡಕ್ಕೂ ಭೇದವೇನಿದೆ ? ವಸಂತಕಾಲವು ಬಂದಾಗ ಕಾಗೆ ಕಾಗೆಯೇ ಆಗುವುದು; ಕೋಗಿಲೆ ಕೋಗಿಲೆಯೇ ಆಗುವುದು" ಇದು ವಿಶೇಷಕದ ಉದಾಹರಣವೆನಿಸಿದೆ. "ಇಲ್ಲಿ ಎರಡನೆಯ ಸಾರಿ ಉಪಯೋಗಿಸಿದ ಕಾಕ ಪಿಕ ಎಂಬ ಶಬ್ದಗಳು ವಸಂತಕಾಲವು ಬಂದಾಗ ಕಾಗೆಯು ಕಾಗೆ ಎಂದು ಗೊತ್ತಾಗುತ್ತದೆ, ಕೋಗಿಲೆ ಕೋಗಿಲೆ ಎಂದು ಗೊತ್ತಾಗುತ್ತದೆ." ಎಂಬ ಅರ್ಥವನ್ನು ತಿಳಿಸಿ ಕೊಡುತ್ತದೆ. ಅವೆರಡಕ್ಕೂ ವೈಲಕ್ಷಣ್ಯವು ತೋರುತ್ತದೆ. "ಕಾಶಿಯಲ್ಲಿ ವಾಸಮಾಡುವ ಜನರಿಗೆ ಈಶ್ವರನ ತ್ರಿಲೋಚನ ಮೊದಲಾದ ಗುರುತುಗಳು ಸಾಮಾನ್ಯವೆನಿಸಿದ್ದರೂ ಅವರಿಗೂ ಈಶ್ವರನಿಗೂ ಭೇದವೇ ತಿಳಿಯುವುದಿಲ್ಲ. ಅರ್ಜುನನ ಬಾಣ ಪ್ರಯೋಗದಿಂದ ಶಂಕರನ ಶಿರಸ್ಸಿಗೆ ಗಾಯವಾಗಿದ್ದುದರಿಂದ ಈಶ್ವರನು ಇವರಿಗಿಂತಲೂ ಪ್ರಾಚೀನನೆಂಬ ಅರ್ಥವನ್ನು ಪ್ರಕಟಗೊಳಿಸುತ್ತದೆ. ಪ್ರಾಚೀನನಾಗಿದ್ದ ಈಶ್ವರನಿಗೂ ಅವನಂತೆ ಕಾಣುವ ಜನರಿಗೂ ಭೇದವೇ ಇರಲಿಲ್ಲ. ಪಾರ್ಥನ ಹೊಡೆತದ ಗುರುತು ಇದ್ದುದರಿಂದ ಅವನಿಗೂ ಇವರಿಗೂ ವೈಶಿಷ್ಟ್ಯವು ತೋರಿತು.

## ೮೩. ಉತ್ತರಾಲಂಕಾರ

ಕಿಂಚಿದಾಕೂತಸಹಿತಂ ಸ್ಯಾದ್ಗೂಢೋತ್ತರಮುತ್ತರಮ್ ।
ಯತ್ರಾಸೌ ವೇತಸೀ ಪಾಂಥ ತತ್ರೇಯಂ ಸುತರಾ ಸರಿತ್ ॥ ೧೪೮ ॥

ಸರಿತ್ತರಣಮಾರ್ಗಂ ಪೃಚ್ಛಂತಂ ಪ್ರತಿ ತಂ ಕಾಮಯಮಾನಾಯಾ ಉತ್ತರಮಿದಮ್. ವೇತಸೀಕುಂಜೇ ಸ್ವಾಚ್ಛಂದ್ಯಮಿತ್ಯಾಕೂತಗರ್ಭಮ್,

ಯಥಾ ವಾ—

ಗ್ರಾಮೇಽಸ್ಮಿನ್ ಪ್ರಸ್ತರಪ್ರಾಯೇ ನ ಕಿಂಚಿತ್ಪಾಂಥ ವಿದ್ಯತೇ ।
ಪಯೋಧರೋನ್ನತಿಂ ದೃಷ್ಟ್ವಾ ವಸ್ತುಮಿಚ್ಛಸಿ ಚೇದ್ವಸ ॥

ಅಸ್ತರಣಾದಿಕಮರ್ಥಯಮಾನಂ ಪಾಂಥಂ ಪ್ರತ್ಯುಕ್ತಿರಿಯಮ್. ಸ್ತನೋನ್ನತಿಂ ದೃಷ್ಟ್ವಾ ರಂತುಮಿಚ್ಛಸಿ ಚೇದ್ವಸ ಅವಿದಗ್ಧಜನಪ್ರಾಯೇಽಸ್ಮಿನ್ ಗ್ರಾಮೇ ಕಶ್ಚಿದ್ವೇಗಮಿಷ್ಯತೀತ್ಯೇತಾದೃಶೇ ಪ್ರತಿಬಂಧಕಂ ಕಿಂಚಿದಪಿ ನಾಸ್ತೀತಿ ಹೃದಯಮ್. ಇದ್ಮುನ್ನೇಯಪ್ರಶ್ನೋದಾಹರಣಮ್. ನಿಬದ್ಧಪ್ರಶ್ನೋತ್ತರಂ ಯಥಾ—

ಕುಶಲಂ ತಸ್ಯಾ ಜೀವತಿ ಕುಶಲಂ ಪೃಚ್ಛಾಮಿ ಜೀವತೀತ್ಯುಕ್ತಮ್ ।
ಪುನರಪಿ ತದೇವ ಕಥಯಸಿ ಮೃತಾಂ ನು ಕಥಯಾಮಿ ಯಾ ಶ್ವಸಿತಿ ॥

ಈರ್ಷ್ಯಾರ್ಯಮಾನಾನಂತರಮನುತಪ್ತಾಯಾಃ ನಾಯಿಕಾಯಾಃ ಸಖೀಂ ಗತಂ ಪ್ರತಿ ತಸ್ಯಾಃ ಕುಶಲಮಿತಿ ನಾಯಕಸ್ಯ ಪ್ರಶ್ನಃ. ಜೀವತೀತಿ ಸಖ್ಯಾ ಉತ್ತರಮ್. ಜೀವತ್ಯಾಃ ಕುತಃ ಕುಶಲಮಿತಿ ತದಭಿಪ್ರಾಯಃ. ಅನ್ಯತ್ ಪೃಷ್ಟಮನ್ಯದುತ್ತರಮಿತ್ಯಭಿಪ್ರಾಯೇಣ ಜೀವತೀತ್ಯುಕ್ತಮಿತಿ ಸಖ್ಯಾ ವಚನಮ್. ಸಖೀವಚನಸ್ಯ ಅಭಿಪ್ರಾಯೋದ್ಘಾಟನಾರ್ಥಂ 'ಪುನರಪಿ ತದೇವ ಕಥಯಸಿ' ಇತಿ ನಾಯಕಸ್ಯ ಆಕ್ಷೇಪಃ. ಮೃತಾಂ ನು ಕಥಯಾಮಿ ಯಾ ಶ್ವಸಿತಿ' ಇತಿ ಸ್ವಾಭಿಪ್ರಾಯೋದ್ಘಾಟನಾರ್ಥಮ್. ಸತಿ ಮರಣೇ ಖಲು ತಸ್ಯಾಃ ಕುಶಲಂ ಭವತಿ ಮದಾಗಮನಸಮಯೇಽಪಿ ಶ್ವಾಸೇಷು ಸಂಚರತ್ಸು ಕಥಂ ಮೃತಾಂ ಕಥಯೇಯಮಿತ್ಯಭಿಪ್ರಾಯಃ.

ಪ್ರಶ್ನೋತ್ತರಾಂತರಾಭಿನ್ನಮುತ್ತರಂ ಚಿತ್ರಮುಚ್ಯತೇ ।
ಕೇ ದಾರಪೋಷಣರತಾಃ ಕೇ ಖೇಟಾಃ ಕಿಂ ಚಲಂ ವಯಃ ॥೧೪೯॥

ಅತ್ರ ಕೇ ದಾರಪೋಷಣರತಾಃ ಇತಿ ಪ್ರಶ್ನಾಭಿನ್ನಮುತ್ತರಂ; ಕೇ ಖೇಟಾಃ ಕಿಂ ಜಲಮಿತಿ ಪ್ರಶ್ನದ್ವಯಸ್ಯ 'ವಯಃ' ಇತ್ಯೇಕಮುತ್ತರಮ್. ಉದಾಹರಣಾಂತರಾಣಿ ವಿದಗ್ಧಮುಖಮಂಡನೇ ದ್ರಷ್ಟವ್ಯಾನಿ.

ಯಾವುದೋ ಒಂದು ಅಭಿಪ್ರಾಯದಿಂದ ಕೂಡಿರುವ ಗೂಢವಾದ ಉತ್ತರವನ್ನು ತಿಳಿಸುವುದೇ ಉತ್ತರಾಲಂಕಾರವೆನಿಸುವುದು "ಎಲೈ ಪಥಿಕನೇ ಎಲ್ಲಿ ಈ ವೇತಸಲತೆ ಇದೆಯೋ ಅಲ್ಲಿ ಈ ಸರೋವರವನ್ನು ಸುಲಭವಾಗಿ ದಾಟಬಹುದು." ನದಿಯನ್ನು ದಾಟಲು ಮಾರ್ಗವನ್ನು ಕೇಳಿದವನಿಗೆ ಅವನನ್ನೇ ಬಯಸಿದವಳೊಬ್ಬಳು ಕೊಡುವ ಉತ್ತರವಿದು. ನೀರುಮಂಜೀ ಲತೆಯ ಗೃಹದಲ್ಲಿ ಸ್ವಚ್ಛಂದವಾಗಿ ಸೇರಬಹುದೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಆಕೆ ಹೀಗೆ ಹೇಳುವಳು: "ಎಲೈ ಪಥಿಕನೇ, ಈ ಗ್ರಾಮವೆಲ್ಲವೂ ಕಲ್ಲಿನಿಂದ ತುಂಬಿರುವಾಗ ಅಲ್ಲಿ ಯಾವುದೊಂದು ಸೌಕರ್ಯವೂ ಇಲ್ಲ. ಸ್ತನಗಳ ಔನ್ನತ್ಯವನ್ನೂ (ಮೇಲೆ ಮೇಘಗಳ

ಪ್ಯಾಪ್ತಿಯನ್ನೂ ನೋಡಿ ಇರಲಿಕ್ಕೆ ಇಚ್ಛಿಸಿದರೆ ಇರು". ಹಾಸಲಿಕ್ಕೆ ಒಂದು ಬಟ್ಟೆಯನ್ನು ಕೇಳಿದ ಪಥಿಕನಿಗೆ ಮನೆಯ ಹೆಂಗಸು ಕೊಡುವ ಉತ್ತರವಿದು. ತನ್ನ ಸ್ತನಗಳು ಎತ್ತರವಾಗಿರುವುದನ್ನು ನೋಡಿ ರಮಿಸಲಿಚ್ಛಿಸಿದರೆ ಇಲ್ಲಿ ಇರು. ಮೂರ್ಖರಿಂದ ತುಂಬಿರುವ ಈ ಗ್ರಾಮದಲ್ಲಿ ಯಾರಾದರೂ ತಿಳಿಯಬಹುದೆಂಬ ಅಡಚಣೆ ಯಾವುದಕ್ಕೂ ಇಲ್ಲಿ ಅವಕಾಶವಿಲ್ಲವೆಂಬ ಅಭಿಪ್ರಾಯವನ್ನು ಆಕೆ ಇಲ್ಲಿ ತಿಳಿಸುತ್ತಾಳೆ. ಈ ಉದಾಹರಣದಲ್ಲಿ ಪ್ರಶ್ನೆಯನ್ನು ಕಲ್ಪಿಸಿ ಅದಕ್ಕೆ ಉತ್ತರವನ್ನು ಕೊಡಲಾಗಿದೆ. ಪ್ರಶ್ನೆಯನ್ನು ಸ್ಪಷ್ಟವಾಗಿ ತಿಳಿಸಿ ಆದಕ್ಕೆ ಉತ್ತರವನ್ನು ಹೇಳುವುದಕ್ಕೆ ಉದಾಹರಣ ಹೀಗಿದೆ, "ಆಕೆಗೆ ಕುಶಲವೇ ?'' ಎಂಬ ಪ್ರಶ್ನೆಗೆ 'ಬದುಕಿದ್ದಾಳೆ' ಎಂಬ ಉತ್ತರವು ಬರುವುದು. 'ನಾನು ಅವಳ ಕ್ಷೇಮವನ್ನು ಕೇಳುತ್ತೇನೆ' ಎಂದು ಮತ್ತೆ ಪ್ರಶ್ನೆ ಹೊರಡುವುದು. "ಅವಳು ಬದುಕಿದ್ದಾಳೆ ಎಂದು ಹೇಳಿದ್ದನ್ನೇ ಮತ್ತೆ ಹೇಳುತ್ತಿರುವೆ'' ಎಂದು ಉತ್ತರ ಹೊರಡುವುದು. ಹೀಗೆ ಉಸಿರಾಡಿಕೊಂಡಿರುವುದರಿಂದ ಅಂತಹವಳನ್ನು ಸತ್ತವಳೆಂದು ಹೇಗೆ ಭಾವಿಸಲಿ.' ಅಸೂಯೆಯಿಂದ ಹುಟ್ಟುವ ಕೋಪವು ತೊಲಗಿದ ಮೇಲೆ ಸಂತಾಪಗೊಂಡ ನಾಯಿಕೆಯು ಕಡೆಯಿಂದ ಸುಖಿಯು ಬಂದವಳೆಂದು ತಿಳಿದು 'ಆಕೆ ಕ್ಷೇಮವಾಗಿರುವಳೇ ?' ಎಂದು ನಾಯಕನು ಕೇಳುವನು ಬದುಕಿದ್ದಾಳೆ ಎಂದು ಸಖಿಯು ಉತ್ತರಿಸುವಳು. ಬದುಕಿರುವಳ ಕ್ಷೇಮವನ್ನು ಏನು ಕೇಳಬೇಕು ? ಎಂದು ಅವಳ ಅಭಿಪ್ರಾಯ, "ನಾನು ಕೇಳಿದ್ದು ಒಂದು; ನೀನು ಹೇಳಿದ್ದು ಒಂದು'' ಎಂದು ಭಾವಿಸಿ ನಾಯಕನು ಮತ್ತೆ 'ಕುಶಲವನ್ನು ಕೇಳುವೆನು' ಎಂದು ಪ್ರಶ್ನಿಸುವನು. ಪ್ರಶ್ನೆಗೆ ಉತ್ತರವನ್ನು ಹೇಳಿಯಾಯಿತು ಎಂಬ ಅಭಿಪ್ರಾಯದಿಂದ ಆಕೆಯು 'ಬದುಕಿದ್ದಾಳೆ ಎಂದು ಹೇಳಿಯಾಯಿತು ಎಂದು ಹೇಳುತ್ತಾಳೆ. ಸಖಿಯ ಮಾತಿನ ಅಭಿಪ್ರಾಯವನ್ನು ಹೊರಡಿಸಲಿಕ್ಕಾಗಿ "ಮತ್ತೆ ಹೇಳಿದ್ದನ್ನೇ ಹೇಳುತ್ತಿರುವೆ" ಎಂದು ನಾಯಕನು ಆಕ್ಷೇಪಿಸಿದನು. 'ಹೇಗೋ ಉಸಿರಾಡಿಕೊಂಡು ಆಕೆ ಇರುವುದರಿಂದ ಅವಳನ್ನು ಸತ್ತವಳೆಂದು ಹೇಗೆ ನಾನು ಹೇಳಲಿ" ಎಂದು ಸಖಿಯು ಕೊನೆಗೆ ಉತ್ತರಿಸುವಳು. ಸುಮ್ಮನೆ ಉಸಿರಾಡಿಕೊಂಡಿದ್ದರೂ ಆಕೆಯನ್ನು ಸತ್ತವಳೆಂದು ಹೇಗೆ ಹೇಳಲಿ ಎಂದು ಸಖಿಯು ಉತ್ತರವನ್ನು ಅರ್ಥವಿಟ್ಟು ತಿಳಿಸುವಳು. "ಮರಣವಾದರೆಯೇ ಆಕೆಗೆ ಕ್ಷೇಮವಾಗುತ್ತದೆ. ನಾನು ಇಲ್ಲಿಗೆ ಬರುವ ಕಾಲದಲ್ಲಿಯೂ ಉಸಿರಾಡುತ್ತಿದ್ದುದರಿಂದ ಆಕೆಯನ್ನು ಸತ್ತಳೆಂದು ಹೇಗೆ ಹೇಳಲಿ'' ಎಂಬುದೇ ಸಖಿಯ ಅಭಿಪ್ರಾಯ.

## ೮೪ ಚಿತ್ರೋತ್ತರಾಲಂಕಾರ

ಪ್ರಶ್ನೆಯೇ ಎಲ್ಲಿ ಉತ್ತರವಾಗಿದೆಯೋ, ಎಲ್ಲಿ ಎರಡು ಪ್ರಶ್ನೆಗಳಿಗೆ ಒಂದೇ ಉತ್ತರವಿದೆಯೋ ಅದು ಚಿತ್ರೋತ್ತರಾಲಂಕಾರವೆನಿಸುವುದು. ದಾರಪೋಷಣರತಾಃ ಕೇ ಎಂಬುದು ಪ್ರಶ್ನೆ. ಆದಕ್ಕೆ ಕೇದಾರಪೋಷಣರತಾಃ ಎಂಬುವೇ ಉತ್ತರವಾಗಿದೆ.

ಹೆಂಡತಿಯನ್ನು ಕಾಪಾಡುವುದರಲ್ಲಿ ನಿರತರು ಯಾರು ? ಎಂಬುದು ಪ್ರಶ್ನೆ. ಕ್ಷೇತ್ರವನ್ನು ಪೋಷಿಸುವುದರಲ್ಲಿ ಯಾರು ನಿರತರೋ ಅವರೇ ಹೆಂಡತಿಯನ್ನು ರಕ್ಷಿಸಬಲ್ಲರು ಎಂದು ಅಲ್ಲಿಯೇ ಉತ್ತರವು ಅಡಗಿದೆ. ಆಕಾಶದಲ್ಲಿ ತಿರುಗುವವರು ಯಾರು ? "ಕೇ ಖೇಟಾಃ ? ಕಿಂ ಚಲಂ ?" ಚಂಚಲವಾದದ್ದು ಯಾವುದು ಎಂಬ ಪ್ರಶ್ನೆಗಳಿಗೆ ವಯಃ ಎಂಬ ಒಂದೇ ಉತ್ತರವು ಇದೆ. ಚಂಚಲವಾದದ್ದು ಯಾವುದು ಎಂಬ ಪ್ರಶ್ನೆಗೆ ವಯಸ್ಸು ಎಂಬುದು ಉತ್ತರವೆನಿಸಿದೆ. ಆಕಾಶದಲ್ಲಿ ಸಂಚರಿಸುವವು ಯಾವುವು ? ಎಂಬುದಕ್ಕೂ ಸಹ ಹಾಗೆಯೇ ವಯಃ ಎಂಬುದೇ ಉತ್ತರ ಆದರೆ ಈ ಪದದ ಅರ್ಥವು ಬೇರೆಬೇರೆಯಾಗಿದೆ. ಪಕ್ಷಿ ಮತ್ತು ವಯಸ್ಸು ಈ ಎರಡು ಅರ್ಥಗಳು ಎರಡು ಪ್ರಶ್ನೆಗಳಿಗೆ ಉತ್ತರವೆನಿಸಿವೆ. ಎರಡು ಅರ್ಥಗಳನ್ನು ಕೊಡುವ ಒಂದೇ ಪದವು ಎರಡು ಪ್ರಶ್ನೆಗಳಿಗೆ ಉತ್ತರವಾಗಿರುವುದರಿಂದ ಇದು ಚಿತ್ರೋತ್ತರಾಲಂಕಾರವೆನಿಸಿದೆ.

## ೬೪ ಸೂಕ್ಷ್ಮಾಲಂಕಾರ

ಸೂಕ್ಷ್ಮಂ ಪರಾಶಯಾಭಿಜ್ಞೇತರಸಾಕೂತಚೇಷ್ಟಿತಮ್ ।
ಮಯಿ ಪಶ್ಯತಿ ಸಾ ಕೇಶೈಃ ಸೀಮಂತಮಣಿಮಾವೃಣೋತ್ ॥ ೧೫೦ ॥

ಕಾಮುಕಸ್ಯಾವಲೋಕನೇನ ಸಂಕೇತಕಾಲಪ್ರಶ್ನಭಾವಂ ಜ್ಞಾತವತ್ಯಾಶ್ಶ್ಲೇಷ್ಟೇಯಮ್. ಅಸ್ತಂ ಗತೇ ಸೂರ್ಯೇ ಸಂಕೇತಕಾಲ ಇತ್ಯಾಕೂತಮ್ ಯಥಾ ವಾ—

ಸಂಕೇತಕಾಲಮನಸಂ ವಿಟಂ ಜ್ಞಾತ್ವಾ ವಿದಗ್ಧಯಾ ।
ಆಸೀನ್ನೇತ್ರಾರ್ಪಿತಾಕೂತಂ ಲೀಲಾಪದ್ಮಂ ನಿಮೀಲಿತಮ್ ॥

ಬೇರೆಯವರ ಅಭಿಪ್ರಾಯವನ್ನು ಇಂಗಿತ ಮೊದಲಾದವುಗಳಿಂದ ತಿಳಿದುಕೊಂಡು ಮತ್ತೊಬ್ಬನು ಮಾಡುವ ಚೇಷ್ಟೆಯೇ ಸೂಕ್ಷ್ಮಾಲಂಕಾರವೆನಿಸುವುದು.

ನಾನು ನೋಡುತ್ತಿರುವಾಗಲೇ ಆಕೆಯು ಸೀಮಂತಮಣಿಯನ್ನು ಕೂದಲುಗಳಿಂದ ಮುಚ್ಚಿದಳು. ನಾಯಿಕೆಯನ್ನು ಕಾಮುಕನು ನೋಡಿದ್ದರಿಂದ ಸಂಕೇತಕಾಲ ಯಾವುದೆಂದು ಪ್ರಶ್ನೆ ಮಾಡಿದನೆಂದು ತಿಳಿದು ಆಕೆಯು ಹಾಗೆ ಚೇಷ್ಟೆಮಾಡುತ್ತಾಳೆ. ಸೂರ್ಯನು ಮುಳುಗಿದ ಮೇಲೆ ಅದೇ ಸಂಕೇತಕಾಲವಾಗುವುದೆಂಬ ಅಭಿಪ್ರಾಯವನ್ನು ಸೀಮಂತಮಣಿಯನ್ನು ಮುಚ್ಚುವ ಮೂಲಕ ಆಕೆಯು ಕಾಮುಕನಿಗೆ ತಿಳಿಸಿದಳು "ವಿಟನು ಸಂಕೇತಕಾಲವು ಯಾವುದೆಂಬುದನ್ನು ತಿಳಿಯಬಯಸಿರುವನೆಂದು ಅರಿತು ವಿದಗ್ಧೆಯು ಕಣ್ಣುಗಳಿಂದ ತನ್ನ ಅಭಿಪ್ರಾಯವನ್ನು ತಿಳಿಸುತ್ತಲೇ ಕೈಯಲ್ಲಿ

ವಿನೋದಕ್ಕಾಗಿ ಹಿಡಿದಿದ್ದ ಕಮಲವನ್ನು ಮುಚ್ಚಿದಳು." ಕಾಮುಕನು ಕಣ್ಣಿನ ಸಂಜ್ಞೆ ಯಿಂದ ಸಂಕೇತಕಾಲವನ್ನು ತಿಳಿಯಲಿಚ್ಛಿಸಿದನೆಂಬುದನ್ನು ಅರಿತು, ನಾಯಿಕೆಯು ಕಣ್ಣಿನಲ್ಲಿ ಅಭಿಪ್ರಾಯವನ್ನು ತಿಳಿಸುತ್ತಲೇ ಕಮಲವನ್ನು ಮುಚ್ಚಿದ್ದರಿಂದ ಕಮಲವು ಮೊಗ್ಗಾಗುವ ಕಾಲವೇ ಸಂಕೇತಸಮಯವೆಂಬುದನ್ನು ತಿಳಿಸಿದಳು.

## ೭೦ ಪಿಹಿತಾಲಂಕಾರ

ಪಿಹಿತಂ ಪರವೃತ್ತಾಂತಜ್ಞಾತುಃ ಸಾಕೂತಚೇಷ್ಟಿತಮ್ ।
ಪ್ರಿಯೇ ಗೃಹಗತೇ ಪ್ರಾತಃ ಕಾಂತಾ ತಲ್ಪಮಕಲ್ಪಯತ್ ॥ ೧೫೧ ॥

ರಾತ್ರೌ ಸಪತ್ನೀಗೃಹೇ ಜಾಗರಣೇನ ಶ್ರಾಂತೋಸೀತಿ ಕಲ್ಪಿತತಲ್ಪನಾಕೂತಮ್.

ಯಥಾ ವಾ—

ವಕ್ತ್ರಸ್ಯಂದಿಸ್ವೇದಬಿಂದುಪ್ರಬಂಧೈಃ
ದೃಷ್ಟ್ವಾ ಭಿನ್ನಂ ಕುಂಕುಮಂ ಕಾಪಿ ಕಂಠೇ ।
ಪುಂಸ್ತ್ವಂ ತನ್ವ್ಯಾ ವ್ಯಂಜಯಂತೀ ವಯಸ್ಯಾ
ಸ್ಮಿತ್ವಾ ಪಾಣೌ ಖಡ್ಗಲೇಖಾಂ ಲಿಲೇಖ ॥

ಅತ್ರ ಸ್ವೇದಾನುಮಿತಂ ಪುರುಷಾಯಿತಂ ಪುರುಷೋಚಿತಖಡ್ಗಲೇಖನೇನ ಪ್ರಕಾಶಿತಮ್.

ಬೇರೆಯವರ ಸಮಾಚಾರವನ್ನು ತಿಳಿಯುವವನು ಭಾವಗರ್ಭಿತವಾಗಿ ಮಾಡುವ ಚೇಷ್ಟೆಯೇ ಪಿಹಿತಾಲಂಕಾರವೆನಿಸುವುದು. 'ಪ್ರಿಯನು ಮನೆಗೆ ಬರಲು ಪ್ರೇಯಸಿಯು ಹಾಸಿಗೆಯನ್ನು ಸಜ್ಜುಗೊಳಿಸಿದಳು' ರಾತ್ರಿಯೆಲ್ಲಾ ಸವತಿಯ ಮನೆಯಲ್ಲಿ ಜಾಗರಣವನ್ನು ಮಾಡಿದ್ದರಿಂದ ಬಳಲಿರುವೆ ಎಂಬುದೇ ಹಾಸಿಗೆಯನ್ನು ಸಿದ್ಧಪಡಿಸಿದ್ದರ ಅಭಿಪ್ರಾಯ. ಈ ಅರ್ಥವನ್ನು ಮನಸ್ಸಿನಲ್ಲಿಟ್ಟುಕೊಂಡು ಆಕೆಯು ಹಾಸಿಗೆಯನ್ನು ಹಾಸಿದ ಪ್ರಯುಕ್ತ ಇದು ಪಿಹಿತಾಲಂಕಾರವೆನಿಸಿದೆ. "ಮುಖದಲ್ಲಿ ಹರಿಯುತ್ತಿರುವ ಬೆವರಿನ ಹನಿಗಳ ಧಾರೆಗಳಿಂದ ಕುತ್ತಿಗೆಯಲ್ಲಿ ಅಂಟಿಕೊಂಡಿದ್ದ ಕುಂಕುಮವನ್ನು ನೋಡಿ ಒಬ್ಬ ಸಖಿಯು ನಗುತ್ತ ಪುರುಷಭಾವವನ್ನು ಪ್ರಕಟಿಸುತ್ತ ನಾಯಿಕೆಯ ಕೈಯಲ್ಲಿ ಖಡ್ಗದ ಗುರುತನ್ನು ಬರೆದಳು" ಇಲ್ಲಿ ಬೆವರಿನ ಹನಿ ಬೀಳುತ್ತಿರುವುದರಿಂದ ಆಕೆಯು ಪುರುಷನಂತೆ ಇರುವಳೆಂಬುದನ್ನು ಪುರುಷನೆನಿಸ ಲರ್ಹವೆನಿಸಿದ ಖಡ್ಗಲೇಖನದಿಂದ ಇಲ್ಲಿ ಪ್ರಕಾಶಗೊಳಿಸಲಾಗಿದೆ. ಖಡ್ಗದ ಗೆರೆ ಕೈಯಲ್ಲಿ ಇದ್ದರೆ ಮಾತ್ರವೇ ಒಂದು ವ್ಯಕ್ತಿಯನ್ನು ಪುರುಷನೆಂದು ಕರೆಯಬಹುದಾದ ಪ್ರಯುಕ್ತ ನಾಯಿಕೆಯ ಕೈಯಲ್ಲಿ ಸಖಿಯು ಆ ಗೆರೆಯನ್ನು ಬರೆದಳು. ಪುರುಷನೆಂಬ ಅಭಿಪ್ರಾಯವನ್ನು ಹುಟ್ಟಿಸಲಿಕ್ಕಾಗಿ ಗೆರೆಯನ್ನು ಬರೆದ ಪ್ರಯುಕ್ತ ಇದು ಪಿಹಿತ

ವೆನಿಸಿದೆ. ಸೂಕ್ಷ್ಮಾಲಂಕಾರದಲ್ಲಿ ಬೇರೆಯವರ ಅಭಿಪ್ರಾಯವನ್ನು ತಿಳಿದು ಭಾವ ಗರ್ಭಿತವಾದ ಚೇಷ್ಟೆಯಿಂದ ಉತ್ತರವನ್ನು ಕೊಡಲಾಗುವುದು. ಪಿಹಿತದಲ್ಲಾದರೋ ಗೂಢವಾದ ಪರವೃತ್ತಾಂತವನ್ನು ತಿಳಿದು ಭಾವಗರ್ಭಿತವಾದ ಚೇಷ್ಟೆಯಿಂದ ಅದನ್ನು ಪ್ರಕಾಶಪಡಿಸಲಾಗುವುದು.

## ೮೯. ವ್ಯಾಜೋಕ್ತ್ಯಲಂಕಾರ

ವ್ಯಾಜೋಕ್ತಿರನ್ಯಹೇತೂಕ್ತ್ಯಾ ಯದಾಕಾರಸ್ಯ ಗೋಪನಮ್ ।
ಸಖಿ ಪಶ್ಯ ಗೃಹಾರಾಮಪರಾಗೈರಸ್ಮಿ ಧೂಸರಾ ॥ ೧೫೨ ॥

ಅತ್ರ ಚೌರ್ಯರತಕೃತಭೂಪೃಷ್ಠಲುಂಠನಲಗ್ನಧೂಳಿಜಾಲಸ್ಯ ಗೋಪನಮ್.

ಶಾಕಸ್ಯ ಮಾ ನ ಭವೇದ್ರೋಷಃ ಪ್ರಿಯಾಯಾಃ ಸವ್ರಣೇಽಧರೇ
ಸಭೃಂಗಂ ಪದ್ಮಮಾಘ್ರಾಸೀರ್ವಾರಿತಾಪಿ ಮಯಾಧುನಾ ॥

ಉಪಪತಿನಾ ಖಂಡಿತಾಧರಾಯಾಃ ನಾಯಿಕಾಯಾಃ ಸಕಾಶಂ ಆಗಚ್ಛಂತಂ ಪ್ರಿಯಮುಪಶ್ಯಂತ್ಯೇಮಸಖ್ಯಾ ನಾಯಿಕಾಂ ಪ್ರತಿ ಹಿತೋಪದೇಶವ್ಯಾಜೇನ ತಂ ಪ್ರತಿ ನಾಯಿಕಾಪರಾಧಗೋಪನಮ್. ಛೇಕಾಪಹ್ನುತೇರಸ್ಯಾಶ್ಚ ಅಯಂ ವಿಶೇಷಃ. ತಸ್ಯಾಂ ವಚನಸ್ಯ ಅನ್ಯಥಾನಯನೇನ ಅಪಹ್ನವಃ ಅಸ್ಯಾಮಾಕಾರಸ್ಯ ಹೇತ್ವಂತರ-ವರ್ಣನೇನ ಗೋಪನಮಿತಿ. ಲಕ್ಷಣೇ ಲಕ್ಷ್ಯನಾಮ್ನಿ ಚ ಉಕ್ತಿಗ್ರಹಣಂ ಆಕಾರಸ್ಯ ಗೋಪನಾರ್ಥಂ ಹೇತ್ವಂತರಪ್ರತ್ಯಾಯಕವ್ಯಾಪಾರಮಾತ್ರೋಪಲಕ್ಷಣಮ್. ತತಶ್ಚ

ಆಯಾಂತಮಾಲೋಕ್ಯ ಹರಿಂ ಪ್ರತೋಲ್ಯಾ
ಆಲ್ಯಾಃ ಪುರಸ್ತಾದನುರಾಗಮೇಕಾ ।
ರೋಮಾಂಚಕಂಪಾದಿಭಿರುಚ್ಯಮಾನಂ
ಭಾಮಾ ಜುಗೂಹ ಪ್ರಣಮಂತ್ಯಥೈನಮ್ ॥

ಇತ್ಯತ್ರಾಪಿ ವ್ಯಾಜೋಕ್ತಿರೇವ. ತತ್ರ ಹ್ಯನುರಾಗಕೃತಸ್ಯ ರೋಮಾಂಚಾ-ದ್ಯಾಕಾರಸ್ಯ ಭಕ್ತಿರೂಪಹೇತ್ವಂತರಪ್ರತ್ಯಾಯಕೇನ ಪ್ರಣಾಮೇನ ಗೋಪನಂ ಕೃತಮ್. ಸೂಕ್ಷ್ಮಪಿಹಿತಾಲಂಕಾರಯೋರಪಿ ಚೇಷ್ಟಿತಗ್ರಹಣಂ ಉಕ್ತಿಸಾಧಾರಣ-ವ್ಯಾಪಾರಮಾತ್ರೋಪಲಕ್ಷಣಮ್. ತತಶ್ಚ

ನಲಿನೀದಳೇ ಬಲಾಕಾ ಮರಕತಪಾತ್ರ ಇವ ದೃಶ್ಯತೇ ಶುಕ್ತಿಃ ।
ಇತಿ ಮಮ ಸಂಕೇತಭುವಿ ಜ್ಞಾತ್ವಾ ಭಾವಂ ತದಾಽಬ್ರವೀದಾಲೀಮ್ ॥

ಇತ್ಯಾದಿಷ್ವಪಿ ಸೂಕ್ಷ್ಮಾಲಂಕಾರಃ ಪ್ರಸರತಿ. ಅತ್ರ ಶ್ಲೋಕೇ ತಾವತ್ 'ಕಿಮಾವಯೋಃ ಸಂಕೇತಸ್ಥಾನಂ ಭವಿಷ್ಯತಿ' ಇತಿ ಪ್ರಶ್ನಾಶಯಂ ಸೂಚಯತಿ ಕಾಮುಕೇ ತದಭಿಜ್ಞಯಾ ವಿದಗ್ಧಯಾ ತದಾ ಸಖೀಂ ಪ್ರತಿ ಸಾಕೂತಮುಕ್ತಮಿತಿ ಸೂಕ್ಷ್ಮಾಲಂಕಾರೋ ಭವತಿ. ಯತೋಽತ್ರ ಬಲಾಕಾಯಾಃ ಮರಕತಪಾತ್ರಪ್ರತಿಷ್ಠಿತಶುಕ್ತಿಪಮಯಾ ತಸ್ಯಾಃ ನಿಶ್ಚಲತ್ವೇನ ಆಶ್ವಸ್ತತ್ವಮ್. ತೇನ ತಸ್ಯ ಪ್ರದೇಶಸ್ಯ ನಿರ್ಜನತ್ವಂ. ತೇನ ತದೇವ ಆವಯೋಃ ಸಂಕೇತಸ್ಥಾನಮಿತಿ ಕಾಮುಕಂ ಪ್ರತಿ ಸೂಚನಂ ಕ್ರಿಯತೇ ನ ಚಾತ್ರ ಧ್ವನಿಃ ಶಂಕನೀಯಾ. ದೂರೇ ವ್ಯಜ್ಯಮಾನಸ್ಯಾಪಿ ಸಂಕೇತಸ್ಥಾನ ಪ್ರಶ್ನೋತ್ತರಸ್ಯ ಸ್ವೋಕ್ತ್ಯೈವ ಆವಿಷ್ಕೃತತ್ವಾತ್. ಏವಂ ಪಿಹಿತಾಲಂಕಾರೇಽಪ್ಯುದಾಹಾರ್ಯಮ್. ಇದಂ ಚ ಅನ್ಯದತ್ರಾವಧೇಯಮ್. 'ಯತ್ರಾಸೌ ವೇತಸೀ ಪಾಂಥ' ಇತ್ಯಾದಿಷು ಗೂಢೋತ್ತರಸೂಕ್ಷ್ಮಪಿಹಿತವ್ಯಾಜೋಕ್ತ್ಯುದಾಹರಣೇಷು ಭಾವೋ ನ ಸ್ವೋಕ್ತ್ಯಾವಿಷ್ಕೃತಃ ಕಿಂತು ವಸ್ತುಸೌಂದರ್ಯಬಲಾತ್ ವಕ್ತೃಬೋದ್ಧವ್ಯವಿಶೇಷವಿಶೇಷಿತಾತ್ ಗಮ್ಯಃ. ತತ್ರೈವ ವಸ್ತುತೋ ನಾಲಂಕಾರತ್ವಂ ಧ್ವನಿಭಾವಾಸ್ಪದತ್ವಾತ್. ಪ್ರಾಚೀನೈಃ ಸ್ವೋಕ್ತ್ಯಾವಿಷ್ಕರಣೇ ಸತ್ಯಲಂಕಾರಾಸ್ಪದತಾ ಅಸ್ತೀತ್ಯುದಾಹೃತತ್ವಾತ್ ಅಸ್ಮಾಭಿರಪ್ಯುದಾಹೃತಾನಿ. ಶಕ್ಯಂ ಹಿ " ಯಾತ್ರಾಸೌ ವೇತಸೀ ಪಾಂಥ ತತ್ರೇಯಂ ಸುತರಾ ಸರಿತ್ । ಇತಿ ಪೃಚ್ಛಂತಮಧ್ವಾನಂ ಕಾಮಿನ್ಯಾಹ ಸಸೂಚನಮ್ ॥" ಇತ್ಯಾದ್ಯರ್ಥಾಂತರಕಲ್ಪನಯಾ ಭಾವಾವಿಷ್ಕರಣವಿಸ್ತೃತಃ ಪ್ರಾಕ್ ಲಿಖಿತೇಷು ಉದಾಹರಣೇಷು "ಸಂಕೇತಕಾಲಮನಸಂ ", " ಘಂಸ್ತ್ವಂ ತನ್ಯಾ ವ್ಯಂಜಯಂತೀ" "ಭಾವಾ ಜುಗೂಹ" ಇತಿ ಭಾವಾವಿಷ್ಕರಣಮಸ್ತಿ. ತೇಷ್ವೇವ ತತ್ತದಲಂಕಾರ ಇತಿ.

ಬೇರೊಂದು ಕಾರಣವನ್ನು ತಿಳಿಸುವ ಮೂಲಕ ತನ್ನ ಸ್ವಾಭಾವಿಕವಾದ ಅಂಗ ಚೇಷ್ಟೆಯನ್ನು ಮರೆಮಾಚುವುದೇ ವ್ಯಾಜೋಕ್ತಿ ಎನಿಸುವುದು. 'ಎಲೈ ಸಖಿಯೇ ನೋಡು, ಮನೆಯ ಹತ್ತಿರವಿರುವ ಉದ್ಯಾನವನದ ಧೂಳಿನಿಂದ ಕಲ್ಮಷಗೊಂಡಿರುವೆನು." ಇಲ್ಲಿ ಕಳ್ಳತನದಿಂದ ಭೋಗಿಸಲಿಕ್ಕಾಗಿ ಏರ್ಪಡಿಸಿದ್ದ ಸಂಕೇತಸ್ಥಾನದಲ್ಲಿ ನೆಲದ ಮೇಲೆ ಹೊರಳಾಡಿದ್ದರಿಂದ ಬೆನ್ನಿಗೆ ಅಂಟಿಕೊಂಡಿರುವ ಧೂಳನ್ನು ಮುಚ್ಚಲಿಕ್ಕಾಗಿ ಬೇರೊಂದು ಕಾರಣವನ್ನು ತಿಳಿಸಲಾಗಿದೆ. "ಪ್ರಿಯೆಯು ಕೆಳತುಟಿಯಲ್ಲಿ ಗಾಯವಾಗಿರಲು ಯಾವನಿಗೆ ತಾನೆ ಸಿಟ್ಟುಬಾರದ್ದೀತು ? ನಾನು ತಡೆದರೂ ಸಹ ದುಂಬಿಯೊಡಗೂಡಿದ ಕಮಲವನ್ನು ನೀನು ಈಗ ಮೂಸಿ ನೋಡಿರುವೆ." ಇಲ್ಲಿ ಪರಪುರುಷನಿಂದ ತುಟಿಯನ್ನು ಕಚ್ಚಿಸಿಕೊಂಡಿರುವ ನಾಯಿಕೆಯು ಬಳಿಗೆ ಬರುವ ಪ್ರಿಯನನ್ನು ನೋಡದೆ ಇರುವ ಸಖಿಯು ಆ ನಾಯಿಕೆಗೆ ಹಿತವನ್ನು ಉಪದೇಶಿಸುವ

ನೆಪದಿಂದ ಅವನಿಗೆ ನಾಯಿಕೆಯ ಅಪರಾಧವು ತಿಳಿಯದಂತೆ ಅದನ್ನು ಮುಚ್ಚುವಳು. ಛೇಕಾಪಹ್ನುತಿಗೂ ಇದಕ್ಕೂ ಭೇದವೇನು ? ಅಲ್ಲಿ ತಾನು ಹೇಳುವ ಮಾತನ್ನು ಬೇರೆ ರೀತಿಯಾಗಿ ಹೊಂದಿಸುವುದರಿಂದ ಅಪಹ್ನವವು ತೋರುತ್ತದೆ. ಇಲ್ಲಿಯಾದರೋ ಬೇರೊಂದು ಕಾರಣವನ್ನು ತಿಳಿಸುವ ಮೂಲಕ ತನ್ನ ಸ್ವಾಭಾವಿಕವಾದ ಚೇಷ್ಟೆಯನ್ನು ಮುಚ್ಚಲಾಗುವುದು. ಇದೇ ಇವೆರಡಕ್ಕೂ ಇರುವ ವಿಶೇಷ. ಲಕ್ಷಣದಲ್ಲೂ ಲಕ್ಷ್ಯವೆನಿಸಿದ ವ್ಯಾಜೋಕ್ತಿ ಎಂಬ ಅಲಂಕಾರದ ಹೆಸರಿನಲ್ಲೂ ಬಂದಿರುವ ಉಕ್ತಿ ಎಂಬ ಪದವು ಒಬ್ಬನ ಸ್ವಾಭಾವಿಕ ಚೇಷ್ಟೆಯನ್ನು ಮುಚ್ಚಲಿಕ್ಕಾಗಿ ಬೇರೊಂದು ಹೇತುವನ್ನು ಸೂಚಿಸುವ ಚೇಷ್ಟೆಯನ್ನು ತಿಳಿಸುತ್ತದೆ.

ರಸ್ತೆಯಲ್ಲಿ ಕೃಷ್ಣನು ಬರುತ್ತಿರುವನೆಂಬುದನ್ನು ನೋಡಿ ಸಖಿಯ ಎದುರಿಗೆ ಸತ್ಯಭಾಮೆಯು ರೋಮಾಂಚ ನಡುಕ ಮೊದಲಾದ ಅನುಭಾವಗಳಿಂದ ತೋರಿಬರುವ ಈ ಅನುರಾಗವನ್ನು ಕೃಷ್ಣನಿಗೆ ನಮಸ್ಕರಿಸುತ್ತಲೇ ಮುಚ್ಚಿಕೊಂಡಳು." ಇಲ್ಲಿಯೂ ವ್ಯಾಜೋಕ್ತಿಯೇ ಇದೆ. ಅನುರಾಗದಿಂದ ತೋರಿದ ರೋಮಾಂಚ ಮೊದಲಾದ ತನ್ನ ವರ್ತನೆಯು ಸಖಿಗೆ ತಿಳಿಯದಿರಲೆಂದು ಸತ್ಯಭಾಮೆಯು ಭಕ್ತಿ ಎಂಬ ಬೇರೊಂದು ಕಾರಣದ ಮೂಲಕ ಕೃಷ್ಣನಿಗೆ ಸಮರ್ಪಿಸಿದ ಪ್ರಣಾಮದಿಂದ ಅದನ್ನು ಮುಚ್ಚುವಳು ಸೂಕ್ಷ್ಮ ಮತ್ತು ಪಿಹಿತಾಲಂಕಾರಗಳೆರಡರಲ್ಲೂ ಸಹ ಚೇಷ್ಟಿತ ಎಂಬ ಪದವು ಉಕ್ತಿ ಎಂಬ ಸಾಮಾನ್ಯ ವ್ಯಾಪಾರವನ್ನು ತಿಳಿಸುವುದಾಗಿ ಭಾವಿಸಬೇಕು. ಆದ್ದರಿಂದಲೇ "ತಾವರೆಯ ಎಲೆಯಲ್ಲಿರುವ ಬಕಪಕ್ಷಿಯು ಮರಕತ ಮಣಿಯಿಂದ ರಚಿತವಾದ ಪಾತ್ರದಲ್ಲಿರುವ ಮುತ್ತಿನ ಚಿಪ್ಪಿನಂತೆ ಕಾಣಿಸುತ್ತಿದೆ. ಹೀಗೆ ಹೇಳಿದ ನನ್ನ ಅಭಿಪ್ರಾಯವನ್ನು ಸಂಕೇತಸ್ಥಾನದಲ್ಲಿ ತಿಳಿದು ಆಗ ಸಖಿಗೆ ಹೇಳಿದಳು." ಇಂತಹ ಕಡೆಗಳಲ್ಲೂ ಸೂಕ್ಷ್ಮಾಲಂಕಾರವೇ ಕಂಡುಬರುತ್ತದೆ. ಈ ಶ್ಲೋಕದಲ್ಲಿ "ನಮಗೆ ಯಾವುದು ಸಂಕೇತಸ್ಥಾನವಾಗಲಿದೆ :" ಎಂಬ ಪ್ರಶ್ನೆಯಲ್ಲಿ ತನ್ನ ಅಭಿಪ್ರಾಯವನ್ನು ಕಾಮುಕನು ಸೂಚಿಸಲು ಅದನ್ನು ತಿಳಿದ ಚತುರೆಯೊಬ್ಬಳು ಆಗ ಸಖಿಗೆ ಭಾವಗರ್ಭಿತವಾಗಿ ಇಲ್ಲಿ ತಿಳಿಸುವಳಾದ್ದರಿಂದ ಇದು ಸೂಕ್ಷ್ಮಾಲಂಕಾರವಾಗುತ್ತದೆ. ಇಲ್ಲಿ ಬಕ ಪಕ್ಷಿಯನ್ನು ಮರಕತಪಾತ್ರದಲ್ಲಿರುವ ಮುತ್ತಿನ ಚಿಪ್ಪಿಗೆ ಹೋಲಿಸಿದ್ದರಿಂದ ಅದು ನಿಶ್ಚಲವಾಗಿರುವುದರಿಂದ ಆ ಸ್ಥಲವು ವಿಶ್ವಾಸಕ್ಕೆ ಅರ್ಹವೂ ನಿರ್ಜನವೂ ಅಗಿರುವ ಪ್ರಯುಕ್ತ ಅದೇ ನಮಗೆ ಸಂಕೇತಸ್ಥಾನವಾಗಲಿವೆ ಎಂದು ಕಾಮುಕನಿಗೆ ಆಕೆಯು ಸೂಚನೆಯನ್ನು ಕೊಡುವಳು. ಇಲ್ಲಿ ಧ್ವನಿಯನ್ನು ಆಶಂಕಿಸಬಾರದು ಸಂಕೇತಸ್ಥಾನವು ಯಾವುದು ಎಂಬ ಪ್ರಶ್ನೆಯನ್ನೂ ಅದಕ್ಕೆ ಬೇಕಾದ ಉತ್ತರವನ್ನೂ ಮುಂದೆ ಸೂಚಿಸಬೇಕಾಗಿದ್ದರೂ ಸಹ ಅದನ್ನು ಆಕೆಯು ಇಲ್ಲಿ ತನ್ನ ಮಾತಿನಿಂದಲೇ ಪ್ರಕಟಿಸಿರುವ ಪ್ರಯುಕ್ತ ಇದು ಧ್ವನಿಯಾಗಲಾರದು. ಹೀಗೆಯೇ ಪಿಹಿತಾಲಂಕಾರದಲ್ಲಿಯೂ ಉದಾಹರಣವನ್ನು ಅನ್ವಯಿಸಿಕೊಳ್ಳಬೇಕು. ಆದರೆ ಇಲ್ಲಿ ಇಷ್ಟನ್ನು

ತಿಳಿಯಬಹುದು, ಉತ್ತರ, ಸೂಕ್ಷ್ಮ, ವಿಹಿತ, ವ್ಯಾಜೋಕ್ತಿ ಈ ನಾಲ್ಕು ಅಲಂಕಾರಗಳಿಗೆ ಕೊಟ್ಟಿರುವ 'ಯತ್ರಾಸೌ ವೇತಸೀ ಪಾಂಥ' ಇವೇ ಮೊದಲಾದ ಉದಾಹರಣಗಳಲ್ಲಿ ಭಾವವನ್ನು ಮಾತಿನಿಂದ ಪ್ರಕಟಿಸಿಲ್ಲ : ಆದರೆ ಹೇಳುವವನು ಮತ್ತು ಕೇಳುವವನು ಇವರಿಗೆ ಸಂಬಂಧಿಸಿದಂತೆ ವೇತಸೀಲತಾಗೃಹವೆಂಬ ವಸ್ತುವಿನಲ್ಲಿರುವ ಸೌಂದರ್ಯದ ಬಲದಿಂದ ಅದು ವ್ಯಂಗ್ಯವಾಗಿ ತೋರುತ್ತದೆ. ಅಲ್ಲಿಯೇ ಧ್ವನಿಗೆ ಅವಕಾಶವಿರುವುದರಿಂದ ಅದು ವಾಸ್ತವವಾಗಿ ಅಲಂಕಾರವೇ ಆಗಲಾರದು. ಆದರೆ ಭಾವವನ್ನು ಮಾತಿನಿಂದ ತಿಳಿಸಿದ್ದರೂ ಅಲ್ಲಿ ಅಲಂಕಾರವಿರಬಹುದೆಂದು ಪ್ರಾಚೀನರು ಹೇಳಿರುವುದರಿಂದ ನಾವು ಅಲಂಕಾರಗಳಿಗೆ ಆಯಾ ಉದಾಹರಣಗಳನ್ನು ಕೊಟ್ಟಿರುವೆವು. ಅದನ್ನೇ ಬೇರೆ ರೀತಿಯಲ್ಲಿ ತಿಳಿಸುವುದರಿಂದಲೂ ಭಾವವನ್ನು ಹೊರಗೆಡಹಬಹುದು. "ಎಲೈ ಪಥಿಕನೇ, ಎಲ್ಲಿ ವೇತಸೀಲತೆಯು ಬೆಳೆದಿದೆಯೋ ಅಲ್ಲಿಯೇ ಈ ನದಿಯನ್ನು ಅನಾಯಾಸವಾಗಿ ದಾಟಬಹುದು. ಹೀಗೆಂದು ದಾರಿಯನ್ನು ತಿಳಿಸಲು ಕೇಳಿದವನಿಗೆ ಕಾಮಿನಿಯು ಅದನ್ನು ಸೂಚಿಸುವಂತೆ ಹೇಳಿದಳು." ಹೀಗೆ ಬೇರೊಂದು ಬಗೆಯ ಅರ್ಥವನ್ನು ಕಲ್ಪಿಸುವುದರಿಂದಲೂ ಭಾವವನ್ನು ಪ್ರಕಟಿಸಬಹುದು. ಆದ್ದರಿಂದ ಇಲ್ಲಿಂದ ಮುಂದೆ ಬಂದಿರುವ 'ಸಂಕೇತಕಾಲಮನಸಂ' 'ಪುಂಸ್ತ್ವಂ ತನ್ವ್ಯಾ ವೈಜಯಂತೀ' 'ಭಾಮಾ ಜುಗೂಹ' ಎಂಬ ಉದಾಹರಣಗಳಲ್ಲಿಯೂ ಭಾವವನ್ನು ಪ್ರಕಟಿಸಲಿಕ್ಕೆ ಅವಕಾಶವಿರುವ ಪ್ರಯುಕ್ತ ಅಲ್ಲೆಲ್ಲ ಆಯಾ ಅಲಂಕಾರಗಳೇ ಉಂಟೆಂದು ತಿಳಿಯುವುದು,

## ೮೭. ಗೂಢೋಕ್ತ್ಯಲಂಕಾರ

ಗೂಢೋಕ್ತಿರನ್ಯೋದ್ದೇಶ್ಯಂ ಚೇದ್ಯದನ್ಯಂ ಪ್ರತಿ ಕಥ್ಯತೇ ।
ವೃಷಾಪೇಹಿ ಪರಕ್ಷೇತ್ರಾದಾಯಾತಿ ಕ್ಷೇತ್ರರಕ್ಷಕಃ ॥ ೧೫೩ ॥

ಯಂ ಪ್ರತಿ ಕಿಂಚಿದ್ವಕ್ತವ್ಯಂ ತತ್ತಟಸ್ಥೈರ್ಮಾಜ್ಞಾಯಿ ಇತಿ ತದೇವ ತದನ್ಯಂ ಕಂಚಿತ್ಪ್ರತಿ ಶ್ಲೇಷೇಣ ಉಚ್ಯತೇ ಚೇತ್ಸಾ ಗೂಢೋಕ್ತಿಃ. ವೃಷೇತ್ಯುದಾಹರಣಮ್. ಪರಕ್ಷೇತ್ರೇ ಸಸ್ಯಾನಿ ಭಕ್ಷಯಂತಂ ಪರಕಳತ್ರಂ ಭುಂಜಾನಂ ಕಾಮುಕಂ ಪ್ರತಿ ವಕ್ತವ್ಯಂ ಪರಕ್ಷೇತ್ರೇ ಸಸ್ಯಾನಿ ಭಕ್ಷಯಂತಂ ಕಂಚಿತ್ ಉಕ್ಷಾಣಂ ಸಮೀಪೇ ಚರಂತಂ ನಿರ್ದಿಶ್ಯ ಕಥ್ಯತೇ. ನೇಯಮಪ್ರಸ್ತುತಪ್ರಶಂಸಾ, ಕಾರ್ಯಕಾರಣಾದಿವ್ಯಂಗ್ಯತ್ವಾಭಾವಾತ್, ನಾಪಿ ಶ್ಲೇಷಮಾತ್ರಮ್ ಅಪ್ರಕೃತಾರ್ಥಸ್ಯ ಪ್ರಕೃತಾರ್ಥಾನ್ವಯಿತ್ವೇನ ಅವಿವಕ್ಷಿತತ್ವಾತ್. ತಸ್ಯ ಕೇವಲ ಮಿತರವಂಚನಾರ್ಥಂ ನಿರ್ದಿಷ್ಟತಯಾ ವಿಚ್ಛಿತ್ತಿವಿಶೇಷಸದ್ಭಾವಾತ್. ಯಥಾ ವಾ—

ನಾಥೋ ಮೇ ವಿಪಣಿಂ ಗತೋ ನ ಗಣಯತ್ಯೇಷಾ ಸಪತ್ನೀ ಚ ಮಾಂ
ತ್ಯಕ್ತ್ವಾ ಮಾಮಿಹ ಪುಷ್ಪಿಣೀತಿ ಗುರವಃ ಪ್ರಾಪ್ತಾ ಗೃಹಾಭ್ಯಂತರಮ್ ।
ಶಯ್ಯಾ ಮಾತ್ರಸಹಾಯಿನೀ ಪರಿಜನಃ ಶ್ರಾಂತೋ ನ ಮಾಂ ಸೇವತೇ
ಸ್ವಾಮಿನ್ನಾಗಮಲಾಲನೀಯ ರಜನೀಂ ಲಕ್ಷ್ಮೀಪತೇ ರಕ್ಷ ಮಾಮ್ ॥

ಅತ್ರ ಲಕ್ಷ್ಮೀಪತಿನಾಮ್ನೋ ಜಾರಸ್ಯ ಆಗಮನಂ ಪ್ರಾರ್ಥಯಮಾನಾಯಾಃ ತಟಸ್ಥವಂಚನಾಯ ಭಗವಂತಂ ಪ್ರತ್ಯಾಕ್ರೋಶಸ್ಯ ಪ್ರತ್ಯಾಯನಮ್.

ಬೇರೊಬ್ಬನನ್ನು ಉದ್ದೇಶಿಸಿ ಹೇಳಬೇಕಾದ್ದನ್ನು ಮತ್ತೊಬ್ಬನಿಗೆ ಹೇಳುವ ಮೂಲಕ ತಿಳಿಸುವುದೇ ಗೂಢೋಕ್ತಿ ಎನಿಸುವುದು. "ಎಲೈ ವೃಷಭವೇ, ಬೇರೆಯವರ ಹೊಲದಿಂದ ತೊಲಗು; ಆ ಹೊಲದ ಯಜಮಾನನು ಬರುತ್ತಾನೆ. (ಇನ್ನು ನೀನು ಇಲ್ಲಿದ್ದರೆ ಅವನು ಕಂಡು ನಿನ್ನನ್ನು ದಂಡಿಸುವನು)'' ಹೀಗೆ ವೃಷಭವನ್ನು ಹೊಲದಿಂದ ಹೊರಡಿಸುವುದಕ್ಕಾಗಿ ಹೇಳುವ ಮೂಲಕ ಬೇರೊಬ್ಬನನ್ನು ಉದ್ದೇಶಿಸಿ ಅವನಿಗೆ ತಿಳಿಸಬೇಕಾದ್ದನ್ನು ಇಲ್ಲಿ ಹೇಳಿರುವುದರಿಂದ ಇದು ಗೂಢೋಕ್ತಿ ಎನಿಸಿದೆ.

ಯಾವನೋ ಒಬ್ಬನಿಗೆ ಏನೋ ಒಂದು ಅಂಶವನ್ನು ತಿಳಿಸಬೇಕಾಗಿರುತ್ತದೆ. ಅದನ್ನು ಅವನಿಗೆ ಗೋಪ್ಯವಾಗಿ ತಿಳಿಸುವಾಗ ಬೇರೆಯವರು ತಿಳಿಯಬಾರದೆಂದು ಅದನ್ನೇ ತನ್ನ ಪಕ್ಕದಲ್ಲಿರುವ ಮತ್ತೊಂದು ವ್ಯಕ್ತಿಗೆ ಶ್ಲೇಷದಿಂದ ತಿಳಿಸುವುದೇ ಗೂಢೋಕ್ತಿ ಎನಿಸುವುದು, ಉತ್ತರಾರ್ಧದಲ್ಲಿ ಉದಾಹರಣವನ್ನು ತಿಳಿಸಿದೆ, ಇಲ್ಲಿ ಒಬ್ಬ ಕಾಮುಕನು ಪರಸ್ತ್ರೀಯೊಡನೆ ಭೋಗಿಸುತ್ತಿರುವಾಗ ಅವನನ್ನು ಆ ವ್ಯಭಿಚಾರದಿಂದ ತಪ್ಪಿಸಲಿಕ್ಕಾಗಿ ಮತ್ತೊಬ್ಬನು ತನ್ನ ಪಕ್ಕದ ಹೊಲದಲ್ಲಿ ಹುಲ್ಲನ್ನು ಮೇಯುತ್ತಲಿದ್ದ ಎತ್ತನ್ನು ನೋಡಿ ಹೇಳುತ್ತಾನೆ. ಎತ್ತನ್ನು ಆ ಹೊಲದಿಂದ ತೊಲಗಿಸುವುದು ಹೇಳುವವನ ಉದ್ದೇಶವಲ್ಲ. ಕಾಮುಕನು ಪರಸ್ತ್ರೀಯರಲ್ಲಿ ಭೋಗಿಸುವುದನ್ನು ಬಿಡಬೇಕೆಂಬುದೇ ಇಲ್ಲಿ ಉದ್ದೇಶ. ಅವನಿಗೆ ನೇರವಾಗಿ ಹೇಳಿದರೆ ಯಾರಿಗಾದರೂ ತಿಳಿದೀತೆಂದು ತನ್ನ ಪಕ್ಕದ ಹೊಲದಲ್ಲಿ ತಿರುಗುತ್ತಿದ್ದ ಎತ್ತನ್ನು ನೋಡಿ ಹೀಗೆ ಹೇಳಿದ್ದಾನೆ. ಇಲ್ಲಿ ಇಂತಹ ಪರಿಸ್ಥಿತಿ ಇರುವುದರಿಂದ ಇದು ಅವಸ್ತುತಪ್ರಶಂಸೆ ಏಕೆ ಆಗಬಾರದು ? ಎಂದರೆ ಇಲ್ಲಿ ಅದಕ್ಕೆ ಅವಕಾಶವಿಲ್ಲವೆಂದು ತಿಳಿಸುತ್ತಾನೆ. ಅಲ್ಲಿ ಕಾರ್ಯಕಾರಣಗಳು ವ್ಯಂಗ್ಯವಾಗಿ ತೋರುತ್ತವೆ. ಇಲ್ಲಿಯಾದರೂ ಅವು ವಾಚ್ಯವೇ ಆಗಿವೆ. ಅಲ್ಲಿ ಅಪ್ರಕೃತವಸ್ತುವಿನ ಪ್ರಶಂಸೆಯು ಪ್ರಕೃತವಸ್ತುವನ್ನು ಉದ್ದೇಶಿಸಿ ಹೊರಟಿದ್ದರೂ ಕಾರಣವೆನಿಸಿದ ಅಪ್ರಕೃತ ವಸ್ತುವಿನ ಪ್ರಶಂಸೆಯಿಂದ ಕಾರ್ಯವೆನಿಸಿದ ಪ್ರಕೃತವಸ್ತುವಿನ ಜ್ಞಾನವು ವ್ಯಂಗ್ಯವಾಗಿ ತೋರುವುದು. ಇಲ್ಲಿಯಾದರೂ ವೃಷಭದ ವೃತ್ತಾಂತದಿಂದ ಕಾಮುಕನ ವೃತ್ತಾಂತವು ವಾಚ್ಯವಾಗಿ ತಿಳಿದುಬರುತ್ತದೆ. ವೃಷಭವನ್ನು ಹೊಲದಿಂದ ಹೊರಡಿಸುವುದೇ ಕಾಮುಕನನ್ನು

ವ್ಯಭಿಚಾರದಿಂದ ತಪ್ಪಿಸುವುದಕ್ಕೆ ಕಾರಣವೆಂದು ವಾಚ್ಯವಾಗಿ ಹೇಳಿದೆ. ಇಲ್ಲಿ ಶ್ಲೇಷದ ಮೂಲಕ ವೃಷ, ಕ್ಷೇತ್ರ ಮೊದಲಾದ ಪದಗಳು ಎರಡು ಅರ್ಥಗಳನ್ನು ತಿಳಿಸುತ್ತವೆ. ಈ ಪದಗಳು ವೃಷಭಕ್ಕೂ ಹೊಲಕ್ಕೂ ಅನ್ವಯಿಸುವಂತೆ ಕಾಮುಕನಿಗೂ ಪರಸ್ತ್ರೀಗೂ ಸಹ ಅನ್ವಯಿಸುತ್ತವೆ. ಆದ್ದರಿಂದ ಇದನ್ನು ಶ್ಲೇಷದಲ್ಲಿಯೇ ಏಕೆ ಸೇರಿಸಬಾರದು ? ಎಂದು ಕೇಳಿದರೆ ಹಾಗೆ ಇದನ್ನು ಶ್ಲೇಷದಲ್ಲಿ ಸೇರಿಸಲಾಗುವುದಿಲ್ಲವೆಂದು ಸಮಾಧಾನ ವನ್ನು ಹೇಳುತ್ತಾನೆ. ಶ್ಲೇಷದಲ್ಲಿ ಎರಡು ಅರ್ಥಗಳ ಶಬ್ದಗಳನ್ನು ತಿಳಿಸುವುದು ಸಹಜವೇ ಆದರೂ ಪ್ರಕೃತಾರ್ಥಕ್ಕೆ ಅನ್ವಯಿಸುವಂತೆ ಅಪ್ರಕೃತಾರ್ಥವನ್ನು ಉಪ ಯೋಗಿಸಲಾಗುವುದು. ಹಾಗೆ ಅವೆರಡನ್ನು ಉಪಯೋಗಿಸುವುದೇ ಅಲ್ಲಿ ವಿವಕ್ಷಿತ ವಾಗಿರುತ್ತದೆ. ಶ್ಲೇಷವನ್ನು ಪ್ರಯೋಗಿಸುವವನಿಗೆ ಅಪ್ರಕೃತವಾದ ಅರ್ಥವನ್ನು ಪ್ರಕೃತಾರ್ಥಕ್ಕೆ ಸಂಬಂಧಿಸುವಂತೆ ಉಪಯೋಗಿಸುವುದೇ ಇಷ್ಟ. ಗೂಢೋಕ್ತಿಯಲ್ಲಿ ಶ್ಲೇಷವಿದ್ದರೂ ಅಪ್ರಕೃತವಾದ ವೃಷಭದ ವೃತ್ತಾಂತವನ್ನು ಪ್ರಕೃತವಾದ ಕಾಮುಕ ನೊಡನೆ ಅನ್ವಯಿಸುವುದು ವಿವಕ್ಷಿತವೆನಿಸಿಲ್ಲ. ಆ ಕಾಮುಕನಿಗೆ ತಿಳಿಸುವುದನ್ನು ಬೇರೆಯವರಿಗೆ ತಿಳಿಯದಂತೆ ಹೇಳಲಿಕ್ಕಾಗಿಯೇ ಇಲ್ಲಿ ಶ್ಲೇಷವನ್ನು ಉಪಯೋಗಿಸಿ ಕೊಳ್ಳಲಾಗಿದೆ. ಅಷ್ಟರಲ್ಲಿಯೇ ಶ್ಲೇಷದ ಕಾರ್ಯವು ಮುಗಿದು ಬೇರೆಯವರಿಗೆ ತಿಳಿಯ ದಂತೆ ಕಾಮುಕನೊಬ್ಬನಿಗೆ ಮಾತ್ರವೇ ಅರ್ಥವಾಗುವಂತೆ ಅಪ್ರಕೃತವಾದ ವೃಷಭಕ್ಕೆ ಹೇಳುವ ಮೂಲಕ ಗೂಢವಾಗಿ ತಿಳಿಸುವುದೇ ಇಲ್ಲಿ ವೈಚಿತ್ರ್ಯವೆನಿಸಿದ್ದರಿಂದ ಗೂಢೋಕ್ತಿ ಯನ್ನು ಅವಶ್ಯವಾಗಿ ಅಂಗೀಕರಿಸಿ ಬೇರೊಂದು ಉದಾಹಣವನ್ನು ಕೊಡುತ್ತಾನೆ. "ನನ್ನ ಪತಿಯು ಅಂಗಡಿಗೆ ಹೋಗಿದ್ದಾನೆ. ಈ ಸವತಿಯು ನನ್ನನ್ನು ಗಮನಿಸುವುದಿಲ್ಲ. ನನ್ನನ್ನು ಋತುಮತಿಯಾದವಳೆಂದು ಇಲ್ಲಿಯೇ ತೊರೆದು ಹಿರಿಯರು ಮನೆಯೊಳಗೆ ಹೋಗಿರುವರು. ಸೇವಕರು ಕೆಲಸಮಾಡಿ ಬೇಸರಗೊಂಡು ಹಾಸಿಗೆಯಲ್ಲಿ ಮಲಗಿರುವ ನನ್ನ ಬಳಿಗೆ ಬರುವುದಿಲ್ಲ, ಸ್ವಾಮಿ, ಮೇದಮಂದ್ಯಸೇ (ನನ್ನ ಬಳಿಗೆ ಬಂದು ನನ್ನ ಪ್ರೇಮವನ್ನು ಸ್ವೀಕರಿಸಲು ಯೋಗ್ಯನಾದ ಪ್ರಿಯನೇ) ರಾತ್ರಿಯೆಲ್ಲಾ ನನ್ನನ್ನು ರಕ್ಷಿಸು. ಲಕ್ಷ್ಮಿಯನ್ನು ರಕ್ಷಿಸುವವನು ನನ್ನಂಥಹ ಅನಾಥೆಯನ್ನು ರಕ್ಷಿಸದಿರುವಿಯಾ ?" ಇಲ್ಲಿ ಲಕ್ಷ್ಮೀಪತಿ ಎಂಬ ಹೆಸರಿನ ಕಾಮುಕನೊಬ್ಬನು ತನ್ನ ಬಳಿಗೆ ಬರಲೆಂದು ಪ್ರಾರ್ಥಿ ಸುವ ಕಾಮಿನಿಯು ಪಕ್ಕದಲ್ಲಿರುವ ಉದಾಸೀನಜನರಿಗೆ ತಿಳಿಯದಿರಲೆಂದು ಭಗವಂತನಲ್ಲಿ ಮೊರೆಯಿಡುವಳು. ಲಕ್ಷ್ಮೀಪತಿಗೆ ತಿಳಿಯುವಂತೆ ಹೇಳಲಿಕ್ಕಾಗಿ ಲಕ್ಷ್ಮೀಪತಿಯಾದ ನಾರಾಯಣನನ್ನು ಉದ್ದೇಶಿಸಿ ಹೇಳಿದ್ದರಿಂದ ಇದು ಗೂಢೋಕ್ತಿ ಎನಿಸಿದೆ.

## ೮೮. ವಿವೃತೋಕ್ತ್ಯಲಂಕಾರ

ವಿವೃತೋಕ್ತಿಃ ಶ್ಲಿಷ್ಟಗುಪ್ತಂ ಕವಿನಾವಿಷ್ಕೃತಂ ಯದಿ ।
ವೃಷಾಪೇಹಿ ಪರಕ್ಷೇತ್ರಾದಿತಿ ವಕ್ತಿ ಸೂಚನಮ್ ॥

ಶ್ಲಿಷ್ಟಗುಪ್ತಂ ವಸ್ತು ಯಥಾಕಥಂಚಿತ್ ಕವಿನಾ ಆವಿಷ್ಕೃತಂ ಚೇತ್ ವಿವೃತೋಕ್ತಿಃ. ವೃಷಾಪೇಹೀತ್ಯುದಾಹರಣೇ ಪೂರ್ವವದ್ಗುಪ್ತಂ ವಸ್ತು ಸಸೂಚನ ಮಿತಿ ಕವಿನಾ ಆವಿಷ್ಕೃತಮ್.

ವತ್ಸೇ ಮಾ ಗಾ ವಿಷಾದಂ ಶ್ವಸನಮುರುಜವಂ ಸಂತ್ಯಜೋರ್ಧ್ವಪ್ರವೃತ್ತಂ
ಕಂಪಃ ಕೋ ವಾ ಗುರುಸ್ತೇ ಕಿಮಿಹ ಬಲಭಿದಾ ಜೃಂಭಿತೇನಾತ್ರ ಯಾಹಿ ।
ಪ್ರತ್ಯಾಖ್ಯಾನಂ ಸುರಾಣಾಮಿತಿ ಭವಶಮನಚ್ಛದ್ಮನಾ ಕಾರಯಿತ್ವಾ
ಯಸ್ಮೈ ಲಕ್ಷ್ಮೀಮದಾದ್ವಃ ಸ ದಹತು ದುರಿತಂ ಮಂಥಮುಗ್ಧಃ ಪಯೋಧಿಃ ॥

ಇದಂ ಪರವಂಚನಾಯ ಗುಪ್ತಾವಿಷ್ಕರಣಮ್. ತ್ರಪಾಗುಪ್ತಾವಿಷ್ಕರಣಂ ಯಥಾ—

ದೃಷ್ಟ್ವೈಕ ಕೇಶವ ! ಗೋಪರಾಗಹತಯಾ ಕಿಂಚಿನ್ನ ದೃಷ್ಟಂ ಮಯಾ
ತೇನೇಹ ಸ್ಖಲಿತಾಸ್ಮಿ ನಾಥ ಪತಿತಾಂ ಕಿಂ ನಾಮ ನಾಲಂಬಸೇ ।
ಏಕಸ್ತ್ವಂ ವಿಷಮೇಷುಖಿನ್ನಮನಸಾಂ ಸರ್ವಾಬಲಾನಾಂ ಗತಿಃ
ಗೋಪ್ಯೈವಂ ಗದಿತಃ ಸಲೇಶಮವತಾದ್ಗೋಷ್ಠೇ ಹರಿರ್ವಶ್ಚಿರಮ್ ॥

ಅತ್ರ ಕೃಷ್ಣಸ್ಯ ಪುರತೋ ವಿಷಮೇ ಪರಿಸ್ಖಲನಮಭಿಹಿತವತ್ಯಾಸ್ತಂ ಕಾಮಯಮಾನಾಯಾಃ ಗೋಪಿಕಾಯಾಃ ವಚನೇ ವಿಷಮಪರಿಸ್ಖಲನಪತನತ್ರಾಣ ಸಂಪ್ರಾರ್ಥನರೂಪೇಣ ಝಟಿತಿ ಪ್ರತೀಯಮಾನೇನ ಅರ್ಥೇನ ಗುಪ್ತಂ ವಿವಕ್ಷಿತ ಮರ್ಥಾಂತರಂ ಸಲೇಶಂ ಸಸೂಚನಮಿತ್ಯನೇನಾವಿಷ್ಕೃತಮ್. ಏವಂ ನೈಷಧಾದಿಷು 'ಚೇತೋ ನಲಂ ಕಾಮಯತೇ ಮದೀಯಮ್, ಇತಿ ದಮಯಂತೀವಾಕ್ಯಾದಿಕಮಪಿ ಉದಾಹರಣಮ್. ಇದಂ ಶಬ್ದಶಕ್ತಿಕ್ರೋಡೀಕೃತಗುಪ್ತಾವಿಷ್ಕರಣಮ್. ಅರ್ಥ ಶಕ್ತಿಮೂಲಗುಪ್ತಾರ್ಥಾವಿಷ್ಕರಣಂ ಯಥಾ—

ಗಚ್ಛಾಮ್ಯಚ್ಯುತ ದರ್ಶನೇನ ಭವತಾ ಕಿಂ ತೃಪ್ತಿರುತ್ಪದ್ಯತೇ
ಕಿಂ ತ್ವೇವಂ ವಿಜನಸ್ಥಯೋರ್ಹತಜನಃ ಸಂಭಾವಯತ್ಯನ್ಯಥಾ ।
ಇತ್ಯಾಮಂತ್ರಣಭಂಗಿಸೂಚಿತವೃಥಾವಸ್ಥಾನಖೇದಾಲಸಾಂ
ಆಶ್ಲಿಷ್ಯನ್ ಪುಲಕೋತ್ಕರಾಂಚಿತತನುರ್ಗೋಪೀಂ ಹರಿಃ ಪಾತು ವಃ ॥

ಅತ್ರ 'ಗಚ್ಛಾಮ್ಯಚ್ಯುತ' ಇತ್ಯಾಮಂತ್ರಣೇನ ತ್ವಯಾ ರಂತುಕಾಮೇಚ್ಛಯಾ ಸ್ಥಿತಂ ತಸ್ಯ ಲಬ್ಧಮಿತ್ಯರ್ಥಶಕ್ತಿಲಭ್ಯಂ ವಸ್ತು ತೃತೀಯಪಾದೇನಾವಿಷ್ಕೃತಮ್. ಸರ್ವಮೇತತ್ಕವಿನಿಬದ್ಧವಕ್ತೃಗುಪ್ತಾವಿಷ್ಕರಣೋದಾಹರಣಂ. ಕವಿಗುಪ್ತಾವಿಷ್ಕ ರಣಂ ಯಥಾ—

ಕವಿಗುಪ್ತಾವಿಷ್ಕರಣಂ ಯಥಾ—

ಸುಭ್ರು ತ್ವಂ ಕುಪಿತೇತ್ಯಪಾಸ್ತಮಶನಂ ತ್ಯಕ್ತಾ ಕಥಾ ಯೋಷಿತಾಂ
ದೂರಾದೇವ ವಿವರ್ಜಿತಾಃ ಸುರಭಯಃ ಸ್ರಗ್ಗಂಧಧೂಪಾದಯಃ ।
ಕೋಪಂ ರಾಗಿಣಿ ಮುಂಚ ಮಯ್ಯವನತೇ ದೃಷ್ಟೇ ಪ್ರಸೀದಾಧುನಾ
ಸತ್ಯಂ ತ್ವದ್ವಿರಹಾದ್ಭವಂತಿ ದಯಿತೇ ಸರ್ವಾ ಮಮಾಂಧಾ ದಿಶಃ ॥

ಅತ್ರ ತಾವದೀರ್ಷ್ಯಾಮಾನಕಲುಷಿತದಯಿತಾಪ್ರಸಾದನವ್ಯಾಪಾರವಧಿಃ ಪ್ರತೀ-ಯತೇ. ದೃಷ್ಟಿರೋಗಾರ್ತಸ್ಯ ದೃಷ್ಟಿಂ ಪ್ರತ್ಯಾಕ್ರೋಶೋ ವಿವಕ್ಷಿತಾರ್ಥಃ. ಸ ಚ 'ದೃಷ್ಟೇ' ಇತ್ಯಸ್ಯ ಪದಸ್ಯ ಪ್ಲುತೋಚ್ಚಾರಣೇನ ಸಂಬಂಧ್ಧಿರೂಪತಾಮುವಗಮಯ್ಯ ಆವಿಷ್ಕೃತಃ. ಕವಿನಿಬದ್ಧವಕ್ತೃಗುಪ್ತಂ ಪರವಂಚನಾರ್ಥಂ ; ಕವಿಗುಪ್ತಂ ಸ್ವಪ್ರೌಢಿಕಥಾರ್ಥಮಿತಿ ಭೇದಃ,

ಹೇಳಬೇಕಾದ ಅಂಶವನ್ನು ಶ್ಲೇಷದ ಮೂಲಕ ಕವಿಯು ಗೋಪ್ಯವಾಗಿ ಹೊರ
ಪಡಿಸಿದರೆ, ಅದು ವಿವೃತೋಕ್ತಿ ಎನಿಸುವುದು. "ವೃಷಭವೇ ಬೇರೆಯುವರ ಹೊಲ
ದಿಂದ ತೊಲಗು" ಹೀಗೆಂದು ಒಬ್ಬನು ಬೇರೆಯುವನಿಗೆ ಗೋಪ್ಯವಾಗಿ ಒಂದು
ಅಂಶವನ್ನು ತಿಳಿಸಲಿಕ್ಕಾಗಿ ಹೇಳುವನು. ಪರಸ್ತ್ರೀಯೊಡನೆ ರಮಿಸುತ್ತಿರುವವನಿಗೆ
ವ್ಯಭಿಚಾರದಿಂದ ತೊಲಗುವಂತೆ ತಿಳಿಸಲಿಕ್ಕಾಗಿ ಹೀಗೆ ಎರಡು ಅರ್ಥಗಳನ್ನು ಕೊಡುವ
ಶಬ್ದಗಳನ್ನು ಪ್ರಯೋಗಿಸುತ್ತ ಗೋಪ್ಯವಾಗಿ ಒಬ್ಬನು ಹೇಳುವುದನ್ನು ಕವಿಯು ಇಲ್ಲಿ
ಸೂಚಿಸುತ್ತಾನೆ. ಹಿಂದಿನ ಗೂಢೋಕ್ತಿಯ ಉದಾಹರಣದಲ್ಲಿ ಗೋಪ್ಯವಾದ ಅಂಶ
ವನ್ನು ಸ್ಪಷ್ಟವಾಗಿ ಶಬ್ದದಿಂದಲೇ ತಿಳಿಸಿದೆ. ಇಲ್ಲಿ ಅದನ್ನು ಅನುವಾದಮಾಡುತ್ತಲೇ
ಕವಿಯು ಸೂಚಿಸುತ್ತಾನೆ. ಇದಕ್ಕೆ ಬೇರೆ ಉದಾಹರಣವನ್ನು ತಿಳಿಸುತ್ತಾನೆ "ಮಗಳೇ,
ನೀನು ಆಯಾಸವನ್ನೂ (ವಿಷಪಾನ ಮಾಡಿದ ಶಿವನನ್ನೂ) ಹೆಚ್ಚು ವೇಗವನ್ನೂ ಮೇಲೆ
ಉಸಿರು ಬಿಡುವುದನ್ನೂ ತೊರೆ. ನಿನಗೆ ಈ ಹೆಚ್ಚಿನ ನಡುಕವೇಕೆ ಬೇಕು ? ನೀರನ್ನು
ಕುಡಿಯುವ ವರುಣನಿಂದ ನಿನಗೆ ಏನು ಫಲ ? ಆ ಬೃಹಸ್ಪತಿಯಿಂದ ಏನಾದೀತು ?
ಬಲವನ್ನು ನಾಶಪಡಿಸುವ ಈ ಆಕಳಿಕೆಯನ್ನು ತೊರೆ (ಬಲನೆಂಬ ರಾಕ್ಷಸನನ್ನು
ಕೊಂದ ಇಂದ್ರನಿಗೆ ಏನಾದೀತು ?) ಇಲ್ಲಿ ಕೃಷ್ಣನ ಬಳಿಗೆ ಸಮಾಧಾನದಿಂದ ಬಾ.
ಹೀಗೆ ಭಯವನ್ನು ತೊಲಗಿಸುವ ನೆಪದಿಂದ ದೇವತೆಗಳನ್ನು ತಿರಸ್ಕರಿಸಿ ಯಾವ
ಕೃಷ್ಣನಿಗೆ ಮಥನದಿಂದ ಮೋಹಗೊಂಡ ಸಮುದ್ರರಾಜನು ತನ್ನ ಮಗಳನ್ನು ಕೊಟ್ಟು
ಮದುವೆಮಾಡಿದನೋ ಅಂತಹ ಕೃಷ್ಣನು ನಿಮ್ಮ ಪಾಪಗಳನ್ನು ತೊಲಗಿಸಲಿ''.
ಇಲ್ಲಿ ಸಮುದ್ರರಾಜನು ಲಕ್ಷ್ಮಿಯನ್ನು ಇಂದ್ರಾದಿದೇವತೆಗಳಿಗೆ ಮದುವೆಮಾಡಿ
ಕೊಡದಂತೆ ತಪ್ಪಿಸಲಿಕ್ಕಾಗಿ "ಭಯ ವ್ಯಥೆ ಚಿಂತೆ ನಡುಕಗಳನ್ನು ತೊರೆದು ಕೃಷ್ಣನ

ಆಶ್ರಯದಲ್ಲಿ ಕೊಂಚ ಕಾಲ ಸುಖವಾಗಿ ನಿಲ್ಲು" ಎಂದು ಆಕೆಗೆ ಗೋಪ್ಯವಾಗಿ ಸೂಚನೆಯನ್ನು ಕೊಟ್ಟನೆಂದು ಕವಿಯು ತಿಳಿಸಿದ್ದಾನೆ. ಇಂದ್ರ, ವರುಣ, ಹರ, ಬೃಹಸ್ಪತಿ, ವಾಯು ಇವರೆಲ್ಲರನ್ನೂ ತೊರೆಸಿ ಕೃಷ್ಣನಿಗೇ ಆಕೆಯನ್ನು ಮದುವೆ ಮಾಡಿಕೊಡಬೇಕೆಂಬುದನ್ನು ಸಮುದ್ರರಾಜನು ಹೇಳಿದನೆಂದು ಗೋಪ್ಯವಾಗಿ ಸೂಚಿಸುವ ಮೂಲಕ ಕವಿಯು ಹೊರಪಡಿಸಿರುವುದರಿಂದ ಇದು ವಿವೃತೋಕ್ತಿ ಎನಿಸಿದೆ.

ಲಜ್ಜೆಯಿಂದ ಗೋಪ್ಯವಾದ ಅಂಶವನ್ನು ಹೊರಪಡಿಸುವುದಕ್ಕೆ ಉದಾಹರಣವು ಹೀಗಿವೆ. "ಕೃಷ್ಣಪರಮಾತ್ಮನೇ, ನನ್ನ ದೃಷ್ಟಿಯು ಗೋವಿನ ಪಾದದ ತುಳಿತದಿಂದ ಮೇಲಕ್ಕೆ ಎದ್ದ ಧೂಳಿನಿಂದ ತುಂಬಿರುವುದರಿಂದ ಅದು ಯಾವ ವಸ್ತುವನ್ನೂ ನೋಡುತ್ತಿಲ್ಲ. ಆದ್ದರಿಂದ ಇಲ್ಲಿ ಎಡವಿ ಬಿದ್ದಿರುವೆನು. ಸ್ವಾಮಿ, ಕೆಳಗೆ ಬಿದ್ದಿರುವ ನನ್ನನ್ನು ನೀನು ಏಕೆ ಮೇಲಕ್ಕೆ ಎತ್ತುತ್ತಿಲ್ಲ? ಭಯಂಕರವಾದ ಸನ್ನಿವೇಶಗಳಲ್ಲಿ ವ್ಯಥೆಗೊಂಡಿರುವ ಲೋಕದ ಸಮಸ್ತ ದುರ್ಬಲರಿಗೂ ನಿನೊಬ್ಬನೇ ಗತಿ ಎನಿಸಿರುವೆ. (ಮನ್ಮಥನ ಬಾಣಗಳ ಹೊಡತದಿಂದ ಮನಸ್ಸಿನಲ್ಲಿ ವ್ಯಥೆಗೊಂಡ ಅಬಲೆಯರೆಲ್ಲರಿಗೂ ನೀನೇ ಆಶ್ರಯದಾತನಾಗಿರುವೆ) ಹೀಗೆ ಗೋಪಿಯ ಮೊರೆಯನ್ನು ಲಾಲಿಸಿ ಗೊಲ್ಲರ ಹಟ್ಟಿಯಲ್ಲಿ ಲೀಲೆಯಿಂದ ವಿನೋದಪಡುತ್ತಿರುವ ಕೃಷ್ಣಪರಮಾತ್ಮನು ನಿಮ್ಮನ್ನು ಕಾಪಾಡಲಿ". ಇಲ್ಲಿ ಕೃಷ್ಣನೆದುರಿಗೆ ಭಯಂಕರವಾದ ಕಷ್ಟದಲ್ಲಿ ಸಿಲುಕಿರುವೆನೆಂದು ಹೇಳುತ್ತಾ ಅವನನ್ನು ರಕ್ಷಣೆಗಾಗಿ ಯಾಚಿಸುತ್ತಿರುವ ಗೋಪಿಯ ಮಾತಿನಲ್ಲಿ ಮನ್ಮಥನ ಬಾಣಕ್ಕೆ ಗುರಿಯಾಗಿ ತಾನು ಅನುಭವಿಸುತ್ತಿರುವ ಕ್ಲೇಶದಿಂದ ತನ್ನನ್ನು ರಕ್ಷಿಸುವಂತೆ ಪ್ರಾರ್ಥನೆ ಇರುವುದು. ಇದು ಇಲ್ಲಿ ವ್ಯಂಗ್ಯವೆನಿಸಿದೆ. ಇದರಿಂದ ಬೇರೊಂದು ವಿವಕ್ಷಿತವಾದ ಅರ್ಥವು 'ಸಲೇಶಂ ಸಸೂಚನಂ' ಎಂಬ ಮಾತುಗಳಿಂದ ಹೊರಪಡುತ್ತದೆ. ಗೋಪಿಯು ಮನ್ಮಥನ ಬಾಧೆಯಿಂದ ನರಳುತ್ತಿರುವುದರಿಂದ ತನಗೆ ಸಂಭೋಗದ ಅವಕಾಶವನ್ನು ಕಲ್ಪಿಸಿ ತನ್ನ ಮನಸ್ಸನ್ನು ಸಂತೋಷಪಡಿಸಬೇಕೆಂಬ ಸೂಚನೆಯನ್ನು ಸೂಕ್ಷ್ಮವಾಗಿ ಇಲ್ಲಿ ಕವಿಯು ಗೋಪಿಯ ಮಾತಿನಿಂದ ಹೊರಪಡಿಸಿರುವನು. ಹೀಗೆಯೇ ನೈಷಧದಲ್ಲಿ ನನ್ನ ಮನಸ್ಸು ನಳನನ್ನೇ ಬಯಸುತ್ತಿದೆ ಎಂದು ದಮಯಂತಿಯು ಹೇಳುವ ಮಾತೂ ಸಹ ಇದಕ್ಕೆ ಉದಾಹರಣವಾಗುತ್ತದೆ. ಇಲ್ಲಿ ಶಬ್ದಶಕ್ತಿಮೂಲ ಧ್ವನಿಯ ಮೂಲಕ ಈ ಬಗೆಯ ಗೋಪ್ಯವಿಚಾರದ ಸೂಚನೆಯನ್ನು ಕೊಡಲಾಗಿದೆ. ಅರ್ಥಶಕ್ತಿಮೂಲಧ್ವನಿಯ ಮೂಲಕ ಗೋಪ್ಯವಾದ ಅಂಶವನ್ನು ಮುಂದೆ ಕೊಟ್ಟಿದೆ.

"ಅಚ್ಯುತನೇ, ನಾನು ಹೊರಡುವೆನು. ನಿನ್ನನ್ನು ನೋಡಿದ್ದರಿಂದ ಯಾವ ತೃಪ್ತಿಯಾಗುತ್ತದೆ? ಇದೂ ಅಲ್ಲದೆ, ಏಕಾಂತ ಸ್ಥಳದಲ್ಲಿ ಸೇರಿರುವ ನಮ್ಮಿಬ್ಬರ ಬಗ್ಗೆ ಲೋಕದ ನೀಚಜನರು ಬೇರೆ ರೀತಿಯಲ್ಲಿ ಊಹಿಸುತ್ತಾರೆ. ಹೀಗೆ ಅಚ್ಯುತ ಎಂದು ಕರೆಯುವ ರೀತಿಯಿಂದ ತಾನು ವ್ಯರ್ಥವಾಗಿ ನಿಂತೆನೆಂದು ಆಯಾಸಗೊಂಡ ನೋದು

ಕೂಡಿದ್ದ ಗೋಪಿಕಾಸ್ತ್ರೀಯನ್ನು ಆಲಿಂಗಿಸುತ್ತ ಮೈಯಲ್ಲಿ ರೋಮಾಂಚವನ್ನು ಅನುಭವಿಸುತ್ತಿದ್ದ ಕೃಷ್ಣನು ನಿಮ್ಮನ್ನು ಕಾಪಾಡಲಿ." ಇಲ್ಲಿ 'ಅಚ್ಯುತನೇ ನಾನು ಹೊರಡವೆನು, ಎಂದು ಹೇಳಿದ್ದರಿಂದ "ನಿನ್ನೊಡನೆ ರಮಿಸುವ ಇಚ್ಛೆಯಿಂದ ಇಷ್ಟು ಹೊತ್ತು ಇದ್ದದ್ದಾಯಿತು. ಆದರೂ ಆ ಬಗೆಯ ಅವಕಾಶವು ದೊರೆಯಲಿಲ್ಲ" ಎಂಬ ವಸ್ತುವು ಅರ್ಥಶಕ್ತಿಮೂಲಧ್ವನಿಯಿಂದ ತೋರಿಬರುತ್ತದೆ. ಇದನ್ನು ಮೂರನೆಯ ಪಾದದಲ್ಲಿ ಕವಿಯು ಸೂಚಿಸಿದ್ದಾನೆ. ಇಲ್ಲಿ ಶಬ್ದಶಕ್ತಿಯಿಂದ ಈ ಬಗೆಯ ಸೂಚನೆ ಹೊರಬೀಳುವುದಿಲ್ಲ. ವೃಥಾವಸ್ಥಾನಖೇದಾಲಸಾ ಎಂಬ ಪದದ ಅರ್ಥವು ಇಲ್ಲಿ ಗೋಪಿಗೆ ರಮಿಸಲು ಇಚ್ಛೆ ಇದ್ದರೂ ಅದು ದೊರೆಯಲಿಲ್ಲವೆಂಬ ಅಂಶವನ್ನು ಸೂಚಿಸುತ್ತದೆ. ಇದೆಲ್ಲವೂ ಕವಿಯಿಂದ ಕಲ್ಪಿತವಾದ ವಕ್ತೃವು ಹೇಳುವುದನ್ನು ಅನುವಾದ ಮಾಡುವ ಮೂಲಕ ಗೋಪ್ಯವಾದ ರೀತಿಯಲ್ಲಿ ಕವಿಯು ಸೂಚಿಸಿದ್ದರಿಂದ ಹೊರಬೀಳುತ್ತದೆಯೆಂದು ತಿಳಿಯಬೇಕು.

ಕವಿಯೇ ನೇರವಾಗಿ ಗೋಪ್ಯಾಂಶವನ್ನು ಹೊರಪಡಿಸುವುದಕ್ಕೆ ಉದಾಹರಣವು ಹೀಗಿದೆ. "ಶೋಭನವಾದ ಹುಬ್ಬುಗಳಿಂದ ಪ್ರೀತಿಪಾತ್ರವಾದ ದೃಷ್ಟಿಯೇ, ನೀನು ಕೆಂಪೇರಿರುವೆ ಎಂದು ಆಹಾರವನ್ನು ತೊರೆದೆನು : ಸ್ತ್ರೀಯರ ವ್ಯವಹಾರವನ್ನೂ ಬಿಟ್ಟೆನು. ಸುಗಂಧಮಯವಾದ ಪುಷ್ಪಗಂಧ ಧೂಪ ಇವೆಲ್ಲವನ್ನೂ ದೂರದಿಂದಲೇ ತೊರೆದೆನು. ನಮ್ರನಾಗಿ ಕೆಂಪಿನ ದೋಷದಿಂದ ಕೂಡಿರುವ ನನ್ನ ಬಗ್ಗೆ ಕೋಪವನ್ನು ಬಿಡು. ಈಗ ಶುದ್ಧವಾಗು. ನಿನ್ನ ಸಹಕಾರವಿಲ್ಲದ್ದರಿಂದ ದಿಕ್ಕುಗಳೆಲ್ಲವೂ ನನಗೆ ಶೂನ್ಯವೆನಿಸಿವೆ!" ಇಲ್ಲಿ ಅಸೂಯೆ ಮತ್ತು ಪ್ರಣಯಕೋಪಗಳಿಂದ ಮನಸ್ಸನ್ನು ಕೆಡಿಸಿ ಕೊಂಡಿರುವ ಪ್ರಿಯೆಯನ್ನು ಸಮಾಧಾನ ಪಡಿಸುವುದಕ್ಕಾಗಿ ಮಾಡುವ ಪ್ರಯತ್ನವು ವ್ಯಂಗ್ಯವಾಗಿ ತೋರುತ್ತದೆ. ಹಾಗೆಯೇ ಒಬ್ಬನು ಹೇಳಬೇಕಾಗಿರುವ ಗೋಪ್ಯಾಂಶ ವನ್ನು ಶ್ಲೇಷದಿಂದ ಕವಿಯು ಪ್ರಕಟಿಸಿದ್ದಾನೆ. ಇಲ್ಲಿ ಶ್ಲಿಷ್ಟಪದಗಳ ಪ್ರಯೋಗದಿಂದ ನಾಯಕನು ಪ್ರಿಯೆಯನ್ನು ಸಮಾಧಾನ ಮಾಡುವ ವಿಧಾನವು ವ್ಯಂಗ್ಯವೆನಿಸಿದೆ. ಆದರೆ ಇಲ್ಲಿ ಹೇಳುವವನ ಉದ್ದೇಶವೇ ಬೇರೆ ಇದೆ. ಅವನು ಕಣ್ಣಿನ ರೋಗದಿಂದ ನರಳುತ್ತಿರುವನು. ಆ ಕಣ್ಣು ಕೆಂಪಾಗಿದೆ. ಆದರಿಂದ ಅವನಿಗೆ ಹೊರಗಿನ ವಸ್ತು ಗಳೊಂದೂ ಕಾಣುತ್ತಿಲ್ಲ. ಆ ಕಣ್ಣನ್ನು ಪ್ರಸನ್ನವಾಗುವಂತೆ ಕೇಳಿಕೊಳ್ಳುತ್ತಾನೆ. ಇದು ಇಲ್ಲಿ ವಿವಕ್ಷಿತವಾದ ಅರ್ಥ. ಆದರೆ ಇದು ದೃಷ್ಟಿ ಎಂಬ ಪದವನ್ನು ಸಂಬೋ ಧಿಸಿ ಮೂರು ಮಾತ್ರೆಯುಳ್ಳ ಪ್ಲುತಸ್ವರದಲ್ಲಿ ಉಚ್ಚರಿಸಿರುವುದರಿಂದ ಪ್ರಕಟವಾಗು ತ್ತದೆ, ಗೂಢೋಕ್ತಿಯಲ್ಲಿ ಕವಿಯು ಕಲ್ಪಿಸಿದ ವ್ಯಕ್ತಿಯೊಬ್ಬನು ಬೇರೆಯವರಿಗೆ ತಿಳಿಯ ದಂತೆ ಗೋಪ್ಯಾಂಶವನ್ನು ತಿಳಿಸಿದರೆ ಇಲ್ಲಿ ಕವಿಯು ನೇರವಾಗಿ ಅದನ್ನು ಅನುವಾದ ಮಾಡಿ ತಿಳಿಸಿದ್ದು ಅವನ ಪ್ರೌಢಿಮೆಯನ್ನು ಹೊರಪಡಿಸುತ್ತದೆ. ಇಷ್ಟೇ ಇವೆರಡಕ್ಕೂ ಇರುವ ಭೇದ.

## ೮೯. ಯುಕ್ತ್ಯಲಂಕಾರ

ಯುಕ್ತಿಃ ಪರಾಭಿಸಂಧಾನಂ ಕ್ರಿಯಯಾ ಮರ್ಮಗುಪ್ತಯೇ ।
ತ್ವಾಮಾಲಿಖಂತೀ ದೃಷ್ಟ್ವಾನ್ಯಂ ಧನುಃ ಪೌಷ್ಪಂ ಕರೇಽಲಿಖತ್ ॥

ಅತ್ರ ಪುಷ್ಪಚಾಪಲೇಖನಕ್ರಿಯಯಾ ಮನ್ಮಥೋ ಮಯಾ ಲಿಖಿತ ಇತಿ ಭ್ರಾಂತ್ಯುತ್ಪಾದನೇನ ಸ್ವಾನುರಾಗರೂಪಮರ್ಮಗೋಪನಾಯ ಪರವಂಚನಂ ವಿವಕ್ಷಿತಮ್. ಯಥಾ ವಾ—

ದಂಪತ್ಯೋರ್ನಿಶಿ ಜಲ್ಪತೋರ್ಗೃಹಶುಕೇನಾಕರ್ಣಿತಂ ಯದ್ವಚಃ
ತತ್ಪ್ರಾತರ್ಗುರುಸನ್ನಿಧೌ ನಿಗದತಸ್ತಸ್ಯಾತಿಮಾತ್ರಂ ವಧೂಃ ।
ಕರ್ಣಾಲಂಬಿತಪದ್ಮರಾಗಶಕಲಂ ವಿನ್ಯಸ್ಯ ಚಂಚೂಪುಟೇ
ವ್ರೀಡಾರ್ತಾ ನಿದಧಾತಿ ದಾಡಿಮಫಲವ್ಯಾಜೇನ ವಾಗ್ಬಂಧನಮ್ ॥

ಅತ್ರ ಶುಕವಾಙ್ಮುದ್ರಣಯಾ ತನ್ಮುಖೇನ ಸ್ವಕೀಯರಹಸ್ಯವಚನಶುಶ್ರೂಷುಶ್ವಶ್ರೂಜನವಂಚನಂ ಕೃತಮ್. ವ್ಯಾಜೋಕ್ತೌ ಆಕಾರಗೋಪನಂ ಯುಕ್ತೌ ತದನ್ಯಗೋಪನಮಿತಿ ಭೇದಃ. ಯದ್ವಾ ವ್ಯಾಜೋಕ್ತೌ ಉಕ್ತ್ಯಾ ಗೋಪನಮಿಹ ತು ಕ್ರಿಯಯಾ ಗೋಪನಮಿತಿ ಭೇದಃ. ಏವಂ ಚ 'ಆಯಾಂತಮಾಲೋಕ್ಯ ಹರಿಂ ಪ್ರತೋಳ್ಯಾಮ್'' ಇತಿ ಶ್ಲೋಕೇಽಪಿ ಯುಕ್ತಿರೇವ.

ಒಬ್ಬನು ರಹಸ್ಯವಾಗಿ ಮಾಡಿದ ಕೆಲಸವನ್ನು ಮುಚ್ಚಲಿಕ್ಕಾಗಿ ಯಾವುದೋ ಒಂದು ಕ್ರಿಯೆಯ ಮೂಲಕ ಇತರರನ್ನು ವಂಚಿಸುವುದೇ ಯುಕ್ತ್ಯಲಂಕಾರವೆನಿಸುವುದು. ನಾಯಕನಿಗೆ ದೂತಿಯು ಹೇಳುತ್ತಾಳೆ, ''ನಿನ್ನ ಚಿತ್ರವನ್ನು ಬರೆಯುತ್ತಿದ್ದ ಪ್ರೇಯಸಿಯು ತನ್ನ ಹಿಂದೆ ನಿಂತಿದ್ದ ಬೇರೊಬ್ಬ ಪುರುಷನನ್ನು ಕಂಡು ಅವನಿಗೆ ತಿಳಿಯದಿರಲೆಂದು ಚಿತ್ರದ ಕೈಯಲ್ಲಿ ಪುಷ್ಪದ ಬಾಣವನ್ನು ಬರೆದಳು.'' ಇಲ್ಲಿ ಪುಷ್ಪದ ಬಾಣವನ್ನು ಬರೆಯುವ ಮೂಲಕ ''ನಾನು ಮನ್ಮಥನನ್ನು ಬರೆದಿರುವೆನು'' ಎಂಬ ಭ್ರಾಂತಿಯನ್ನು ನೋಡುವವರಿಗೆ ಹುಟ್ಟಿಸಿ ತನಗೆ ನಾಯಕನಲ್ಲಿ ಪ್ರೇಮವಿರುವುದೆಂಬ ಮರ್ಮವನ್ನು ಮುಚ್ಚಿಕೊಳ್ಳಲಿಕ್ಕಾಗಿ ಪ್ರೇಯಸಿಯು ಪ್ರಯತ್ನ ಮಾಡಿದ್ದಾಳೆ. ತನಗೆ ಇರುವ ಅನುರಾಗವನ್ನು ಬೇರೆಯವರಿಗೆ ತೋರಿಸಬಾರದೆಂದು ನಾಯಕನ ಚಿತ್ರವನ್ನೇ ಬರೆಯುತ್ತಿದ್ದರೂ ಸಹ ಕೈಯಲ್ಲಿ ಮನ್ಮಥನ ಧನುಸ್ಸನ್ನು ಬರೆದು ಅದು ಮನ್ಮಥನ ಚಿತ್ರವೆಂಬ ಭ್ರಾಂತಿಯನ್ನು ಹುಟ್ಟಿಸುತ್ತ ನೋಡುವವರನ್ನು ವಂಚನೆಗೊಳಿಸುವ ಪ್ರಯುಕ್ತ ಇದು ಯುಕ್ತ್ಯಲಂಕಾರವೆನಿಸಿದೆ. ಇದಕ್ಕೆ ಬೇರೊಂದು ಉದಾಹರಣೆಯನ್ನು ಕೊಡುತ್ತಾನೆ. ''ದಂಪತಿಗಳು ರಾತ್ರಿಯ ವೇಳೆ ಗೋಪ್ಯವಾಗಿ ಮಾತನಾಡಿ

ಕೊಳ್ಳುತ್ತಿರಲು ಅವರ ಮಾತನ್ನು ಮನೆಯಲ್ಲಿ ಸಾಕಿದ ಗಿಳಿಯು ಕೇಳಿಕೊಂಡು ಬೆಳಗ್ಗೆ ಮನೆಯ ಹಿರಿಯರ ಎದುರಿಗೆ ಹೇಳುತ್ತಿರಲು ಸೊಸೆಯು ಬಹಳವಾಗಿ ಲಜ್ಜೆಯಿಂದ ನೊಂದುಕೊಂಡು ತನ್ನ ಕಿವಿಯಲ್ಲಿ ಜೋತಾಡುತ್ತಿದ್ದ ಕಮಲದ ದಳ ಒಂದನ್ನು ಗಿಳಿಯ ಕೊಕ್ಕಿನಲ್ಲಿ ಇಟ್ಟು ದಾಳಿಂಬರೆ ಹಣ್ಣಿನ ಬೀಜವನ್ನು ಇಡುವ ನೆಪದಿಂದ ಅದಕ್ಕೆ ವಾಗ್ಬಂಧವನ್ನು ಮಾಡುತ್ತಾಳೆ." ರಾತ್ರಿ ಸಂಭೋಗಕಾಲದಲ್ಲಿ ಪ್ರಿಯೆಯು ಪ್ರಿಯನೊಡನೆ ರಹಸ್ಯವಾಗಿ ಮಾತನಾಡಿದ್ದನ್ನೆಲ್ಲಾ ಗಿಳಿಯು ಅತ್ತೆ ಮೊದಲಾದವರ ಎದುರಿಗೆ ಹೇಳುತ್ತಿರಲು ಅದನ್ನು ಕೇಳಿ ಸೊಸೆಗೆ ನಾಚಿಕೆಯಾಯಿತು. ಆಗ ಅದರ ಬಾಯನ್ನು ಮುಚ್ಚಿಸಲಿಕ್ಕಾಗಿ ಆಕೆಯು ತನ್ನ ಕಿವಿಯಲ್ಲಿ ಅಲಂಕಾರಕ್ಕಾಗಿ ಇಟ್ಟುಕೊಂಡಿದ್ದ ಹೂವಿನ ದಳ ಒಂದನ್ನು ಗಿಳಿಯ ಬಾಯಿಗೆ ಇಟ್ಟು ಅದಕ್ಕೆ ಮಾತನಾಡದಂತೆ ವಾಗ್ಬಂಧವನ್ನು ಮಾಡಿದಳು. ಪಕ್ಕದಲ್ಲಿ ನೋಡುತ್ತಿದ್ದವರಿಗೆ ಈಕೆಯು 'ಗಿಳಿಗೆ ದಾಳಿಂಬರಬೀಜವನ್ನು ತಿನ್ನಿಸುತ್ತಿರುವಳು' ಎಂಬ ಭ್ರಾಂತಿಯನ್ನು ಹುಟ್ಟಿಸಿದಳು. ಈ ಮೂಲಕ ಆಕೆಯು ತನ್ನ ಗೋಪ್ಯವಾದ ಮಾತುಗಳನ್ನು ಮನೆಯ ಹಿರಿಯರು ಕೇಳದಂತೆ ಮಾಡಿಕೊಂಡಳು. ಹೀಗೆ ತಿಳಿಸುವುದೇ ಯುಕ್ತಿ. ವ್ಯಾಜೋಕ್ತಿಯಲ್ಲೂ ಮನುಷ್ಯನ ಇಂಗಿತವನ್ನು ಮರೆಮಾಚಲಾಗುವುದು. ಇಲ್ಲಿಯಾದರೋ ಅದಕ್ಕಿಂತ ಬೇರೆಯಾದದ್ದೆಲ್ಲವನ್ನೂ ಮರೆಮಾಚಲಾಗುವುದು ಅಥವಾ ವ್ಯಾಜೋಕ್ತಿಯಲ್ಲಿ ಮಾತಿನಿಂದ ತನ್ನ ರಹಸ್ಯವನ್ನು ಮುಚ್ಚಲಾಗುವುದು. ಇಲ್ಲಿಯಾದರೋ ಯಾವುದಾದರೊಂದು ಕ್ರಿಯೆಯಿಂದ ಗೋಪ್ಯಾಂಶವನ್ನು ಮರೆಮಾಚಲಾಗುವುದು. ಇಷ್ಟೇ ಇವೆರಡಕ್ಕೂ ಇರುವ ಭೇದ. ಇದರಿಂದ 'ಆಯಾಂತಮಾಲೋಕ್ಯ ಹರಿಂ' ಎಂಬ ಪದ್ಯದಲ್ಲಿ ಯುಕ್ತಿಯನ್ನೇ ಹೇಳಬೇಕು.

## ೯೦. ಲೋಕೋಕ್ತ್ಯಲಂಕಾರ

ಲೋಕಪ್ರವಾದಾನುಕೃತಿರ್ಲೋಕೋಕ್ತಿರಿತಿ ಕಥ್ಯತೇ ।
ಸಹಸ್ವ ಕತಿಚಿನ್ಮಾಸಾನ್ ಮೀಲಯಿತ್ವಾ ವಿಲೋಚನೇ ॥

ಅತ್ರ ಲೋಚನೇ ಮೀಲಯಿತ್ವೇತಿ ಲೋಕವಾದಾನುಕೃತಿಃ ಯಥಾ ವಾ ವರದರಾಜಸ್ತವೇ—

ನಾಮ್ನೈವತೇ ವರದ ವಾಂಛಿತದಾತೃಭಾವಂ
ವ್ಯಾಖ್ಯಾತ್ಯತೋ ನ ವಹಸೇ ವರದಾನಮುದ್ರಾಮ್ ।
ವಿಶ್ವಪ್ರಸಿದ್ಧತರವಿಪ್ರಕುಲಪ್ರಸೂತೇಃ
ಯಜ್ಞೋಪವೀತವಹನಂ ಹಿ ನ ಖಲ್ವಪೇಕ್ಷ್ಯಮ್ ॥

ಅತ್ರ ಉತ್ತರಾರ್ಧಂ ಲೋಕವಾದಾನುಕಾರಃ—

ಲೋಕದಲ್ಲಿ ರೂಢಿಯಲ್ಲಿರುವ ಮಾತನ್ನು ಅನುಕರಿಸುವುದೇ ಲೋಕೋಕ್ತ್ಯಲಂಕಾರವೆನಿಸುತ್ತದೆ. "ಹೇಗಾದರೂ ಕಣ್ಣುಗಳನ್ನು ಮುಚ್ಚಿಕೊಂಡು ಕೆಲವು ತಿಂಗಳುಗಳನ್ನು ಸಹಿಸಿಕೋ" ಇಲ್ಲಿ "ಕಣ್ಣುಗಳನ್ನು ಮುಚ್ಚಿಕೊಂಡು" ಎಂಬಲ್ಲಿ ಲೋಕದ ರೂಢಿಯ ಮಾತನ್ನು ಅನುಕರಣಮಾಡಲಾಗಿದೆ. ಎಷ್ಟೇ ಕಷ್ಟವು ಬಂದರೂ ಅದನ್ನು ಕೆಲವು ಕಾಲ ಗಮನಿಸದಂತೆ ಕಣ್ಣು ಮುಚ್ಚಿಕೊಂಡು ಸಹಿಸಿಕೋ ಎಂದು ಲೋಕದಲ್ಲಿ ಹೇಳುವ ವಾಡಿಕೆಯಿದೆ. ಅದನ್ನು ಕಾವ್ಯದಲ್ಲಿ ಅನುಕರಣ ಮಾಡುವುದೇ ಲೋಕೋಕ್ತಿ ಎನಿಸುತ್ತದೆ. ವರದರಾಜಸ್ತವದಿಂದ ಈ ಉದಾಹರಣವನ್ನು ಗಮನಿಸಬಹುದು. ಎಲೈ ವರದರಾಜನೇ, ಕೇಳಿದವರೆಲ್ಲರಿಗೂ ಅವರವರ ಇಷ್ಟಾರ್ಥಗಳನ್ನು ನೀನು ನೆರವೇರಿಸಬಲ್ಲೆ ಎಂಬುದನ್ನು ನಿನ್ನ ಹೆಸರೇ ತಿಳಿಸುತ್ತದೆ. ಆದ್ದರಿಂದಲೇ ನೀನು ವರಪ್ರದಾನದ ಮುದ್ರೆಯನ್ನು ಧರಿಸಿಲ್ಲ. ವಿಶ್ವದಲ್ಲಿಯೇ ಪ್ರಸಿದ್ಧವೆನಿಸಿದ ಬ್ರಾಹ್ಮಣಕುಲದಲ್ಲಿ ಹುಟ್ಟಿರುವವನಿಗೆ ಯಜ್ಞೋಪವೀತವನ್ನು ಅವನು ಧರಿಸಿರುವನೇ ? ಎಂಬುದನ್ನು ಪರೀಕ್ಷಿಸುವ ಆವಶ್ಯಕತೆ ಇಲ್ಲ. ಬ್ರಾಹ್ಮಣನಾಗಿ ಹುಟ್ಟಿದವನು ಯಜ್ಞೋಪವೀತವನ್ನು ಧರಿಸಿಯೇ ಇರುವನೆಂಬುದು ಲೋಕದಲ್ಲಿ ರೂಢಿಯಲ್ಲಿದೆ. ವರದನೆಂಬ ಹೆಸರೇ ವರಗಳನ್ನು ಕೊಡುವವನೆಂಬ ಅರ್ಥವನ್ನು ತಿಳಿಸುವಾಗ ವರದ ಮುದ್ರೆ ಏಕೆ ಬೇಕು ? ಈ ವಿಷಯವನ್ನು ಉತ್ತರಾರ್ಧದಲ್ಲಿ ಹೇಳಿರುವ ಲೋಕರೂಢಿಯ ಮಾತಿನಿಂದ ಅನುಕರಣಮಾಡಲಾಗಿದೆ. ಆದ್ದರಿಂದ ಇದಂ ಲೋಕೋಕ್ತಿ ಎನಿಸಿದೆ.

## ೯೧. ಛೇಕೋಕ್ತ್ಯಲಂಕಾರ

ಛೇಕೋಕ್ತಿರ್ಯದಿ ಲೋಕೋಕ್ತೇಃ ಸ್ಯಾದರ್ಥಾಂತರಗರ್ಭಿತಾ ।
ಭುಜಂಗ ಏವ ಜಾನೀತೇ ಭುಜಂಗಚರಣಂ ಸಖೇ ॥ ೧೫೭ ॥

ಕೇನಚಿತ್ಕಸ್ಯಚಿದ್ವೃತ್ತಾಂತಂ ಪೃಷ್ಟಸ್ಯ ಸಮೀಪಸ್ಥಮನ್ಯಂ ನಿರ್ದಿಶ್ಯ ಅಯಮೇವ ತಸ್ಯ ವೃತ್ತಾಂತಂ ಜಾನಾತೀತ್ಯುಕ್ತವತೋಽಯಮಹೇಃ ಪಾದಾನಹಿರೇವ ಜಾನಾತೀತಿ ಲೋಕವಾದಾನುಕಾರಃ. ಅತ್ರ ಸ ಚ ಅಯಂ ಚ ಲೋಕವಿದಿತೇ ಧನಾರ್ಜನಾದಿವ್ಯಾಪಾರೇ ಸಹಚಾರಿಣೌ ಇತಿ ವಿದಿತವಿಷಯತಯಾ ಲೋಕೋಕ್ತ್ಯನುವಾದಸ್ಯ ಪ್ರಯೋಜನೇ ಸ್ಥಿತೇ ರಹಸ್ಯೇಽಪ್ಯನಂಗವ್ಯಾಪಾರೇ ತಸ್ಯಾಯಂ ಸಹಚರ ಇತಿ ಮರ್ಮೋದ್ಘಾಟನಮಪಿ ತೇನ ಗರ್ಭೀಕೃತಮ್. ಯಥಾ ವಾ—

ಮಲಯಮರುತಾಂ ವ್ರಾತಾ ಯಾತಾ ವಿಕಸಿತಮಲ್ಲಿಕಾ
ಪರಿಮಲಭರೋ ಭಗ್ನೋ ಗ್ರೀಷ್ಮಸ್ತ್ವಮುತ್ಸಹಸೇ ಯದಿ ।

ಘನ ಘಟಯ ತಂ ತ್ವಂ ನಿಃಸ್ನೇಹಂ ಯ ಏವ ನಿವರ್ತತೇ
ಪ್ರಭವತಿ ಗವಾಂ ಕಿಂ ನಶ್ಛಿನ್ನಂ ಸ ಏವ ಧನಂಜಯಃ ||

ಅತ್ರ ಧನಲಿಪ್ಸಯಾ ಪ್ರೋಷಿತಾಂಗನಾಸಖೀವಚನೇ ಯ ಏವ ಗವಾಂ ನಿವರ್ತನೇ ಪ್ರಭವತಿ ಸ ಏವ ಧನಂಜಯಃ ಇತ್ಯಾಂಧ್ರಜಾತಿಪ್ರಸಿದ್ಧಲೋಕ-ವಾದಾನುಕಾರಃ. ಅತ್ರ ಅತಿಸೌಂದರ್ಯಶಾಲಿನೀಂ ಇಮಾಂ ಅಪಹಾಯ ಧನ-ಲಿಪ್ಸಯಾ ಪ್ರಸ್ಥಿತೋ ರಸಾನಭಿಜ್ಞತ್ವಾದ್ಗೋಪ್ರಾಯ ಏವ. ತಸ್ಯ ನಿವರ್ತಕಸ್ತು ಧನಸ್ಯ ಜೇತಾ ಧನೇನಾಕೃಷ್ಟಸ್ಯ ತದ್ವಿಮುಖೀಕರಣೇನ ಪ್ರತ್ಯಾಕ್ಷೇಪಕತ್ವಾದಿತ್ಯ-ಥಾಂತರಮಪಿ ಗರ್ಭಿತಮ್.

ಚಾತುರ್ಯದಿಂದ ಆಡುವ ಮಾತೇ ಛೇಕೋಕ್ತಿ ಎನಿಸುವುದು. ಲೋಕದಲ್ಲಿ ರೂಢಿಯಲ್ಲಿರುವ ಮಾತನ್ನೇ ತಿಳಿಸಿ ಅದರ ಮೂಲಕವೇ ಬೇರೊಂದು ಅರ್ಥವನ್ನು ಒಳಗೊಳ್ಳುವಂತೆ ವಿಷಯವನ್ನು ತಿಳಿಯಪಡಿಸುವುದೇ ಛೇಕೋಕ್ತಿ ಎನಿಸುವುದು. ಕೇಳಿದ ಪ್ರಶ್ನೆಗೆ ಲೋಕೋಕ್ತಿಯಿಂದಲೇ ಉತ್ತರವನ್ನು ಕೊಡುತ್ತ ಅದರಿಂದ ಬೇರೊಂದು ಅರ್ಥವನ್ನು ಸೂಚಿಸುವುದನ್ನೂ ಹೀಗೆ ಕರೆಯಲಾಗಿದೆ. ಒಬ್ಬನು ಬೇರೊಬ್ಬನ ಸಮಾಚಾರನನ್ನು ಕೇಳುವನು. ಆಗ ಅವನು ಅದಕ್ಕೆ ನೇರವಾಗಿ ಉತ್ತರ ವನ್ನು ಕೊಡದೆ ತನ್ನ ಸಮೀಪದಲ್ಲಿರುವ ವ್ಯಕ್ತಿಯೊಬ್ಬನನ್ನು ತೋರಿಸಿ ' ಇವನೇ ಅವನ ಸಮಾಚಾರವನ್ನು ತಿಳಿದಿರುವವನು ' ಎಂದು ಹೇಳುವನು. ಅವನಾದರೋ ಲೋಕೋಕ್ತಿಯೊಂದನ್ನು ಅನುವಾದಮಾಡುವನು. "ನೀನು ಅದನ್ನು ತಿಳಿಸುವಾಗ ಕೇಳಿದ ಪ್ರಶ್ನೆಗೆ ನಾನು ಉತ್ತರವನ್ನು ಹೇಳಬೇಕಾಗಿಲ್ಲ. ಇಗೋ ಇಲ್ಲಿ ನಿಂತಿರುವ ಇವನು ಅವನು ಇಬ್ಬರೂ ಹಣವನ್ನು ಸಂಪಾದಿಸಲಿಕ್ಕೆ ಯಾವಾಗಲೂ ಒಟ್ಟಿಗೆ ಸೇರುವರಾದ್ದರಿಂದ ಇವನೇ ಅವನ ಬಗ್ಗೆ ಹೇಳಬಲ್ಲನು. ಇದರಲ್ಲಿ ಯಾರಿಗೂ ಯಾವ ಸಂಶಯವೂ ಇಲ್ಲ. ಈ ಬಗ್ಗೆ ಲೋಕೋಕ್ತಿಯನ್ನು ಅನುವಾದಮಾಡುವುದರಲ್ಲಿ ಒಂದು ಪ್ರಯೋಜನವೂ ಇದೆ. ಆ ಪ್ರಯೋಜನವೇ ಇಲ್ಲಿ ರಹಸ್ಯವಾಗಿ ಅಡಗಿದ್ದು ಬೇರೊಂದು ಅರ್ಥವೆನಿಸಿದೆ." "ಇವರಿಬ್ಬರೂ ಹೊರಗೆ ವ್ಯವಹರಿಸುವಂತೆಯೇ ಗೋಪ್ಯವಾಗಿ ಸುರತವ್ಯಾಪಾರದಲ್ಲೂ ಸೇರುವರು. ಅವನಿಗೆ ಇವನೇ ಅದರಲ್ಲೂ ಸ್ನೇಹಿತನೆನಿಸಿರುವನು " ಈ ಬಗೆಯ ಮರ್ಮವು ಇಲ್ಲಿ ಅಡಗಿದೆ. ಈ ರಹಸ್ಯವನ್ನು ಉದ್ಘಾಟನಮಾಡಲಿಕ್ಕಾಗಿಯೇ ಲೋಕೋಕ್ತಿಯನ್ನು ಅನುವಾದಮಾಡಲಾಗಿದೆ. ಸರ್ಪದ ಪಾದವನ್ನು ಸರ್ಪವೇ ಬಲ್ಲದು. ಹಾಗೆ ಕಾಮುಕನ ವ್ಯವಹಾರವನ್ನು ಕಾಮುಕನೇ ಬಲ್ಲನು, ಈ ಬಗ್ಗೆ ಬೇರೆ ಯಾರನ್ನೂ ಕೇಳಬೇಕಾಗಿಯೇ ಇಲ್ಲ. ಹೀಗೆ ಲೋಕೋಕ್ತಿಯ ಮೂಲಕ ಬೇರೊಂದು ಅರ್ಥವನ್ನು ಸೇರಿಸಿಕೊಂಡು ತಿಳಿಸುವುದೇ ಛೇಕೋಕ್ತಿ ಎನಿಸುವುದು.

"ಎಲೈ ಮೇಘವೇ, ಮಲಯಪರ್ವತದಿಂದ ಬರುವ ಗಾಳಿಯು ತೊಲಗಿದೆ, ವಿಕಸಿತವಾದ ಮಲ್ಲಿಗೆಯ ಪರಿಮಲವನ್ನು ಹೊತ್ತಿರುವ ಗ್ರೀಷ್ಮಕಾಲವು ಕಳೆದಿದೆ. ನಿನಗೆ ಉತ್ಸಾಹವಿದ್ದರೆ ಸ್ನೇಹವಿಲ್ಲದಿರುವ ಪತಿಯನ್ನು ಪ್ರಿಯೆಯೊಡನೆ ಸೇರಿಸು. ಪ್ರವಾಸಕ್ಕೆ ಹೊರಡಲಿರುವ ಪತಿಗೆ ಪ್ರೇಮವನ್ನು ಹುಟ್ಟಿಸಿ ಹಿಂತಿರುಗುವಂತೆ ಮಾಡಿದರೆ ಹಿಂದೆ ಶತ್ರುಗಳಿಂದ ಗೋವುಗಳನ್ನು ಹಿಂತಿರುಗಿಸಿಕೊಂಡು ಬಂದ ಅರ್ಜುನನೇ ನೀನಾಗುವೆ. ಇದರಿಂದ ನಮಗೆ ಆಗುವ ನಷ್ಟವೇನು ? " ಇಲ್ಲಿ ಹಣವನ್ನು ಸಂಪಾದಿಸಬೇಕೆಂಬ ಬಯಕೆಯಿಂದ ಒಬ್ಬನು ಮನೆಯಲ್ಲಿ ಪ್ರಿಯೆಯನ್ನು ಬಿಟ್ಟು ಪ್ರವಾಸಕ್ಕೆ ಹೊರಟಿರುವನು. ಆಕೆಯ ಸಖಿಯು ಮೇಘವನ್ನು ನೋಡಿ ಹೀಗೆ ಹೇಳುತ್ತಾಳೆ : ಯಾವನು ಕಳೆದುಹೋಗಿದ್ದ ಗೋವುಗಳನ್ನು ಹಿಂದಕ್ಕೆ ಕರೆ ತಂದನೋ ಅವನೇ ಧನಂಜಯನೆನಿಸುವನೆಂದು ಆಂಧ್ರದೇಶದಲ್ಲಿ ಲೋಕವಾದವು ರೂಢಿಯಲ್ಲಿದೆ. ಅದನ್ನು ಮೇಘವು ಅನುಕರಿಸುವಂತೆ ಇಲ್ಲಿ ತಿಳಿಸಿದೆ. ಹೆಚ್ಚು ಸೌಂದರ್ಯಶಾಲಿಯಾದ ಪ್ರೇಯಸಿಯನ್ನು ತೊರೆದು ಹಣದ ಮೇಲಿನ ಆಶೆಯಿಂದ ಹೊರಗೆ ಹೊರಟವನು ರಸಿಕನಲ್ಲದ್ದರಿಂದ ಗೋವಿಗೆ ಸದೃಶನೆನಿಸುವನು. ಅಂತವನನ್ನು ಯಾವನು ಪ್ರವಾಸದಿಂದ ತಡೆದು ಹಿಂದಕ್ಕೆ ಕರೆತರುವನೋ ಅವನು ಗೋವನ್ನು ಬಿಡಿಸಿಕೊಂಡು ಬಂದ ಧನಂಜಯನೇ ಸರಿ. ಹಣದ ಆಶೆಯಿಂದ ಹೊರಟವನನ್ನು ತಡೆಯುವವನು ಹಣವನ್ನೇ ಜಯಿಸಿದಂತಾಯಿತು. ಹಣದ ಸೆಳೆತಕ್ಕೆ ಸಿಕ್ಕಿದವನು ಅದನ್ನು ತೊರೆದು ಹಿಂತಿರುಗುವುದು ಕಷ್ಟದ ಕೆಲಸವೇ. ಅಂತಹ ಕೆಲಸವನ್ನು ಮಾಡಬೇಕಾದರೆ ಮೇಘವೇ ಸಮರ್ಥವೆನಿಸಿದೆ, ಮೇಘವು ಅವನಲ್ಲಿ ಕಾಮೋದ್ರೇಕವನ್ನುಂಟುಮಾಡಿ ಹಣದ ಆಶೆಯನ್ನು ತೊರೆಸಿ ಪ್ರೇಯಸಿಯನ್ನು ಪ್ರೀತಿಸುವಂತೆ ಮಾಡಬಲ್ಲದು. ಈ ವಿಷಯವು ಇಲ್ಲಿ ಅಡಗಿರುವ ಬೇರೊಂದು ಅರ್ಥ. ಇದನ್ನು ಲೋಕೋಕ್ತಿಯ ಮೂಲಕ ತಿಳಿಸಲಾಗಿದೆ. ಇದರಿಂದ ಮೇಘವು ಇಲ್ಲಿ ಧನಂಜಯನೆನಿಸಿದಂತಾಯಿತು.

## ೯೨ ವಕ್ರೋಕ್ತ್ಯಲಂಕಾರ

ವಕ್ರೋಕ್ತಿಃ ಶ್ಲೇಷಕಾಕುಭ್ಯಾಂ ಅಪರಾರ್ಥಪ್ರಕಲ್ಪನಮ್ ।
ಮುಂಚಮಾನಂ ದಿನಂ ಪ್ರಾಪ್ತಂ ನೇಹ ನಂದೀ ಹರಾಂತಿಕೇ ॥ ೧೫೮ ॥

ಅತ್ರ ಮಾನಂ ಮುಂಚ, ಪ್ರಯಾತಾ ರಾತ್ರಿರಿತ್ಯಾಶಯೇನ ಉಕ್ತ್ವಾಯಾಂ ವಾಚಿ ನಂದಿನಂ ಪ್ರಾಪ್ತಂ ಮಾ ಮುಂಚೇತ್ಯರ್ಥಾಂತರಂ ಶ್ಲೇಷೇಣ ಪರಿಕಲ್ಪಿತಮ್. ಯಥಾ ವಾ—

ಅಹೋ ಕೇನೇದೃಶೀ ಬುದ್ಧಿರ್ದಾರುಣಾ ತವ ನಿರ್ಮಿತಾ ।
ತ್ರಿಗುಣಾ ಶ್ರೂಯತೇ ಬುದ್ಧಿರ್ನ ತು ದಾರುಮಯೀ ಕ್ವಚಿತ್ ॥

ಇದಮವಿಕೃತಶ್ಲೇಷೋಕ್ತೇರುದಾಹರಣಮ್. ವಿಕೃತಶ್ಲೇಷವಕ್ರೋ-ಕ್ತೇರ್ಯಥಾ—

ಭವಿತ್ರೀ ರಂಭೋರು ತ್ರಿದಶವದನಗ್ಲಾನಿರಧುನಾ
ಸತೇ ರಾಮಃ ಸ್ಥಾತಾ ನ ಯುಧಿ ಪುರತೋ ಲಕ್ಷ್ಮಣಸಖಃ ।
ಇಯಂ ಯಾಸ್ಯತ್ಯುಚ್ಚೈರ್ವಿಪದಮಧುನಾ ವಾನರಚಮೂಃ
ಲಘಿಷ್ಠೇದಂ ಷಷ್ಠಾಕ್ಷರಪರವಿಲೋಪಾತ್ಪಠ ಪುನಃ ।

ಸರ್ವಮಿದಂ ಶಬ್ದಶ್ಲೇಷಮೂಲಾಯಾಃ ವಕ್ರೋಕ್ತೇರುದಾಹರಣಮ್. ಅರ್ಥಶ್ಲೇಷಮೂಲಾಯಾಃ ವಕ್ರೋಕ್ತೇರ್ಯಥಾ—

ಭಿಕ್ಷಾರ್ಥೀ ಸ ಕ್ವ ಯಾತಃ ಸುತನು ಬಲೀಮುಖೇ ತಾಂಡವಂ ಕ್ವಾದ್ಯ ಭದ್ರೇ
ಮನ್ಯೇ ಬೃಂದಾವನಾಂತೇ ಕ್ವ ನು ಸ ಮೃಗಶಿಶುರ್ನೈವ ಜಾನೇ ವರಾಹಮ್ ।
ಬಾಲೇ ಕಚ್ಚಿನ್ನ ದೃಷ್ಟೋ ಜರಠವೃಷಪತಿರ್ಗೋಪ ಏವಾಸ್ಯ ವೇತ್ತಾ
ಲೀಲಾಸಂಲಾಪ ಇತ್ಥಂ ಜಲನಿಧಿಹಿಮವತ್ಕನ್ಯಯೋಸ್ತ್ರಾಯತಾಂ ವಃ ॥

ಕಾಕ್ವಾ ಯಥಾ—
ಅಸಮಾಲೋಚ್ಯ ಕೋಪಸ್ತೇ ನೋಚಿತೋಽಯಮಿತೀರಿತಾ ।
ನೈವೋಚಿತೋಽಯಮಿತಿ ತಂ ತಾಡಯಾಮಾಸ ಮಾಲಯಾ ॥

ಅತ್ರ ನೈವೋಚಿತ ಇತಿ ಕಾಕುಸ್ವರವಿಕಾರೇಣ ಉಚಿತ ಏವೇತ್ಯರ್ಥಾಂ-ತರಕಲ್ಪನಮ್.

ಒಬ್ಬನು ಮತ್ತೊಬ್ಬನಿಗೆ ಒಂದು ಮಾತನ್ನು ತಿಳಿಸುವಾಗ ಎರಡು ಅರ್ಥ ಗಳನ್ನು ತಿಳಿಸುವ ಶ್ಲೇಷದಿಂದಲೋ ಕಾಕುವೆಂಬ ಸ್ವರವಿಕಾರದಿಂದಲೂ ಬೇರೊಂದು ಅರ್ಥವನ್ನು ಕಲ್ಪಿಸುವುದೇ ವಕ್ರೋಕ್ತ್ಯಲಂಕಾರವೆನಿಸುವುದು. "ಎಲೈ ಪ್ರೇಯಸಿಯೇ, ಪ್ರಣಯಕೋಪವನ್ನು ಬಿಡು. ರಾತ್ರಿ ಕಳೆಯಿತು. ಹಗಲು ಬಂದಿತು. ಇನ್ನು ಕೋಪಕ್ಕೆ ಅವಕಾಶವಿಲ್ಲ. ನಂದಿಯು ಇಲ್ಲಿ ಇಲ್ಲ; ಆದರೆ ಈಶ್ವರನ ಬಳಿಯಲ್ಲಿರು ವನು.'' ಇಲ್ಲಿ 'ರಾತ್ರಿ ಕಳೆಯಿತು. ಮಾನವನ್ನು ತೊರೆ' ಈ ಭಾವವನ್ನು ಪ್ರೇಯಸಿಗೆ ತಿಳಿಸಲಿಕ್ಕಾಗಿ ನಾಯಕನು ಹೀಗೆ ಹೇಳುತ್ತಾನೆ. ಇಲ್ಲಿ ಶ್ಲೇಷದಿಂದ 'ನಂದಿನಂ ಪ್ರಾಪ್ತಂ ಮಾ ಮುಂಚ' ಎಂಬ ಬೇರೊಂದು ಅರ್ಥವನ್ನು ಕಲ್ಪಿಸಲಾಗಿದೆ. 'ನಿನ್ನ ಬಳಿಗೆ ತಾನಾಗಿಯೇ ಸಂತೋಷದಿಂದ ಬಂದಿರುವವನನ್ನು ನೀನು ತೊರೆಯಬೇಡ' ಎಂಬ ಬೇರೊಂದು ಅರ್ಥವನ್ನು ಶ್ಲಿಷ್ಟವಾದ ಪದಗಳ ಪ್ರಯೋಗದಿಂದ ಕಲ್ಪಿಸಿರುವ ಪ್ರಯುಕ್ತ ಇದು ವಕ್ರೋಕ್ತಿ ಎನಿಸಿದೆ, "ಈ ಕ್ರೂರವಾದ ಬುದ್ಧಿಯನ್ನು ನಿನಗೆ

ಯಾರು ಕಲಿಸಿದರು ? ಬುದ್ಧಿಯಲ್ಲಿ ಮೂರು ಬಗೆಯ ಗುಣಗಳಿರುವುದಾಗಿ ನಾವು ಕೇಳಿದ್ದೇವೆ; ಆದರೆ ಅದು ಎಲ್ಲಿಯಾದರೂ ದಾರುಮಯವೆನಿಸಿಲ್ಲ". ಇಲ್ಲಿ ಯಾವ ಬದಲಾವಣೆಯೂ ಇಲ್ಲದಂತೆ ಶಬ್ದವನ್ನು ಪ್ರಯೋಗಿಸಿದ್ದರಿಂದ ಇದು ಅವಿಕೃತ ಶ್ಲೇಷೋಕ್ತಿಗೆ ಉದಾಹರಣವೆನಿಸಿದೆ. ಇಲ್ಲಿ ದಾರುಶಬ್ದದಲ್ಲಿ ಶ್ಲೇಷವಿದೆ. ಹಿಂದ 'ಮಾನಂ ದಿನಂ' ಎಂಬಲ್ಲಿ ಮಾನ ಶಬ್ದವನ್ನು ವಿಭಾಗ ಮಾಡಿ 'ಮಾ ನಂದಿನಂ' ಎಂದು ಶ್ಲೇಷವನ್ನು ಪ್ರಯೋಗಿಸಿರುವಂತೆ ಇಲ್ಲಿ ದಾರುಣಾ ಎಂಬುದನ್ನು ಕೊಂಚವೂ ವಿಭಾಗ ಮಾಡದಂತೆ ಪ್ರಯೋಗಿಸಿದೆ. "ಯಾವ ಮರದಿಂದ ನಿನ್ನ ಈ ಬುದ್ಧಿಯನ್ನು ನಿರ್ಮಿಸಿದೆ ?" ಬುದ್ಧಿಯು ದಾರುಮಯವೆಂಬುದನ್ನು ಎಲ್ಲಿಯೂ ಕೇಳಿಲ್ಲ. ಹೀಗೆ ದಾರುಣಾ ಎಂಬಲ್ಲಿ 'ಕ್ರೂರನಾದ' ಮರದಿಂದ ಎಂದು ಎರಡು ಅರ್ಥಗಳು ಶ್ಲೇಷ ದಿಂದ ಪದಭಂಗವಿಲ್ಲದೆಯೇ ತಿಳಿದುಬರುತ್ತವೆ. ಪದವನ್ನು ಒಡೆದು ಶ್ಲೇಷದ ಮೂಲಕ ಬೇರೊಂದು ಅರ್ಥವನ್ನು ಕಲ್ಪಿಸುವುದಕ್ಕೆ ಉದಾಹರಣವು ಹೀಗಿದೆ: ಸೀತೆಗೆ ರಾವಣನ ಮಾತನ್ನು ದೂತನು ತಿಳಿಸುತ್ತಾನೆ. ಅದಕ್ಕೆ ಕೊನೆಯ ಪಾದದಲ್ಲಿ ಸೀತೆಯ ಉತ್ತರವು ಅಡಗಿದೆ. "ಬಾಳೆಯ ಗಿಡದಂತೆ ತೊಡೆಯಿರುವವಳೇ, ದೇವತೆಗಳೆಲ್ಲರ ಮುಖದ ಕಾಂತಿಯು ಈಗ ಬಾಡಿ ಹೋಗಲಿದೆ. ಲಕ್ಷ್ಮಣನೊಡನೆ ಆ ರಾಮನು ಯುದ್ಧದಲ್ಲಿ ರಾವಣನೆದುರಿಗೆ ನಿಲ್ಲಲಾರನು. ಈಗಲೇ ವಾನರಸೈನ್ಯವು ದೊಡ್ಡದೊಂದು ವಿಪತ್ತನ್ನು ಹೊಂದಲಿದೆ. (ಇದಿಷ್ಟು ರಾವಣನು ಹೇಳಿ ಕಳುಹಿಸಿದ ಮಾತು. ಇದಕ್ಕೆ ಉತ್ತರವನ್ನು ಸೀತೆ ತಿಳಿಸುತ್ತಾಳೆ) ಎಲೈ ನೀಚನೇ, ನೀನು ಈಗ ಹೇಳಿದ ಮಾತುಗಳಲ್ಲಿ ಏಳನೆಯ ಅಕ್ಷರವನ್ನು ಬಿಟ್ಟು ಅವನ್ನೇ ಮತ್ತೆ ಹೇಳು" ಹೀಗೆ ಆಕೆಯು ಹೇಳಿದ್ದರಿಂದ ರಾವಣನಿಗೆ ಉತ್ತರವು ದೊರೆತಂತಾಯಿತೆಂದು ಸೀತೆಯು ಭಾವಿಸಿದ್ದಾಳೆ. ಮೊದಲನೆಯ ಪಾದದಲ್ಲಿ 'ತ್ರಿ' ಎಂಬ ಅಕ್ಷರವನ್ನು ಬಿಟ್ಟರೆ 'ದಶವದನಗ್ಲಾನಿಃ ಭವಿತ್ರೀ' ರಾವಣನಿಗೆ ವಿಪತ್ತು ಬರಲಿದೆ ಎಂದು ಅರ್ಥ ವಾಗುತ್ತದೆ. ಎರಡನೆಯ ಪಾದದಲ್ಲಿ 'ನ' ಎಂಬುದನ್ನು ಬಿಟ್ಟರೆ 'ರಾಮನು ಯುದ್ಧದಲ್ಲಿ ರಾವಣನೆದುರಿಗೆ ನಿಲ್ಲುವನು' ಎಂದು ಅರ್ಥವಾಗುತ್ತದೆ. ಮೂರನೆಯ ಪಾದದಲ್ಲಿ 'ವಿ' ಎಂಬುದನ್ನು ಬಿಟ್ಟರೆ "ಕಪಿಸೈನ್ಯವು ಉನ್ನತವಾದ ಸ್ಥಾನವನ್ನು ಪಡೆಯಲಿರುವುದು" ಎಂದು ಅರ್ಥವಾಗುತ್ತದೆ. ಇದು ವಿಕೃತಶ್ಲೇಷೋಕ್ತಿ ಎನಿಸಿದೆ. ಇದೆಲ್ಲವೂ ಶಬ್ದಶ್ಲೇಷವನ್ನು ಅವಲಂಬಿಸಿದ ವಕ್ರೋಕ್ತಿಗೆ ಉದಾಹರಣ ವೆನಿಸಿದೆ.

ಅರ್ಥಶ್ಲೇಷವನ್ನು ಅವಲಂಬಿಸಿದ ವಕ್ರೋಕ್ತಿಯನ್ನು ಈಗ ಉದಾಹರಿಸು ತ್ತಾನೆ. ಇಲ್ಲಿ ಲಕ್ಷ್ಮಿ ಪಾರ್ವತಿ ಇವರಿಬ್ಬರೂ ವಿನೋದಕ್ಕಾಗಿ ಲೀಲೆಯಿಂದ ಸಂಲಾಪ ಮಾಡುತ್ತಾರೆ. ಈಶ್ವರನನ್ನು ಉದ್ದೇಶಿಸಿ ಲಕ್ಷ್ಮಿಯು ಪ್ರಶ್ನೆ ಮಾಡುತ್ತಾಳೆ. ವಿಷ್ಣು ವನ್ನು ಉದ್ದೇಶಿಸಿ ಪಾರ್ವತಿಯು ಉತ್ತರಿಸುತ್ತಾಳೆ. "ಎಲೈ ಮಂಗಳಾಂಗಿಯೇ,

ಭಿಕ್ಷಾಟನ ಮಾಡುವ ಆ ಶಿವನು ಎಲ್ಲಿಗೆ ಹೋಗಿದ್ದಾನೆ?" ಎಂದು ಲಕ್ಷ್ಮಿಯು ಕೇಳಿದ್ದಕ್ಕೆ ಪಾರ್ವತಿಯು "ಬಲಿಯು ಯಜ್ಞವನ್ನು ಮಾಡುತ್ತಿರುವ ಸ್ಥಳಕ್ಕೆ ವಾಮನಮೂರ್ತಿಯಾಗಿ ಹೋಗಿರುವನು" ಎಂದು ನಾರಾಯಣನ ಪರವಾಗಿ ಉತ್ತರವನ್ನು ಕೊಡುವಳು. ಈಗ ತಾಂಡವನೃತ್ಯವು ಎಲ್ಲಿ ನಡೆಯುತ್ತಿದೆ? ಎಂಬುದು ಲಕ್ಷ್ಮಿಯು ಕೇಳುವ ಎರಡನೆಯ ಪ್ರಶ್ನೆ 'ಬೃಂದಾವನದ ಮಧ್ಯದಲ್ಲಿ ಅದು ನಡೆಯುತ್ತಿದೆ' ಎಂದು ಕೃಷ್ಣನ ಬೃಂದಾವನಲೀಲೆಯನ್ನು ಪಾರ್ವತಿಯು ಉತ್ತರವಾಗಿ ಕೊಡುವಳು. 'ಮಹಾದೇವನು ಕೈಯಲ್ಲಿ ಹಿಡಿದಿರುವ ಆ ಮೃಗವೆಲ್ಲಿಗೆ ಹೋಗಿದೆ?' ಎಂದು ಲಕ್ಷ್ಮಿಯು ಕೇಳಲು 'ಆ ಹಂದಿಯು ಎಲ್ಲಿಗೆ ಹೋಗಿದೆಯೋ ನನಗೆ ತಿಳಿಯದು' ಎಂದು ಪಾರ್ವತಿಯು ಉತ್ತರಿಸುವಳು. 'ಆ ಮುದಿ ಎತ್ತನ್ನು ನೀನು ನೋಡಿದೆಯೋ?' ಎಂಬುದು ಲಕ್ಷ್ಮಿಯ ಪ್ರಶ್ನೆ. ಅದಕ್ಕೆ ಪಾರ್ವತಿಯು ವಿಷ್ಣುವಿಗೆ ಅನ್ವಯಿಸುವಂತೆ 'ಅದು ಎಲ್ಲಿಗೆ ಹೋಗಿದೆ ಎಂಬುದನ್ನು ಗೊಲ್ಲನೇ ಬಲ್ಲನು' ಎಂದು ಉತ್ತರಿಸುವಳು. ಇಲ್ಲಿ ಭಿಕ್ಷಾ ಮೊದಲಾದ ಪದಗಳನ್ನು ಬದಲಾಯಿಸಬಹುದಾದ್ದರಿಂದ ಇಲ್ಲಿ ಅರ್ಥಶಕ್ತಿಯಿಂದ ಶ್ಲೇಷವನ್ನು ಏರ್ಪಡಿಸಿದೆ. ಶಬ್ದಶಕ್ತಿಮೂಲವಾದ ಶ್ಲೇಷದಲ್ಲಿ ಶಬ್ದವನ್ನು ಬದಲಾಯಿಸಲಾಗುವುದಿಲ್ಲ. ಆ ಶಬ್ದವನ್ನು ತೆಗೆದು ಬೇರೆ ಶಬ್ದವನ್ನು ಹಾಕಿದರೆ ಅಲ್ಲಿ ಶ್ಲೇಷವೇ ಇರುವುದಿಲ್ಲ.

ಧ್ವನಿವಿಕಾರದಿಂದ ಬೇರೊಂದು ಅರ್ಥವನ್ನು ಕಲ್ಪಿಸುವುದಕ್ಕೆ ಉದಾಹರಣವನ್ನು ಕೊಡುತ್ತಾನೆ. "ಹಿಂದು ಮುಂದು ಆಲೋಚನೆಮಾಡದೆ ಹೀಗೆ ಕೋಪ ಮಾಡುವುದು ನಿನಗೆ ಯೋಗ್ಯವಲ್ಲವೆಂದು ತಿಳಿದಮೇಲೆಯೂ ಹೀಗೆ ಕೋಪಿಸುವುದು ಯೋಗ್ಯವಲ್ಲವಷ್ಟೆ? ಎಂದು ಹೇಳುತ್ತ ಅವನನ್ನು ಹೂವಿನ ಮಾಲೆಯಿಂದ ಬಡಿದಳು". ಇಲ್ಲಿ ನಿನ್ನ ಮೇಲೆ ಹೀಗೆ ಕೋಪಿಸಿಕೊಳ್ಳುವುದು ಯೋಗ್ಯವಲ್ಲವೆ? ಎಂದು ಕಾಕುಸ್ವರದ ವಿಕಾರವನ್ನು ಸೂಚಿಸಿದ್ದರಿಂದ "ಹೀಗೆ ಕೋಪಿಸುವುದು ಯೋಗ್ಯವೇ ಆಗಿದೆ. ನೀನು ಮಾಡಿದ ಅಪರಾಧಕ್ಕೆ ಹೀಗೆ ಕೋಪಿಸಿಕೊಳ್ಳಲೇ ಬೇಕು" ಎಂಬ ಬೇರೊಂದು ಅರ್ಥವನ್ನು ಇಲ್ಲಿ ಕಲ್ಪಿಸಲಾಗಿದೆ.

## ೯೩. ಸ್ವಭಾವೋಕ್ತ್ಯಲಂಕಾರ

ಸ್ವಭಾವೋಕ್ತಿಃ ಸ್ವಭಾವಸ್ಯ ಜಾತ್ಯಾದಿಸ್ಥಸ್ಯ ವರ್ಣನಮ್ ।
ಕುರಂಗೈರುತ್ತರಂಗಾಕ್ಷೈಃ ಸ್ತಬ್ಧಕರ್ಣೈರುದೀಕ್ಷ್ಯತೇ ॥ ೧೫೯ ॥

ಯಥಾ ವಾ— ತೌ ಸಮ್ಮುಖಪ್ರಚಲಿತೌ ಸವಿಧೇ ಗುರೂಣಾಂ
ಮಾರ್ಗಪ್ರಧಾನರಭಸಸ್ಖಲಿತಾವಧಾನೌ ।
ಪಾರ್ಶ್ವೋಪಸರ್ಪಣಮುಭಾವಪಿ ಭಿನ್ನದಿಕ್ಕಂ
ಕೃತ್ವಾ ಮುಹುರ್ಮುಹುರುಪಾಸರತಾಂ ಸಲಜ್ಜಮ್ ॥

ವಸ್ತುಗಳ ಅಥವಾ ವ್ಯಕ್ತಿಗಳ ಜಾತಿ ಕ್ರಿಯೆ ಮೊದಲಾದ ಅಂಶಗಳಿಗೆ ಸಂಬಂಧಿಸಿದ ಸ್ವಭಾವವನ್ನು ವರ್ಣಿಸುವುದೇ ಸ್ವಭಾವೋಕ್ತಿ ಎನಿಸುವುದು. "ಕಣ್ಣುಗಳನ್ನು ಅಲೆಗಳಂತೆ ಅಳ್ಳಾಡಿಸುತ್ತ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಜಿಂಕೆಗಳು ಮೇಲೆ ನೋಡುತ್ತಿವೆ." ಇಲ್ಲಿ ಜಿಂಕೆಗಳು ಹುಲ್ಲನ್ನು ಮೇಯುತ್ತಲಿರುವಾಗ ಅವುಗಳ ಹತ್ತಿರ ಯಾರಾದರೂ ಬಂದರೆ ಅವಕ್ಕೆ ಭಯವುಂಟಾಗಿ ಅವು ಕಣ್ಣನ್ನು ಒಂದೇ ಸಮಕ್ಕೆ ಬಡಿದಾಡುವುದು ಸ್ವಭಾವ. ಹಾಗೆಯೇ ಕಿವಿಗಳು ಅಳ್ಳಾಡದಂತೆ ಸ್ತಬ್ಧವಾಗಿ ನಿಲ್ಲುವುದೂ ಸಹಜ. ಹೀಗೆ ಜಿಂಕೆಯ ಜಾತಿಯ ಸ್ವಭಾವವನ್ನು ಇಲ್ಲಿ ವರ್ಣಿಸಿರುವುದರಿಂದ ಇದು ಸ್ವಭಾವೋಕ್ತಿ ಎನಿಸಿದೆ. ಇದಕ್ಕೆ ಬೇರೊಂದು ಉದಾಹರಣವನ್ನು ಕೊಟ್ಟಿದ್ದಾನೆ. "ನವದಂಪತಿಗಳಿಬ್ಬರು ಪರಸ್ಪರಪ್ರೇಮದಿಂದ ಒಂದೇ ಹೃದಯದಂತೆ ಇರುವುದು ಸಹಜ. ಆದರೆ ಮನೆಯಲ್ಲಿ ಅತ್ತೆ ಮಾವ ಮೊದಲಾದ ಹಿರಿಯರ ಎದುರಿಗೆ ಅವರು ಹೇಗೆ ವರ್ತಿಸುವರೆಂಬುದನ್ನು ಇಲ್ಲಿ ತಿಳಿಸುತ್ತಾನೆ. ಹಿರಿಯರ ಎದುರಿಗೆ ದಂಪತಿಗಳು ಒಟ್ಟಿಗೆ ಸೇರದೆ ಒಬ್ಬರು ಒಂದೊಂದು ಕಡೆಗೆ ಹೋಗುವರು. ಒಬ್ಬರು ಮತ್ತೊಬ್ಬರಿಗೆ ದಾರಿಯನ್ನು ಕೊಡುವ ವೇಗದಲ್ಲಿ ಎಚ್ಚರ ದಪ್ಪುವರು. ಹಾಗೆಯೇ ಇಬ್ಬರೂ ಸಹ ಬೇರೆ ಬೇರೆ ಕಡೆಗೆ ಒಂದೊಂದು ಪಕ್ಕಕ್ಕೆ ಲಜ್ಜೆಯಿಂದ ಬಾರಿಬಾರಿಗೂ ಸರಿಯುವರು. ಅವರು ಯಾವಾಗಲೂ ಬೇರೆಯಾಗದಂತೆ ಕೂಡಿಕೊಂಡಿರುವುದು ಸಹಜವೇ ಆದರೂ ಹಿರಿಯರ ಎದುರಿಗೆ ನಾಚಿಕೆಯಿಂದ ಒಂದೇ ಕಡೆಯಲ್ಲಿ ಸೇರದೆ ಒಬ್ಬರಿಗೊಬ್ಬರು ದಾರಿಯನ್ನು ಕೊಡುತ್ತ ಒಂದೊಂದು ಕಡೆಗೆ ಸರಿಯುವರು. ಪತಿಯು ಎಡಗಡೆಗೆ ಹೋದರೆ ಸತಿಯು ಬಲಗಡೆಗೆ ಹೋಗುತ್ತ ಪರಸ್ಪರವಾಗಿ ಬೇರೆಯಾಗಿರುವಂತೆ ತೋರಿಸಿಕೊಳ್ಳುವುದು ಸ್ವಭಾವ. ಏಕಾಂತದಲ್ಲಿರುವಾಗ ಒಂದೇ ಬಗೆಯ ಮನೋಭಾವಗಳಿಂದ ಕೂಡಿದ್ದರೂ ಮನೆಯಲ್ಲಿ ವ್ಯವಹರಿಸುವಾಗ ಬೇರೆ ಎನಿಸಿ ಒಬ್ಬೊಬ್ಬರು ಒಂದೊಂದು ಕಡೆಗೆ ಚಲಿಸುವುದು ಸ್ವಾಭಾವಿಕ. ಹೀಗೆ ನಾಚಿಕೆಯಿಂದ ನವದಂಪತಿಗಳು ನಡೆದುಕೊಳ್ಳುವ ಸ್ವಭಾವವನ್ನು ಇಲ್ಲಿ ತಿಳಿಸಿದೆ.

## ೯೪ ಭಾವಿಕಾಲಂಕಾರ

ಭಾವಿಕಂ ಭೂತಭಾವ್ಯರ್ಥಸಾಕ್ಷಾತ್ಕಾರಸ್ಯ ವರ್ಣನಮ್ ।
ಅಹಂ ವಿಲೋಕಯೇಽದ್ಯಾಪಿ ಯುಧ್ಯಂತೇಽತ್ರ ಸುರಾಸುರಾಃ ॥೧೬೦॥

ಸ್ಥಾನಭೀಷಣೋದ್ಭಾವನಪರಮಿದಮ್, ಯಥಾ ವಾ—

ಅದ್ಯಾಪಿ ತಿಷ್ಠತಿ ದೃಶೋರಿದಮುತ್ತರೀಯಂ
ಧರ್ತುಂ ಪುರಃ ಸ್ತನತಟಾತ್ಪತಿತಂ ಪ್ರವೃತ್ತೇ ।
ವಾಚಂ ನಿಶಮ್ಯ ನಯನಂ ನಯನಂ ಮಮೇತಿ
ಕಿಂಚಿತ್ತದಾ ಯದಕರೋತ್ ಸ್ಮಿತಮಾಯತಾಕ್ಷೀ ॥

ಹಿಂದೆ ಕಳೆದುಹೋಗಿರುವ ಅಥವಾ ಮುಂದೆ ಸಂಭವಿಸುವ ವಿಷಯವನ್ನು ಎದುರಿಗೆ ಕಾಣುತ್ತಿರುವಂತೆ ವರ್ಣಿಸುವುದೇ ಭಾವಿಕಾಲಂಕಾರವೆನಿಸುವುದು. 'ಹಿಂದೆ ದೇವರಾಕ್ಷಸರಿಗೆ ನಡೆದ ಯುದ್ಧವು ಇಲ್ಲಿ ಈಗಲೂ ನಡೆಯುತ್ತಿದೆ ಎಂದು ನಾನು ಕಾಣುತ್ತೇನೆ' ಇಲ್ಲಿ ಹಿಂದೆ ನಡೆದ ವಿಷಯವನ್ನು ಪ್ರತ್ಯಕ್ಷವಾಗಿ ಕಾಣುವಂತೆ ತಿಳಿಸಿದೆ. ಹೀಗೆ ಹೇಳುವವನು ನಿಂತಿರುವ ಸ್ಥಾನವು ಎಷ್ಟು ಭಯಂಕರವಾಗಿದೆ ಎಂಬುದನ್ನು ಇಲ್ಲಿ ಊಹಿಸಬಹುದು. ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಇದಂ ನನ್ನ ಬಟ್ಟೆ, ಇದು ನನ್ನ ಬಟ್ಟೆ" ಎಂದು ಆಕೆಯು ಹೇಳಿದ್ದನ್ನು ಕೇಳಿ ಆಕೆಯ ಸ್ತನ ಪ್ರದೇಶದಿಂದ ಕೆಳಗೆ ಜಾರಿದ ಈ ಬಟ್ಟೆಯನ್ನು ಮೇಲಕ್ಕೆ ಎತ್ತಲು ನಾನು ಪ್ರಯತ್ನಿಸುತ್ತಿರಲು ಆಗ ಆ ನಾಯಕಿಯು ಕೊಂಚ ಮಂದಹಾಸದಿಂದ ನಕ್ಕಳು. ಅವಳ ಆ ಮುಗುಳುನಗೆಯು ಇಂದಿಗೂ ನನ್ನ ಕಣ್ಣುಗಳ ಎದುರಿಗೆ ಕಟ್ಟಿದಂತೆ ನಿಂತಿದೆ." ಆಕೆಯ ಸ್ತನಗಳ ಪ್ರದೇಶದಿಂದ ಜಾರುತ್ತಿದ್ದ ಬಟ್ಟೆಯನ್ನು ಮೇಲಕ್ಕೆ ಎತ್ತಿದ್ದರಿಂದ ಆಕೆಯು ಮಂದಹಾಸದಿಂದ ನಕ್ಕಳೆಂಬುದೇ ಇಲ್ಲಿ ಮುಂದೆ ನಡೆಯಬೇಕಾಗಿರುವ (ಭಾವಿ)ವಿಷಯ. ಇದು ಇಂದಿಗೂ ನನ್ನ ಕಣ್ಣುಗಳಲ್ಲಿ ನೆಲಸಿದೆ ಎಂದು ವರ್ಣಿಸಿರುವುದರಿಂದ ಇದು ಭಾವಿಕಾಲಂಕಾರವೆನಿಸಿದೆ.

## ೯೫ ಉದಾತ್ತಾಲಂಕಾರ

ಉದಾತ್ತಮೃದ್ಧೇಶ್ಚರಿತಂ ಶ್ಲಾಘ್ಯಂ ಚಾನ್ಯೋಪಲಕ್ಷಣಮ್ ।
ಸಾನೌ ಯಸ್ಯಾಭವದ್ಯುದ್ಧಂ ತದ್ಧೂರ್ಜಟಿಕಿರೀಟಿನೋಃ ॥ ೧೬೧ ॥

ಇದಂ ಶ್ಲಾಘ್ಯಚರಿತಸ್ಯ ಅನ್ಯಾಂಗತ್ವೇ ಉದಾಹರಣಮ್. ಋದ್ಧ್ಯುದಾಹರಣಂ ಯಥಾ—

ರತ್ನ ಸ್ತಂಭೇಷು ಸಂಕ್ರಾಂತೈಃ ಪ್ರತಿಬಿಂಬಶತೈರ್ವೃತಃ ।
ಜ್ಞಾತೋ ಲಂಕೇಶ್ವರಃ ಕೃಚ್ಛ್ರಾತ್ ಆಂಜನೇಯೇನ ತತ್ತ್ವತಃ ॥

ಒಬ್ಬನು ಸಮೃದ್ಧಿಯಿಂದ ಬಾಳುವುದನ್ನು ವರ್ಣಿಸುವುದೇ ಉದಾತ್ತವೆನಿಸುವುದು. ಹಾಗೆಯೇ ಒಬ್ಬನ ವರ್ತನವು ಬೇರೊಬ್ಬನಿಗೆ ಮಾರ್ಗದರ್ಶಕವೆನಿಸಿದ್ದರೆ ಅದೂ ಸಹ ಉದಾತ್ತವೆನಿಸುವುದು. ಒಬ್ಬನ ಪ್ರಶಂಸಾರ್ಹವಾದ ವರ್ತನವು ಬೇರೊಬ್ಬನಿಗೆ ಆದರ್ಶವೆನಿಸಿರುವುದನ್ನು ಮೊದಲು ಉದಾಹರಿಸುತ್ತಾನೆ. ಹಿಂದೆ ಯಾವ ಬೆಟ್ಟದ ಶಿಖರದಲ್ಲಿ ಅರ್ಜುನನಿಗೂ ಈಶ್ವರನಿಗೂ ಯುದ್ಧವು ನಡೆಯಿತೋ ಅದೇ ಇದು." ಅರ್ಜುನನಂತಹ ವೀರನು ಈಶ್ವರನೊಡನೆ ಯುದ್ಧಮಾಡಿ ಅವನನ್ನು ಮೆಚ್ಚಿಸಿ ಅವನಿಂದ ಪಾಶುಪತಾಸ್ತ್ರವನ್ನು ಪಡೆದದ್ದು ಅವನ ಒಂದು ಶ್ಲಾಘ್ಯವಾದ ವರ್ತನೆ ಎನಿಸಿದೆ. ಅದು ಪ್ರಕೃತದಲ್ಲಿ ಒಬ್ಬ ರಾಜನು ನಡೆಸುತ್ತಿರುವ ಯುದ್ಧಕ್ಕೆ

ಸೂಚಕವೆನಿಸಿರುವುದಾಗಿ ಇಲ್ಲಿ ತಿಳಿಸಿದೆ. ಆದ್ದರಿಂದ ಇದು ಉದಾತ್ತವೆನಿಸಿದೆ. ಒಬ್ಬನ ಸಮೃದ್ಧಿಯ ವರ್ತನವನ್ನು ತಿಳಿಸುವುದಕ್ಕೆ ಉದಾಹರಣವು ಹೀಗಿದೆ: "ರಾವಣನು ಸಭೆಯಲ್ಲಿ ಸಿಂಹಾಸನದ ಮೇಲೆ ಕುಳಿತಿರಲು ಅವನ ನೂರಾರು ಪ್ರತಿಕೃತಿಗಳು (ನೆರಳು) ರತ್ನಖಚಿತವಾದ ಗೋಡೆಗಳಲ್ಲಿ ಕಾಣಿಸುತ್ತಿದ್ದುದರಿಂದ ಅವರಲ್ಲಿ ರಾವಣನು ಯಾರು ಎಂಬುದನ್ನು ಯಥಾರ್ಥವಾಗಿ ತಿಳಿಯಲು ಆಂಜನೇಯನಿಗೆ ಬಹಳ ಕಷ್ಟವಾಯಿತು." ಹೀಗೆ ಗೋಡೆಗಳಲ್ಲಿ ನೂರಾರು ಜನ ರಾವಣರು ಕಾಣಿಸುತ್ತಿದ್ದುದರಿಂದ ನಿಜವಾದ ರಾವಣನು ಯಾರು ಎಂಬುದನ್ನು ಆಂಜನೇಯನು ಬಹಳ ಕಷ್ಟದಿಂದ ತಿಳಿದನು. ಇಲ್ಲಿ ರಾವಣನ ಸಮೃದ್ಧಿಯನ್ನು ತಿಳಿಸಿರುವುದರಿಂದ ಇದು ಉದಾತ್ತಾಲಂಕಾರವೆನಿಸಿದೆ.

## ೯೬. ಅತ್ಯುಕ್ತ್ಯಲಂಕಾರ

ಅತ್ಯುಕ್ತಿರದ್ಭುತಾತಥ್ಯಶೌರ್ಯೌದಾರ್ಯಾದಿವರ್ಣನಮ್ ।
ತ್ವಯಿ ದಾತರಿ ರಾಜೇಂದ್ರ ಯಾಚಕಾಃ ಕಲ್ಪಶಾಖಿನಃ ॥ ೧೭೨ ॥

ಇಯಮೌದಾರ್ಯಾತ್ಯುಕ್ತಿಃ, ಶೌರ್ಯಾತ್ಯುಕ್ತಿರ್ಯಥಾ—

ರಾಜನ್ ಸಪ್ತಾಪ್ಯಕೂಪಾರಾಸ್ತ್ವತ್ಪ್ರತಾಪಾಗ್ನಿಶೋಷಿತಾಃ ।
ಪುನಸ್ತ್ವದ್ವೈರಿವನಿತಾಬಾಷ್ಪಪೂರೇಣ ಪೂರಿತಾಃ ॥

ಸಂಪದತ್ಯುಕ್ತಿರುದಾತ್ತಾಲಂಕಾರಃ, ಶೌರ್ಯಾತ್ಯುಕ್ತೌ ಅತ್ಯುಕ್ತ್ಯಲಂಕಾರ ಇತಿ ಭೇದಮಾಹುಃ.

ಅನಯೋರನವದ್ಯಾಂಗಿ ಸ್ತನಯೋರ್ಜೃಂಭಮಾಣಯೋಃ
ಅವಕಾಶೋ ನ ಪರ್ಯಾಪ್ತಸ್ತವ ಬಾಹುಲತಾಂತರೇ ।
ಅಲ್ಪಂ ನಿರ್ಮಿತಮಾಕಾಶಂ ಅನಾಲೋಚ್ಯೈವ ವೇಧಸಾ
ಇದಮೇವಂವಿಧಂ ಭಾವಿ ಭವತ್ಯಾಃ ಸ್ತನಮಂಡಲಮ್ ॥

ಇತಿ ಸದಸದುಕ್ತಿತಾರತಮ್ಯೇನ ಅತಿಶಯೋಕ್ತ್ಯತ್ಯುಕ್ತ್ಯೋರ್ಭೇದಃ.

ಒಬ್ಬನಲ್ಲಿ ಅದ್ಭುತವಾದ ಶೌರ್ಯ, ಔದಾರ್ಯ, ಮೊದಲಾದ ಗುಣಗಳು ಯಥಾರ್ಥವಾಗಿ ಕಾಣದೇ ಇದ್ದರೂ ಅವನಲ್ಲಿ ಇರುವುವೆಂದು ವರ್ಣಿಸುವುದೇ ಅತ್ಯುಕ್ತ್ಯಲಂಕಾರವೆನಿಸುವುದು. "ಮಹಾರಾಜನೇ ನೀನು ದಾನಮಾಡುತ್ತಿರುವಾಗ ಯಾಚಕರಿಗೆ ಕಲ್ಪವೃಕ್ಷವೇ ಸಿಕ್ಕಿದಂತಾಗಿದೆ." ಇಲ್ಲಿ ಮಹಾರಾಜನು ಯಥಾರ್ಥವಾಗಿ

ಕಲ್ಪವೃಕ್ಷನಲ್ಲದಿದ್ದರೂ ಹೆಚ್ಚು ದಾನಧರ್ಮಗಳನ್ನು ಮಾಡುತ್ತಿದ್ದುದರಿಂದ ಅವನನ್ನು ಕಲ್ಪವೃಕ್ಷವೆಂದು ವರ್ಣಿಸಿರುವ ಪ್ರಯುಕ್ತ ಇದು ಔದಾರ್ಯದ ಪ್ರಶಂಸೆ ಎನಿಸಿದೆ. ಒಬ್ಬನನ್ನು ಕಲ್ಪವೃಕ್ಷವೆಂದು ಹೇಳಿದ್ದು ಹೆಚ್ಚಿನ ಮಾತೇ ಆದ್ದರಿಂದ ಇದು ಅತ್ಯುಕ್ತಿ ಎನಿಸಿದೆ. ಶೌರ್ಯವನ್ನು ಪ್ರಶಂಸಿಸುವಾಗ ಅತ್ಯುಕ್ತಿಯು ಹೇಗೆ ಸಂಭವಿಸುವುದೆಂಬುದನ್ನು ಈಗ ತಿಳಿಸುತ್ತಾನೆ : "ಮಹಾರಾಜನೇ, ಏಳು ಸಮುದ್ರಗಳು ನಿನ್ನ ಪ್ರತಾಪವೆಂಬ ಅಗ್ನಿಯಿಂದ ಒಣಗಿ ಹೋದವು. ಮತ್ತೆ ಅವು ನಿನ್ನ ಶತ್ರುಸ್ತ್ರೀಯರ ಕಣ್ಣೀರಿನ ಪ್ರವಾಹದಿಂದ ತುಂಬಿಕೊಂಡವು" ಇಲ್ಲಿ ರಾಜನ ಪರಾಕ್ರಮವು ಬೆಂಕಿಯಂತೆ ಎಲ್ಲರಿಗೂ ಭಯಂಕರವಾಗಿತ್ತೆಂದು ವರ್ಣಿಸಿದೆ. ಆ ಬೆಂಕಿಯ ಪ್ರಭಾವದಿಂದ ಸಮುದ್ರವೇ ಒಣಗಿ ಹೋಯಿತೆಂದೂ, ಮತ್ತೆ ಶತ್ರುಗಳೆಲ್ಲರೂ ಸತ್ತಿದ್ದ ಪ್ರಯುಕ್ತ ಅವರ ಹೆಂಡತಿಯರು ವೈಧವ್ಯದುಃಖವನ್ನು ಸಹಿಸಲಾರದೆ ಬಹಳವಾಗಿ ಅಳುತ್ತಿದ್ದುದರಿಂದ ಅವರ ಕಣ್ಣೀರಿನ ಕಾಲುವೆಗಳಿಂದ ಆ ಸಮುದ್ರಗಳು ತುಂಬಿದವೆಂದೂ ತಿಳಿಸಿರುವುದು ನಿಜವೆನಿಸಲಾರದು ; ಆದರೂ ರಾಜನ ಶೌರ್ಯವನ್ನು ಪ್ರಶಂಸಿಸಲಿಕ್ಕೆ ಹೀಗೆ ಹೇಳಿದ್ದರಿಂದ ಇದು ಅತ್ಯುಕ್ತಿ ಎನಿಸಿದೆ.

ಒಬ್ಬನ ಸಂಪತ್ತು ವಿಶೇಷವೆನಿಸಿದ್ದರೆ ಅದರ ಬಗ್ಗೆ ಹೆಚ್ಚಾಗಿ ತಿಳಿಸುವುದು ಉದಾತ್ತಾಲಂಕಾರವೆನಿಸುವುದು. ಶೌರ್ಯದ ಬಗ್ಗೆ ಹೆಚ್ಚು ಹೇಳುವುದು ಅತ್ಯುಕ್ತ್ಯಲಂಕಾರವೆನಿಸುವುದು. ಹೀಗೆ ಇವೆರಡಕ್ಕೂ ಭೇದವು ಉಂಟೆಂದು ಆಲಂಕಾರಿಕರು ಭಾವಿಸಿದ್ದಾರೆ. ಒಬ್ಬನಲ್ಲಿ ಇಲ್ಲದ ಗುಣಗಳನ್ನು ವರ್ಣಿಸುವಾಗಲೂ ಅವು ಆಶ್ಚರ್ಯಕರವಾಗಿರಬೇಕೆಂದು ತಿಳಿಸಲು 'ಅದ್ಭುತ' ಎಂಬ ವಿಶೇಷಣವನ್ನು ಇಲ್ಲಿ ಕೊಟ್ಟಿದೆ. ಅದನ್ನು ಹಾಗೆ ಏಕೆ ಕೊಟ್ಟಿದೆ ಎಂಬುದಕ್ಕೆ ಪ್ರಯೋಜನವನ್ನು ತಿಳಿಸುತ್ತಾನೆ. ಎರಡು ವಸ್ತುಗಳಿಗೆ ಸಂಬಂಧವಿದ್ದರೂ ಅದನ್ನು ಇಲ್ಲವೆಂದು ವರ್ಣಿಸುವುದು ಅಸಂಬಂಧಾತಿಶಯೋಕ್ತಿ ಎಂದು ಹಿಂದೆ ತಿಳಿಸಿದೆ. ಅದಕ್ಕೆ ಈ ಪದ್ಯವನ್ನು ಹಿಂದೆ ಉದಾಹರಿಸಲಾಗಿತ್ತು, "ಎಲೈ ಶೋಭನಾಂಗಿಯೇ, ವಿಕಾಸಗೊಂಡಿರುವ ನಿನ್ನ ಈ ಸ್ತನಗಳೆರಡಕ್ಕೆ ತೋಳುಗಳೆರಡರ ಮಧ್ಯದಲ್ಲಿ ಅಡಗಲು ಸಾಕಷ್ಟು ಅವಕಾಶವು ದೊರಕಿಲ್ಲ. ಸಾಕಷ್ಟು ಆಲೋಚನೆಯನ್ನು ಮಾಡದೆ ಬ್ರಹ್ಮನು ಬಯಲನ್ನು ಸ್ವಲ್ಪವೇ ನಿರ್ಮಿಸಿದನೆಂದು ತಿಳಿದು ನಿನ್ನ ಈ ಸ್ತನಗಳು ಹೀಗೆ ವಿಶೇಷವಾಗಿ ಬೆಳೆದವು." ಇಲ್ಲಿ ಸ್ತನಗಳು ತೋಳುಗಳ ಸಂಧಿಯೊಳಗೆ ಅಡಗಲಿಲ್ಲವೆಂದು ತಿಳಿಸಿದ್ದು ಯಥಾರ್ಥವಲ್ಲವಾದರೂ ಅದ್ಭುತವೆನಿಸಿದೆ. ಸ್ತನಗಳು ತೋಳುಗಳ ಮಧ್ಯದಲ್ಲಿಯೇ ಅಡಗಿರುತ್ತವೆಯಾದರೂ, ಅವಕ್ಕೆ ಅಲ್ಲಿ ಅಡಗಲು ಅವಕಾಶವಿದ್ದರೂ ಅದು ದೊರೆತಿಲ್ಲವೆಂದು ತಿಳಿಸುವುದು ಯಥಾರ್ಥವಾದುದಲ್ಲ. ಆದರೂ ಇಂತಹ ಅದ್ಭುತವನ್ನು ಇಲ್ಲಿ ತಿಳಿಸಿರುವುದರಿಂದ ಇದು ಅತ್ಯುಕ್ತಿ ಎನಿಸಿದೆ. ಅತಿಶಯೋಕ್ತಿಯಲ್ಲಿ ಸಂಬಂಧವಿಲ್ಲದ ಕಡೆ ಸಂಬಂಧವನ್ನು ಕಲ್ಪಿಸಲಾಗುವುದೇ ಹೊರತು ಅದ್ಭುತದ ಸಮಾಚಾರವು

ಬರುವುದಿಲ್ಲ. ಇಲ್ಲಿಯಾದರೋ ಇಲ್ಲದ್ದನ್ನು ತಿಳಿಸಿದರೂ ಅದು ಅದ್ಭುತವೆನಿಸಿರುತ್ತದೆ. ಇದೇ ಇವೆರಡಕ್ಕೂ ಇರುವ ಭೇದ. ಇಲ್ಲಿ ಮೊದಲನೆಯ ಪದ್ಯದಲ್ಲಿ ಅಸತ್ಯವಾದ ಅಂಶವನ್ನು ಸಾಧಾರಣವಾಗಿ ತಿಳಿಸಿದೆ. ಎರಡನೆಯ ಪದ್ಯದಲ್ಲಿ ಅತ್ಯಂತ ಅಸತ್ಯವಾದ ವಿಷಯವನ್ನು ತಿಳಿಸಿದೆ. ಇದೇ ಈ ಎರಡು ಅತ್ಯುಕ್ತಿಗಳಲ್ಲಿರುವ ಭೇದ. ಇರುವ ಆಕಾಶವು ಅಲ್ಪವೆಂದು ತಿಳಿದು ಸ್ತನಗಳು ವಿಶಾಲವಾಗಿ ಬೆಳೆದವೆಂದು ಹೇಳಿದ್ದು ಅತ್ಯಂತ ಅಸತ್ಯವೆನಿಸಿದೆ.

## ೯೦. ನಿರುಕ್ತ್ಯಲಂಕಾರ

ನಿರುಕ್ತಿರ್ಯೋಗತೋ ನಾಮ್ನಾಮನ್ಯಾರ್ಥತ್ವಪ್ರಕಲ್ಪನಮ್ ।
ಈದೃಶೈಶ್ಚರಿತೈರ್ಜಾನೇ ಸತ್ಯಂ ದೋಷಾಕರೋ ಭವಾನ್ ॥ ೧೬೩ ॥

ಪುರಾ ಕವೀನಾಂ ಗಣನಾಪ್ರಸಂಗೇ ಕನಿಷ್ಠಿಕಾಧಿಷ್ಠಿತಕಾಳಿದಾಸಾ ।
ಅದ್ಯಾಪಿ ತತ್ತುಲ್ಯಕವೇರಭಾವಾತ್ ಅನಾಮಿಕಾ ಸಾರ್ಥವತೀ ಬಭೂವ ॥

ಬೇರೆ ಬೇರೆ ಅರ್ಥಗಳನ್ನು ತಿಳಿಸುವ ಪದಗಳಿಗೆ ಅವಯವಾರ್ಥವನ್ನು ಇಟ್ಟುಕೊಂಡು ಬೇರೊಂದು ಅರ್ಥವನ್ನು ವರ್ಣಿಸುವುದೇ ನಿರುಕ್ತ್ಯಲಂಕಾರವೆನಿಸುವುದು. ಚಂದ್ರನಿಗೆ ಒಬ್ಬ ವಿರಹಿಣಿಯು ಹೇಳುತ್ತಾಳೆ. "ಜನರಿಗೆ ಸಂತಾಪವನ್ನುಂಟುಮಾಡುವ ಈ ಬಗೆಯ ವರ್ತನೆಯಿಂದ ನೀನು ನಿಜವಾಗಿಯೂ ರಾತ್ರಿಗೆ ಕರ್ತನೂ ದೋಷಗಳಿಗೆ ಗಣಿಯೂ ಆಗುವೆ." ಇಲ್ಲಿ ದೋಷಾಕರ ಎಂಬ ಪದವು ಎರಡು ಅರ್ಥಗಳನ್ನು ಕೊಡುತ್ತದೆ. ದೋಷಶಬ್ದವನ್ನು ಪುಲ್ಲಿಂಗದಲ್ಲೂ ಸ್ತ್ರೀಲಿಂಗದಲ್ಲೂ ಉಪಯೋಗಿಸಿದೆ. ಪುಲ್ಲಿಂಗದಲ್ಲಿ ಗುಣಕ್ಕೆ ಎದುರಾಳಿ ಎನಿಸಿದ ಅಂಶವೂ, ಸ್ತ್ರೀಲಿಂಗದಲ್ಲಿ ರಾತ್ರಿಯೂ ಇಲ್ಲಿ ತಿಳಿದುಬರುತ್ತವೆ. ಹೀಗೆ ದೋಷಶಬ್ದದ ಅವಯವಾರ್ಥದ ಮೂಲಕ ರಾತ್ರಿಗೆ ಕರ್ತನೆನಿಸಿದ ಚಂದ್ರನನ್ನು ದೋಷಗಳಿಗೆ ಆಕರನೆಂದು ತಿಳಿಸಿದ್ದು ನಿರುಕ್ತ್ಯಲಂಕಾರವೆನಿಸಿದೆ. ಇದಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. ಕವಿಗಳಲ್ಲಿ ಉತ್ತಮರು ಯಾರು ಎಂಬುದನ್ನು ಹಿಂದೊಮ್ಮೆ ಎಣಿಕೆಮಾಡಬೇಕಾಗಿ ಬಂದಾಗ ಕಿರುಬೆರಳಿನಲ್ಲಿ ಕಾಳಿದಾಸನ ಹೆಸರನ್ನು ಸೂಚಿಸಿದ್ದಾಯಿತು. ಅವನಿಗೆ ಸಮಾನವಾದ ಕವಿಯೊಬ್ಬನು ಅಂದಿನಿಂದ ಇಂದಿನವರೆಗೂ ಇಲ್ಲದೇ ಇರುವ ಪ್ರಯುಕ್ತ ಕಿರುಬೆರಳಿನ ಪಕ್ಕದ ಬೆರಳಿನಲ್ಲಿ ಎಣಿಕೆಮಾಡಲು ಯಾವ ಕವಿಯ ಹೆಸರೂ ಸಿಕ್ಕದೇ ಇದ್ದುದರಿಂದ ಆ ಬೆರಳಿಗೆ ಅನಾಮಿಕೆ ಎಂಬ ಹೆಸರು ಅನ್ವರ್ಥವೆನಿಸಿತು." ಇಲ್ಲಿ ಬೆರಳಿಗೆ ಅನಾಮಿಕೆ ಎಂಬ ಹೆಸರು ಯೋಗಾರ್ಥಕ್ಕೆ ಹೊಂದುತ್ತದೆ. ಅದರಲ್ಲಿ ಎಣಿಸಲು ಯಾವ ಕವಿಯ ನಾಮವೂ ಮುಂದೆ ಬಾರದ್ದರಿಂದ ಅದಕ್ಕೆ ಆ ಹೆಸರು ಅನ್ವರ್ಥವೆನಿಸಿದೆ. ಇದು ನಿರುಕ್ತ್ಯಲಂಕಾರವೆನಿಸಿದೆ.

# ೯೮. ಪ್ರತಿಷೇಧಾಲಂಕಾರ

ಪ್ರತಿಷೇಧಃ ಪ್ರಸಿದ್ಧಸ್ಯ ನಿಷೇಧಸ್ಯಾನುಕೀರ್ತನಮ್ ।
ನ ದ್ಯೂತಮೇತತ್ಕಿತವ ಕ್ರೀಡನಂ ನಿಶಿತೈಃ ಶರೈಃ ॥ ೧೬೪ ॥

ನಿಜ್ಞಾತೋ ನಿಷೇಧಃ ಸ್ವತೋಽನುಪಯುಕ್ತತ್ವಾತ್ ಅರ್ಥಾಂತರಂ ಗರ್ಭೀಕರೋತಿ. ತೇನ ಚಾರುತಾನ್ವಿತೋಽಯಂ ಪ್ರತಿಷೇಧನಾಮಾಲಂಕಾರಃ. ಉದಾಹರಣಂ ಯುದ್ಧರಂಗೇ ಪ್ರತ್ಯವತಿಷ್ಠಮಾನಂ ಶಾಕುನಿಕಂ ಪ್ರತಿ ವಿದಗ್ಧವಚನಮ್. ತತ್ರ ಯುದ್ಧಸ್ಯ ಅಕ್ಷದ್ಯೂತತ್ವಾಭಾವೋ ನಿಜ್ಞಾತ ಏವ ಕೀರ್ತ್ಯಮಾನಸ್ತತ್ರೈವ ತವ ಪ್ರಾಗಲ್ಭ್ಯಂ ನ ಯುದ್ಧೇ ಪ್ರತ್ಯುತ್ಪತ್ತಿರ್ಗ್ರಹೋಽಸ್ತಿ ಇತ್ಯುಪಹಾಸಂ ಗರ್ಭೀಕರೋತಿ. ತಚ್ಚ ಕಿತವೇನ ಆವಿಷ್ಕೃತಮ್. ಯಥಾ ವಾ—

ನ ವಿಷೇಣ ನ ಶಸ್ತ್ರೇಣ ನಾಗ್ನಿನಾ ನ ಚ ಮೃತ್ಯುನಾ ।
ಅಪ್ರತೀಕಾರಪಾರುಷ್ಯಾಃ ಸ್ತ್ರೀಭಿರೇವ ಸ್ತ್ರಿಯಃ ಕೃತಾಃ ॥

ಅತ್ರ ಸ್ತ್ರೀಣಾಂ ವಿಷಾದಿನಿಮಿತ್ತತ್ವಾಭಾವಃ ಪ್ರಸಿದ್ಧ ಏವ ಕೀರ್ತ್ಯಮಾನಸ್ತಾಸಾಂ ವಿಷಾದ್ಯತಿಶಾಯಿ ಕ್ರೌರ್ಯಮಿತಿ ಅಮುಮರ್ಥಂ ವ್ಯಕ್ತೀಕರೋತಿ ಇತಿ ಸಃ "ಅಪ್ರತಿಕಾರಪಾರುಷ್ಯಾ" ಇತಿ ಪ್ರತೀಕಾರವದ್ಭ್ಯಃ ವಿಷಾದಿಭ್ಯಃ ತಾಸಾಂ ವಿಶೇಷಂ ದರ್ಶಯತಾ ವಿಶೇಷಣೇನ ಆವಿಷ್ಕೃತಃ.

ಲೋಕಪ್ರಸಿದ್ಧವೆನಿಸಿದ ನಿಷೇಧವನ್ನು ಉಲ್ಲೇಖಿಸುವುದೇ ಪ್ರತಿಷೇಧಾಲಂಕಾರವೆನಿಸುವುದು. ಇಂತಹದು ಮಾಡಬೇಕಾದ ಕೆಲಸ, ಇಂತಹದು ಮಾಡಬಾರದ ಕೆಲಸ ಎಂದು ಲೋಕದಲ್ಲಿ ಪ್ರಸಿದ್ಧಿ ಇದೆ. ಅವುಗಳಲ್ಲಿ ನಿಷಿದ್ಧವಾದದ್ದನ್ನು ಮತ್ತೆ ತಿಳಿಸುವುದೇ ಪ್ರತಿಷೇಧವೆನಿಸುತ್ತದೆ. ಎಲ್ಲರಿಗೂ ತಿಳಿದ ನಿಷೇಧವನ್ನೇ ಮತ್ತೆ ತಿಳಿಸುವುದರಲ್ಲೂ ಒಂದು ಬಗೆಯ ಸ್ವಾರಸ್ಯವಿರುವುದರಿಂದ ಹೀಗೆ ತಿಳಿಸಲಾಗಿದೆ, ಎಲ್ಲರಿಗೂ ತಿಳಿದಿರುವ ನಿಷೇಧವನ್ನು ಅನುವಾದಮಾಡುವುದರಲ್ಲಿ ಚಮತ್ಕಾರವೇನಿದೆ ? ಎಂದು ಕೇಳಿದರೆ ಅಂತಹ ನಿಷೇಧವನ್ನು ತಿಳಿಸಿದ್ದರಿಂದ ಅದರಲ್ಲೂ ಬೇರೊಂದು ಅರ್ಥವು ಅಡಗಿದೆ ಎಂಬ ಸ್ವಾರಸ್ಯವಿರುವ ಪ್ರಯುಕ್ತ ಹಾಗೆ ತಿಳಿಸಿದೆ ಎಂದು ತಿಳಿಯಬೇಕು. ಈ ಬಗೆಯ ಸೌಂದರ್ಯವಿರುವುದರಿಂದಲೇ ಇದು ಅಲಂಕಾರವೆನಿಸಿದೆ. 'ಎಲೈ ವಂಚಕನೇ, ಇದು ಜೂಜಲ್ಲ: ಆದರೆ ತೀಕ್ಷ್ಣವಾದ ಬಾಣಗಳೊಡನೆ ಆಡುವ ಆಟ.' ಯುದ್ಧರಂಗದಲ್ಲಿ ಎದುರಿಗೆ ಬರುತ್ತಿರುವ ಶಾಕುನಿಕನಿಗೆ ಯುದ್ಧವು ಪಗಡೆಯಾಟವಲ್ಲವೆಂಬುದು ತಿಳಿದ ವಿಷಯವೇ

ಆದರೂ ಅದನ್ನು ಮತ್ತೆ ಇಲ್ಲಿ ತಿಳಿಸಿದ್ದರಲ್ಲಿ ಒಂದು ಬಗೆಯ ಸ್ವಾರಸ್ಯವಿದೆ. 'ಇದು ಜೂಜಾಟವಲ್ಲ : ಆದರೆ ತೀಕ್ಷ್ಣವಾದ ಬಾಣಗಳೊಡನೆ ಆಡುವ ಕ್ರೀಡೆ' ಎಂದು ಇಲ್ಲಿ ತಿಳಿಸಿದೆ. ಯುದ್ಧವು ಶೌರ್ಯದಿಂದ ನಡೆಯುವ ಕೆಲಸವೆನಿಸಿದ್ದರಿಂದ ಇದು ಜೂಜಾಟವಲ್ಲವೆಂಬುದು ಎಲ್ಲರಿಗೂ ತಿಳಿದಂತೆಯೇ ಶಕುನಗಳನ್ನು ಹೇಳುವವನಿಗೂ ಸಹ ತಿಳಿದೇ ಇರುವುದು. ಆದರೂ ಅದನ್ನು ಇಲ್ಲಿ ಶಬ್ದದಿಂದ ತಿಳಿಸಲಾಗಿದೆ. ಹಾಗೆ ತಿಳಿಸಿದ್ದರಿಂದ "ನಿನಗೆ ಜೂಜಾಟ"ದಲ್ಲಿ ಮಾತ್ರವೇ ಸಾಮರ್ಥ್ಯವಿದೆ ; ಆದರೆ ಯುದ್ಧದಲ್ಲಿ ಆಸಕ್ತಿಯಿಲ್ಲವೆಂದು ಹಾಸ್ಯಮಾಡುವುದೇ ಉದ್ದೇಶವೆನಿಸಿದೆ. ಈ ಪ್ರತಿಷೇಧವು ಈ ಬಗೆಯ ಉಪಹಾಸವನ್ನೊಳಗೊಂಡಿರುವುದೆಂಬುದು ಅಲ್ಲಿ ಉಪಯೋಗಿಸಿರುವ ಕಿತವ ಎಂಬ ಪದದಿಂದ ಪ್ರಕಟವಾಗುತ್ತದೆ. ಇದನ್ನು ಧ್ವನಿ ಎಂದು ಭಾವಿಸಬಾರದು, ಇದಕ್ಕೆ ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ. "ಸ್ತ್ರೀಯರನ್ನು ಬ್ರಹ್ಮನು ವಿಷದಿಂದಾಗಲೀ ಶಸ್ತ್ರದಿಂದಾಗಲೀ ಅಗ್ನಿಯಿಂದಾಗಲೀ ಮೃತ್ಯುವಿನಿಂದಾಗಲೀ ನಿರ್ಮಿಸಿಲ್ಲ. ಇವರಿಗೆ ಯಾವ ಬಗೆಯ ಪ್ರತೀಕಾರವನ್ನು ಮಾಡದೇ ಇದ್ದರೂ ಇವರಲ್ಲಿ ಕಾಠಿನ್ಯವಿದೆ, ವಿಷ ಮೊದಲಾದವಕ್ಕೆ ಪ್ರತಿಯಾಗಿ ಮಾಡುವ ಚಿಕಿತ್ಸೆಯಿಂದ ಅವನ್ನು ತಡೆಯಬಹುದು. ಸ್ತ್ರೀಯರ ಕಾಠಿನ್ಯಕ್ಕೆ ಯಾವ ಬಗೆಯ ಪ್ರತಿಕಾರವೂ ಎಲ್ಲಿಯೂ ಕಂಡುಬಂದಿಲ್ಲ. ವಿಷ ಮೊದಲಾದವುಗಳೇ ಸ್ತ್ರೀಯರ ನಿರ್ಮಾಣಕ್ಕೆ ಕಾರಣವಾಗಿದ್ದಿದ್ದರೆ ಅವರ ಪಾರುಷ್ಯವನ್ನು ತಡೆಯಬಹುದಾಗಿತ್ತು. ಆದ್ದರಿಂದ ಸ್ತ್ರೀಯರನ್ನು ಸ್ತ್ರೀಯರಿಂದಲೇ ಬ್ರಹ್ಮನು ನಿರ್ಮಿಸಿರುವನು. ಅವರನ್ನು ಅದರಿಂದಲೇ ಮಾಡಿರುವನೇ ಹೊರತು ಅಲ್ಲಿ ಬೇರೆ ಯಾವ ಸಾಧನವನ್ನೂ ಬ್ರಹ್ಮನು ಅಲ್ಲಿ ಉಪಯೋಗಿಸಿಲ್ಲ.'' ಇಲ್ಲಿ ಸ್ತ್ರೀಯರ ನಿರ್ಮಾಣಕ್ಕೆ ವಿಷ ಶಸ್ತ್ರ ಅಗ್ನಿ ಮೃತ್ಯು ಇವು ನಿಮಿತ್ತವಲ್ಲವೆಂಬುದು ಲೋಕದಲ್ಲಿ ಪ್ರಸಿದ್ಧವೇ ಆಗಿದೆ. ಅದನ್ನು ಬಾಯಿಂದ ಹೇಳಬೇಕಾಗಿಲ್ಲವಾದರೂ ಇಲ್ಲಿ ತಿಳಿಸಿದೆ. ಇದರಿಂದ "ಅವರಲ್ಲಿರುವ ಕ್ರೂರತನವು ವಿಷ ಮೊದಲಾದುವನ್ನು ಮೀರಿಸುತ್ತದೆ.'' ಎಂಬ ಅರ್ಥವು ತಿಳಿದು ಬರುತ್ತದೆ. ಈ ಅರ್ಥವನ್ನು 'ಅಪ್ರತೀಕಾರಪಾರುಷ್ಯಾಃ' ಎಂಬ ಪದವು ವ್ಯಕ್ತಪಡಿಸುತ್ತದೆ. ವಿಷ ಮೊದಲಾದವಕ್ಕೆ ಪ್ರತೀಕಾರವಿದೆ, ಇವರಿಗೆ ಯಾವ ಪ್ರತೀಕಾರವೂ ಇಲ್ಲವೆಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

## ೯೯. ವಿಧ್ಯಲಂಕಾರ

ಸಿದ್ಧಸ್ಯೈವ ವಿಧಾನಂ ಯತ್ತದಾಹುರ್ವಿಧ್ಯಲಂಕೃತಿಮ್ ।
ಪಂಚಮೋದಂಚನೇ ಕಾಲೇ ಕೋಕಿಲಃ ಕೋಕಿಲೋ ಭವೇತ್ ॥ ೧೬೫ ॥

ನಿಷ್ಫಲ್ತವಿಧಾನಮನುಪಯುಕ್ತಿಬಾಧಿತಂ ಸದರ್ಥಾಂತರಗರ್ಭಿ [illegible] ಚರುತರಮಿತಿ ತಂ ವಿಧಿನಾಮಾನಮಲಂಕಾರಮಾಹುಃ, ಉದಾಹರಣೇ ಕೋಕಿಲಸ್ಯ

ಕೋಕಿಲತ್ವವಿಧಾನಮನುಪಯುಕ್ತಂ ಸತ್ ಅತಿಮಧುರಪಂಚಮಧ್ವನಿಶಾಲಿತಯಾ ಸಕಲಜನಹೃದ್ಯತ್ವಂ ಗರ್ಭೀಕರೋತಿ ತಚ್ಚ 'ಪಂಚಮೋದಂಚನೇ' ಇತಿ ಕಾಲ ವಿಶೇಷೇಣ ಆವಿಷ್ಕೃತಮ್. ಯಥಾ ವಾ—

ಹೇ ಹಸ್ತ ದಕ್ಷಿಣ ಮೃತಸ್ಯ ಶಿಶೋರ್ದ್ವಿಜಸ್ಯ
ಜೀವಾತವೇ ವಿಸೃಜ ಶೂದ್ರಮುನೌ ಕೃಪಾಣಮ್ ।
ರಾಮಸ್ಯ ಗಾತ್ರಮಸಿ ನಿರ್ಭರಗರ್ಭಖಿನ್ನ-
ಸೀತಾಪ್ರವಾಸನಪಟೋಃ ಕರುಣಾ ಕುತಸ್ತೇ ॥

ಅತ್ರ ರಾಮಸ್ಯ ಸ್ವಹಸ್ತಂ ಪ್ರತಿ ರಾಮಸ್ಯ ಗಾತ್ರಮಸೀತಿ ವಚನಂ ಅನುಪ-ಯುಕ್ತಂ ಸತ್ 'ರಾಮಸ್ಯ' ಇತ್ಯನೇನ ಸ್ವಸ್ಯ ಅತ್ಯಂತನಿಷ್ಕರುಣತ್ವಂ ಗರ್ಭೀಕರೋತಿ ತಚ್ಚ ನಿರ್ಭರೇತ್ಯಾದಿವಿಶೇಷಣೇನ ಆವಿಷ್ಕೃತಮ್. ಯದ್ಯಪ್ಯನಯೋರ್ವಿಧಿನಿಷೇಧ-ಯೋರುದಾಹರಣೇಷು ವ್ಯಂಗ್ಯಾನ್ಯಾರ್ಥಾಂತರಸಂಕ್ರಮಿತವಾಚ್ಯರೂಪಾಣಿ : ತಥಾಪಿ ನ ಧ್ವನಿಭಾವಾಸ್ಪದಾನಿ, ಸ್ವೋಕ್ತ್ಯೈವ ವ್ಯಂಗ್ಯವಿಶೇಷಾವಿಷ್ಕರಣಾತ್. ವ್ಯಂಗ್ಯಾ-ವಿಷ್ಕರಣೇ ಚ ಅಲಂಕಾರತ್ವಮೇವೇತಿ ಪ್ರಾಕ್ ಪ್ರಸ್ತುತಾಂಕುರಪ್ರಕರಣೇ ವ್ಯವಸ್ಥಿತ-ತ್ವಾತ್. ಪೂರ್ವಂ ಬಾಧಿತೌ ಪ್ರತಿಷೇಧೌ ಆಕ್ಷೇಪಬಾಧಿತತ್ವೇನೋಕ್ತೌ. ಇಹ ತು ಪ್ರಸಿದ್ಧೌ ವಿಧಿಪ್ರತಿಷೇಧೌ ತತ್ಪ್ರತಿದ್ವಂದ್ವಿನಾ ಅಲಂಕಾರತ್ವೇನ ವರ್ಣಿತಾವಿತಿ ಭೇದಃ.

ಲೋಕಪ್ರಸಿದ್ಧವಾದ ಕಾರ್ಯ ಒಂದನ್ನು ನಡೆಸಬೇಕಾದ್ದು ಸಹಜವೆನಿಸಿದರೂ ಅದನ್ನು ನಡೆಸಬೇಕೆಂದು ಮತ್ತೆ ತಿಳಿಸುವುದರಲ್ಲೂ ಒಂದು ಬಗೆಯ ಚಮತ್ಕಾರವೂ ಆವಶ್ಯಕತೆಯೂ ಇರುವುದರಿಂದ ಹಾಗೆ ಶಬ್ದದಿಂದ ತಿಳಿಸುವುದು ವಿಧ್ಯಲಂಕಾರ ವೆನಿಸುವುದು. ಪಂಚಮಸ್ವರವನ್ನು ಪ್ರಕಟಿಸುವ ಸನ್ನಿವೇಶದಲ್ಲಿ ಕೋಗಿಲೆಯೂ ಕೋಗಿಲೆ ಎನಿಸುತ್ತದೆ. ಕೋಗಿಲೆಯೂ ಬೇರೆ ಪ್ರಾಣಗಳೊಡನೆ ಸೇರಿದಾಗ ಅದನ್ನು ಕೋಗಿಲೆ ಎಂದು ಗುರ್ತಿಸಲಾಗುವುದಿಲ್ಲ. ಆದರೆ ಅದಕ್ಕೆ ಸಂತೋಷ ಉಂಟಾದಾಗ ಪಂಚಮಸ್ವರದಿಂದ ಹಾಡುವುದು. ಆಗ ಆ ಧ್ವನಿಯನ್ನು ಕೇಳಿದೊಡನೆಯೇ ಅದನ್ನು ಹಾಡಿದ್ದು ಕೋಗಿಲೆಯೇ ಹೊರತು ಬೇರೆಯಿಲ್ಲವೆಂದು ಜನರು ನಿರ್ಣಯಿಸು ವರು. ಪಂಚಮಸ್ವರವು ಕೋಗಿಲೆಯನ್ನು ಬೇರೆ ಪ್ರಾಣಿಗಳಿಂದ ಪ್ರತ್ಯೇಕಿಸುವಂತಹ ವೈಶಿಷ್ಟ್ಯವೆಂಬುದು ಲೋಕದಲ್ಲಿ ಎಲ್ಲರಿಗೂ ತಿಳಿದಿದೆ. ಆದರೂ ಅದನ್ನು ಮತ್ತೆ ಶಬ್ದದಿಂದ ತಿಳಿಸಿರುವ ಪ್ರಯುಕ್ತ ಇದು ವಿಧ್ಯಲಂಕಾರವೆನಿಸಿದೆ. ಲೋಕಪ್ರಸಿದ್ಧ ವಾದ ನಿಷೇಧವನ್ನು ತಿಳಿಸುವಂತೆಯೇ ಲೋಕಪ್ರಸಿದ್ಧವಾದ ವಿಧಿಯನ್ನು ತಿಳಿಸುವ ಪ್ರಯುಕ್ತ ಇದು ಅಲಂಕಾರವೆನಿಸಿದೆ.

ಅದು ಇಂತಹದೆಂದೂ, ಅದನ್ನು ಮಾಡುವ ಬಗೆ ಇಂತಹದೆಂಬುದೂ, ಒಮ್ಮೆ ತಿಳಿದರೂ ಅದನ್ನು ಮತ್ತೆ ವಿಧಿಸುವುದು ನಿರರ್ಥಕವೆನಿಸುವುದು. ಪ್ರಯೋಜನ ವಿಲ್ಲದೆ ತಿಳಿಸಿದ್ದು ಬಾಧಿತವಾಗುವುದು. ಹೀಗೆ ತಿಳಿಸಬೇಕಾದ ಅವಶ್ಯಕತೆ ಇಲ್ಲದಿದ್ದರೂ ತಿಳಿಸಿದ್ದರಿಂದ ಇದು ಬೇರೊಂದು ಅರ್ಥವನ್ನೊಳಗೊಂಡಿದ್ದು ಸುಂದರವೆನಿಸು ತ್ತದೆ. ಹೀಗೆ ಇಲ್ಲಿ ಸ್ವಾರಸ್ಯವಿರುವ ಪ್ರಯುಕ್ತ ಎಲ್ಲರಿಗೂ ತಿಳದಿರುವ ವಿಷಯ ವನ್ನು ಕಾವ್ಯದಲ್ಲಿ ಅನುವಾದವಮಾಡುವ ಪದ್ಧತಿ ರೂಢಿಗೆ ಬಂದಿದೆ. ಆದ್ದರಿಂದಲೇ ಇದು ಒಂದು ಬಗೆಯ ಅಲಂಕಾರವೆನಿಸಿದೆ. ಕೋಗಿಲೆಯು ಕೋಗಿಲೆಯಲ್ಲದೆ ಬೇರೆ ಪ್ರಾಣಿಯಲ್ಲವಾದರೂ ಅದನ್ನು ಕೋಗಿಲೆ ಎಂದು ವಿಧಿಸಿದ್ದು ವಾಸ್ತವವಾಗಿ ಅನಾ ವಶ್ಯಕವಾದರೂ ಇಲ್ಲಿ ಉದ್ದೇಶಪೂರ್ವಕವಾಗಿ ಹಾಗೆ ತಿಳಿಸಲಾಗಿದೆ. ಅದರಲ್ಲಿ ಒಂದು ವೈಶಿಷ್ಟ್ಯವು ನೆಲಸಿದೆ. ಆ ವೈಶಿಷ್ಟ್ಯವು ಅದರ ಸ್ವರದಲ್ಲಿ ಅಡಗಿದೆ. ಪಂಚಮಸ್ವರವು ಬೇರೆ ಯಾವ ಪ್ರಾಣಿಯಲ್ಲೂ ಇಷ್ಟು ಮಧುರವೆನಿಸುವುದಿಲ್ಲ. ಎಲ್ಲರಿಗೂ ಮನೋ ಹರವಾಗುವಂತೆ ಪಂಚಮಸ್ವರದಿಂದ ಹಾಡಿ ಸಂತೋಷಪಡಿಸುವ ಸಾಮರ್ಥ್ಯವು ಕೋಗಿಲೆಯೊಂದಕ್ಕೆ ಮಾತ್ರವೇ ಇದೆ ಎಂಬುದನ್ನು ತಿಳಿಸಲಿಕ್ಕಾಗಿ ಕೋಗಿಲೆಯನ್ನು ಕೋಗಿಲೆ ಎಂದು ವಿಧಿಸಲಾಗಿದೆ. ಇಲ್ಲಿ ಕೋಗಿಲೆಗೆ ಹೀಗೆ ಅಸಾಧಾರಣ ಶಕ್ತಿಯಿದೆ ಎಂಬ ಅಂಶವು 'ಪಂಚಮೋದಂಚನೇ' ಎಂಬಲ್ಲಿ ಹೇಳಿರುವ ಕಾಲವಿಶೇಷದಿಂದ ಪ್ರಕಟ ವಾಗುತ್ತದೆ. ಇದಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. ರಾಮನು ಸೀತೆಯನ್ನು ತೊರೆದ ಮೇಲೆ ಅಯೋಧ್ಯೆಯಲ್ಲಿ ಒಮ್ಮೆ ಬ್ರಾಹ್ಮಣ ವಂಶದ ಮಗು ಒಂದು ಅಕಾಲಮರಣಕ್ಕೆ ವಶವಾಗುವುದು. ಅದಕ್ಕೆ ಕಾರಣವೇನಿರಬೇಕೆಂದು ವಸಿಷ್ಠ ಮಹರ್ಷಿಯು ದಿವ್ಯದೃಷ್ಟಿಯಿಂದ ನೋಡಿದಾಗ ಶೂದ್ರಜಾತಿಯ ವ್ಯಕ್ತಿಯೊಬ್ಬನು ತಲೆಕೆಳಗೆಮಾಡಿ ಶೀರ್ಷಾಸನದಲ್ಲಿ ನಿಂತು ಉಗ್ರತಪಸ್ಸನ್ನಾಚರಿಸುತ್ತಿರುವನೆಂಬುದು ತಿಳಿದುಬಂದಿತು. ಶೂದ್ರನು ಹಾಗೆ ತಪಸ್ಸನ್ನಾಚರಿಸುವುದು ಧರ್ಮಶಾಸ್ತ್ರಕ್ಕೆ ವಿರುದ್ಧವಾದ್ದರಿಂದ ತ್ರೇತಾಯುಗದಲ್ಲಿ ಧರ್ಮಕ್ಕೆ ಗ್ಲಾನಿಯುಂಟಾಗಿ ಆ ವೇಳೆಯಲ್ಲಿ ಆ ಹುಡುಗನು ಸತ್ತಿರುವನೆಂದು ತೀರ್ಮಾನವಾಯಿತು. ಆಗ ಆ ಶೂದ್ರತಪಸ್ವಿ ಯನ್ನು ಕೊಲೆಮಾಡಲಿಕ್ಕಾಗಿ ರಾಮನು ಹೋಗಿದ್ದು ಬಾಣವನ್ನು ಪ್ರಯೋಗಿಸುವ ಕಾಲದಲ್ಲಿ ತನ್ನ ಹಸ್ತವನ್ನು ನೋಡಿ ಹೀಗೆ ಹೇಳುತ್ತಾನೆ. "ಎಲೈ ದಕ್ಷಿಣಹಸ್ತವೇ, ಅಕಾಲದಲ್ಲಿ ಸತ್ತಿರುವ ಆ ಬ್ರಾಹ್ಮಣಶಿಶುವನ್ನು ಬದುಕಿಸಲಿಕ್ಕಾಗಿ ಶೂದ್ರಮುನಿಯ ಕಡೆಗೆ ಬಾಣವನ್ನು ಪ್ರಯೋಗಿಸು. ನೀನು ರಾಮನ ಶರೀರದ ಒಂದು ಭಾಗವೆನಿಸಿ ರುವೆ ಎಂಬ ಮಾತನ್ನು ಹೇಳಬೇಕಾಗಿಯೇ ಇಲ್ಲ. ರಾಮನು ತನ್ನ ಕೈಯನ್ನು ತನ್ನದೆಂದು ಹೇಳುವುದರಲ್ಲಿ. ಯಾರಿಗೂ ಯಾವ ಉಪಯೋಗವೂ ಆಗುವಂತಿಲ್ಲ. ಆದರೂ ಇಲ್ಲಿ ರಾಮಸ್ಯ ಎಂಬ ಪದವನ್ನು ಪ್ರಯೋಗಿಸಲಾಗಿದೆ. ಇದರಿಂದ "ತಾನು ಅತ್ಯಂತನಿಷ್ಕರುಣಿ" ಎಂಬ ಅರ್ಥವು ಪ್ರಕಟವಾಗುತ್ತದೆ. ಗರ್ಭಿಣಿಯಾದ

ಹೊಡತಿಯನ್ನೇ ತೊರೆದಿರುವ ಹಸ್ತವು ಎಷ್ಟು ಕಠಿನವೆಂಬುದು ಎಲ್ಲರಿಗೂ ತಿಳಿದಿದೆ. ಅಂತಹ ಕ್ರೂರವಾದ ಕೆಲಸವನ್ನೇ ಮಾಡಿರುವ ನೀನು ಈ ಶೂದ್ರ ಮುನಿಗೆ ಬಾಣವನ್ನು ಪ್ರಯೋಗಿಸಲಾರೆಯಾ ? "ಒಟ್ಟಿನಲ್ಲಿ ನನ್ನಂತಹ ನಿಷ್ಕರುಣಿ ಇನ್ನು ಎಲ್ಲಿಯೂ ಕಾಣಲಾರೆನು" ಎಂಬ ಅರ್ಥವನ್ನು ರಾಮಸ್ಯ ಎಂಬುದಕ್ಕೆ ಕೊಟ್ಟಿರುವ ವಿಶೇಷಣವು ತಿಳಿಸುತ್ತದೆ. ಇಲ್ಲಿಯೂ ಮತ್ತು ಪ್ರತಿಷೇಧಾಲಂಕಾರದಲ್ಲೂ ಪ್ರಸಿದ್ಧವಾದ ವಿಧಿ ನಿಷೇಧಗಳನ್ನು ಶಬ್ದದಿಂದ ತಿಳಿಸಲಿಕ್ಕೆ ಬೇರೊಂದು ವಿಶೇಷವಾದ ಅರ್ಥವನ್ನು ತಿಳಿಯಪಡಿಸುವ ಉದ್ದೇಶವಿರುವುದೆಂಬುದು ಸ್ಪಷ್ಟವಾಗುತ್ತದೆ. ಇವೆರಡು ಅಲಂಕಾರಗಳಿಗೆ ಕೊಟ್ಟಿರುವ ಉದಾಹರಣೆಗಳಲ್ಲಿ ಒಂದೊಂದು ಪದವು ಒಂದು ವಿಶಿಷ್ಟವಾದ ಅರ್ಥವನ್ನು ತಿಳಿಯಪಡಿಸುವ ಪ್ರಯುಕ್ತ ಆ ಅರ್ಥವು ವ್ಯಂಗ್ಯವೇ ಆಗಿರುವುದರಿಂದ ಆಯಾ ಪದಗಳ ವಾಚ್ಯಾರ್ಥಗಳು ಈ ವ್ಯಂಗ್ಯಾರ್ಥದಲ್ಲಿ ಸೇರಿ ಕೊಳ್ಳುವುದಾಗಿ ಕಂಡುಬರುತ್ತದೆ. ಆದರೂ ಇಲ್ಲಿ ತೋರುವ ವ್ಯಂಗ್ಯಾರ್ಥವು ಧ್ವನಿ ಎನಿಸಲರ್ಹವೆನಿಸಿಲ್ಲ. ಆಯಾ ಪದಗಳಿಂದಲೇ ವ್ಯಂಗ್ಯಾರ್ಥವನ್ನು ಕವಿಯು ಪ್ರಕಟಿಸಿರುವ ಪ್ರಯುಕ್ತ ಇದು ಧ್ವನಿ ಎನಿಸದೆ ಅಲಂಕಾರವೇ ಆಗುತ್ತದೆ. ಶಬ್ದ ದಿಂದಾಗಲೀ ಅರ್ಥದಿಂದಾಗಲೀ ಬೇರೊಂದು ವ್ಯಂಗ್ಯಾರ್ಥವನ್ನು ಪ್ರಕಟಿಸಿದಾಗ ಅಲಂಕಾರವೆನಿಸುವುದೇ ಹೊರತು ಧ್ವನಿಯಾಗಲಾರದೆಂದು ಪ್ರಸ್ತುತಾಲಂಕಾರದ ಪ್ರಕರಣದಲ್ಲಿ ವ್ಯವಸ್ಥೆ ಮಾಡಿದೆ. ಹಾಗಾದರೆ ಆಕ್ಷೇಪಾಲಂಕಾರದಲ್ಲಿ ವಿಧಿನಿಷೇಧಗಳನ್ನು ಶಬ್ದದಿಂದಲೇ ತಿಳಿಸಿದ್ದರೂ ಸಹ ಬಾಧಿತವೆನಿಸಿವೆ. ಅವು ಲೋಕದಲ್ಲಿ ಪ್ರಸಿದ್ಧ ವಾದುವಲ್ಲ. ಇಲ್ಲಿಯಾದರೋ ಲೋಕಪ್ರಸಿದ್ಧವಾದ ವಿಧಿನಿಷೇಧಗಳನ್ನು ಮತ್ತೆ ಶಬ್ದದಿಂದ ತಿಳಿಸಲಾಗಿದೆ. ಬಾಧಿತವಾದ ವಿಧಿ ನಿಷೇಧಗಳನ್ನು ತಿಳಿಸುವ ಆಕ್ಷೇಪಾ ಲಂಕಾರದ ಬಗೆಗಳಿಗೆ ಎದುರಾಳಿಯಾಗಿ ಇರಬೇಕಾದ್ದು ಆವಶ್ಯಕವಿನಿಸಿದ್ದರಿಂದ ಇವೆರಡು ಅಲಂಕಾರಗಳನ್ನು ಇಲ್ಲಿ ತಿಳಿಸಲಾಗಿದೆ.

## ೧೦೦. ಹೇತ್ವಲಂಕಾರ

ಹೇತೋರ್ಹೇತುಮತಾ ಸಾರ್ಧಂ ವರ್ಣನಂ ಹೇತುರುಚ್ಯತೇ ।
ಅಸಾವುದೇತಿ ಶೀತಾಂಶುರ್ಮಾನಚ್ಛೇದಾಯ ಸುಭ್ರುವಾಮ್ ॥ ೧೬೬ ॥

ಯಥಾ ವಾ—

ಏಷ ತೇ ವಿದ್ರುಮಚ್ಛಾಯೋ ಮರುಮಾರ್ಗ ಇವಾಧರಃ ।
ಕಸ್ಯ ನೋ ತನುತೇ ತನ್ವಿ ಪಿಪಾಸಾಕುಲಿತಂ ಮನಃ ॥

ಮನೋ ನೇಚ್ಛತಿ ವಾರಯತ್ಯುಪಶಮೇ ಕ್ಷಾಮಾಲಿಖಂತ್ಯಾಃ ಪ್ರಿಯಾಂ
ಸ್ವಾತಂತ್ರ್ಯೇ ಪರಿವೃತ್ಯ ತಿಷ್ಠತಿ ಕರೌ ವ್ಯಾಧೂಯ ಧೈರ್ಯೇ ಗತೇ ॥
ತೃಷ್ಣೇ ತ್ವಾಮನುಬದ್ಧತಾ ಫಲಮಿಯತ್ಪ್ರಾಪ್ತಂ ಜನೇನಾಮುನಾ
ಯತ್ಸ್ಪೃಷ್ಟೋ ನ ಪದಾ ಸ ಏವ ಚರಣೌ ಸ್ಪ್ರಷ್ಟುಂ ನ ಸಂಮನ್ಯತೇ ॥

ಹೇತುಹೇತುಮತೋರೈಕ್ಯಂ ಹೇತುಂ ಕೇಚಿತ್ಪ್ರಚಕ್ಷತೇ ।
ಲಕ್ಷ್ಮೀವಿಲಾಸಾ ವಿದುಷಾಂ ಕಟಾಕ್ಷಾ ವೇಂಕಟಪ್ರಭೋಃ ॥ ೧೬೭ ॥

ಅತ್ರ ಚ ಕಾರ್ಯಾವಶ್ಯಂಭಾವತಃ ಶೈಘ್ರ್ಯಾದಿಪ್ರತ್ಯಾಯನಾರ್ಥಃ ಕಾರ್ಯ-ಕಾರಣಭೇದವ್ಯಪದೇಶಃ. ಯಥಾ ವಾ—

ಆಯುರ್ದಾನಮಹೋತ್ಸವಸ್ಯ ವಿನತಕ್ಷೋಣೀಭೃತಾಂ ಮೂರ್ತಿಮಾನ್
ವಿಶ್ವಾಸೋ ನಯನೋತ್ಸವೋ ಮೃಗದೃಶಾಂ ಕೀರ್ತೇಃ ಪ್ರಕಾಶಃ ಪರಃ ।
ಆನಂದಃ ಕಲಿತಾಕೃತಿಃ ಸುಮನಸಾಂ ವೀರಶ್ರಿಯೋ ಜೀವಿತಂ
ಧರ್ಮಸ್ಯೈವ ನಿಕೇತನಂ ವಿಜಯತೇ ವೀರಃ ಕಲಿಂಗೇಶ್ವರಃ ॥

ಅತ್ರ ದಾನಮಹೋತ್ಸವಾಯುಷ್ಕರತ್ವಾದಿನಾ ಅಧ್ಯವಸಿತೇ ರಾಜ್ಞಿ ತದಾ-ಯುಷ್ಟ್ವಾದಿವ್ಯಪದೇಶಃ.

ಇತ್ಥಂ ಶತಮಲಂಕಾರಾ ಲಕ್ಷಯಿತ್ವಾ ನಿದರ್ಶಿತಾಃ ।
ಪ್ರಾಚಾಮಾಧುನಿಕಾನಾಂ ಚ ಮತಾನ್ಯಾಲೋಚ್ಯ ಸರ್ವತಃ ॥ ೧೬೮ ॥

ಕಾರ್ಯದೊಡನೆಯೇ ಕಾರಣವನ್ನು ವರ್ಣಿಸುವುದು ಹೇತ್ವಲಂಕಾರವೆನಿಸಿದೆ. “ಕೋಮಲಾಂಗಿಯರ ಪ್ರಣಯಕೋಪವನ್ನು ತೊಲಗಿಸಲಿಕ್ಕಾಗಿ ಈ ಚಂದ್ರನು ಉದಯಿಸುತ್ತಾನೆ” ಇಲ್ಲಿ ಚಂದ್ರೋದಯವೇ ಕಾರಣವೆನಿಸಿದೆ. ಸ್ತ್ರೀಯರ ಪ್ರಣಯಕೋಪದ ಪರಿಹಾರವೇ ಕಾರ್ಯವೆನಿಸಿದೆ. ಅವೆರಡನ್ನೂ ಒಟ್ಟಿಗೆ ಒಂದೇ ಕಾಲದಲ್ಲಿ ಇರುವಂತೆ ವರ್ಣಿಸಿರುವುದರಿಂದ ಇದು ಹೇತ್ವಲಂಕಾರವೆನಿಸಿದೆ. ಕಾರ್ಯ ಕಾರಣಗಳಿಗೆ ಕಾಲಭೇದವಿರಬೇಕಾದ್ದು ಸಹಜ. ಇಲ್ಲಿ ಆ ಭೇದವಿಲ್ಲದೆ ಕಾರ್ಯ ದೊಡನೆಯೇ ಕಾರಣವೂ ಇರುವುದಾಗಿ ವರ್ಣಿಸಿದೆ. ಎಲೈ ಕೃಶಾಂಗಿಯೇ, ಹವಳದಂತೆ ಬಣ್ಣವಿರುವ ಈ ನಿನ್ನ ಕೆಳತುಟಿಯು ಮರದ ನೆರಳೇ ಇಲ್ಲದಿರುವ ಮರುಭೂಮಿಯ ದಾರಿಯಂತಿದೆ. ಯಾರಿಗೆ ತಾನೆ ಮನಸ್ಸಿನಲ್ಲಿ ನೀರಡಿಕೆಯ ವ್ಯಾಕುಲ ವನ್ನು ಇದು ಹುಟ್ಟಿಸುವುದಿಲ್ಲ? ಇಲ್ಲಿ ನೀರಡಿಕೆಯ ವ್ಯಾಕುಲವೇ ಕಾರ್ಯ. ಇದರೊಡನೆಯೇ ಅಧರಪಾನವೆಂಬ ಕಾರಣವನ್ನು ತಿಳಿಸಿರುವುದರಿಂದ ಇದು ಹೇತ್ವಲಂಕಾರವೆನಿಸಿದೆ. “ಪ್ರಣಯಕೋಪವು ಇಚ್ಛಿಸದೇ ಇರಲು, ಶಾಂತಿಯು

ತಡೆಯುತ್ತಿರಲು, ನಾಚಿಕೆಯು ಭೂಮಿಯನ್ನು ಒಗೆಯುತ್ತಿರಲು, ಸ್ವಾತಂತ್ರ್ಯವು ಹಿಮ್ಮೆಟ್ಟಲು, ಧೈರ್ಯವು 'ನಿನ್ನ ವರ್ತನೆಯು ನನಗೆ ಇಷ್ಟವಾಗಿಲ್ಲ'ವೆಂದು ಸೂಚಿಸಲಿಕ್ಕಾಗಿ ಕೈಯನ್ನು ಅಳ್ಳಾಡಿಸುತ್ತಿರಲು, ಎಲೈ ಆಶೆಯೇ, ನಿನ್ನನ್ನು ಅನುಸರಿಸುತ್ತಿರುವ ಈ ಜನರು ಇಷ್ಟು ಫಲವನ್ನು ಪಡೆದರು. ನಿನ್ನ ಕಾಲಿನಿಂದ ಮುಟ್ಟಿಸಿಕೊಳ್ಳದೇ ಇರುವ ಆ ಜನರು ತಮ್ಮ ಪಾದಗಳನ್ನು ಮುಟ್ಟಲು ಸ್ವಲ್ಪವೂ ಒಪ್ಪುತ್ತಿಲ್ಲ." ಇಲ್ಲಿ ಎಲ್ಲರೂ ಆಕೆಯ ಕಾಲಿನಿಂದ ಒದಿಸಿಕೊಳ್ಳಲೇ ಬೇಕೆಂಬುದೇ ಕಾರ್ಯ. ಹಾಗೆಯೇ ತೃಷ್ಣೆ ಎಂಬ ಹೇತುವಿನೊಡನೆಯೇ ಅದರ ಕಾರ್ಯವನ್ನೂ ತಿಳಿಸಿರುವುದರಿಂದ ಇದು ಹೇತ್ವಲಂಕಾರವೆನಿಸಿದೆ.

ಕಾರಣ ಮತ್ತು ಕಾರ್ಯ ಇವೆರಡು ಒಂದೇ ಕಡೆ ಬೆರೆತುಕೊಂಡಿರುವುದನೂ ಸಹ ಹೇತ್ವತ್ವಲಂಕಾರವೆಂದು ಉದ್ಭಟ ಮೊದಲಾದವರು ಹೇಳುತ್ತಾರೆ. "ಕಾರ್ಯದೊಡನೆ ಕಾರಣವನ್ನು ತಿಳಿಸುವುದು, ಹಾಗೆಯೇ ಅವೆರಡಕ್ಕೂ ಅಭೇದವನ್ನು ಏರ್ಪಡಿಸುವುದು ಇವೆರಡೂ ಹೇತ್ವಲಂಕಾರವೆನಿಸುತ್ತವೆ." ಎಂದು ಉದ್ಭಟನು ಕಾವ್ಯಾಲಂಕಾರದಲ್ಲಿ ತಿಳಿಸಿರುವನು. "ವೆಂಕಟೇಶ್ವರನ ಕೃಪಾಕಟಾಕ್ಷಗಳೇ ವಿದ್ವಾಂಸರಿಗೆ ಸಂಪತ್ಸಮೃದ್ಧಿ ಎನಿಸಿವೆ" ಇಲ್ಲಿ ಲಕ್ಷ್ಮೀವಿಲಾಸವೇ ಕಾರ್ಯ. ಇದನ್ನು ದೊರಕಿಸುವುದೇ ವೆಂಕಟೇಶ್ವರನ ಕೃಪಾಕಟಾಕ್ಷ. ಇದರಿಂದಲೇ ಸಂಪತ್ಸಮೃದ್ಧಿಯು ದೊರೆಯುವುದಾದ್ದರಿಂದ ಈ ಕಟಾಕ್ಷವೇ ಇಲ್ಲಿ ಹೇತುವೆನಿಸಿದೆ. ಕಟಾಕ್ಷವೇ ವಿಲಾಸವೆಂದು ಹೇಳಿದ್ದರಿಂದ ಕಾರಣವೆನಿಸಿದ ಕಟಾಕ್ಷದಲ್ಲಿ ಕಾರ್ಯವೆನಿಸಿದ ವಿಲಾಸವು ಸೇರಿಕೊಂಡಿರುವುದಾಗಿ ಇಲ್ಲಿ ತಿಳಿಸಿದೆ. ಅದೇ ಇದು ಎಂದು ಅವೆರಡಕ್ಕೂ ಐಕ್ಯವನ್ನು ತಿಳಿಸಿರುವ ಪ್ರಯುಕ್ತ ಇದು ಹೇತ್ವಲಂಕಾರವೆನಿಸಿದೆ. ಇಲ್ಲಿ ಕಾರ್ಯವೆನಿಸಿದ ಲಕ್ಷ್ಮೀವಿಲಾಸವು ವಿದ್ವಾಂಸರಿಗೆ ಅವಶ್ಯವಾಗಿ ಸಂಭವಿಸುವುದೆಂದೂ, ಅದು ಅವರಿಗೆ ಶೀಘ್ರವಾಗಿ ಲಭಿಸುವುದೆಂದೂ ತಿಳಿಸಲಿಕ್ಕಾಗಿ ಕಾರ್ಯಕಾರಣಗಳೆರಡಕ್ಕೆ ಅಭೇದವನ್ನು ಹೇಳಲಾಗಿದೆ. ಅವೆರಡಕ್ಕೆ ಐಕ್ಯವನ್ನು ಹೇಳುವ ಉದ್ದೇಶವೇ ಇದು. ಈಶ್ವರನ ಕಟಾಕ್ಷ ಒಂದಿದ್ದರೆ ಎಲ್ಲವೂ ಲಲಿತವಾಗಿ ದೊರಕುವುದೆಂದೂ ಅದರೊಡನೆಯೇ ಎಲ್ಲವೂ ಸೇರಿಕೊಂಡಿರುವುದೆಂದೂ ಇಲ್ಲಿ ಅವೆರಡಕ್ಕೂ ಅಭೇದವನ್ನು ತಿಳಿಸಲಾಗಿದೆ. "ದಾನವೆಂಬ ಮಹೋತ್ಸವಕ್ಕೆ ಆಯುಷ್ಯವೆನಿಸಿಯೂ, ವಿನಯಶೀಲರಾದ ರಾಜರಿಗೆ ಶರೀರಧಾರಿ ಎನಿಸಿಯೂ, ಕಾಮಿನಿಯರ ಕಣ್ಣುಗಳಿಗೆ ಸಂತೋಷವನ್ನುಂಟುಮಾಡುವ ವಿಶ್ವಾಸವೆನಿಸಿಯೂ, ಕೀರ್ತಿಯ ಹೆಚ್ಚಿನ ಪ್ರಕಾಶವೆನಿಸಿಯೂ, ನಿರ್ಮಲಹೃದಯರಿಗೆ ಶರೀರಧಾರಿಯಾದ ಆನಂದವೆನಿಸಿಯೂ, ವೀರಲಕ್ಷ್ಮಿಗೆ ಪ್ರಾಣಸ್ವರೂಪನೂ, ಧರ್ಮಕ್ಕೆ ವಿಶ್ರಾಂತಿಸ್ಥಾನನೂ ಆಗಿರುವ ವೀರನಾದ ಕಳಿಂಗರಾಜನು ಸರ್ವೋತ್ಕೃಷ್ಟನಾಗಿ ಶೋಭಿಸುತ್ತಿರುವನು." ಇಲ್ಲಿ ಕಳಿಂಗರಾಜನು ಆಯಸ್ಸು, ಮೂರ್ತಿ, ವಿಶ್ವಾಸ, ಪ್ರಕಾಶ, ಆನಂದ, ಪ್ರಾಣ, ವಿಶ್ರಾಂತಿಸ್ಥಾನ ಈ ರೂಪದಲ್ಲಿದ್ದನೆಂದು ತಿಳಿಸಿದೆ. ಯಾರ್ಯಾರಿಗೆ ರಾಜನು ಹೇಗೆ ಇದ್ದನೆಂದು ತಿಳಿಸುವ ಮೂಲ

ಒಬ್ಬನೇ ಅಷ್ಟೆಲ್ಲವೂ ಆಗಿ ಪರಿಣಮಿಸಿದ್ದನೆಂದು ಹೇಳಿರುವುದರಿಂದ ಕಾರಣವೆನಿಸಿದ ರಾಜನಿಗೂ ಆಯುಸ್ಸು ಮೊದಲಾದ ಕಾರ್ಯಗಳಿಗೂ ಐಕ್ಯವನ್ನು ತಿಳಿಸಲಾಗಿದೆ. ಅವನೇ ಧರ್ಮಕ್ಕೆ ವಿಶ್ರಾಂತಿಸ್ಥಳವೆನಿಸಿದ್ದನು ; ಹಾಗೆಯೇ ವೀರಲಕ್ಷ್ಮಿಗೆ ಪ್ರಾಣವೆನಿಸಿದ್ದನು : ಅದರಂತೆ ನಿರ್ಮಲಹೃದಯರಿಗೂ ಆನಂದವೆನಿಸಿದ್ದನು : ಹಾಗೆಯೇ ಸ್ತ್ರೀಯರಿಗೆ ಸಂತೋಷದಾಯಕನಾದ್ದರಿಂದ ವಿಶ್ವಾಸವೆನಿಸಿದ್ದನು, ಹಾಗೆ ಕಾರ್ಯದಲ್ಲಿ ಕಾರಣದ ಅಭೇದವನ್ನು ತಿಳಿಸಿರುವ ಪ್ರಯುಕ್ತ ಇದು ಹೇತ್ವಲಂಕಾರವೆನಿಸಿದೆ. ಅವನು ದಾನಮಹೋತ್ಸವವನ್ನು ಸಂತೋಷದಿಂದ ನಡೆಸುತ್ತಲೂ, ಹೆಚ್ಚಿಸುತ್ತಲೂ ಇದ್ದುದರಿಂದ ಅವನನ್ನು ಆಯುಸ್ಸೆಂದು ಇಲ್ಲಿ ಭಾವಿಸಲಾಗಿದೆ.

ಹೀಗೆ ನೂರು ಅಲಂಕಾರಗಳನ್ನು ತಿಳಿಸಿ ಅವುಗಳ ಲಕ್ಷಣಗಳನ್ನು ಉದಾಹರಣಗಳೊಡನೆ ಸಮನ್ವಯವನ್ನು ಮಾಡಿದ್ದಾಯಿತು. ಇದರಲ್ಲಿ ಪ್ರಾಚೀನರೂ ಮತ್ತು ಆಧುನಿಕರೂ ಆದ ಆಲಂಕಾರಿಕರ ಅಭಿಪ್ರಾಯಗಳನ್ನು ಎಲ್ಲಾ ಕಡೆಗಳಲ್ಲೂ ಅನುಸರಿಸಲಾಗಿದೆ.

## ೧೦೧. ರಸವದಲಂಕಾರ

ರಸಭಾವತದಾಭಾಸಭಾವಶಾಂತಿನಿಬಂಧನಾಃ ।
ಚತ್ವಾರೋ ರಸವತ್ಪ್ರೇಯ ಊರ್ಜಸ್ವಿ ಚ ಸಮಾಹಿತಮ್ ॥ ೧೬೯ ॥
ಭಾವಸ್ಯ ಚೋದಯಃ ಸಂಧಿಃ ಶಬಲತ್ವಮಿತಿ ತ್ರಯಃ ।
ಅಷ್ಟೌ ಪ್ರಮಾಣಾಲಂಕಾರಾಃ ಪ್ರತ್ಯಕ್ಷಪ್ರಮುಖಾಃ ಕ್ರಮಾತ್ ।
ಏವಂ ಪಂಚದಶಾನ್ಯಾನಪ್ಯಲಂಕಾರಾನ್ ವಿದುರ್ಬುಧಾಃ ॥ ೧೭೦ ॥

ತತ್ರ ವಿಭಾವಾನುಭಾವವ್ಯಭಿಚಾರಿಭಿರ್ವ್ಯಂಜಿತೋ ರತಿಹಾಸಶೋಕಾದಿಶ್ಚಿತ್ತವೃತ್ತಿವಿಶೇಷೋ ರಸಃ. ಸ ಯತ್ರ ಪರಸ್ಯ ಅಂಗಂ ಭವತಿ ತತ್ರ ರಸವದಲಂಕಾರಃ. ವಿಭಾವಾನುಭಾವಾಭ್ಯಾಮಭಿವ್ಯಂಜಿತೋ ನಿರ್ವೇದಾದಿಸ್ತ್ರಯಸ್ತ್ರಿಂಶದ್ಭೇದೋ ದೇವತಾಗುರುಶಿಷ್ಯದ್ವಿಜಪುತ್ರಾದೌ ಅಭಿವ್ಯಜ್ಯಮಾನಾ ರತಿಶ್ಚ ಭಾವಃ. ಸ ಯತ್ರ ಅಪರಾಸ್ಯ ಅಂಗಂ ಸ ಪ್ರೇಯೋಽಲಂಕಾರಃ. ಅನೌಚಿತ್ಯೇನ ಪ್ರವೃತ್ತೋ ರಸೋ ಭಾವಶ್ಚ ರಸಾಭಾಸೋ ಭಾವಾಭಾಸಶ್ಚೇತ್ಯುಚ್ಯತೇ. ಸ ಯತ್ರ ಪರಸ್ಯಾಂಗಂ ತದೂರ್ಜಸ್ವಿತ್. ಭಾವಸ್ಯ ಪ್ರಶಾಮ್ಯದವಸ್ಥಾ ಭಾವಶಾಂತಿಃ. ತಸ್ಯಾಃ ಪರಾಂಗತ್ವೇ ಸಮಾಹಿತಮ್. ಭಾವಸ್ಯೋದ್ಗಮಾವಸ್ಥಾ ಭಾವೋದಯಃ. ದ್ವಯೋರ್ವಿರುದ್ಧಯೋಃ ಭಾವಯೋಃ ಪರಸ್ಪರಸ್ಪರ್ಧಾ ಭಾವಸಂಧಿಃ ಬಹೂನಾಂ ಭಾವಾನಾಂ ಪೂರ್ವಪೂರ್ವೋಪಮರ್ದೇನ ಉತ್ಪತ್ತಿರ್ಭಾವಶಬಲತಾ. ಏತೇಷಾಂ ಇತರಾಂಗತ್ವೇ ಭಾವೋದಯಾಸ್ತ್ರಯೋಽಲಂಕಾರಾಃ. ತತ್ರ ರಸವದುದಾಹರಣಮ್—

ಮುನಿರ್ಜಯತಿ ಯೋಗೀಂದ್ರೋ ಮಹಾತ್ಮಾ ಕುಂಭಸಂಭವಃ ।
ಯೋಽನೈಕಚುಲಕೇ ದೃಷ್ಟ್ವಾ ದಿವ್ಯೌ ತೌ ಮತ್ಸ್ಯಕಚ್ಛಪೌ ॥

ಅತ್ರ ಮುನಿವಿಷಯರತಿರೂಪಸ್ಯ ಭಾವಾಸ್ಯಾದ್ಭುತರಸೋಽಂಗಮ್.

ಯಥಾ ವಾ—

ಅಯಂ ರಸನೋತ್ಕರ್ಷೀ ಪೀನಸ್ತನವಿಮರ್ದನಃ ।
ನಾಭ್ಯೂರುಜಘನಸ್ಪರ್ಶೀ ನೀವೀವಿಸ್ರಂಸನಃ ಕರಃ.

ಅತ್ರ ಕರುಣಸ್ಯ ಶೃಂಗಾರೋಽಂಗಮ್.

ರಸ, ಭಾವ, ಅವೆರಡರ ಆಭಾಸ ಅಂದರೆ ರಸಾಭಾವ, ಭಾವಾಭಾಸ
(ನಿಜವಾಗಿ ರಸವಲ್ಲದೆ ರಸದಂತೆಯೂ ಭಾವದಂತೆಯೂ ತೋರುವಂತಹುದು)
ಭಾವಶಾಂತಿ ಇವನ್ನು ಅವಲಂಬಿಸಿದ ನಾಲ್ಕು ಅಲಂಕಾರಗಳು ಉಂಟೆಂದು ಅಭಿಜ್ಞರು
ಹೇಳಿದ್ದಾರೆ. ಇವಕ್ಕೆ ರಸವದಲಂಕಾರ, ಪ್ರೇಯೋಽಲಂಕಾರ, ಊರ್ಜಸ್ವಿದಲಂಕಾರ,
ಸಮಾಹಿತಾಲಂಕಾರ ಎಂದು ಹೆಸರುಗಳಿವೆ. ಇವುಗಳ ಜೊತೆಗೆ ಭಾವೋದಯ,
ಭಾವಸಂಧಿ ಭಾವಶಬಲವೆಂಬ ಮೂರು ಅಲಂಕಾರಗಳು ಸಂಭವಿಸುತ್ತವೆ. ಇವುಗಳ
ಜೊತೆಗೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ,
ಸಂಭವ, ಐತಿಹ್ಯವೆಂಬ ಎಂಟು ಪ್ರಮಾಣಗಳೂ ಅಲಂಕಾರಗಳಾಗುತ್ತವೆ. ಹೀಗೆ
ಒಟ್ಟು ಹದಿನೈದು ಅಲಂಕಾರಗಳು ಸಾಹಿತ್ಯಕ್ಷೇತ್ರದಲ್ಲಿ ವ್ಯಾಪಿಸಿವೆ ಎಂದು
ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಈಗ ಈ ಅಲಂಕಾರಗಳಿಗೆ ಲಕ್ಷಣವನ್ನು ತಿಳಿಸುತ್ತಾನೆ. ಇವುಗಳಲ್ಲಿ ಮೊದ
ಲನೆಯದು ರಸವದಲಂಕಾರ. ರಸವು ಹೇಗೆ ಅಭಿವ್ಯಕ್ತವಾಗುವುದೆಂಬುದನ್ನು
ಅಲಂಕಾರಶಾಸ್ತ್ರದಲ್ಲಿ ವಿಶೇಷವಾಗಿ ತಿಳಿಸಲಾಗಿದೆ. ವಿಭಾವ, ಅನುಭಾವ, ವ್ಯಭಿ
ಚಾರಿಭಾವಗಳಿಂದ ಪ್ರಕಾಶವಾಗುವ ರತಿ, ಹಾಸ, ಶೋಕ ಮೊದಲಾದ ನಮ್ಮ
ಮನಸ್ಸಿನ ವೃತ್ತಿಯೇ ರಸವೆನಿಸುತ್ತದೆ ಎಲ್ಲರ ಮನಸ್ಸಿನಲ್ಲಿ ಈ ಭಾವಗಳು ಸ್ಥಿರವಾಗಿ
ನೆಲಸಿರುತ್ತವೆ ಅಲ್ಲಿ ಗಂಭೀರವಾಗಿ ಅಡಗಿರುವ ಈ ಭಾವಗಳು ಅವಕಾಶ ಸಿಕ್ಕಿದಾಗ
ಹೊರಹೊಮ್ಮುತ್ತವೆ. ಇಲ್ಲಿ ಇಂತಹ ಅವಕಾಶವೇ ವಿಭಾವ, ಅನುಭಾವ ವ್ಯಭಿಚಾರಿ
ಭಾವಗಳೆನಿಸಿರುವುದು. ಇವನ್ನು ಸಭ್ಯರು ಕಾವ್ಯದಲ್ಲಿ ಓದಿ ತಿಳಿದರೂ, ನಾಟ್ಯದಲ್ಲಿ
ನಟರು ಅಭಿನಯಿಸಿದ್ದನ್ನು ನೋಡಿದರೂ ಇವು ಅವರ ಮನೋಭಾವಗಳನ್ನು
ಹೊರಗೆ ಎಳೆಯುವುದು ಸಹಜ. ಇವೆಲ್ಲವೂ ಒಟ್ಟಿಗೆ ಸೇರಿದಾಗ ಸಭ್ಯರಿಗೆ ತಮ್ಮ
ಮನಸ್ಸಿನಲ್ಲಿದ್ದ ರತಿ ಮೊದಲಾದ ಭಾವಗಳು ವಿಕಾಸಗೊಂಡು ರಸವಾಗಿ ಪರಿಣಮಿಸಿ

ಆನಂದವನ್ನುಂಟುಮಾಡುತ್ತವೆ. ವಿಭಾವ ಅನುಭಾವ ವ್ಯಭಿಚಾರಿಭಾವಗಳ ಸಂಪರ್ಕ ದಿಂದ ವಿಕಾಸಗೊಂಡು ಸಹೃದಯರ ಅನುಭವಕ್ಕೆ ಬರುವ ರಸವು ಪ್ರಧಾನವೆನಿಸಿದ್ದರೆ ಧ್ವನಿ ಎನಿಸುವುದು. ಅದು ಬೇರೊಂದು ವಸ್ತುವಿಗೆ ಅಂಗವೆನಿಸಿದ್ದರೆ ಅದನ್ನು ಅಲಂಕರಿಸುವ ಪ್ರಯುಕ್ತ ರಸವು ರಸವದಲಂಕಾರವೆನಿಸುತ್ತದೆ.

ವಿಭಾವ ಅನುಭಾವಗಳಿಂದ ಪ್ರಕಾಶವಾಗುವ ನಿರ್ವೇದ ಮೊದಲಾದ ವ್ಯಭಿಚಾರಿ ಭಾವವೂ, ಹಾಗೆಯೇ ದೇವರು, ಗುರು, ಶಿಷ್ಯ, ಬ್ರಾಹ್ಮಣ, ಮಕ್ಕಳು ಇವರುಗಳ ಬಗ್ಗೆ ಪ್ರಕಾಶಗೊಳ್ಳುವ ಅನುರಾಗವೂ ಭಾವವೆನಿಸುತ್ತವೆ. ವಿಭಾವವೆಂದರೆ ದುಷ್ಯಂತ ಶಕುಂತಲೆ ಮೊದಲಾದ ವ್ಯಕ್ತಿಗಳು. ಇವರು ರತಿ ಮೊದಲಾದ ಭಾವ ಗಳಿಗೆ ಆಶ್ರಯವಾಗಿರುವರು. ಹಾಗೆಯೇ ಚಂದ್ರೋದಯ, ವಸಂತಕಾಲ ಮೊದ ಲಾದವು ರತಿಯನ್ನು ಹೆಚ್ಚಿಸುತ್ತ ಉದ್ದೀಪನವಿಭಾವವೆನಿಸಿರುವರು. ವಸಂತ ಕಾಲದಲ್ಲಿ ದುಷ್ಯಂತ ಶಕುಂತಲೆಯರು ಪ್ರೀತಿಸುವಾಗ ಅನುಭವಿಸುವ ಕಾರ್ಯಗಳೇ ಅನುಭಾವವೆನಿಸುತ್ತವೆ. ಇವನ್ನು ನೋಡಿದಾಗಲೋ ಕೇಳಿದಾಗಲೋ ಸಭ್ಯರ ಮನಸ್ಸಿನಲ್ಲಿ ಗೋಪ್ಯವಾಗಿ ನೆಲಸಿದ್ದ ಅವೇ ಭಾವಗಳು ಹೊರಹೊಮ್ಮುತ್ತವೆ. ಹೀಗೆ ಅವರಿಗೆ ನಿರ್ವೇದ ಮೊದಲಾದ ವ್ಯಭಿಚಾರಿಭಾವಗಳು ಅನುಭವಕ್ಕೆ ಬರುತ್ತವೆ. ಹಾಗೆಯೇ ದೇವರು ಗುರುಗಳು ಮಕ್ಕಳು ಮೊದಲಾದವರ ಬಗ್ಗೆ ಅವರಿಗೆ ಇರುವ ಅನುರಾಗವೂ ಅವರನ್ನು ಕಂಡಾಗ ಸಹಜವಾಗಿ ಹೊರಹೊಮ್ಮುತ್ತದೆ. ಇಂತಹ ರತಿಭಾವವೂ, ನಿರ್ವೇದ ಮೊದಲಾದ ವ್ಯಭಿಚಾರಿಭಾವಗಳೂ ತಮ್ಮ ಪ್ರಾಧಾನ್ಯ ವನ್ನು ಕಳೆದುಕೊಂಡು ಬೇರೊಂದು ವಸ್ತುವಿಗೆ ಎಲ್ಲಿ ಅಂಗವೆನಿಸಿರುತ್ತವೆಯೋ ಅಲ್ಲಿ ಅವು ಪ್ರೇಯೋಽಲಂಕಾರವೆನಿಸುತ್ತವೆ.

ಹೀಗೆ ರಸವದಲಂಕಾರವನ್ನೂ ಪ್ರೇಯೋಽಲಂಕಾರವನ್ನೂ ತಿಳಿಸಿ ಈಗ ಊರ್ಜಸ್ವಿದಲಂಕಾರದ ಸ್ವರೂಪವನ್ನು ತಿಳಿಸುತ್ತಾನೆ. ಹಿಂದೆ ತಿಳಿಸಿದ ರಸವಾಗಲೀ ಭಾವವಾಗಲೀ ಸಂದರ್ಭಕ್ಕೆ ಅನುಗುಣವಾಗಿ ಯುಕ್ತವಾದ ರೀತಿಯಲ್ಲಿ ಪ್ರಕಾಶವಾದರೆ ರಸವಾಗಿಯೂ ಭಾವವಾಗಿಯೂ ಸಹೃದಯರ ಅನುಭವಕ್ಕೆ ಬರುತ್ತವೆ. ಆದರೆ ಔಚಿತ್ಯವನ್ನು ಮೀರಿ, ಅನುಚಿತಕ್ರಮದಲ್ಲಿ ಇವು ಪ್ರಕಾಶವಾಗುವುದಾದರೆ ಆ ರಸ ಭಾವಗಳೆರಡೂ ರಸಾಭಾಸ ಮತ್ತು ಭಾವಭಾಸವೆನಿಸುತ್ತವೆ. ರಸಾವಿರ್ಭಾವಕ್ಕೆ ಔಚಿತ್ಯವೇ ಪರಮೌಷಧವೆನಿಸಿದೆ. ಅನೌಚಿತ್ಯವೇ ರಸಭಂಗಕ್ಕೆ ಮೂಲವೆನಿಸಿದೆ. ಹೀಗೆ ಅನುಚಿತವಾದ ರೀತಿಯಲ್ಲಿ ಕಂಡುಬರುವ ರಸಭಾಗಳು ಆಭಾಸವೆನಿಸುತ್ತವೆ. ಈ ರಸಾಭಾಸ ಭಾವಾಭಾಸಗಳಿಗೆ ಎಲ್ಲಿ ಪ್ರಾಧಾನ್ಯವಿರುವುದಿಲ್ಲವೋ, ಎಲ್ಲಿ ಅವು ವಸ್ತುವಿಗೆ ಪೋಷಕವಾಗಿರುತ್ತವೆಯೋ ಅಲ್ಲಿ ಅವು ಅಲಂಕಾರವೆನಿಸು ತ್ತವೆ. ಈ ಬಗೆಯ ಅಲಂಕಾರವನ್ನು ಊರ್ಜಸ್ವಿದಲಂಕಾರವೆಂದು ಕರೆಯಲಾಗಿದೆ.

ಹೀಗೆಯೇ ನಿರ್ವೇದ ಮೊದಲಾದ ಭಾವಗಳಲ್ಲಿ ಯಾವುದಾದರೊಂದು ಅಥವಾ ಎರಡು ಒಂದಕ್ಕೊಂದು ಸೇರಿ ಅವುಗಳಲ್ಲೊಂದು ಭಾವವು ಶಮನವಾಗುವುದಾಗಿ ತೋರುವುದೋ ಅಲ್ಲಿ ಭಾವಪ್ರಶಮವೆಂಬುದನ್ನು ಸಹೃದಯರು ಅನುಭವಿಸಿ ಆನಂದಪಡುವರು ಈ ಬಗೆಯ ಭಾವಪ್ರಶಮವು ಪ್ರಧಾನವೆನಿಸದೆ ಎಲ್ಲಿ ಬೇರೊಂದು ವಸ್ತುವಿಗೆ ಪೋಷಕವಾಗಿರುವುದೋ ಅಲ್ಲಿ ಅದು ಅಲಂಕಾರ ವೆನಿಸುವುದು, ಆಗ ಅದಕ್ಕೆ ಸಮಾಹಿತಾಲಂಕಾರವೆಂದು ಹೆಸರಿರುವುದು. ಎಲ್ಲಿ ಭಾವವು ಹೊಸದಾಗಿ ಪ್ರಕಾಶಗೊಳ್ಳುವುದೋ ಅದು ಭಾವೋದಯವೆನಿಸುವುದು. ಬೇರೆ ಭಾವಗಳು ಪರಸ್ಪರವಾಗಿ ಸೇರುವುದರಿಂದ ಹೊಸದಾಗಿ ಭಾವವು ಕೆಲವು ವೇಳೆ ತೋರುವುದು. ಈ ಬಗೆಯ ಭಾವೋದಯವು ಪ್ರಧಾನವಾಗಿಲ್ಲದೆ ಬೇರೆ ವಸ್ತುವಿಗೆ ಅಂಗವೆನಿಸಿದರೆ ಅದು ಅಲಂಕಾರವೆನಿಸುತ್ತದೆ. ಹಾಗೆಯೇ ಕೆಲವೆಡೆಗಳಲ್ಲಿ ವಿರುದ್ಧ ವಾದ ಎರಡು ಭಾವಗಳು ಸೇರಿದರೆ ಅವಕ್ಕೆ ಪರಸ್ಪರವಾಗಿ ಸ್ಪರ್ಧೆಯುಂಟಾಗುವುದು, ಭಾವಗಳು ಅನುಕೂಲವಾಗಿ ಬೆರೆತರೆ ಅವುಗಳಿಂದ ಆನಂದವುಂಟಾಗುವಂತೆಯೇ ಅವು ಪರಸ್ಪರವಿರುದ್ಧವಾಗಿ ಬೆರೆತರೂ ಆನಂದವಾಗುತ್ತದೆ. ಆದರೆ ಈ ಬಗೆಯ ಭಾವ ಸಂಧಿಯು ಪ್ರಧಾನವೆನಿಸದೆ ಬೇರೊಂದು ವಸ್ತುವಿಗೆ ಪೋಷಕವಾಗಿದ್ದರೆ ಅದು ಅಲಂಕಾರವೆನಿಸುವುದು. ಹೀಗೆ ಭಾವೋದಯ, ಭಾವಸಂಧಿ ಎಂಬ ಎರಡು ಅಲಂಕಾರಗಳಂತೆಯೇ ಭಾವಶಬಲತೆ ಎಂಬುದೂ ಒಂದು ಅಲಂಕಾರವಿದೆ. ಅನೇಕ ಭಾವಗಳು ಒಂದೆಡೆಗೆ ಸೇರಿ ಮುಂದಿನದರಿಂದ ಹಿಂದಿನದಕ್ಕೆ ಹಿಂಸೆಯಾಗುವ ಸನ್ನಿವೇಶಗಳೂ ಅನೇಕವು ಸಂಭವಿಸುತ್ತವೆ, ಹಿಂದಿನದಕ್ಕೆ ಮುಂದಿನದರಿಂದ ಹೀಗೆ ಹಿಂಸೆಯಾದಾಗ ಬೇರೆ ಭಾವಗಳು ಅಲ್ಲಿ ಹುಟ್ಟುತ್ತವೆ. ಈ ಬಗೆಯ ಘರ್ಷಣದಿಂದ ಭಾವಗಳು ಹುಟ್ಟುವುದಾಗಿ ತೋರುವುದೇ ಭಾವಶಬಲತೆ ಎನಿಸುವುದು. ಇದಕ್ಕೆ ಪ್ರಾಧಾನ್ಯವಿಲ್ಲದೇ ಇದ್ದರೆ ಇದು ಅಲಂಕಾರವೆನಿಸುವುದು. ಹೀಗೆ ಈ ಮೂರು ಅಲಂಕಾರಗಳು ಹಿಂದಿನವು ನಾಲ್ಕರೊಡನೆ ಸೇರಿ ಒಟ್ಟು ಏಳು ಅಲಂಕಾರಗಳಾಗು ತ್ತವೆ. ಇವನ್ನು ಈಗ ಉದಾಹರಿಸುತ್ತಾನೆ. "ಮಹಾತ್ಮನೂ ಯೋಗಿಶ್ರೇಷ್ಠನೂ ಆದ ಅಗಸ್ತ್ಯ ಮಹರ್ಷಿಯು ಸರ್ವೋತ್ಕೃಷ್ಟನಾಗಿ ಶೋಭಿಸುತ್ತಿರುವನು. ಅವನು ಒಂದು ಬೊಗಸೆಯಲ್ಲಿ ಸಮುದ್ರವನ್ನು ಅಡಗಿಸಿಕೊಂಡು ಕುಡಿಯುತ್ತಿದ್ದಾಗ ಅದರೊಳಗೆ ಅಡಗಿದ್ದ ವಿಷ್ಣುವಿನ ಅವತಾರವೆನಿಸಿದ ಮತ್ಸ್ಯ ಮತ್ತು ಕೂರ್ಮಗಳೆಂಬ ದಿವ್ಯಮೂರ್ತಿಗಳನ್ನು ಪ್ರತ್ಯಕ್ಷವಾಗಿ ಕಂಡನು. "ಇಲ್ಲಿ ಮತ್ಸ್ಯ ಕೂರ್ಮಗಳೆಂಬ ಎರಡು ದಿವ್ಯವಾದ ಅವತಾರಗಳನ್ನು ಮುನಿಯು ಸಮುದ್ರವನ್ನು ಪಾನಮಾಡುವ ಕಾಲದಲ್ಲಿ ಅನಾಯಾಸವಾಗಿ ನೋಡುವನೆಂದು ಹೇಳಿದ್ದರಿಂದ ಅದ್ಭುತರಸವು ವ್ಯಂಗ್ಯ ವಾಗಿ ತೋರುತ್ತದೆ. ವಿಶಾಲವಾದ ಸಮುದ್ರವನ್ನು ಒಂದು ಬೊಗಸೆಯಲ್ಲಿ ಅಡಗಿಸಿಕೊಂಡು ಕುಡಿದದ್ದು ಅದ್ಭುತವೇ ಸರಿ, ಆದರ ಈ ರಸವು ಇಲ್ಲಿ ಪ್ರಧಾನ

ವಾಗಿ ಶೋಭಿಸುತ್ತಿಲ್ಲ. ಇದು ಮುನಿಯ ಪ್ರಭಾವಾತಿಶಯದಲ್ಲಿ ಸೇರಿಕೊಂಡಿವೆ. ಆದರೊಳಗೆ ಪರ್ಯವಸಾನವಾಗಿರುವುದರಿಂದ ಅದು ಆ ಮುನಿಯ ಬಗ್ಗೆ ಇರುವ ರತಿಭಾವಕ್ಕೆ ಪೋಷಕವಾಗಿರುವದರಿಂದ ಇಲ್ಲಿ ಅಲಂಕಾರವೆನಿಸಿದೆ. ಈ ಪದ್ಯವನ್ನು ಹೇಳುವವನು ಅಗಸ್ತ್ಯಮಹರ್ಷಿಯ ಮಹತ್ವವನ್ನು ಪ್ರಶಂಸಿಸುವ ಪ್ರಯುಕ್ತ ಇಲ್ಲಿ ಅವನ ಬಗ್ಗೆ ತನಗೆ ಇರುವ ಭಕ್ತಿಭಾವವು ಪ್ರಕಟವಾಗುತ್ತದೆ. ಇದಕ್ಕೆ ಅದ್ಭುತರಸವು ಪೋಷಕವಾಗಿರುವುದರಿಂದ ಇಲ್ಲಿ ರಸವದಲಂಕಾರವೆನಿಸಿದೆ.

ಇಲ್ಲಿ ಮತ್ತೊಂದು ಉದಾಹರಣವನ್ನು ಕೊಡುತ್ತಾನೆ. ಭೂರಿಶ್ರವಸೆಂಬ ವೀರನು ಯುದ್ಧದಲ್ಲಿ ಮಡಿದಿರುವನು. ಅವನ ಹಸ್ತವನ್ನು ನೋಡಿ ಹೆಂಡತಿಯು ಹೀಗೆ ಹೇಳುತ್ತಾಳೆ, "ಈ ಹಸ್ತವು ಹಿಂದೆ ಸಂಭೋಗಕಾಲದಲ್ಲಿ ನನ್ನ ಸೊಂಟದಲ್ಲಿ ಹಾಕಿದ್ದ ಡಾಬನ್ನು ಸೆಳೆಯುತ್ತಿತ್ತು ; ನನ್ನ ದಪ್ಪವಾದ ಸ್ತನಗಳನ್ನು ಹಿಸುಕುತ್ತಿತ್ತು. ನನ್ನ ಮೈಯಲ್ಲಿ ಹೊಕ್ಕುಳು, ತೊಡೆ, ಕಟಿಯ ಹಿಂಭಾಗ ಇವನ್ನು ಮುಟ್ಟುತ್ತಿತ್ತು. ಸೊಂಟಕ್ಕೆ ಕಟ್ಟಿದ್ದ ಗಂಟನ್ನು ಬಿಚ್ಚುತ್ತಿತ್ತು. ಅಂತಹ ಹಸ್ತವು ಇಂದು ಏನೂ ಮಾಡದಂತೆ ಆಗಿದೆ." ಇಲ್ಲಿ ಆಕೆಯು ಹಿಂದೆ ಪತಿಯೊಡನೆ ಅನುಭವಿಸಿದ್ದ ಶೃಂಗಾರಾವಸ್ಥೆಯನ್ನು ಸ್ಮರಿಸಿಕೊಳ್ಳುವುದರಿಂದ ಶೃಂಗಾರರಸವು ಇಲ್ಲಿ ತೋರುತ್ತದೆ. ಆದರೆ ಅವನು ಇಂದು ಸತ್ತುಬಿದ್ದಿರುವುದರಿಂದಲೂ, ಮುಂದೆ ಅವನೊಡನೆ ಸಂಪರ್ಕವೇ ಪೂರ್ತಿಯಾಗಿ ತೊಲಗಿರುವುದರಿಂದಲೂ ಶೋಕವೇ ಪ್ರಧಾನವೆನಿಸಿ ಅದು ಕರುಣರಸವಾಗಿ ಪ್ರಕಾಶವಾಗುತ್ತದೆ. ಈ ಕರುಣರಸಕ್ಕೆ ಶೃಂಗಾರವು ಪೋಷಕವಾಗಿರುವುದರಿಂದ ಇದು ರಸವದಲಂಕಾರವೆನಿಸಿದೆ.

## ೧೦೨. ಪ್ರೇಯೋಲಂಕಾರ

ಪ್ರೇಯೋಽಲಂಕಾರ ಏವ ಭಾವಾಲಂಕಾರ ಉಚ್ಯತೇ. ಸ ಯಥಾ—

ಕದಾ ವಾರಾಣಸ್ಯಾಮಮರತಟಿನೀರೋಧಸಿ ವಸನ್
ವಸಾನಃ ಕೌಪೀನಂ ಶಿರಸಿ ನಿದಧಾನೋಽಂಜಲಿಪುಟಮ್ ।
ಅಯೇ ಗೌರೀನಾಥ ತ್ರಿಪುರಹರ ಶಂಭೋ ತ್ರಿಣಯನ
ಪ್ರಸೀದೇತ್ಯಾಕ್ರೋಶನ್ನಿಮಿಷಮಿವ ನೇಷ್ಯಾಮಿ ದಿವಸಾನ್ ॥

ಅತ್ರ ಶಾಂತಿರಸಸ್ಯ ಕದೇತಿ ಪದಸೂಚಿತಚಿಂತಾರೂಪೋ ವ್ಯಭಿಚಾರಿಭಾವೋಽಂಗಮ್. ಯಥಾ ವಾ—

ಅತ್ಯುಚ್ಚಾಃ ಪರಿತಃ ಸ್ಫುರಂತಿ ಗಿರಯಃ ಸ್ಫಾರಾಸ್ತಥಾಂಭೋಧಯಃ
ತಾನೇತಾನಪಿ ಬಿಭ್ರತೀ ಕಿಮಪಿ ನ ಶ್ರಾಂತಾಸಿ ತುಭ್ಯಂ ನಮಃ ।
ಆಶ್ಚರ್ಯೇಣ ಮುಹುರ್ಮುಹುಃ ಸ್ತುತಿಮಿತಿ ಪ್ರಸ್ತೌಮಿ ಯಾವದ್ಭುವಃ
ತಾವದ್ಬಿಭ್ರದಿಮಾಂ ಸ್ಮೃತಸ್ತವ ಭುಜೋ ವಾಚಸ್ತತೋ ಮುದ್ರಿತಾಃ ॥

ಅತ್ರ ಪ್ರಭುವಿಷಯರತಿಭಾವಸ್ಯ ವಸುಮತೀವಿಷಯರತಿಭಾವೋಽಂಗವ್.

ವ್ಯಭಿಚಾರಿಭಾವವಾಗಲೀ, ದೇವಾದಿಗಳ ಬಗ್ಗೆ ನಮಗಿರುವ ಭಕ್ತಿಗೌರವಗಳಾಗಲೀ ಎಲ್ಲಿ ತೋರುತ್ತಲೇ ಬೇರೊಂದು ವಸ್ತುವಿಗೆ ಪೋಷಕವಾಗಿರುತ್ತವೆಯೋ ಅಲ್ಲಿ ಅವು ಅಲಂಕಾರವೆನಿಸುತ್ತವೆ. ಅವನ್ನು ಪ್ರೆಯೋಽಲಂಕಾರವೆಂದೂ ಭಾವಾಲಂಕಾರವೆಂದೂ ಕರೆಯಲಾಗಿದೆ. ಇವನ್ನು ಈಗ ಉದಾಹರಿಸುತ್ತಾನೆ. ಒಬ್ಬ ಭಕ್ತನು ಪರಮಾತ್ಮನಲ್ಲಿ ಹೀಗೆ ಮೊರೆ ಇಡುವನು. "ಕಾಶಿಯಲ್ಲಿ ಗಂಗಾನದಿಯ ತೀರದಲ್ಲಿ ನೆಲಸಿ ಕೌಪೀನವನ್ನು ಹಾಕಿಕೊಂಡು ಶಿರಸ್ಸಿನಲ್ಲಿ ಕೈಬೊಗಸೆಯನ್ನು ನೆಲೆಗೊಳಿಸಿಕೊಂಡು ಭಕ್ತಿಯಿಂದ ''ಸ್ವಾಮಿ, ಗೌರೀಪತಿಯೇ, ತ್ರಿಪುರ ಸಂಹಾರಿಯೇ, ತ್ರಿಣೇತ್ರನೇ, ಶಂಕರನೇ ಪ್ರಸನ್ನನಾಗು" ಎಂದು ಕೂಗಿಕೊಳ್ಳುತ್ತ ದಿವಸಗಳನ್ನು ನಿಮಿಷಗಳಂತೆ ನಾನು ಎಂದು ಕಳೆಯಲಿ ?" ಇಲ್ಲಿ ವೈರಾಗ್ಯಶೀಲನಾದ ಭಕ್ತನು ಪರಮೇಶ್ವರನಲ್ಲಿ ಹೀಗೆ ಮೊರೆ ಇಡುವುದರಿಂದ ಅವನಲ್ಲಿ ಇರುವ ನಿರ್ವೇದವು ವಿಕಾಸಗೊಂಡು ಶಾಂತಿರಸವಾಗಿ ಪರಿಣಮಿಸುತ್ತದೆ. ಈ ಶಾಂತಿರಸಕ್ಕೆ ಕದಾ ಎಂಬ ಪದದಿಂದ ಸೂಚಿತವಾಗುವ ಭಕ್ತನ ಚಿಂತೆ ಎಂಬ ವ್ಯಭಿಚಾರಿ ಭಾವವು ಅಂಗವೆನಿಸಿದೆ. "ಯಾವಾಗ ನೆಲಸಲಿ ? ಯಾವಾಗ ಹಗಲುಗಳನ್ನು ನಿಮಿಷಗಳಂತೆ ಕಳೆಯಲಿ ? ಎಷ್ಟು ಬೇಗನೆ ನಾನು ಅಲ್ಲಿ ಕೌಪೀನಧಾರಿಯಾಗಿ ನೆಲಸಲಿ ?" ಈ ಬಗೆಯ ಚಿಂತೆ ಅವನಿಗೆ ಪ್ರಧಾನವಾಗಿ ವ್ಯಾಪಿಸಿದೆ. ಇದು ವ್ಯಭಿಚಾರಿಭಾವಗಳಲ್ಲಿ ಒಂದು. ಆದರೆ ಇದು ಇಲ್ಲಿ ಪ್ರಧಾನವಾಗಿ ತೋರುತ್ತಿಲ್ಲ. ಶಾಂತಿರಸಕ್ಕೆ ಇದು ಪೋಷಕವೆನಿಸಿದೆ. ಆದ್ದರಿಂದ ಇದು ಭಾವಾಲಂಕಾರವೆನಿಸಿದೆ. ಹಾಗೆಯೇ ಇಲ್ಲಿ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಎಲ್ಲಾ ಕಡೆಗಳಲ್ಲೂ ಉನ್ನತವಾದ ಬೆಟ್ಟಗಳು ನೆಲಸಿವೆ. ಹಾಗೆಯೇ ಅಗಾಧವಾದ ಸಮುದ್ರಗಳಿವೆ. ಇವಿಷ್ಟನ್ನೂ ಧರಿಸಿರುವ ನೀನು ಕೊಂಚವೂ ಆಯಾಸಗೊಳ್ಳುತ್ತಿಲ್ಲ. ಭೂದೇವಿಯೇ, ನಿನಗೆ ನಮಸ್ಕಾರವು ಸಲ್ಲಲಿ. ಈ ಭೂಮಿಯ ವೈಶಾಲ್ಯ ವೈಚಿತ್ರ್ಯಗಳನ್ನು ಕಂಡು ಚಕಿತನಾಗಿ ಮತ್ತೆ ಮತ್ತೆ ಹೇಗೆ ಸ್ತೋತ್ರ ಮಾಡುತ್ತಿರುವೆನೋ ಹಾಗೆಯೇ ಇಷ್ಟೆಲ್ಲವನ್ನು ಹಿಡಿದುಕೊಂಡಿರುವ ನಿನ್ನ ಭುಜವು ಎಷ್ಟು ವಿಶಾಲವೂ ವ್ಯಾಪಕವೂ ಆಗಿದೆ ಎಂಬುದನ್ನು ನೆನೆಸಿಕೊಂಡರಂತೂ ನನ್ನ ಮಾತು ನಿಂತೇ ಹೋಗುವುದು. ಆಗ ಮುಂದೆ ಮಾತೇ ಹೊರಡುವುದಿಲ್ಲ" ಇಲ್ಲಿ ಈ

ಪದ್ಯವನ್ನು ಹೇಳುವವನಿಗೆ ರಾಜನ ಬಗ್ಗೆ ಇರುವ ಅನುರಾಗವು ಮುಖ್ಯವೆನಿಸಿದ್ದ, ಇದರಂತೆಯೇ ಅವನಿಗೆ ಭೂದೇವಿಯ ಬಗ್ಗೆ ಸಹ ಅನುರಾಗವಿದೆ. ಆದರೆ ಈ ಅನುರಾಗವು ರಾಜನ ಬಗ್ಗೆ ಇರುವ ರತಿಗೆ ಅಂಗವೆನಿಸಿದೆ. ಅವನು ಭೂದೇವಿಯನ್ನು ಪ್ರಶಂಸಿಸುವುದರಿಂದ ಆ ಬಗ್ಗೆ ಅವನ ಅನುರಾಗವು ತೋರಿದರೂ ಸಹ ಅಂತಹ ವಿಶಾಲವಾದ ಭೂಮಿಯನ್ನೇ ರಾಜನ ಭುಜವು ಹಿಡಿದು ಅನಾಯಾಸವಾಗಿ ನಡೆಸುತ್ತಿ ವುದರಿಂದ ರಾಜನ ಬಗ್ಗೆ ಅವನಿಗೆ ಇರುವ ರತಿಯೇ ಇಲ್ಲಿ ಪ್ರಧಾನವೆನಿಸಿದೆ. ಹೀಗೆ ಒಂದು ಭಾವಕ್ಕೆ ಮತ್ತೊಂದು ಭಾವವು ಪೋಷಕವಾಗಿರುವ ಪ್ರಯುಕ್ತ ಇದು ಭಾವಾಲಂಕಾರವೆನಿಸಿದೆ.

## ೧೦೩. ಊರ್ಜಸ್ವಿದಲಂಕಾರ

ಊರ್ಜಸ್ವಿ ಯಥಾ—

ತ್ವತ್ಪ್ರತ್ಯರ್ಥಿವಸುಂಧರೇಶತರುಣೀಃ ಸಂತ್ರಾಸತಃ ಸತ್ವರಂ
ಯಾಂತೀರ್ವೀರ ವಿಲುಂಠಿತುಂ ಸರಭಸಂ ಯಾತಾಃ ಕಿರಾತಾ ವನೇ !
ತಿಷ್ಠಂತಿ ಸ್ತಿಮಿತಾಃ ಪ್ರರೂಢಪುಲಕಾಸ್ತೇ ವಿಸ್ಮೃತೋಪಕ್ರಮಾಃ
ತಾಸಾಮುತ್ತರಲೈಃ ಸ್ತನೈರತಿತರಾಂ ಲೋಲೈರಪಾಂಗೈರಪಿ ||

ಅತ್ರ ಪ್ರಭುವಿಷಯರತಿಭಾವಸ್ಯ ಶೃಂಗಾರಾಭಾಸೋಽಂಗಮ್.

ಯಥಾ ವಾ—

ತ್ವಯಿ ಲೋಚನಗೋಚರಂ ಗತೇ ಸಫಲಂ ಜನ್ಮ ನೃಸಿಂಹಭೂಪತೇ |
ಅಜನಿಷ್ಟ ಮಮೇತಿ ಸಾದರಂ ಯುಧಿ ವಿಜ್ಞಾಪಯತಿ ದ್ವಿಷಾಂ ಗಣಃ ||

ಅತ್ರ ಕವೇಃ ಪ್ರಭುವಿಷಯಸ್ಯ ರತಿಭಾವಸ್ಯ ತದ್ವಿಷಯದ್ವಿಷದ್ಗಣರತಿರೂಪೋ ಭಾವಾಭಾಸೋಽಂಗಮ್.

ರಸಾಭಾಸ ಭಾವಾಭಾಸಗಳು ಪ್ರಧಾನವೆನಿಸದೆ ಬೇರೊಂದು ಭಾವಕ್ಕೆ ಪೋಷಕ ವಾಗಿರುವುದೇ ಊರ್ಜಸ್ವಿದಲಂಕಾರವೆನಿಸುತ್ತದೆ. ಮುಂದಿನ ಎರಡು ಪದ್ಯಗಳಲ್ಲಿ ಒಂದರಲ್ಲಿ ರಸಾಭಾಸವು ಅಂಗವಾಗಿರುವುದನ್ನು ಮತ್ತೊಂದರಲ್ಲಿ ಭಾವಾಭಾಸವು ಭಾವಕ್ಕೆ ಅಂಗವಾಗಿರುವುದನ್ನು ಕಾಣಬಹುದು. "ಎಲೈ ವೀರನೇ, ಭಯದಿಂದ ಕಾಡಿನಲ್ಲಿ ವೇಗವಾಗಿ ಓಡುತ್ತಿರುವ ನಿನ್ನ ಶತ್ರುರಾಜರ ಹೆಂಡತಿಯರನ್ನು ಸೆಳೆಯಲಿಕ್ಕೆ ಹೋದ ಬೇಡರು ಆ ಸ್ತ್ರೀಯರ ಅತಿಚಪಲವಾದ ಸ್ತನಗಳನ್ನೂ ಅವಕ್ಕಿಂ ಚಪಲವೆನಿಸಿದ ಓರೆನೋಟಗಳನ್ನೂ ಕಂಡು ಸ್ತಬ್ಧರಾಗಿ ರೋಮಾಂಚ ಗೊಂಡು ಅವರಲ್ಲಿದ್ದ ಒಡವೆ ವಸ್ತ್ರಗಳನ್ನು ಕಸಿದುಕೊಳ್ಳಲಿಕ್ಕಾಗಿ ಹೋಗಿದ್ದರೂ ಸಹ ಅದನ್ನೇ ಮರೆತು ನಿಂತುಬಿಟ್ಟಿರುವರು." ಇಲ್ಲಿ ಬೇಡರು ಆ ಹೆಂಗಸರನ್ನು

ನೋಡಿ ಅವರ ಸ್ತನಗಳಿಗೂ ಓರೆನೋಟಗಳಿಗೂ ಮೋಹಿತರಾದ್ದರಿಂದ ಶೃಂಗಾರ ರಸವು ತೋರುವುದು. ಆದರೆ ಇಲ್ಲಿ ಪ್ರೇಮಕ್ಕೆ ಪಾತ್ರರಾದವರು. ಯೋಗ್ಯರಲ್ಲದ್ದರಿಂದ ಇಲ್ಲಿ ತೋರುವ ರಸವು ಆಭಾಸವೆನಿಸಿದೆ. ಹೀಗೆ ಇಲ್ಲಿ ಶೃಂಗಾರರಸಾಭಾಸವು ತೋರಿದರೂ ಸಹ ಇದು ರಾಜನ ಬಗ್ಗೆ ಇರುವ ರತಿಭಾವಕ್ಕೆ ಪೋಷಕವಾಗಿದೆ. ಇಲ್ಲಿ ರಾಜನ ಪರಾಕ್ರಮವನ್ನು ವರ್ಣಿಸುವುದರಲ್ಲಿ ಕವಿಗೆ ತಾತ್ಪರ್ಯ. ಅವನ ಶೌರ್ಯದಿಂದ ಶತ್ರುರಾಜರು ಸತ್ತು ಕೆಟ್ಟು ಹೋದರೆಂಬುದನ್ನು ತಿಳಿಸುವುದೇ ಇಲ್ಲಿ ಪ್ರಧಾನವಾದ್ದರಿಂದ ಇಲ್ಲಿ ಕವಿಗೆ ರಾಜನ ಬಗ್ಗೆ ಇರುವ ರತಿಯೇ ಪ್ರಧಾನವೆನಿಸಿದೆ. ಅದಕ್ಕೆ ಶೃಂಗಾರರಸಾಭಾಸವು ಅಂಗವೆನಿಸಿದೆ. ಈಗ ಭಾವಾಭಾಸವು ಬೇರೊಂದು ಭಾವಕ್ಕೆ ಅಂಗವಾಗಿರುವುದನ್ನು ಉದಾಹರಿಸುತ್ತಾನೆ. "ಎಲೈ ನೃಸಿಂಹಮಹಾರಾಜನೇ, ನೀನು ಕಣ್ಣಿಗೆ ಬಿದ್ದೆ ಎಂದರೆ ನನ್ನ ಸನ್ಮಾನವು ಸಾರ್ಥಕವಾಗುವುದು ಎಂದು ಹೇಳುತ್ತ ಶತ್ರುಗಳೆಲ್ಲರೂ ಯುದ್ಧದಲ್ಲಿ ನಿನಗೆ ವಿನಯದಿಂದ ವಿಜ್ಞಾಪಿಸಿಕೊಳ್ಳುವರು" ಇಲ್ಲಿ ಶತ್ರುಗಳಿಗೆ ನೃಸಿಂಹಮಹಾರಾಜನ ಬಗ್ಗೆ ಇರುವ ರತಿ ಭಾವವನ್ನು ಕವಿಯು ಅನುವಾದಮಾಡಿದ್ದಾನೆ. ಶತ್ರುಗಳಿಗೆ ರಾಜನ ಬಗ್ಗೆ ಇರುವ ರತಿಭಾವಕ್ಕೆ ಇದು ಅಂಗವೆನಿಸಿದೆ.

## ೧೦೪. ಸಮಾಹಿತಾಲಂಕಾರ

ಸಮಾಹಿತಂ ಯಥಾ—

ಪಶ್ಯಾಮಃ ಕಿಮಿಯಂ ಪ್ರಪದ್ಯತ ಇತಿ ಸ್ಥೈರ್ಯಂ ಮಯಾಲಂಬಿತಂ
ಕಿಂ ಮಾಂ ನಾಲಪತೀತ್ಯಯಂ ಖಲು ಶಠಃ ಕೋಪಸ್ತಯಾಪ್ಯಾಶ್ರಿತಃ ।
ಇತ್ಯನ್ಯೋನ್ಯವಿಲಕ್ಷ್ಯದೃಷ್ಟಿಚತುರೇ ತಸ್ಮಿನ್ನವಸ್ಥಾಂತರೇ
ಸವ್ಯಾಜಂ ಹಸಿತಂ ಮಯಾ ಧೃತಿಹರೋ ಮುಕ್ತಸ್ತು ಬಾಷ್ಪಸ್ತಯಾ ॥

ಅತ್ರ ಶೃಂಗಾರಸ್ಯ ಕೋಪಶಾಂತಿರಂಗಮ್—

ಎಲ್ಲಿ ಒಂದು ರಸಕ್ಕಾಗಲೀ ಬೇರೊಂದು ಭಾವಕ್ಕಾಗಲೀ ಒಂದು ಭಾವ ಶಾಂತಿಯು ಅಂಗವಾಗಿರುವುದೋ ಅಲ್ಲಿ ತೋರುವ ಅಲಂಕಾರವು ಸಮಾಹಿತವೆನಿಸುವುದು. ಒಂದು ಭಾವವು ತೋರಿ ಅಡಗುವುದೇ ಭಾವಶಾಂತಿ. ಅದು ಬೇರೊಂದು ಭಾವಕ್ಕಾಗಲೀ ರಸಕ್ಕಾಗಲೀ ಪೋಷಕವಾಗಿದ್ದರೆ ಅಂತಹ ಭಾವ ಶಾಂತಿಯು ಅಲಂಕಾರವೆನಿಸುತ್ತದೆ. ಅದನ್ನು ಸಮಾಹಿತವೆಂದು ಕರೆಯಲಾಗಿದೆ ಸಮಾಹಿತವೆಂದರೆ ಎದ್ದು ತೋರುವ ಒಂದು ಅಥವಾ ಅನೇಕ ಭಾವಗಳನ್ನು ಸಮಾಧಾನಪಡಿಸುವುದು ಎಂದು ಅರ್ಥ. ನಾಯಕನು ತನ್ನ ಮಿತ್ರನಿಗೆ ನಾಯಿಕೆಯ

ವೃತ್ತಾಂತವನ್ನು ಇಲ್ಲಿ ತಿಳಿಸುತ್ತಾನೆ. "ಈಕೆ ಏನು ಮಾಡುವಳೋ ನೋಡೋಣ ವೆಂದು ನಾನೂ ಸಹ ಕೊಂಚ ಹೊತ್ತು ಸ್ಥೈರ್ಯವನ್ನು ಆಶ್ರಯಿಸಿ ನೆಲೆಯಾಗಿ ನಿಂತೆನು, ಈ ಶಠನು ನನ್ನೊಡನೆ ಏನೂ ಮಾತನ್ನೇ ಆಡುತ್ತಿಲ್ಲವೆಂದು ತಿಳಿದು ಆಕೆಯೂ ಸಹ ಕೋಪವನ್ನಾಶ್ರಯಿಸಿದಳು. ನಾನು ಮೌನದಿಂದಿರಲು ಆಕೆಯ ಕೋಪವು ಹೆಚ್ಚಿತು. ಹೀಗೆ ನಾವು ನಮ್ಮ ದೃಷ್ಟಿಗಳನ್ನು ಪರಸ್ಪರವಾಗಿ ಬೇರೆಕಡೆಗೆ ತಿರುಗಿಸಿಕೊಂಡಿರಲು ಇಂತಹ ಅವಸ್ಥೆಯಲ್ಲಿ ನಾವಿಬ್ಬರೂ ನೆಲೆಸಿರುವಾಗ ನಾನು ಯಾವುದೋ ನೆಪದಿಂದ ನಕ್ಕೆನು. ಆಗ ಆಕೆಯು ತನ್ನ ಧೈರ್ಯವನ್ನು ತೊರೆದು ಕಣ್ಣೀರನ್ನು ಸುರಿಸಿದಳು." ಇಲ್ಲಿ ಶೃಂಗಾರರಸವು ಪ್ರಧಾನವಾಗಿ ತೋರುತ್ತದೆ. ಆದರೆ ಇಲ್ಲಿ ನಾಯಕನ ಬಗ್ಗೆ ನಾಯಿಕೆಗೆ ಮೊದಲು ಕೋಪವು ಹುಟ್ಟಿ ಆ ಮೇಲೆ ಅದು ಶಮನವಾಗುವುದರಿಂದ ಈ ಕೋಪಶಾಂತಿಯು ಶೃಂಗಾರ ರಸವನ್ನು ಪೋಷಿಸುತ್ತದೆ. ಹೀಗೆ ಭಾವಶಾಂತಿಯು ರಸಕ್ಕೆ ಅಂಗವಾಗಿರುವುದರಿಂದ ಇದು ಸಮಾಹಿತಾಲಂಕಾರವೆನಿಸಿದೆ.

## ೧೦೫. ಭಾವೋದಯಾಲಂಕಾರ

ತದದ್ಯ ವಿಶ್ರಮ್ಯ ದಯಾಲುರೇಧಿ ಮೇ
ದಿನಂ ನಿನೀಕ್ಷಾಮಿ ಭವದ್ವಿಲೋಕಿನೀ ।
ಅದರ್ಶಿ ಪಾದೇನ ವಿಲಿಖ್ಯ ಪತ್ರಿಣಾ
ತವೈವ ರೂಪೇಣ ಸಮಃ ಸ ಮಂತ್ರಿಯಃ ॥

ಅತ್ರ ನಳಂ ಪ್ರತಿ ದಮಯಂತ್ಯಾ ಔತ್ಸುಕ್ಯರೂಪಭಾವಸ್ಯೋದಯಃ ಶೃಂಗಾರರಸಸ್ಯಾಂಗಮ್.

ಎಲ್ಲಿ ಹೊಸದೊಂದು ಭಾವವು ತೋರಿ ಅದು ಬೇರೊಂದು ಭಾವಕ್ಕಾಗಲೀ ರಸಕ್ಕಾಗಲೀ ಪೋಷಕವಾಗಿರುವುದೋ ಅಲ್ಲಿ ಭಾವೋದಯವು ಅಲಂಕಾರವೆನಿಸುತ್ತದೆ. ಅದನ್ನು ಇಲ್ಲಿ ಉದಾಹರಿಸುತ್ತಾನೆ. "ಈಗ ನೀನು ವಿಶ್ರಮಿಸಿಕೊಂಡು ನನಗೆ ದಯೆಯನ್ನು ತೋರಿಸು. ನಿನ್ನನ್ನು ನೋಡುತ್ತಲೇ ನಾನು ದಿನವನ್ನು ಕಳೆಯಲು ಇಚ್ಛಿಸಿದ್ದೇನೆ. ಹಿಂದೆ ಹಂಸವು ತನ್ನ ಪಾದದಿಂದ ನನ್ನ ಪತಿಯ ಚಿತ್ರವನ್ನು ಬರೆದು ತೋರಿಸಿತ್ತು. ಆಗ ಅದು ಅಲ್ಲಿ ಬರೆದು ತೋರಿಸಿದ ಆ ನನ್ನ ಪ್ರಿಯನ ಚಿತ್ರವು ನಿನ್ನ ಈ ರೂಪಕ್ಕೆ ಸಮವೆನಿಸಿದೆ. "ಎಂದು ದಮಯಂತಿಯು ಇಂದ್ರಾದಿ ದೇವತೆಗಳ ಕಾರ್ಯಕ್ಕಾಗಿ ತನ್ನ ಬಳಿಗೆ ಬಂದ ನಳನಿಗೆ ಹೇಳುತ್ತಾಳೆ. ಇಲ್ಲಿ ಆಕೆಗೆ ನಳನ ಬಗ್ಗೆ ಔತ್ಸುಕ್ಯಭಾವವು ಹುಟ್ಟುವುದನ್ನು ಕಾಣುತ್ತೇವೆ. ಇದು ಇಲ್ಲಿ ಶೃಂಗಾರ ರಸಕ್ಕೆ ಪೋಷಕವೆನಿಸಿ ಭಾವೋದಯವೆಂಬ ಅಲಂಕಾರವಾಗಿದೆ.

## ೧೧೬. ಭಾವಸಂಧ್ಯಲಂಕಾರ

ಭಾವಸಃಧಿರ್ಯಥಾ—

ಏಕಾಭ್ರೂತ್ಕುಸುಮಾಯುಧೇಷುಧಿಭಿರಿವ ಪ್ರವ್ಯಕ್ತಪುಂಖಾವಳೀ–
ಜೇತುರ್ವರ್ಣಂಗಳಪಾಲಿಕೇವ ಪುಲಕೈರನ್ಯಾ ಕಪೋತಸ್ಥಲೀ ।
ಲೋಲಾಕ್ಷಿಂ ಕ್ಷಣಮಾತ್ರಭಾವಿವಿಹರಕ್ಲೇಶಾಸಹಃ ಪಶ್ಯತೋ
ದ್ರಾಗಾಕರ್ಣಯತಶ್ಚ ವೀರ ಭವತಃ ಪ್ರೌಢಾಹವಾಡಂಬರಮ್ ॥

ಅತ್ರ ರಮಣೀಪ್ರೇಮರಣೌತ್ಸುಕ್ಯಯೋಃ ಸಂಧಿಃ ಪ್ರಭುವಿಷಯಭಾವಸ್ಯ ಅಂಗಮ್.

ಎರಡು ಮೂರು ಭಾವಗಳು ಒಂದೆಡೆಯಲ್ಲಿ ತೋರಿ ಒಾವಕ್ಕೊಂದು ಕೂಡಿ ಕೊಳ್ಳುವುದೇ ಭಾವಸಂಧಿ ಎನಿಸುವುದು. ಅದು ಪ್ರಧಾನವೆನಿಸಿದ ಬೇರೊಂದು ಭಾವಕ್ಕೆ ಪೋಷಕವಾಗಿದ್ದರೆ ಅದಕ್ಕೆ ಭಾವಸಂಧ್ಯಲಂಕಾರವೆಂದು ಕರೆಯಲಾಗಿದೆ. ಅದನ್ನು ಇಲ್ಲಿ ಉದಾಹರಿಸುತ್ತಾನೆ. "ಎಲೈ ವೀರನೇ, ಒಂದು ಕ್ಷಣಕಾಲದಲ್ಲಿಯೇ ನೀನು ಯುದ್ಧಕ್ಕೆ ಹೊರಡುವುದರಿಂದ ಸಂಭವಿಸುವ ವಿರಹವನ್ನು ಸಹಿಸಲಿಕ್ಕಾಗದೆ ಇರುವ ಪ್ರೇಯಸಿಯನ್ನು ನೋಡುತ್ತಲೂ, ಹಾಗೆಯೇ ಭೀಕರವಾದ ಯುದ್ಧರಂಗ ದಿಂದ ಬರುತ್ತಿರುವ ಶಬ್ದವನ್ನು ಕೇಳುತ್ತಲೂ ಇರುವ ನಿನಗೆ ಒಂದು ಕಡೆಯ ಕೆನ್ನೆಯು ಬೇಗನೆ ರೋಮಾಂಚಗೊಂಡು ಮನ್ಮಥನ ಬಾಣಗಳ ಬತ್ತಳಿಕೆಯಂತೆ ಅನೇಕ ಬಾಣಗಳಿ ಗಾಶ್ರಯವಾಯಿತು. ಮತ್ತೊಂದು ಕಡೆಯ ಕೆನ್ನೆಯು ಜಯಶೀಲನಾದ ರಾಜನ ಜಯವನ್ನು ಸೂಚಿಸುವ ಪತಾಕೆಯೂ ಆಯಿತು."

ಇಲ್ಲಿ ಯೋಧನಿಗೆ ರಮಣಿಯ ಮೇಲೆ ಪ್ರೇಮ ಒಂದು ಕಡೆಗೆ ಇದ್ದರೆ ಅವರ ಜೊತೆಯಲ್ಲಿಯೇ ಅವನಿಗೆ ಯುದ್ಧಕ್ಕೆ ಹೊರಡಬೇಕೆಂಬ ಉತ್ಸಾಹವೂ ಇದೆ. ಹೀಗೆ ಪ್ರೇಮ ಮತ್ತು ಔತ್ಸುಕ್ಯ ಇವೆರಡೂ ಸೇರಿದ್ದರಿಂದ ಇಲ್ಲಿ ಭಾವಸಂಧಿಯನ್ನು ಕಾಣಬಹುದು. ಇವೆರಡು ಭಾವಗಳೂ ಅವನಲ್ಲಿ ಹೊಂದಿಕೊಂಡಿವೆ. ಇಲ್ಲಿ ರಾಜನಿಗೆ ಹೆಂಡತಿಯ ಮೇಲೆ ಇರುವ ಪ್ರೀತಿಯು ಸಾಕಷ್ಟು ಪುಷ್ಟಿಯನ್ನು ಹೊಂದದೆ ಇರುವುದ ರಿಂದ ಭಾವವೆನಿಸಿದೆ. ಇದು ಔತ್ಸುಕ್ಯದೊಡನೆ ಸೇರಿಕೊಂಡಿದೆ. ಆದರೂ ಈ ಬಗೆಯ ಭಾವಸಂಧಿಗೆ ಇಲ್ಲಿ ಪ್ರಾಧಾನ್ಯವಿಲ್ಲದ್ದರಿಂದ ಇದು ಆ ವೀರನಿಗೆ ತನ್ನ ಪ್ರಭು ವಿನ ಬಗ್ಗೆ ಇರುವ ಭಾವಕ್ಕೆ ಪೋಷಕವಾಗಿದ್ದು ಅಲಂಕಾರವೆನಿಸಿದೆ.

## ೧೧೭. ಭಾವಶಬಲಾಲಂಕಾರ

ಭಾವಶಬಲಂ ಯಥಾ—

ಕ್ವಾಕಾರ್ಯಂ ಶಶಲಕ್ಷ್ಮಣಃ ಕ್ವ ಚ ಕುಲಂ ಭೂಯೋಽಪಿ ದೃಶ್ಯೇತ ಸಾ
ದೋಷಾಣಾಂ ಪ್ರಶಮಾಯ ನಃ ಶ್ರುತಮಹೋ ಕೋಪೇಽಪಿ ಕಾಂತಂ
ಮುಖಮ್ ।

ಕಿಂ ವಕ್ಷ್ಯಂತ್ಯಪಕಲ್ಮಷಾ ಕೃತಧಿಯಃ ಸ್ವಪ್ನೇಽಪಿ ಸಾ ದುರ್ಲಭಾ

ಚೇತಃ ಸ್ವಾಸ್ಥ್ಯಮುಪೈಹಿ ಕಃ ಖಲು ಯುವಾ ಧನ್ಯೋಽಧರಂ ಪಾಸ್ಯತಿ ॥

ಅತ್ರ ವಿತರ್ಕೌತ್ಸುಕ್ಯಮತಿಸ್ಮರಣಶಂಕಾದೈನ್ಯಧೃತಿಚಿಂತಾನಾಂ ಶಬಲತಾವಿಪ್ರಲಂಭಶೃಂಗಾರಸ್ಯಾಂಗಮ್.

ವಿಕ್ರಮೋರ್ವಶೀಯದಲ್ಲಿ ಉರ್ವಶಿಯ ಸಮಾಚಾರವೇ ಸಿಕ್ಕಿದೆ ನಿರಾಶನಾದಾಗ ಪುರೂರವನು ಹೀಗೆ ಆಲೋಚಿಸುತ್ತಾನೆ. "ಉರ್ವಶಿಯು ದೊರೆಯದೇ ಇದ್ದುದಕ್ಕಾಗಿ ಆಲೋಚಿಸುವ ಈ ಆತ್ಮಹತ್ಯವೆಲ್ಲಿ ? ಚಂದ್ರನಿಂದ ಭೂಷಿತವಾಗಿರುವ ನನ ವಂಶವೆಲ್ಲಿ ? ಇದೂ ಅಲ್ಲದೆ, ಆ ಉರ್ವಶಿಯು ಈಗ ತಪ್ಪಿಸಿಕೊಂಡಿದ್ದರೂ ಮುಂದ್ದೆ ಅವಳನ್ನು ಕಾಣಬಹುದು. ನಾನು ಅರಿಯದೆ ಮಾಡಿದ ಅಕಾರ್ಯಗಳನ್ನು ಸರಿಪಡಿಸಿಕೊಳ್ಳಲು ನನಗೆ ಸಾಕಷ್ಟು ಶಾಸ್ತ್ರಜ್ಞಾನವೂ ದೊರೆತಿದೆ. ಆಕೆಯನ್ನು ಮರೆಯೋಣವೇ? ಅಂದರೆ ಅದೂ ಸರಿಯಿಲ್ಲ. ಆಕೆಗೆ ಕೋಪಕಾಲದಲ್ಲಿಯೂ ಮುಖವು ಮನೋಹರವಾಗಿಯೇ ಇರುತ್ತದೆ. ಇಷ್ಟೆಲ್ಲಾ ಪರಿಸ್ಥಿತಿ ಇದ್ದರೂ ನಾನು ಆತ್ಮಹತ್ಯವನ್ನು ಮಾಡಲೆಳಸಿದರೆ ನಿರ್ಮಲರಾದ ಮಹರ್ಷಿಗಳು ನನ್ನ ವರ್ತನೆಯ ಬಗ್ಗೆ ಏನು ಹೇಳಿಯಾರು ? ಆಕೆ ಪ್ರತ್ಯಕ್ಷವಾಗಿ ದೊರೆಯದೇ ಇದ್ದರೂ ಸ್ವಪ್ನದಲ್ಲಾದರೂ ನೋಡೋಣವೆಂದರೆ ಅದೂ ಕಷ್ಟವೇ ಆಗಿದೆ. ಎಲೈ ಮನಸ್ಸೇ, ಕೊಂಚ ಸಮಾಧಾನವನ್ನು ಹೊಂದು. ಆಕೆಯ ಅಧರಾಮೃತವನ್ನು ಯಾವನು ಪಾನ ಮಾಡುವನೋ ಅವನೇ ಧನ್ಯನು." ಹೀಗೆ ಪುರೂರವನು ಉರ್ವಶಿಯ ವಿರಹದಿಂದ ಉನ್ಮತ್ತನಾಗಿ ಹೇಳಿಕೊಂಡಿದ್ದಾನೆ. ಇಲ್ಲಿ 'ನಾನು ಆತ್ಮಹತ್ಯವನ್ನು ಮಾಡಿಕೊಳ್ಳಲೇ ?' ಎಂಬಲ್ಲಿ ವಿತರ್ಕವೂ 'ಮತ್ತೆ ಅವಳು ಕಾಣಬಹುದು' ಎಂಬಲ್ಲಿ ಔತ್ಸುಕ್ಯವೂ, ಶಾಸ್ತ್ರಜ್ಞಾನವಿರುವುದರಿಂದ ಆ ಕಾರ್ಯವನ್ನು ಮಾಡಬಾರದೆಂದು ತಿಳಿಯುವ ಪ್ರಯುಕ್ತ ಮತಿಯೂ, ಕೋಪದಲ್ಲಿಯೂ ಮುಖವು ಸುಂದರವಾಗಿರುವುದೆಂದು ಹೇಳಿದ್ದರಿಂದ ಸ್ಮೃತಿಯೂ, ಹಿರಿಯರು ನನ್ನ ಬಗ್ಗೆ ಏನು ಅನ್ನುವರೋ ಎಂಬಲ್ಲಿ ಶಂಕೆಯೂ, 'ಆಕೆಯು ಸ್ವಪ್ನದಲ್ಲೂ ಸಿಕ್ಕುವುದಿಲ್ಲ, ಎಂಬಲ್ಲಿ ದೈನ್ಯವೂ, ಮನಸ್ಸೇ ಕೊಂಚ ಸಮಾಧಾನದಿಂದಿರು' ಎಂಬಲ್ಲಿ ಧೃತಿಯೂ, ಯಾವನು ಆಕೆಯ ಅಧರಾಮೃತವನ್ನು ಕುಡಿಯುವನೋ' ಎಂಬಲ್ಲಿ ಚಿಂತೆಯೂ ತೋರುತ್ತವೆ. ಇಷ್ಟು ಭಾವಗಳು ಇಲ್ಲಿ ಸೇರಿರುವುದರಿಂದ ಇದು ಭಾವಶಬಲವೆನಿಸುತ್ತದೆ. ಆದರೆ ಈ ಶಬಲತೆಯು ಇಲ್ಲಿ ವಿಪ್ರಲಂಭಶೃಂಗಾರಕ್ಕೆ ಅಂಗವೆನಿಸಿರುವುದರಿಂದ ಅಲಂಕಾರ

ವೆನಿಸಿದೆ, ಹೀಗೆ ಅನೇಕ ಭಾವಗಳು ವಿಹಿತವಾಗಿ ಸೇರಿಕೊಂಡು ಸಾಕಷ್ಟು ಪುಷ್ಟಿಯಿಲ್ಲದೆ ಬೇರೊಂದು ರಸಕ್ಕೋ ಭಾವಕ್ಕೋ ಪೋಷಕವಾಗಿದ್ದರೆ ಅದು ಭಾವ ಶಬಲಾಲಂಕಾರವೆನಿಸುತ್ತದೆ.

## ೧೦೮ ಪ್ರತ್ಯಕ್ಷಾಲಂಕಾರ

ಪ್ರಮಾಣಾಲಂಕಾರೇ ಪ್ರತ್ಯಕ್ಷಂ ಯಥಾ—

ಕ್ರಾಂತಪದನಪ್ರತಿಬಿಂಬೇ ಭಗ್ನಬಾಲಸಹಕಾರಸುಗಂಧೌ ।
ಸ್ವಾದುನಿ ಪ್ರಣದಿತಾಲಿನಿ ಶೀತೇ ನಿರ್ವಿವಾರ ಮಧುನೀಂದ್ರಿಯಂವರ್ಗಃ ॥

ಕಿಂ ತಾವತ್ಸರಸಿ ಸರೋಜಮೇತದಾರಾತ್
ಆಹೋಸ್ವಿನ್ಮುಖಮವಭಾಸತೇ ಯುವತ್ಯಾಃ ।
ಸಂಶಯ್ಯ ಕ್ಷಣಮಿತಿ ನಿಶ್ಚಿಕಾಯ ಕಶ್ಚಿತ್
ಬಿಬ್ಬೋಕೈರ್ಬಕಸಹವಾಸಿನಾ ಪರೋಕ್ಷೈಃ ॥

ಪೂರ್ವತ್ರ ಪ್ರತ್ಯಕ್ಷಮಾತ್ರಂ ಅತ್ರ ತು ವಿಶೇಷದರ್ಶನಜನ್ಯಸಂಶಯೋತ್ತರ-ಪ್ರತ್ಯ ಮಿತಿ ಭೇದಃ.

ಇಂದ್ರಿಯಗಳು ಜೇನುತುಪ್ಪದಲ್ಲಿ ಐದು ಬಗೆಯ ಸುಖಗಳನ್ನು ಅನುಭವಿಸಿದವು, ಕಣ್ಣಿಂದ ನೋಡಿಯೂ, ಕಿವಿಯಿಂದ ಕೇಳಿಯೂ, ನಾಲಿಗೆಯಿಂದ ರುಚಿಸಿಯೂ, ಮೂಗಿನಿಂದ ಮೂಸಿಸಿಯೂ, ಚರ್ಮದಿಂದ ಮುಟ್ಟಿಯೂ ಸುಖಗಳನ್ನು ಪಡೆದವು. ಪ್ರಿಯನ ಮುಖದ ನೆರಳು ಅದರಲ್ಲಿ ಅಂಟಿಕೊಂಡಿದ್ದುದರಿಂದ ನೋಡಿ ಸಂತೋಷವಾಯಿತು. ಆ ಜೇನುತುಪ್ಪವು ಎಳೆಯ ಮಾವಿನ ಚಿಗುರಿನ ಸುಗಂಧವನ್ನು ವಿಾರಿಸಿದ್ದುದರಿಂದ ಆ ವಾಸನೆಯನ್ನು ಮೂಸಿಸಿ ಸಂತೋಷವುಂಟಾಯಿತು. ರುಚಿಯಾಗಿದ್ದುದರಿಂದ ನಾಲಿಗೆಯಿಂದ ತಿಳಿದು ಆನಂದವುಂಟಾಯಿತು. ದುಂಬಿಗಳು ಮುತ್ತಿ ಝೇಂಕಾರವನ್ನು ಮಾಡುತ್ತಿದ್ದುದರಿಂದ ಕಿವಿಗೆ ಕೇಳಿ ಸಂತೋಷವಾಯಿತು. ಚರ್ಮಕ್ಕೆ ಶೈತ್ಯವು ಅಂಟಿದ್ದರಿಂದ ಅದಕ್ಕೂ ಸಂತೋಷವುಂಟಾಯಿತು. ಹೀಗೆ ಇಂದ್ರಿಯಗಳಿಗೂ ಸಂತೋಷವುಂಟಾದ್ದನ್ನು ಇಲ್ಲಿ ತಿಳಿಸಿರುವುದರಿಂದ ಇದು ಪ್ರತ್ಯಕ್ಷಾಲಂಕಾರವೆನಿಸಿದೆ. "ಸರೋವರದಲ್ಲಿ ಕಾಣುತ್ತಿರುವುದು ಕಮಲವೇ ಅಥವಾ ಯುವತಿಯ ಮುಖವೇ ಎಂದು ಒಂದು ಕ್ಷಣ ಕಾಲ ಸಂಶಯಪಟ್ಟು ಒಬ್ಬ ಯುವಕನು ಬಕಪಕ್ಷಿಗಳ ಜೊತೆಯಲ್ಲಿಯೇ ಇರುವ ಕಮಲಗಳಲ್ಲಿ ಭಾವವಿಶೇಷಗಳು ಕಾಣವೇ ಇರುವ ಪ್ರಯುಕ್ತ ಇಲ್ಲಿ ಭಾವವಿಶೇಷಗಳಿರುವುದರಿಂದ ಇದನ್ನು ಯುವತಿಯ ಮುಖವೆಂದು ನಿಶ್ಚಯಿಸಿದನು. ಹಿಂದಿನ ಉದಾಹರಣವಲ್ಲಿ ಪ್ರತ್ಯಕ್ಷಪ್ರಮಾಣವಷ್ಟೇ ಕಾಣುತ್ತದೆ, ಇಲ್ಲಿಯಾದರೋ, 'ಇದು ಮುಖವೋ ಕಮಲವೋ' ಎಂದು ಸಂಶಯ ಬಂದು ಅನಂತರ ಅಲ್ಲಿ ಹಾವ ಭಾವ ವಿಲಾಸಗಳಿದ್ದುದರಿಂದ ಅದು ಮುಖವೆಂಬ ಪ್ರತ್ಯಕ್ಷ

ಜ್ಞಾನವು ಹುಟ್ಟುತ್ತದೆ. ಇಲ್ಲಿ ತೋರುವ ಪ್ರತ್ಯಕ್ಷಪ್ರಮಾಣವು ಸ್ವಾರಸ್ಯವಾಗಿರುವುದರಿಂದ ಅಲಂಕಾರವೆನಿಸಿದೆ.

## ೧೧೯. ಅನುಮಾನಾಲಂಕಾರ

ಅನುಮಾನಂ ಯಥಾ—

ಯಥಾ ರಂಧ್ರವ್ಯೋಮ್ನಶ್ಚಲಜಲಧೂಮಃ ಸ್ಥಗಯತಿ
ಸ್ಫುಲಿಂಗಾನಾಂ ರೂಪಂ ದಧತಿ ಚ ಯಥಾ ಕೀಟಮಣಯಃ ।
ಯಥಾ ವಿದ್ಯುಜ್ಜ್ವಾಲೋಲ್ಲಸಿತಪರಿಪಿಂಗಾಶ್ಚ ಕಕುಭಃ
ತಥಾ ಮನ್ಯೇ ಲಗ್ನಃ ಪಥಿಕತರುಖಂಡೇ ಸ್ಮರದವಃ ॥

ಯತ್ರೈತಾ ಲಹರೀಚಲಾಚಲದೃಶೋ ವ್ಯಾಪಾರಯಂತಿ ಭ್ರುವೌ
ಯತ್ತತ್ರೈವ ಪತಂತಿ ಸಂತತಮಮೀ ಮರ್ಮಸ್ಪೃಶೋ ಮಾರ್ಗಣಾಃ ।
ತಚ್ಚಕ್ರೀಕೃತಚಾಪಪುಂಖಿತಶರಪ್ರೇಂಖತ್ಕರಃ ಕ್ರೋಧನೋ
ಧಾವತ್ಯಗ್ರತ ಏವ ಶಾಸನಧರಃ ಸತ್ಯಂ ತದಾಸಾಂ ಸ್ಮರಃ ॥

ಪೂರ್ವಂ ರೂಪಕಸಂಕೀರ್ಣಮಿದಮತಿಶಯೋಕ್ತಿಸಂಕೀರ್ಣಮಿತಿ ಭೇದಃ

ಶುದ್ಧಾನುಮಾನಂ ಯಥಾ—

ವಿಲೀಯಮಾನೈರ್ವಿಹಗೈರ್ನಿಮೀಲದ್ಭಿಶ್ಚ ಪಂಕಜೈಃ ।
ವಿಕಸಂತ್ಯಾ ಚ ಮಾಲತ್ಯಾ ಗತೋಽಸ್ತಂ ಜ್ಞಾಯತೇ ರವಿಃ ॥

ಯಥಾ ವಾ—

ಸೌಮಿತ್ರೇ ನನು ಸೇವ್ಯತಾಂ ತರುತಲಂ ಚಂಡಾಂಶುರುಜ್ಜೃಂಭತೇ
ಚಂಡಾಂಶೋರ್ನಿಶಿ ಕಾ ಕಥಾ ರಘುಪತೇ ಚಂದ್ರೋಽಯಮುನ್ಮೀಲತಿ ।
ವತ್ಸೈತದ್ವಿದಿತಂ ಕಥಂ ನು ಭವತಾ ಧತ್ತೇ ಕುರಂಗಂ ಯತಃ
ಕ್ವಾಸಿ ಪ್ರೇಯಸಿ ಹಾ ಕುರಂಗನಯನೇ ಚಂದ್ರಾನನೇ ಜಾನಕಿ ॥

ಅನುಮಾನಾಲಂಕಾರವನ್ನು ಉದಾಹರಿಸುತ್ತಾನೆ. ಪಥಿಕರೆಂಬ ಮರಗಳ ಸಮೂಹದಲ್ಲಿ ಕಾಮಾಗ್ನಿಯು ಅಂಟಿಕೊಂಡಿತೆಂದು ಊಹಿಸುತ್ತೇನೆ. ಆಕಾಶವೆಂಬ ಮರಗಳ ಪೊಟರೆಯಿಂದ ಹೊರಡುವ ಚಂಚಲವಾದ ಮೇಘವೆಂಬ ಹೊಗೆಯು ಎಲ್ಲೆಡೆಯಲ್ಲೂ ವ್ಯಾಪಿಸುತ್ತಲಿದೆ. ಹಾಗೆಯೇ ಮಿಂಚಿನ ಹುಳುಗಳು ಕೆಂಡಗಳಂತೆ ಕಾಣುತ್ತಲಿವೆ. ಹಾಗೆಯೇ ದಿಕ್ಕುಗಳು ಮಿಂಚೆಂಬ ಜ್ವಾಲೆಯಿಂದ ಪ್ರಕಾಶಗೊಂಡು ನೀಲಿ ಮತ್ತು ಬಿಳುಪು ಬಣ್ಣಗಳಿಂದ ಕೂಡಿವೆ. ಹೊರಗೆ ಹೀಗೆಲ್ಲಾ ಸನ್ನಿವೇಶ

ವಿರುವುದರಿಂದ ಪಥಿಕರೆಂಬ ಮರಗಳ ಸಮೂಹದಲ್ಲಿ ಕಾಮಾಗ್ನಿ ವ್ಯಾಪಿಸಿದೆ ಎಂದು ತಿಳಿಯುತ್ತೇನೆ." ಇಲ್ಲಿ ಪಥಿಕರೆಂಬ ಮರಗಳ ಸಮೂಹವೇ ಪಕ್ಷವೆನಿಸಿದೆ. ಅದರಲ್ಲಿ ಕಾಮಾಗ್ನಿಯು ವ್ಯಾಪಿಸಿತ್ತೆಂಬುದೇ ಸಾಧ್ಯ. ಹಿಂದಿನ ಮೂರು ಪಾದಗಳಲ್ಲಿ ಹೇಳಿ ರುವ ಅಂಶಗಳೇ ಹೇತುಗಳು. ಹೀಗೆ ಪಕ್ಷದಲ್ಲಿ ಹೇತುವಿರುವ ಪ್ರಯುಕ್ತ ಅಂದರೆ ಎಲ್ಲೆಡೆಯಲ್ಲೂ ಹೊಗೆ ವ್ಯಾಪಿಸಿರುವುದರಿಂದಲೂ, ಮಿಂಚಿನ ಹುಳುಗಳು ಓಡಾಡು ತ್ತಿರುವುದರಿಂದಲೂ, ಮಿಂಚಿನ ಜ್ವಾಲೆಯು ಪ್ರಕಾಶಿಸುತ್ತಿರುವುದರಿಂದಲೂ ಇಲ್ಲಿ ಕಾಮಾಗ್ನಿಯು ಉರಿಯುತ್ತಿದೆ ಎಂದು ಅನುಮಾನದಿಂದ ಊಹಿಸಿರುವ ಪ್ರಯುಕ್ತ ಇದು ಅನುಮಾನಾಲಂಕಾರವೆನಿಸಿದೆ. "ಸಮುದ್ರದ ನೊರೆಗಳಂತೆ ಚಂಚಲವಾದ ನೇತ್ರಗಳಿರುವ ಈ ಕಾಮಿನಿಯರು ಯಾವ ವ್ಯಕ್ತಿಯಲ್ಲಿ ತಮ್ಮ ಹುಬ್ಬುಗಳ ಚಲನೆ ಯನ್ನು ವ್ಯಾಪಿಸುವಂತೆ ಮಾಡುತ್ತಾರೆಯೋ ಅಲ್ಲಿಯೇ ಮನ್ಮಥನ ಈ ಬಾಣಗಳು ಮರ್ಮವನ್ನು ಭೇದಿಸುತ್ತ ನಿರಂತರವಾಗಿ ಬೀಳುತ್ತಿವೆ. ಸಜ್ಜು ಮಾಡಿಕೊಂಡಿರುವ ಧನುಸ್ಸಿನಲ್ಲಿ ಸೇರಿಸಿರುವ ಬಾಣಗಳನ್ನು ಪ್ರಯೋಗಿಸುವುದರಲ್ಲಿ ಮನ್ಮಥನ ಕೈಗಳು ಅಂಟಿಕೊಂಡಿವೆ. (ಮನ್ಮಥನು ಬಾಣಗಳನ್ನು ಪ್ರಯೋಗಿಸಲು ಸಿದ್ಧನಾಗಿರುವನು) ಆದ್ದರಿಂದಲೇ ಮನ್ಮಥನು ಈ ಸ್ತ್ರೀಯರ ಮುಂದೆಯೇ ನಿಂತು ಇವರ ಆಜ್ಞೆಯನ್ನು ಶಿರಸಾ ವಹಿಸಿ ನಡೆಸಲು ಓಡುತ್ತಿರುವನೆಂದು ಭಾವಿಸುತ್ತೇನೆ." ಇಲ್ಲಿ ಮನ್ಮಥನೇ ಪಕ್ಷನೆನಿಸಿರುವನು. ಇವನು ಸ್ತ್ರೀಯರ ಆಜ್ಞಾಧಾರಕನಾಗಿ ಓಡುತ್ತಿರುವನೆಂಬ ಅಂಶವನ್ನು ಇಲ್ಲಿ ಸಾಧಿಸಲಾಗಿದೆ. ಸ್ತ್ರೀಯರು ಯಾರ ಮೇಲೆ ಹುಬ್ಬುಗಳನ್ನು ಗಂಟು ಹಾಕುವರೋ ಅಂತಹ ಕಡೆ ಅವನ ಬಾಣಗಳು ಹೋಗುತ್ತಿರುವುದರಿಂದಲೂ ಇವನು ಅದಕ್ಕಾಗಿಯೇ ಧನುಸ್ಸಿನಲ್ಲಿ ಬಾಣಗಳನ್ನು ಸಜ್ಜುಮಾಡಿಕೊಂಡು ನಿಂತಿರುವುದ ರಿಂದಲೂ ಇವನು ಅವರ ಆಜ್ಞಾಧಾರಕನಾಗಿ ಓಡುತ್ತಿರುವನೆಂಬುದನ್ನು ಊಹಿಸಿರುವ ಪ್ರಯುಕ್ತ ಇದು ಅನುಮಾನಾಲಂಕಾರವೆನಿಸಿದೆ. ಆದರೆ ಇದರಲ್ಲಿ ಅತಿಶಯೋಕ್ತ್ಯ ಲಂಕಾರವು ಸೇರಿಕೊಂಡಿದೆ. ಹಿಂದಿನದರಲ್ಲಿ ರೂಪಕಾಲಂಕಾರವು ಸೇರಿಕೊಂಡಿದೆ. ಮನ್ಮಥನು ಸ್ತ್ರೀಯರ ಆಜ್ಞೆಯನ್ನು ಪಾಲಿಸಲು ಅವರ ಮುಂದೆ ಓಡಾಡಿದನೆಂಬ ಅಂಶವನ್ನು ಸಾಧಿಸಿರುವುದರಿಂದ ಶರೀರವಿಲ್ಲದ ಮನ್ಮಥನು ಓಡಾಡಿದನೆಂದು ಹೇಳಿದ್ದು ಅತಿಶಯೋಕ್ತಿ ಎನಿಸಿದೆ. ಹಿಂದಿನ ಪದ್ಯದಲ್ಲಿ ಪಥಿಕರಲ್ಲಿ ಮರಗಳ ಸಮೂಹವನ್ನು ಆರೋಪಿಸಿರುವ ಪ್ರಯುಕ್ತ ರೂಪಕಾಲಂಕಾರವು ಸೇರಿಕೊಂಡಿದೆ. ಅದರಂತೆಯೇ ಅಲ್ಲಿ ಉಳಿದ ಅಂಶಗಳಲ್ಲೂ ರೂಪಣವಿದೆ. ಹಾಗೆಯೇ ಸ್ತ್ರೀಯರ ಕಣ್ಣುಗಳನ್ನು ಬಾಣಗಳೆಂದು ತಿಳಿಸಿದ್ದು ಅತಿಶಯೋಕ್ತಿಯೇ ಆಗಿದೆ.

ಈಗ ಶುದ್ಧವಾದ ಅನುಮಾನಾಲಂಕಾರವನ್ನು ಉದಾಹರಿಸುತ್ತಾನೆ. "ಪಕ್ಷಿ ಗಳು ಎಲ್ಲೋ ಒಂದೆಡೆಯಲ್ಲಿ ಅಡಗಿಕೊಂಡಿರುವುದರಿಂದಲೂ, ಕಮಲಗಳು ಮೊಗ್ಗಾ ಗಿರುವುದರಿಂದಲೂ, ಮಾಲತೀಪುಷ್ಪವು ವಿಕಾಸಗೊಂಡಿರುವುದರಿಂದಲೂ ಸೂರ್ಯನು

ಮುಳುಗಿದನೆಂದು ಕಾಣುತ್ತದೆ." ಇಲ್ಲಿ ಮೂರು ಕಾರಣಗಳಿಂದ ಸೂರ್ಯನು ಮುಳುಗಿದನೆಂಬುದನ್ನು ಸಾಧಿಸಿರುವ ಪ್ರಯುಕ್ತ ಇದು ಅನುಮಾನವೆನಿಸಿದೆ. ಇದರಲ್ಲಿ ಬೇರೆ ಯಾವ ಅಲಂಕಾರದ ಸಂಪರ್ಕವೂ ಇಲ್ಲದ್ದರಿಂದ ಇದು ಶುದ್ಧವೆನಿಸಿದೆ. ಹಾಗೆಯೇ ಬೇರೊಂದು ಉದಾಹರಣವನ್ನು ಕೊಡುತ್ತಾನೆ. ವಿರಹಾತುರನಾದ ರಾಮನು ಲಕ್ಷ್ಮಣನಿಗೆ ಹೀಗೆ ಹೇಳುತ್ತಾನೆ: "ಅಯ್ಯಾ ಲಕ್ಷ್ಮಣ, ಯಾವುದಾದರೂ ಮರದ ನೆರಳಿಗೆ ಹೋಗೋಣ. ಸೂರ್ಯನು ನಮ್ಮನ್ನು ಸುಡುತ್ತಿರುವನು'' ಎಂದು ರಾಮನು ಹೇಳಲು ಅದಕ್ಕೆ ಲಕ್ಷ್ಮಣನು "ರಾತ್ರಿಯ ವೇಳೆಯಲ್ಲಿ ಸೂರ್ಯನು ಎಲ್ಲಿ ಬಾದಾನು ಸ್ವಾಮಿ, ಇಲ್ಲಿ ಕಾಣಿಸುತ್ತಿರುವವನು ಚಂದ್ರ'' ಎಂದು ಹೇಳುವನು. "ಇವನು ಸುಡುತ್ತಿರುವನಾದರೂ ಇವನನ್ನು ಚಂದ್ರನೆಂದು ನೀನು ಹೇಗೆ ತಿಳಿದೆ'' ಎಂದು ರಾಮನು ಕೇಳಲು "ಇವನಲ್ಲಿ ಜಿಂಕೆಯ ಗುರುತು ಇದೆ. ಅದ್ದರಿಂದ ಇವನು ಚಂದ್ರನೇ ಇರುವನು'' ಎಂದು ಲಕ್ಷ್ಮಣನು ಹೇಳುವನು. ಈ ರೀತಿಯಲ್ಲಿ ರಾಮನು "ಹಾ ಪ್ರೇಯಸಿ, ಚಂದ್ರಮುಖಿ, ಜಿಂಕೆಯಂತೆ ಚಂಚಲವಾದ ಕಣ್ಣುಗಳಿರುವ ಜಾನಕಿಯೇ ಎಲ್ಲಿಗೆ ಹೋಗಿರುವೆ'' ಎಂದು ಆಕೆಯನ್ನು ನೆನೆಸಿಕೊಂಡು ಗೋಳಾಡಿದನು. ಇಲ್ಲಿ ಇವನಲ್ಲಿ ಜಿಂಕೆ ಇರುವುದರಿಂದ ಇವನು ಚಂದ್ರನೆನಿಸಿರುವನೆಂಬುದೇ ಅನುಮಾನದ ಪ್ರಯೋಗವೆನಿಸಿದೆ. ಇದರಿಂದ ಇವನು ವಿರಹಿಗಳಿಗೆ ಸೂರ್ಯನಂತೆ ಸಂತಾಪವನ್ನು ಕೊಡುತ್ತಲಿದ್ದರೂ ಸಹ ಜಿಂಕೆ ಇರುವುದರಿಂದ ಚಂದ್ರನೇ ಇರಬೇಕೆಂಬ ಜ್ಞಾನವು ಅನುಮಿತಿ ಎನಿಸಿದ್ದರಿಂದ ಇದು ಅನುಮಾನಾಲಂಕಾರವೆನಿಸಿದೆ.

## ೧೧೦ ಉಪಮಾನಾಲಂಕಾರ

ಉಪಮಾನಂ ಯಥಾ—

ತಾಂ ರೋಹಿಣೀಂ ವಿಜಾನೀಹಿ ಜ್ಯೋತಿಷಾಮತ್ರ ಮಂಡಲೇ
ಯಸ್ತನ್ವಿ ತಾರಕಾನ್ಯಾಸಃ ಶಕಟಾಕಾರಮಾಶ್ರಿತಃ ।
ಅತ್ರ ಮನ್ಮಥಮಿವಾತಿಸುಂದರಂ ದಾನವಾರಿಮಿವ ದಿವ್ಯತೇಜಸಮ್
ಶೈಲರಾಜಮಿವ ಧೈರ್ಯಶಾಲಿನಂ ವೇದ್ಮಿ ವೆಂಕಟಪತಿಂ ಮಹೀಪತಿಮ್ ॥

ಪೂರ್ವೋದಾಹರಣೇ ಉಪಮಾನಭೂತಮತಿದೇಶವಾಕ್ಯಂ ದರ್ಶಿತಮ್. ಅತ್ರ ಅತಿದೇಶವಾಕ್ಯಾರ್ಥಸಾದೃಶ್ಯಪ್ರತ್ಯಕ್ಷರೂಪಂ ಉಪಮಾನಂ ಫಲೇನ ಸಹ ದರ್ಶಿತಮಿತಿ ವಿವೇಕಃ.

"ಇಲ್ಲಿ ಕಾಣುವ ನಕ್ಷತ್ರಮಂಡಲದಲ್ಲಿ ಅದನ್ನು ರೋಹಿಣಿ ಎಂದು ತಿಳಿದುಕೋ. ಎಲೈ ಶೋಭನಾಂಗಿಯೇ, ನಕ್ಷತ್ರಗಳ ಯಾವ ಸನ್ನಿವೇಶವು ಬಂಡಿಯ ಆಕಾರವನ್ನು ಹೊಂದಿದೆಯೋ ಅದೇ ರೋಹಿಣೀನಕ್ಷತ್ರವೆನಿಸಿದೆ." ರೋಹಿಣೀ ಎಂಬ ನಕ್ಷತ್ರಗಳ

ಗುಂಪಿಗೆ ಬಂಡಿಯ ಆಕಾರವಿರುವುದೆಂಬುದೇ ಗೋವಿಗೆ ಸದೃಶವಾದದ್ದು ಗವಯ ವೆಂಬಂತೆ ಅತಿದೇಶವಾಕ್ಯವೆನಿಸಿದೆ. ಜನರು ಆಡುವ ಈ ಮಾತನ್ನು ಕೇಳಿದವನು ನಕ್ಷತ್ರಗಳ ಒಂದೊಂದು ಗುಂಪನ್ನು ಪರಿಶೀಲಿಸಿ ಬಂಡಿಯ ಆಕಾರವಿರುವುದನ್ನು ರೋಹಿಣಿ ಎಂದು ತೀರ್ಮಾನಿಸುವನು. ಹೀಗೆ ರೋಹಿಣಿಯಲ್ಲಿ ಬಂಡಿಯ ಸಾದೃಶ್ಯವನ್ನು ತಿಳಿಸಿರುವುದರಿಂದ ಇದು ಉಪಮಾನಾಲಂಕಾರವೆನಿಸಿದೆ. ಬೇರೊಂದು ಉದಾಹರಣವನ್ನು ತಿಳಿಸುತ್ತಾನೆ: "ವೆಂಕಟೇಶ್ವರನನ್ನು ಭೂಲೋಕದ ಮಹಾ ರಾಜನೆಂದು ತಿಳಿಯುತ್ತೇನೆ. ಇವನು ರಾಜರ ಮಧ್ಯದಲ್ಲಿ ಮನ್ಮಥನಂತೆ ಸುಂದರ ನಾಗಿರುವನು. ರಾಕ್ಷಸರ ಶತ್ರುವೆನಿಸಿದ ವಿಷ್ಣುವಿನಂತೆ ಇವನಲ್ಲಿ ದಿವ್ಯತೇಜಸ್ಸು ಪ್ರಕಾಶಿಸುತ್ತಿದೆ. ಹಿಮವಂತನಂತೆ ಗಂಭೀರನೂ ಧೈರ್ಯಶಾಲಿಯೂ ಆಗಿರುವನು. ಆದ್ದರಿಂದ ಇವನು ಮಹಾರಾಜನೇ ಆಗಿರುವನು." ಇಲ್ಲಿ ವೆಂಕಟೇಶ್ವರನನ್ನು ಮನ್ಮಥ ವಿಷ್ಣು ಹಿಮವಂತ ಇವರಿಗೆ ಹೋಲಿಸಿರುವುದರಿಂದ ಇದು ಉಪಮಾನಾಲಂಕಾರ ವೆನಿಸಿದೆ. ಹಿಂದಿನ ಪದ್ಯದಲ್ಲಿ ಉಪಮಾನವೆನಿಸಿದ ಅತಿದೇಶವಾಕ್ಯವನ್ನು ತಿಳಿಸಿದೆ. ಒಂದು ವಸ್ತುವಿಗೆ ಮತ್ತೊಂದು ವಸ್ತುವಿನೊಡನೆ ಹೋಲಿಕೆಯನ್ನು ತಿಳಿಸುವುದಾಗಿ ಜನರಾಡುವ ಮಾತೇ ಅತಿದೇಶವಾಕ್ಯವೆನಿಸುತ್ತದೆ. ಅಂತಹದನ್ನು ಅಲ್ಲಿ ಕವಿಯು ತಿಳಿಸಿದ್ದಾನೆ. ಎರಡನೆಯ ಉದಾಹರಣದಲ್ಲಿ ಆ ಅತಿದೇಶವಾಕ್ಯಾರ್ಥದಿಂದ ತಿಳಿದು ಬರುವ ಸಾದೃಶ್ಯವನ್ನೊಳಗೊಂಡ ಮನ್ಮಥ, ವಿಷ್ಣು, ಹಿಮಾಲಯ ಈ ವ್ಯಕ್ತಿಗಳನ್ನೇ ಪ್ರತ್ಯಕ್ಷವಾಗಿ ತಿಳಿಸಿರುವುದರಿಂದ ಉಪಮಾನವನ್ನು ಉಪಮಿತಿಜ್ಞಾನ ವೆಂಬ ಫಲದೊಡನೆಯೇ ತಿಳಿಸಲಾಗಿದೆ. ಇವೆರಡಕ್ಕೂ ಇರುವ ಪರಸ್ಪರ ಭೇದವು ಇಷ್ಟೇಯೆ.

## ೧೧೧ ಶಬ್ದಪ್ರಮಾಣಾಲಂಕಾರ

ಶಬ್ದ ಪ್ರಮಾಣಂ ಯಥಾ—

> ವಿಮೃಣ್ವತಾ ದೋಷಮುಪಿಚ್ಯುತಾತ್ಮನಾ
> ತ್ವಯ್ಯೇಕಮೀಶಂ ಪ್ರತಿ ಸಾಧು ಭಾಷಿತಮ್ ।
> ಯಮಾಮನಂತ್ಯಾತ್ಮಭುವೋಽಪಿ ಕಾರಣಂ
> ಕಥಂ ನ ಲಕ್ಷ್ಯಪ್ರಭವೋ ಭವಿಷ್ಯತಿ ॥

ಅತ್ರ ಶಿವಃ ಪರಮೇಷ್ಠಿನೋಽಪಿ ಕಾರಣಮಿತ್ಯತ್ರ ಶ್ರುತಿರೂಪಂ ಶಬ್ದ-ಪ್ರಮಾಣಮುಪನ್ಯಸ್ತಮ್. ಏವಂ ಶ್ರುತಿಪುರಾಣಾಗಮಲೌಕಿಕವಾಕ್ಯರೂಪಾಣ್ಯಪಿ ಶಬ್ದಪ್ರಮಾಣಾನ್ಯುದಾಹರಣೀಯಾನಿ.

ಕುಮಾರಸಂಭವದಲ್ಲಿ ವಟುವಿನ ವೇಷವನ್ನು ಧರಿಸಿದ ಶಿವನಿಗೆ ಪಾರ್ವತಿಯು ಹೇಳುವ ಮಾತಿದು : "ಶಿವನನ್ನು ವರನೆಂದು ಭಾವಿಸಲಿಕ್ಕೆ ಯಾವ ದೋಷವೂ ಇಲ್ಲದಿದ್ದರೂ ನೀನು ಬಹಳ ಶ್ರಮದಿಂದ ಪ್ರಕಟಿಸಿರುವೆ. ಆದರೆ ಹಾಗೆ ಪ್ರಕಟಿಸುವಾಗ ನಿನ್ನ ಹೃದಯವು ಕುಂಟುತ್ತಲಿದೆ. ನೀನು ಏನೇ ಹೇಳಿದರೂ ಶಿವನ ಬಗ್ಗೆ ಒಂದು ಒಳ್ಳೆಯ ಮಾತನ್ನೇ ಆಡಿರುವೆ. ಯಾವ ಶಿವನನ್ನು ಬ್ರಹ್ಮನಿಗೂ ಮೂಲ ಕಾರಣನೆಂದು ಮಹರ್ಷಿಗಳು ತಿಳಿದಿರುವರೋ ಅವನಿಗೆ ಹೇಗೆ ಬೇರೆ ಕಡೆಯಿಂದ ಉತ್ಪತ್ತಿಯು ಸಂಭವಿಸೀತು ? ಆದ್ದರಿಂದ ಅವನಿಗೆ ಉತ್ಪತ್ತಿಯೇ ಕಾಣುವುದಿಲ್ಲವೆಂದು ನೀನು ಹೇಳಿದ್ದು ಸಮಂಜಸವೆನಿಸಿದೆ." ಇಲ್ಲಿ ಶಿವನು ಚತುರ್ಮುಖಬ್ರಹ್ಮನ ಉತ್ಪತ್ತಿಗೂ ಕಾರಣನೆಂಬಲ್ಲಿ ಶ್ರುತಿ ಎನಿಸಿದ ಶಬ್ದಪ್ರಮಾಣವನ್ನು 'ಆಮನಂತಿ' ಇದು ಎಂಬಲ್ಲಿ ಸೂಚಿಸಲಾಗಿದೆ. ಅನುಭವಿಗಳ ಮಾತೇ ಆಪ್ತವಾಕ್ಯವಾದ್ದರಿಂಬ ಶಬ್ದ ಪ್ರಮಾಣವೆನಿಸಿದೆ. ಹೀಗೆ ಶಬ್ದಪ್ರಮಾಣವನ್ನು ಇಲ್ಲಿ ಉದಾಹರಿಸುವುದರಿಂದ ಶಬ್ದ ಪ್ರಮಾಣಾಲಂಕಾರವೆನಿಸಿದೆ. ಹೀಗೆಯೇ ಕೇಳಿದ ಮಾತು, ಪುರಾಣ, ಆಗಮ, ಲೌಕಿಕ ವಾಕ್ಯವೆಂಬ ಶಬ್ದಪ್ರಮಾಣಗಳಿಗೂ ಉದಾಹರಣಗಳನ್ನು ಊಹಿಸಿಕೊಳ್ಳುವುದು. ಹೀಗೆ ಶಬ್ದಪ್ರಮಾಣವನ್ನು ತಿಳಿಸಿ ಅದರಿಂದ ಶಾಬ್ದಬೋಧವೆಂಬ ಜ್ಞಾನವನ್ನು ಹುಟ್ಟಿಸುವುದೇ ಶಬ್ದಪ್ರಮಾಣಾಲಂಕಾರವೆನಿಸುವುದು.

## ೧೧೨. ಸ್ಮೃತ್ಯಲಂಕಾರ

ತತ್ರ ಸ್ಮೃತಿರ್ಯಥಾ—

ಬಲಾತ್ಕುರುತ ಪಾಪಾನಿ ಸಂತು ತಾನ್ಯಕೃತಾನಿ ವಃ ।
ಸರ್ವಾನ್ ಬಲಕೃತಾನರ್ಥಾನಕೃತಾನ್ಮನುರಬ್ರವೀತ್ ॥

ಪೂರ್ವಂ ಶ್ರುತಿರಭಿಮತಾರ್ಥೇ ಪ್ರಮಾಣತ್ವೇನೋಪನ್ಯಸ್ತಾ. ಇಹ ತು ಸ್ಮೃತಿರನಭಿಮತಾರ್ಥೇ ತದ್ದೂಷಣಪರೇಣ ಪ್ರಮಾಣತಯಾ ನೀತೇತಿ ಭೇದಃ. ಆಚಾರಾತ್ಮತುಷ್ಟ್ಯೋರಪಿ ಮೀಮಾಂಸಕೋಕ್ತಧರ್ಮಪ್ರಮಾಣಯೋರ್ವೇದಶಬ್ದಾನುಮಾಪಕತಯಾ ಶಬ್ದಪ್ರಮಾಣ ಏವಾಂತರ್ಭಾವಃ ತತ್ರ ಆಚಾರಪ್ರಮಾಣಂ ಯಥಾ—

ಮಹಾಜನಾಚಾರಪರಂಪರೇದೃಶೀ
ಸ್ವನಾಮ ನಾಮಾದದತೇ ನ ಸಾಧವಃ ।
ಅತೋಽಭಿಧಾತುಂ ನ ತದುತ್ಸಹೇ ಪುನಃ
ಜನಃ ಕಿಲಾಚಾರಮುಚಂ ವಿಗಾಯಂತಿ ॥

ಈಗ ಸ್ಮೃತ್ಯಲಂಕಾರವನ್ನು ಉದಾಹರಿಸುತ್ತಾನೆ. "ನಾಸ್ತಿಕನು ಹೇಳುವ ಈ ಮಾತಿನಲ್ಲಿ ಇದನ್ನು ಕಾಣಬಹುದು. "ಎಲೈ ಜನರೇ, ಬಲಾತ್ಕಾರದಿಂದ ಪಾಪ

ಗಳನ್ನು ಮಾಡಿರಿ. ನೀವು ಮಾಡುವ ಆ ಪಾಪಗಳು ಮಾಡದೇ ಇರುವಂತವೇ ಆಗುತ್ತವೆ. ಬಲಾತ್ಕಾರದಿಂದ ಮಾಡಿದ ಕರ್ಮವು ಮಾಡದೇ ಇದ್ದ ಹಾಗೆಯೇ ಕಾಣುವುದೆಂದು ಮನು ಹೇಳಿದ್ದಾನೆ. ತಾನಾಗಿಯೇ ಸ್ವಬುದ್ಧಿಯಿಂದ ಮಾಡಿದ್ದು ಮಾತ್ರವೇ ತನಗೆ ಅಂಟುತ್ತದೆ. ಬೇರೆ ಯಾವುದೋ ಕಾರಣದಿಂದ ಪ್ರೇರಿತನಾಗಿ ಪಾಪವನ್ನು ಆಚರಿಸಿದರೂ ಅದು ಅಂಟುವುದಿಲ್ಲವೆಂದು ಮನು ಹೇಳಿದ್ದಾನೆ. ಅದನ್ನು ಸ್ಮರಿಸಿಕೊಂಡು ನೀವು ಬಲಾತ್ಕಾರದಿಂದ ಪಾಪಗಳನ್ನು ಮಾಡಿರಿ'' ಎಂದು ಇಲ್ಲಿ ತಿಳಿಸಿದೆ. ಹಿಂದೆ ಶಬ್ದಪ್ರಮಾಣಾಲಂಕಾರದಲ್ಲಿ ಶ್ರುತಿಯನ್ನು ತಮಗೆ ಇಷ್ಟವಾದ ವಿಷಯದಲ್ಲಿ ಪ್ರಮಾಣವೆಂದು ತಿಳಿಸಲಾಯಿತು. ಇಲ್ಲಿಯಾದರೂ ಇಷ್ಟವಲ್ಲದ ವಿಷಯದಲ್ಲಿ ಎಲ್ಲರಿಗೂ ಇಷ್ಟವಾದ್ದನ್ನು ದೂಷಿಸಲಿಕ್ಕಾಗಿ ಸಿದ್ಧನಾಗಿರುವ ನಾಸ್ತಿಕನು ಸ್ಮೃತಿಯನ್ನು ಪ್ರಮಾಣವೆಂದು ಉದಾಹರಿಸುತ್ತಾನೆ. ಇಷ್ಟೇ ಇವೆರಡಕ್ಕೂ ಇರುವ ಭೇದ. ಶಿಷ್ಟಾಚಾರ, ಆತ್ಮಸಂತೋಷ ಇವೆರಡನ್ನೂ ಸಹ ಮೀಮಾಂಸಕರು ಧರ್ಮ ಇತಹದೆಂದು ನಿರ್ಣಯಿಸಲು ಪ್ರಮಾಣವೆಂದು ಒಪ್ಪಿರುವರು. ಅವೂ ಸಹ ವೇದವೆಂಬ ಶಬ್ದಪ್ರಮಾಣವನ್ನು ಅನುಮಾನದಿಂದ ಊಹಿಸುವ ಪ್ರಯುಕ್ತ ಅವುಗಳಲ್ಲಿಯೇ ಅವೆರಡೂ ಸೇರುತ್ತವೆ. ಅವುಗಳಲ್ಲಿ ಒಂದಾದ ಆಚಾರಪ್ರಮಾಣವನ್ನು ಉದಹರಿಸುತ್ತಾನೆ : "ದಮಯಂತಿಗೆ ನಳನು ಹೀಗೆ ಹೇಳುವನು. ನಳನು ಇಂದ್ರಾದಿ ದೇವತೆಗಳ ಕಾರ್ಯಕ್ಕಾಗಿ ಆಕೆಯ ಬಳಿಗೆ ಹೋಗಿ ಅವರನ್ನು ಪ್ರಶಂಸೆಮಾಡುವನು. ಆಗ ಅವನು ಹೀಗೆ ತಿಳಿಸುವನು. ಮಹಾಜನರ ನಡವಳಿಕೆಯೇ ಇತಹದು, ಅವರು ಬೇರೆಯವರಿಗಾಗಿ ಶ್ರಮಿಸುವರೇ ಹೊರತು ತಮ್ಮ ಹೆಸರನ್ನು ಮಾತ್ರ ಹೇಳಿ ಕೊಳ್ಳುವುದಿಲ್ಲ. ಆದ್ದರಿಂದ ನಾನು ಇಂದ್ರಾದಿದೇವತೆಗಳಿಗಾಗಿ ಬಂದು ನನ್ನ ಕೆಲಸ ವನ್ನು ಸಾಧಿಸಿಕೊಳ್ಳಲು ಇಚ್ಛಿಸಲಾರೆ. ನನ್ನ ಹೆಸರನ್ನು ಹೇಳುವುದೂ ಯುಕ್ತವಲ್ಲ. ನಾನು ಆಚಾರವನ್ನು ತೊರೆದರೆ ಜನರು ಮುಂದೆ ನನ್ನನ್ನು ನಿಂದಿಸುವರು.'' ಇಲ್ಲಿ ಮಹಾಜನರ ಆಚರಣಕ್ರಮವೇ ಪ್ರಮಾಣವೆನಿಸಿದೆ ಎಂದು ತಿಳಿಸಲಾಗಿದೆ. ಆದ್ದರಿಂದ ಇದೂ ಒಂದು ಅಲಂಕಾರವೆನಿಸಿದೆ.

## ೧೧೩. ಆತ್ಮತುಷ್ಟಿಪ್ರಮಾಣಾಲಂಕಾರ

ಆತ್ಮತುಷ್ಟಿಪ್ರಮಾಣಂ ಯಥಾ—

ಅಸಂಶಯಂ ಕ್ಷತ್ರಪರಿಗ್ರಹಕ್ಷಮಾ
ಯದಾರ್ಯಮಸ್ಯಾಮಭಿಲಾಷಿ ಮೇ ಮನಃ ।
ಸತಾಂ ಹಿ ಸಂದೇಹಪದೇಷು ವಸ್ತುಷು
ಪ್ರಮಾಣಮಂತಃಕರಣಪ್ರವೃತ್ತಯಃ ॥

ಅತ್ರ ದುಷ್ಯಂತೇನ ಆತ್ಮತುಷ್ಟ್ಯಾ ಶಕುಂತಲಾಪರಿಗ್ರಹಸ್ಯ ಧರ್ಮ್ಯತ್ವಂ

ಶ್ರುತ್ಯನುಮತಂ ಅನುಮೀಯತೇ, ಏವಂ ಶ್ರುತಿಲಿಂಗಾದಿಕಮಪಿ ಮೀಮಾಂಸೋಕ್ತಂ ಪ್ರಮಾಣಂ ಸಂಭವದಿಹೋದಾಹರ್ತವ್ಯಮ್.

ಯಾವುದಾದರೂ ಕಾರ್ಯವನ್ನು ಮಾಡುವಾಗ ಒಂದು ಬಗೆಯ ಸಂಶಯವು ತಲೆದೋರಿದರೆ ಆ ಕಾಲದಲ್ಲಿ ಮನಸ್ಸಿನಲ್ಲಿ ತೋರುವ ಸಂತೋಷವೇ ಎಲ್ಲಿ ಪ್ರಮಾಣವೆನಿಸಿ ಸಂಶಯವನ್ನು ಬಗೆಹರಿಸುವುದಾಗಿ ವರ್ಣಿಸಲಾಗಿದೆಯೋ ಅದು ಆತ್ಮತುಷ್ಟಿ ಪ್ರಮಾಣಾಲಂಕಾರವೆನಿಸಿದೆ. ಯಾವುದಾದರೂ ಸಂಶಯವನ್ನು ಶ್ರುತಿಯ ವಾಕ್ಯದ ಮೂಲಕ ಬಗೆಹರಿಸಿಕೊಳ್ಳುವುದು ಶಬ್ದಪ್ರಮಾಣಾಲಂಕಾರವೆನಿಸಿದಂತೆ ಸ್ಮೃತಿಯಿಂದ ಪರಿಹರಿಸಿಕೊಂಡರೆ ಸ್ಮೃತ್ಯಲಂಕಾರವೆನಿಸಿದಂತೆ. ಒಂದು ಸಂಶಯವನ್ನು ಮನಸ್ಸಮಾಧಾನವೆಂಬ ಪ್ರಮಾಣದಿಂದ ಬಗೆಹರಿಸಿಕೊಳ್ಳುವುದೇ ಆತ್ಮತುಷ್ಟಿ ಪ್ರಮಾಣಾಲಂಕಾರವೆನಿಸುತ್ತದೆ. ಇದನ್ನು ಈಗ ಉದಾಹರಿಸುತ್ತಾನೆ. ಕಣ್ವಋಷಿಗಳ ಆಶ್ರಮದಲ್ಲಿ ಶಕುಂತಲೆಯನ್ನು ನೋಡಿದ ದುಷ್ಯಂತನು ಆಕೆಯ ಸೌಂದರ್ಯವನ್ನು ನೋಡಿ ಆಕೆಯು ಋಷಿಕನ್ಯೆಯಾಗಿರುವ ಬಗ್ಗೆ ಸಂಶಯಪಟ್ಟು ಅದನ್ನು ಹೀಗೆ ಬಗೆಹರಿಸಿಕೊಳ್ಳುವನು. "ಈಕೆಯು ನಿಜವಾಗಿಯೂ ಕ್ಷತ್ರಿಯನಿಗೆ ಸ್ವೀಕರಿಸಲು ಯೋಗ್ಯಳೇ ಇರುವಳು. ( ಈಕೆಯು ಆಶ್ರಮದಲ್ಲಿ ಇದ್ದು ಬೆಳೆಯುತ್ತಿದ್ದರೂ ಸಹ ಕ್ಷತ್ರಿಯನ ಕೈಯನ್ನು ಹಿಡಿಯಲು ಯೋಗ್ಯಳಾಗಿರುವಳು) ಯಾಕೆಂದರೆ ನನ್ನ ಮನಸ್ಸು ನಿರ್ಮಲವೂ ಯೋಗ್ಯವರ್ತನೆಯುಳ್ಳದ್ದೂ ಆಗಿ ಈಕೆಯನ್ನು ಅಪೇಕ್ಷಿಸುತ್ತಲಿದೆ. ಇವಳು ಯೋಗ್ಯಳಾಗಿರದಿದ್ದರೆ ನನ್ನ ಮನಸ್ಸು ಈಕೆಯನ್ನು ಬಯಸುತ್ತಿರಲಿಲ್ಲ. ಲೋಕದಲ್ಲಿ ಇದು ವಾಡಿಕೆ ಎನಿಸಿದೆ. ಸತ್ಪುರುಷರಿಗೆ ಸಂದೇಹ ಬಂದ ಕಡೆಗಳಲ್ಲೆಲ್ಲಾ ಅಂತಃಕರಣದ ಪ್ರವೃತ್ತಿಯೇ ಪ್ರಮಾಣವೆನಿಸುತ್ತದೆ. ಸಂದೇಹಕ್ಕೆ ಎಡೆ ಇರುವ ವಸ್ತುಗಳಲ್ಲಿ ಆ ಸಂದೇಹವನ್ನು ತೊಲಗಿಸಲು ಅಂತಃಕರಣದ ಬಯಕೆಯೇ ಮುಖ್ಯವೆನಿಸಿದೆ.'' ಇಲ್ಲಿ ದುಷ್ಯಂತನಿಗೆ ಶಕುಂತಲೆಯನ್ನು ಪರಿಗ್ರಹಿಸಲು ಮನಸ್ಸಿಗೆ ಸಮಾಧಾನವುಂಟಾದ್ದರಿಂದ ಆ ಕಾರಣದಿಂದಲೇ ಅದು ಧರ್ಮವೆಂದು ಅವನು ತೀರ್ಮಾನಿಸುವುದಾಗಿ ತಿಳಿಸಲಾಗಿದೆ. ಇದು ಶ್ರುತಿಗೂ ಸಮ್ಮತವೆನಿಸಿದೆ. ಹೀಗೆಯೇ ಶ್ರುತಿ ಲಿಂಗ ಮೊದಲಾದ ಬೇರೆ ಪ್ರಮಾಣಗಳನ್ನು ಮೀಮಾಂಸಕರು ಹೇಳಿದ್ದಾರೆ. ಅವಕ್ಕೂ ಸಹ ಉದಾಹರಣೆಗಳನ್ನು ಊಹಿಸಿಕೊಳ್ಳುವುದು.

## ೧೧೪ ಶ್ರುತ್ಯಲಂಕಾರ

ತತ್ರ ಶ್ರುತಿರ್ಯಥಾ—

ತ್ವಂ ಹಿ ನಾಮ್ನೈವ ವರದೋ ನಾಧತ್ಸೇ ವರಮುದ್ರಿಕಾಮ್ ।
ನ ಹಿ ಶ್ರುತಿಪ್ರಸಿದ್ಧಾರ್ಥೇ ಲಿಂಗಮಾದ್ರಿಯತೇ ಬುಧೈಃ ॥

ಅತ್ರ ಕರಗಿರೀಶ್ವರಸ್ಯ ವರದ ಇತ್ಯಭಿಧಾನಶ್ರುತ್ಯಾ ಸರ್ವಾಭಿಲಕ್ಷಿತದಾತೃತ್ವಂ ಸಮರ್ಥಿತಮ್. ಲಿಂಗಂ ಯಥಾ—

ವಿದಿತಂ ವೋ ಯಥಾ ಸ್ವಾರ್ಥಾ ನ ಮೇ ಕಾಶ್ಚಿತ್ಪ್ರವೃತ್ತಯಃ ।
ನನು ಮೂರ್ತಿಭಿರಷ್ಟಾಭಿರಿತ್ಥಭೂತೋಽಸ್ಮಿ ಸೂಚಿತಃ

ಅತ್ರ ಶಿವಸ್ಯ ಶ್ರುತಿಪ್ರಸಿದ್ಧಸರ್ವೋಪಕಾರಕಪೃಥಿವ್ಯಾದ್ಯಷ್ಟಮೂರ್ತಿ-ಪರಿಗ್ರಹಲಿಂಗೇನ ತತ್ಪ್ರವೃತ್ತೀನಾಂ ಲೋಕಾನುಗ್ರಹೈಕಪ್ರಯೋಜನತ್ವಂ ಸಮರ್ಥಿತಮ್. ಲಿಂಗಸ್ಯ ಮೂಲಭೂತವೇದಾನುಮಾಪಕತಯಾ ವೈದಿಕಶಬ್ದಪ್ರಮಾಣ ಏವಾಂತರ್ಭಾವಃ. ಏವಂ ಲೌಕಿಕಲಿಂಗಾನಾಮಪಿ ಲೌಕಿಕ ಶಬ್ದೋನ್ನಾಯಕತಯಾ ಲೌಕಿಕಶಬ್ದಪ್ರಮಾಣ ಏವಾಂತರ್ಭಾವಃ. ಅತಃ.

ಲೋಲದ್ಭ್ರೂಲತಯಾ ವಿಪಕ್ಷದಿಗುಪನ್ಯಾಸೇ ವಿಧೂತಂ ಶಿರಃ
ತದ್ವೃತ್ತಾಂತಪರೀಕ್ಷಣೇಽಕೃತನಮಸ್ಕಾರೋ ವಿಲಕ್ಷ್ಯ ಸ್ಥಿತಃ ।
ಈಷತ್ತಾಮ್ರಕಪೋಲಕಾಂತಿನಿ ಮುಖೇ ದೃಷ್ಟ್ವಾನತಃ ಪಾದಯೋಃ
ಉತ್ಸೃಷ್ಟೋ ಗುರುಸನ್ನಿಧಾವಪಿ ವಿಧಿರ್ದ್ವಾಭ್ಯಾಂ ನ ಕಾಲೋಚಿತಃ ॥

ಇತ್ಯಾದಿಚೇಷ್ಟಾರೂಪಂ ಪ್ರಮಾಣಾಂತರಂ ನಾಶಂಕನೀಯಮ್. ಕ್ವಚಿತ್ ಶಬ್ದಪ್ರಮಾಣಕಲ್ಪನಯಾ ಚಮತ್ಕಾರೋ ಯಥಾ—

ಕಿಮಸುಭಿರ್ಗ್ಲಪಿತೈರ್ಜಡ ಮನ್ಯಸೇ
ಮಯಿ ನಿಮಜ್ಜತು ಭೀಮಸುತಾಮನಃ ।
ಮಮ ಕಿಲ ಶ್ರುತಿಮಾಹ ತದರ್ಥಿಕಾಂ
ನಲಮುಖೇಂದುಪರಾಂ ವಿಬುಧಸ್ಮರಃ ॥

ಅತ್ರ ವಿಪ್ರಿಯಮಾಣಾನಾಂ ಮನಃ ಚಂದ್ರಂ ಪ್ರವಿಶತೀತ್ಯೇತದರ್ಥಿಕಾಯಾಃ ಶ್ರುತೇರ್ನಳಮುಖಚಂದ್ರವಿಷಯತ್ವೇ ಕಲ್ಪಿತೇ ತಥಾ ವ್ಯಾಖ್ಯಾತೃಸ್ಮರವಾಕ್ಯಂ ಪ್ರಮಾಣತಯೋಪನ್ಯಸ್ತಮ್.

ಜನರಾಡುವ ಮಾತನ್ನು ಕೇಳಿ ಅದರ ಆಧಾರದ ಮೇಲೆ ಒಂದು ವಸ್ತುವಿನ ಸ್ವರೂಪವು ಹೀಗೆಯೇ ಇದೆ ಎಂದು ನಿಷ್ಕರ್ಷಿಸುವುದೇ ಶ್ರುತ್ಯಲಂಕಾರವೆನಿಸುತ್ತದೆ. ಅದನ್ನು ಉದಾಹರಿಸುತ್ತಾನೆ. ಕರಿಗಿರಿ ಎಂಬ ದೇವರನ್ನು ಒಬ್ಬ ಭಕ್ತನು ನೋಡಿ ಹೀಗೆ ಹೇಳುತ್ತಾನೆ "ಸ್ವಾಮಿ, ನೀನು ಹೆಸರಿನಿಂದಲೇ ವರದನೆನಿಸಿರುವೆ. ಕೇಳಿದ ಭಕ್ತರಿಗೆ ಅವರವರ ಇಷ್ಟಾರ್ಥಗಳನ್ನು ಕೊಡುತ್ತಿರುವುದರಿಂದ ನಿನಗೆ ಹಾಗೆ ಹೆಸರು ಸಹಜವೆನಿಸಿದೆ. ಆದ್ದರಿಂದಲೇ ನೀನು ವರಮುದ್ರೆಯನ್ನು ಧರಿಸಿಲ್ಲ. ನೀನು ಎಲ್ಲರಿಗೂ

ಎಲ್ಲವನ್ನೂ ಕೊಡುತ್ತೀಯೆ ಎಂಬ ಮಾತು ಎಲ್ಲರ ಬಾಯಿಂದಲೂ ಬರುತ್ತಲಿದೆ. ಈ ಮಾತನ್ನು ಕೇಳಿದ ಮೇಲೆ ನಿನ್ನ ಬಗ್ಗೆ ಯಾರಿಗೂ ಸಂಶಯವೇ ಬರುವಂತಿಲ್ಲ. ಹೀಗೆ ಕೇಳಿದ್ದರಿಂದಲೇ ಸಿದ್ಧವಾಗಿರುವ ಈ ವಿಷಯದಲ್ಲಿ ವಿದ್ವಾಂಸರು ಬೇರೆ ಪ್ರಮಾಣವನ್ನು ಹುಡುಕಲಿಕ್ಕೇ ಹೋಗುವುದಿಲ್ಲ." ಹೀಗೆ ಇಲ್ಲಿ ಕರಿಗಿರೀಶ್ವರನಿಗೆ ವರದನೆಂಬ ಹೆಸರು ಎಲ್ಲೆಲ್ಲಿಯೂ ಕೇಳಿಬರುವ ಜನರಾಡುವ ಮಾತಿನಿಂದಲೇ ಅನ್ವಯಿಸುವುದೆಂದು ಸಮರ್ಥಿಸಲಾಗಿದೆ. ಲಿಂಗದಿಂದ ಒಂದು ವಸ್ತುವಿನ ಸ್ವರೂಪವನ್ನು ನಿರ್ಣಯಿಸುವುದನ್ನು ಈಗ ಉದಾಹರಿಸುತ್ತಾನೆ: "ನನಗೆ ಈ ಬಗ್ಗೆ ಸ್ವಾರ್ಥವನ್ನು ಸಾಧಿಸುವ ಪ್ರವೃತ್ತಿಯು ಯಾವುದೂ ಇಲ್ಲವೆಂಬ ಅಂಶವು ನಿಮಗೆ ತಿಳಿದೇ ಇದೆ. ನನ್ನ ಅಷ್ಟ ಮೂರ್ತಿಗಳೆಲ್ಲವೂ ಪರಹಿತಾರ್ಥವಾಗಿಯೇ ಪ್ರವರ್ತಿಸುವುದರಿಂದ ನಾನು ಲೋಕಕಲ್ಯಾಣಕ್ಕಾಗಿಯೇ ಇರುವೆನೆಂಬ ಅಂಶವು ಸೂಚಿತವಾಗುತ್ತದೆ." ಇಲ್ಲಿ ಶಿವನಿಗೆ ನೆಲ, ನೀರು, ಬೆಂಕಿ, ಗಾಳಿ, ಬಯಲು, ಸೂರ್ಯ, ಚಂದ್ರ, ಅಹಂಕಾರ ಈ ಎಂಟು ಪ್ರಕೃತಿಗಳು ಶರೀರಗಳೆನಿಸಿವೆ ಎಂಬುದು ವೇದವೇ ಮೊದಲಾದ ಪ್ರಮಾಣಗಳಲ್ಲಿ ಸಿದ್ಧವಾಗಿವೆ. ಇವುಗಳಿಂದ ಅವನಿಗೆ ಯಾವ ಪ್ರಯೋಜನವೂ ಆಗಬೇಕಾಗಿಲ್ಲ. ಇವೆಲ್ಲವೂ ಲೋಕಕ್ಕೆ ಪ್ರಯೋಜನಕಾರಿಯೇ ಆಗಿವೆ. ಇಂತಹ ಪರೋಪಕಾರಿ ಎನಿಸಿದ ದೇಹವು ಅವನಿಗೆ ಇದೆ ಎಂಬ ಹೇತುವಿನಿಂದ ಅವನ ಪ್ರವೃತ್ತಿಗಳೆಲ್ಲಕ್ಕೂ ಲೋಕಸಂಗ್ರಹ ಒಂದೇ ಪ್ರಯೋಜನವೆನಿಸಿದೆ ಎಂಬ ಅಂಶವನ್ನು ಇಲ್ಲಿ ಸಮರ್ಥಿಸಲಾಗಿದೆ. ಇಲ್ಲಿ ಹೇಳಿರುವ ಲಿಂಗವು ಮೂಲವೆನಿಸಿದ ವೇದವನ್ನು ಊಹಿಸಲು ಕಾರಣವೆನಿಸಿದ್ದರಿಂದ ಇದು ವೈದಿಕ ಶಬ್ದವೆಂಬ ಪ್ರಮಾಣದಲ್ಲಿಯೇ ಸೇರಲಿದೆ. ಆದ್ದರಿಂದಲೇ ಚೇಷ್ಟೆ ಮೊದಲಾದವನ್ನು ಪ್ರಮಾಣವೆಂದು ಅಂಗೀಕರಿಸಿಲ್ಲ. ಅದನ್ನು ಮುಂದೆ ಉದಾಹರಿಸುತ್ತಾನೆ: "ಹಿರಿಯರ ಸನ್ನಿಧಿಯಲ್ಲೂ ನಾಯಕನಾಯಿಕೆಯರಿಬ್ಬರೂ ಸಮಯೋಚಿತವಾದ ರೀತಿಯನ್ನು ತೋರಿಯಲಿಲ್ಲವೆಂಬುದನ್ನು ಇಲ್ಲಿ ತಿಳಿಸುತ್ತಾನೆ. ಹುಬ್ಬುಗಳ ಚಲನೆಯಿಂದ ಕಂಗೊಳಿಸುತ್ತಿರುವ ನಾಯಿಕೆಯು ನನ್ನ ಸವತಿಯರ ಬಳಿಗೆ ನೀನು ಹೋಗಿ ಅಲ್ಲಿಂದ ಈಗ ಬಂದಿರುವೆ ಎಂದು ಸೂಚಿಸಿದರೂ ಸಹ ನಾಯಕನು ತಾನು ಅಲ್ಲಿಗೆ ಹೋಗಿಲ್ಲವೆಂಬುದನ್ನು ಸೂಚಿಸಲಿಕ್ಕಾಗಿ ತನ್ನ ತಲೆಯನ್ನು ಅಲ್ಲಾಡಿಸಿದನು. ನಾಯಿಕೆಯು ಆ ಸವತಿಯ ಸಮಾಚಾರವನ್ನು ಪರೀಕ್ಷಿಸಲಾಗಿ ನಾಯಕನು ಅದಕ್ಕೆ ತಲೆಯನ್ನು ಬಗ್ಗಿಸದೆ ಅವಳು ಹೇಳಿದ್ದನ್ನು ಗಮನಿಸದಂತೆಯೇ ನಿಂತನು. ಆಗ ನಾಯಿಕೆಯ ಮುಖವು ಕಿವಿಯ ಹತ್ತಿರ ಸ್ವಲ್ಪ ಕೆಂಪೇರಲು (ಆಕೆಗೆ ಕೋಪವುಂಟಾಗಲು) ಅವನ ಪಾದವನ್ನು ದೃಷ್ಟಿಸಿ ನೋಡುವ ಮೂಲಕವೇ ನಾಯಕನು ಅವಳಿಗೆ ನಮಸ್ಕರಿಸಿದನು." ಹೀಗೆ ಮನೆಯಲ್ಲಿ ಅತ್ತೆಮಾವಂದಿರ ಎದುರಿಗೆ ನಾಯಕನು ಕೋಪಗೊಂಡ ನಾಯಿಕೆಗೆ ಯಾವ ಉತ್ತರವನ್ನೂ ಬಾಯಿಂದ ಹೇಳದೆಯೇ ತನ್ನ ಚೇಷ್ಟೆಯಿಂದಲೇ ಆಕೆಯನ್ನು ಸಮಾಧಾನಮಾಡುವುದಾಗಿ ಇಲ್ಲಿ

ತಿಳಿಸಿದೆ, ಇದನ್ನು ಒಂದು ಪ್ರಮಾಣವೆಂದು ಊಹಿಸಬಾರದು. ಕೆಲವು ಕಡೆ ಕಲ್ಪಿತ ಶ್ರುತಿಯೇ ಪ್ರಮಾಣವೆನಿಸುತ್ತದೆ. ಅದನ್ನು ಮುಂದೆ ಉದಾಹರಿಸುತ್ತಾನೆ. ದಮಯಂತಿಯು ಚಂದ್ರನನ್ನು ನಿಂದಿಸುವಾಗ ಹೀಗೆ ಹೇಳುತ್ತಾಳೆ, "ಎಲೈ ಜಡ ಸ್ವರೂಪನಾದ ಚಂದ್ರನೇ, ಈ ನನ್ನ ಪ್ರಾಣವನ್ನು ಇಷ್ಟೊಂದು ವ್ಯಥೆಗೆ ಸಿಕ್ಕಿಸಿದ್ದ ರಿಂದ ನಿನಗೆ ಆಗುವ ಲಾಭವೇನು ? ಪ್ರಾಣವು ಹೋದಮೇಲಾದರೂ ಈ ದಮ ಯಂತಿಯ ಮನಸ್ಸು ನಿನ್ನಲ್ಲಿ ಸೇರುವುದೆಂದು ನೀನು ತಿಳಿದಿರುವೆಯೋ ? ದೇಹವನ್ನು ತೊರೆದ ಜೀವವು ಚಂದ್ರಲೋಕದ ಮೂಲಕ ಮುಂದೆ ಪ್ರಯಾಣಮಾಡುವುದೆಂದು ಶ್ರುತಿಯು ತಿಳಿಸಿದೆಯಾದ್ದರಿಂದ ಆಗಲಾದರೂ ಈ ಮನಸ್ಸು ನಿನ್ನಲ್ಲಿಗೆ ಬರುವುದೆಂದು ನೀನು ತಿಳಿದಿರುವೆಯೋ ? ವಿದ್ವಾಂಸನೆನಿಸಿದ ಮನ್ಮಥನು ನನಗಾಗಿ ಬೇರೊಬ್ಬ ಚಂದ್ರನನ್ನು ನಿರ್ಮಿಸಿರುವನು. ನನ್ನ ಪ್ರಾಣವು ಹೋಗುವುದಾದರೆ ಆಗ ಆ ಚಂದ್ರ ನಲ್ಲಿಗೆ ಹೋಗುವುದೇ ಹೊರತು ನಿನ್ನಲ್ಲಿಗೆ ಎಂದಿಗೂ ಬರುವುದಿಲ್ಲ, ತಿಳಿದುಕೋ. ನಳನ ಮುಖವೇ ಆ ಚಂದ್ರ, ಸತ್ತವರು ಚಂದ್ರಲೋಕಕ್ಕೆ ಹೋಗಬೇಕೆಂಬ ಶ್ರುತಿಗೆ ನಳಮುಖಚಂದ್ರನಲ್ಲಿಗೆ ಹೋಗಬೇಕೆಂಬುವೇ ಅರ್ಥವೆಂದು ಮನ್ಮಥನು ಹೇಳಿ ದ್ದಾನೆ." ಹೀಗೆ ಇಂತಹ ವಿದ್ವಾಂಸನು ಹೇಳಿದ್ದೇ ಪ್ರಮಾಣವೆಂದು ಇಲ್ಲಿ ಶ್ರುತಿ ಯನ್ನು ಕಲ್ಪಿಸಲಾಗಿದೆ. ಇಲ್ಲಿ ಸತ್ತವರ ಮನಸ್ಸು ಚಂದ್ರನನ್ನು ಪ್ರವೇಶಿಸುವು ದೆಂದು ತಿಳಿಸುವ ಶ್ರುತಿಗೆ ನಳಮುಖಚಂದ್ರನೇ ಅರ್ಥವೆಂದು ಕಲ್ಪಿಸಲಾಗಿದೆ. ಆದ್ದರಿಂದ ಮನ್ಮಥನ ವಾಕ್ಯವೇ ಇಲ್ಲಿ ಪ್ರಮಾಣವೆಂದು ಅಂಗೀಕರಿಸಲಾಗಿದೆ.

## ೧೧೫. ಅರ್ಥಾಪತ್ತ್ಯಲಂಕಾರ

ಅರ್ಥಾಪತ್ತಿರ್ಯಥಾ—

ನಿರ್ಣೇತುಂ ಶಕ್ಯಮಸ್ತೀತಿ ಮಧ್ಯಂ ತವ ನಿತಂಬಿನಿ ।
ಅನ್ಯಥಾ ನೋಪಪದ್ಯೇತ ಪಯೋಧರಭರಸ್ಥಿತಿಃ ॥

ಯಥಾ ವಾ—

ವ್ಯಕ್ತಂ ಬಲೀಯಾನ್ಯದಿ ಹೇತುರಾಗಮಾತ್
ಅಪೂರಯತ್ಸಾ ಜಲಧಿಂ ನ ಜಾಹ್ನವೀ ।
ಗಂಗೌಘನಿರ್ಭರ್ತ್ಸಿತಶಂಭುಕಂಧರಾ
ಸವರ್ಣಮರ್ಣಃ ಕಥಮನ್ಯಥಾ ಸ್ಯಾತ್ ॥

"ಎಲೈ ಪ್ರೇಯಸಿಯೇ, ನಿನಗೆ ಸೊಂಟವಿದೆ ಎಂಬುದನ್ನು ನಿರ್ಣಯಿಸಲಿಕ್ಕೆ ಸಾಧ್ಯವಿದೆ. ಅದು ಇಲ್ಲದೇ ಹೋಗಿದ್ದರೆ ನಿನಗೆ ಈ ಸ್ತನಗಳ ಹೊರೆಯನ್ನು ಹೊತ್ತಿರುವ ಸ್ಥಿತಿಯೇ ಹೊಂದಿಕೆಯಾಗುತ್ತಿರಲಿಲ್ಲ." ನಿನಗೆ ಮಧ್ಯಪ್ರದೇಶವು

ಭಹು ಸೂಕ್ಷ್ಮವಾಗಿರುವುದರಿಂದ ಅದು ಇದೆಯೋ ಇಲ್ಲವೋ ಎಂಬುದು ಚೆನ್ನಾಗಿ ತಿಳಿಯುವುದಿಲ್ಲ. ಆದರೂ ಅದು ಸ್ತನಗಳ ಭಾರವನ್ನು ಹೊತ್ತಿರುವುದರಿಂದ ಇದಕ್ಕೆ ಆಧಾರವಾಗಿ ಅದು ಇರಲೇಬೇಕೆಂದು ಇಲ್ಲಿ ತಿಳಿದುಬರುತ್ತದೆ. ಸ್ತನಗಳನ್ನು ಹೊರಲು ಒಂದು ಆಶ್ರಯವು ಬೇಕಾಗಿರುವುದರಿಂದ ಸೊಂಟವಿದೆ ಎಂಬ ಅರ್ಥವು ಸಹಜವಾಗಿ ತಿಳಿದುಬರುವುದು. ಆದ್ದರಿಂದ ಇದು ಅರ್ಥಾಪತ್ತ್ಯಲಂಕಾರವೆನಿಸಿದೆ. ಇದಕ್ಕೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. "ತರ್ಕವು ಶಬ್ದಪ್ರಮಾಣವೆನಿಸಿದ ವೇದಾಗಮಗಳಿಗಿಂತಲೂ ಬಲಿಷ್ಠವೆನಿಸಿದ್ದರೆ ಆಗ ಆ ದೇವಗಂಗೆಯು ಸಮುದ್ರವನ್ನು ಸೇರಲಿಲ್ಲವೆಂದು ತಿಳಿಯುತ್ತೇನೆ. ಹಾಗೆ ಸೇರಿದ್ದರೆ ಸಮುದ್ರದ ನೀರು ಗಂಗಾಪ್ರವಾಹದಿಂದ ತಿರಸ್ಕೃತವಾಗಿ ಈಶ್ವರನ ಕುತ್ತಿಗೆಗೆ ಸಮಾನವಾದ ವರ್ಣವುಳ್ಳದ್ದಾಗಬೇಕಾಗಿತ್ತು." ಗಂಗಾನದಿಯು ಎಲ್ಲಾ ನದಿಗಳಂತೆ ಸಮುದ್ರವನ್ನು ಸೇರಬೇಕೆಂಬುದು 'ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ ಗಚ್ಛಂತಿ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಆದರೆ ಕೆಲವು ವೇಳೆ ಈ ಶ್ರುತಿಗಿಂತಲೂ ತರ್ಕವು ಹೆಚ್ಚೆನಿಸುತ್ತದೆ. ಇಲ್ಲಿ ಗಂಗೆಯು ಸಮುದ್ರವನ್ನು ಪ್ರವೇಶಿಸಿದ್ದರೆ ಅದರ ನೀರಿನಲ್ಲಿ ಗಂಗೆಯ ಸಂಪರ್ಕದಿಂದ ಬಣ್ಣವು ಬದಲಾಯಿಸಬೇಕಾಗಿತ್ತು. ಆದರೆ ಸಮುದ್ರದಲ್ಲಿ ಎಂದಿನಂತೆ ಬಣ್ಣವಿದ್ದು ಬದಲಾವಣೆಯಿಲ್ಲದ್ದರಿಂದ ಗಂಗೆಯು ಸಮುದ್ರವನ್ನು ಸೇರಲಿಲ್ಲವೆಂಬ ಅರ್ಥವು ಸಿದ್ಧಿಸುತ್ತದೆ. ಆದ್ದರಿಂದ ಇದು ಅರ್ಥಾಪತ್ತ್ಯಲಂಕಾರವೆನಿಸಿದೆ.

## ೧೧೬. ಅನುಪಲಬ್ಧ್ಯಲಂಕಾರ

ಅನುಪಲಬ್ಧಿರ್ಯಥಾ—

ಸ್ಫುಟಮಸದವಲಗ್ನಂ ತನ್ವಿ ನಿಶ್ಚಿನ್ವತೇ ತೇ
ತದನುಪಲಭಮಾನಾಸ್ತರ್ಕಯಂತೋಽಪಿ ಲೋಕಾಃ ।
ಕುಚಗಿರಿವರಯುಗ್ಮಂ ಯದ್ವಿನಾಧಾರಮಾಸ್ತೇ
ತದಿಹ ಮಕರಕೇತೋರಿಂದ್ರಜಾಲಂ ಪ್ರತೀಮಃ ॥

"ಎಲೈ ಪ್ರೇಯಿಸಿಯೇ. ಆಲೋಚನೆಮಾಡುವ ಜನರೂ ಸಹ 'ನಿನಗೆ ಸೊಂಟವಿದೆ' ಎಂಬುದನ್ನು ಕಾಣದವರಾಗಿ 'ನಿನಗೆ ಸೊಂಟವೇ ಇಲ್ಲ'ವೆಂದು ಸ್ಪಷ್ಟವಾಗಿ ನಿಶ್ಚಯಿಸುತ್ತಾರೆ. ಶ್ರೇಷ್ಠವಾದ ಪರ್ವತಗಳೆನಿಸಿರುವ ಈ ಸ್ತನಗಳೆರಡು ಆಧಾರವಿಲ್ಲದೆಯೇ ನಿನ್ನಲ್ಲಿ ಸೇರಿಕೊಂಡಿವೆ ಎಂಬುದು ಮನ್ಮಥನ ಇಂದ್ರಜಾಲವಿದ್ಯೆ ಎಂದು ನಾವು ತಿಳಿಯುತ್ತೇವೆ." ಇಲ್ಲಿ ಜನರು ಎಷ್ಟು ವಿಚಾರಮಾಡಿ ನೋಡಿದರೂ ಪ್ರೇಯಸಿಯ ಸೊಂಟವೇ ಕಾಣುತ್ತಿಲ್ಲವೆಂದು ತಿಳಿಸಿದ್ದು ಅನುಪಲಬ್ಧಿಪ್ರಮಾಣ

ವೆನಿಸಿದೆ. ಹೀಗೆ ಎಷ್ಟು ಆಲೋಚನೆಮಾಡಿ ಪರೀಕ್ಷಿಸಿದರೂ ಯಾವುದಾದರೊಂದು ವಸ್ತುವು ಇಲ್ಲವೆಂದು ನಿರ್ಣಯಿಸುವುವೇ ಅನುಪಲಬ್ಧ್ಯಲಂಕಾರವೆನಿಸುವುದು.

## ೧೧೭. ಸಂಭವಾಲಂಕಾರ

ಸಂಭವೋ ಯಥಾ—

ಅಭೂತಪೂರ್ವಂ ಮಮ ಭಾವಿ ಕಿಂ ವಾ
ಸರ್ವಂ ಸಹೇ ಮೇ ಸಹಜಂ ಹಿ ದುಃಖಮ್ ।
ಕಿಂ ತು ತ್ವದಗ್ರೇ ಶರಣಾಗತಾನಾಂ
ಪರಾಭವೋ ನಾಮ ನ ತೇಽನುರೂಪಃ ॥

ಯಥಾ ವಾ—

ಯೇ ನೇಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಃ
ಜಾನಂತಿ ತೇ ಕಿಮಪಿ ತಾನ್ಪ್ರತಿ ನೈಷ ಯತ್ನಃ ।
ಉತ್ಪತ್ಸ್ಯತೇಽಸ್ತಿ ಮಮ ಕೋಽಪಿ ಸಮಾನಧರ್ಮಾ
ಕಾಲೋ ಹ್ಯಯಂ ನಿರವಧಿರ್ವಿಪುಲಾ ಚ ಪೃಥ್ವೀ ॥

ಭ್ರಾತಃ ಪಾಂಥ ಕುತೋ ಭವಾನ್ನಗರತೋ ವಾರ್ತಾ ನ ವಾ ವರ್ತತೇ
ಬಾಢಂ ಬ್ರೂಹಿ ಯುವಾ ಪಯೋದಸಮಯೇ ತ್ಯಕ್ತ್ವಾ ಪ್ರಿಯಾಂ ಜೀವತಿ ।
ಸತ್ಯಂ ಜೀವತಿ ಜೀವತೀತಿ ಕಥಿತಾ ವಾರ್ತಾ ಮಯಾಪಿ ಶ್ರುತಾ
ವಿಸ್ತೀರ್ಣಾ ಪೃಥಿವೀ ಜನೋಽಪಿ ವಿವಿಧಃ ಕಿಂ ಕಿಂ ನ ಸಂಭಾವ್ಯತೇ ॥

ಅತ್ರ ಆದ್ಯೋದಾಹರಣೇ 'ಅಭೂತಪೂರ್ವಂ ಮಮ ಭಾವಿ ಕಿಂ ವಾ' ಇತಿ ಸಂಭವಪ್ರಮಾಣಸಿದ್ಧಾರ್ಥೋ ದರ್ಶಿತಃ. ದ್ವಿತೀಯೋದಾಹರಣೇ ಸಂಭವೋಪಪಾದಕೇ ಕಾಲನಂತ್ಯಾದಿಕಮಪಿ ದರ್ಶಿತಮ್. ತೃತೀಯೋದಾಹರಣೇ ತು ಸಂಭವೋಽಪಿ ಕಂಠೋಕ್ತ ಇತಿ ಭೇದಃ.

ಈಶ್ವರನಿಗೆ ಒಬ್ಬ ಭಕ್ತನು ಹೀಗೆ ಹೇಳುತ್ತಾನೆ, "ಸ್ವಾಮಿ, ನನಗೆ ಹಿಂದೆ ಯಾವಾಗಲೂ ಬರದೇ ಇದ್ದು, ಮುಂದೆಯೂ ಬರಲಾರದಂತಹ ದುಃಖವೇ ನನಗೆ ಬರಲಿ, ಅಂತಹ ದುಃಖವೆಲ್ಲವನ್ನೂ ನಾನು ಸಹಿಸಿಕೊಳ್ಳುವೆನು. ದುಃಖವೇ ನನ್ನ ಸ್ವಭಾವವೆನಿಸಿದೆ. ಆ ಬಗ್ಗೆ ನನಗೆ ಚಿಂತೆಯಿಲ್ಲ, ಆದರೆ ನಿನ್ನ ಎದುರಿಗೆ ಶರಣಾಗತರಾದವರಿಗೆ ಅವಮಾನವಾಗುವುದಾದರೆ ಅದು ನಿನಗೆ ಹೊಂದುವುದಿಲ್ಲ, ಇದು ನನಗೆ ಹೆಚ್ಚಿನ ದುಃಖವನ್ನು ಕೊಡುತ್ತದೆ. ಅದನ್ನು ನಾನು ಸಹಿಸಲಾರೆ. ಅಲ್ಲಿ ದುಃಖವು

ಸಂಭವಿಸುವುದೆಂಬುದು ಸಂಭವವೆಂಬ ಪ್ರಮಾಣದಿಂದ ಸಿದ್ಧಿಸುವುದೆಂದು ತಿಳಿಸಲಾಗಿದೆ. ಇದಕ್ಕೆ ಎರಡನೆಯ ಉದಾಹರಣವನ್ನು ಈಗ ತಿಳಿಸುತ್ತಾನೆ. ಇದು ಭವಭೂತಿಯ ಮಾತು.'' ಯಾವ ಕೆಲವರು ನನಗೆ ಇಲ್ಲಿ ಅವಮಾನಮಾಡಬೇಕೆಂದಿರುವರೋ ಅವರು ಏನನ್ನೂ ತಿಳಿಯರಾದ್ದರಿಂದ ಅವರನ್ನು ಉದ್ದೇಶಿಸಿ ನಾನು ಈ ಗ್ರಂಥವನ್ನು ಬರೆಯಲು ಪ್ರಯತ್ನಿಸಿಲ್ಲ. ಈ ಗ್ರಂಥವನ್ನು ಪುರಸ್ಕರಿಸಲು ನನಗೆ ಸದೃಶರಾದವರು ಮುಂದೆ ಯಾರಾದರೂ ಹುಟ್ಟುವರು ಅಥವಾ ಅಂತವರು ಯಾರಾದರೂ ಈಗಲೂ ಇದ್ದೇ ಇರುವರು. ಅಂತವರನ್ನು ಉದ್ದೇಶಿಸಿಯೇ ಈ ಪ್ರಯತ್ನವು ನಡೆದಿದೆ. ಕಾಲವೂ ವಿಶಾಲವೆನಿಸಿದೆ. ಅದಕ್ಕೆ ಕೊನೆಯೇ ಇಲ್ಲ. ಭೂಮಿಯೂ ವಿಸ್ತಾರವಾಗಿದೆ, ಆದ್ದರಿಂದ ಎಲ್ಲಿಯಾದರೂ ಯಾವಾಗಲಾದರೂ ನನ್ನ ಗ್ರಂಥವನ್ನು ಪುರಸ್ಕರಿಸುವವರು ಹುಟ್ಟಬಹುದು.'' ಇಲ್ಲಿ ಕಾಲಕ್ಕೆ ಅವಧಿಯಿಲ್ಲದ್ದರಿಂದ ಯಾರಾದರೂ ಹುಟ್ಟುವ ಸಂಭವವಿದೆಯೆಂದು ತಿಳಿಸಿದ ಪ್ರಯುಕ್ತ ಇದು ಸಂಭವಾಲಂಕಾರಕ್ಕೆ ಉದಾಹರಣವೆನಿಸಿದೆ. ಇದಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. ಪಥಿಕನಿಗೆ ಒಬ್ಬ ಹಳ್ಳಿಯವನು ಹೀಗೆ ಪ್ರಶ್ನೆ ಮಾಡುತ್ತಾನೆ. ''ಅಯ್ಯಾ ಪಥಿಕಸೋದರನೇ, ನೀನು ಎಲ್ಲಿಂದ ಬರುತ್ತಿರುವೆ ? ನಗರದಿಂದ ಬರುವೆನು ಎಂದು ಅವನು ಉತ್ತರವನ್ನು ಕೊಡುವನು. 'ಅಲ್ಲಿ ಏನೂ ಸಮಾಚಾರವಿಲ್ಲವೇ' ಎಂದು ಮತ್ತೆ ಪ್ರಶ್ನೆ ಮಾಡುವನು. ಇದೆ ; ಸಮಾಚಾರವಿದೆ' ಎಂದು ಉತ್ತರ ಬರುವುದು. ಒಳ್ಳೆಯದು, ಅದನ್ನು ಹೇಳು' ಎಂದು ಮತ್ತೆ ಪ್ರಶ್ನೆ ಹೊರಡುವುದು. 'ಯುವಕನು ವೇಘೋದಯಕಾಲದಲ್ಲಿ ಪ್ರಿಯೆಯನ್ನು ಬಿಟ್ಟು ಬಾಳುತ್ತಿರುವನು' ಎಂದು ಉತ್ತರವು ಬರುವುದು. ''ಅವನು ನಿಜವಾಗಿಯೂ ಬದುಕಿರುವನೇ'' ಎಂದು ಮತ್ತೆ ಪ್ರಶ್ನೆ ಹೇಳುವುದು. 'ಬದುಕಿರುವನೆಂದು ಸಮಾಚಾರವು ಹರಡಿದೆ. ನಾನು ಹಾಗೆ ಕೇಳಿದೆನು. ಈ ಭೂಮಿಯೂ ವಿಶಾಲವಾಗಿದೆ. ಜನರೂ ಅನೇಕ ಬಗೆಯಾಗಿರುವರು. ಇಲ್ಲಿ ಯಾವ ಕಾಲದಲ್ಲಿ ಯಾವುದು ತಾನೆ ಆಗುವುದಿಲ್ಲ?'' ಯಾವ ಕಾಲದಲ್ಲಿ ಯಾವುದಾದರೂ ಸಂಭವಿಸಬಹುದೆಂದು ಹೇಳಿದ್ದರಿಂದ ಸಂಭವ ಪ್ರಮಾಣವನ್ನು ಇಲ್ಲಿ ಒಪ್ಪಿಕೊಳ್ಳಲಾಗಿದೆ. ಆದೇ ಇಲ್ಲಿ ಸ್ವಾರಸ್ಯವಾಗಿರುವದರಿಂದ ಮೊದಲನೆಯ ಉದಾಹರಣದಲ್ಲಿ 'ಹಿಂದೆ ಇಲ್ಲದ್ದು, ಮುಂದೆ ಸಂಭವಿಸದೇ ಇರುವಂತಹದು, ಯಾವುದಾದರೂ ಆಗಲಿ ಎಂದು ಹೇಳಿದ್ದರಿಂದ ಅಲ್ಲಿ ಸಂಭವ ಪ್ರಮಾಣದಿಂದ ತೋರುವ ಅರ್ಥವನ್ನೇ ತಿಳಿಸಲಾಗಿದೆ. ಎರಡನೆಯ ಉದಾಹರಣದಲ್ಲಿ ಯಾರಾದರೂ ಸಂಭವಿಸಬಹುದೆಂದು ಹೇಳಿದ್ದರಿಂದ ಅಲ್ಲಿ ಸಂಭವವನ್ನು ತಿಳಿಸಲು ಅನುಕೂಲವಾಗುವಂತೆ ಕಾಲವು ಅನಂತವೆಂಬುದನ್ನು ತಿಳಿಸಲಾಗಿದೆ. ಮೂರನೆಯ ಉದಾಹರಣದಲ್ಲಿಯಾದರೋ ''ಯಾವುದು ತಾನೇ ಸಂಭವಿಸುವುದಿಲ್ಲ'' ವೆಂದು ಸಂಭವವನ್ನು ಶಬ್ದದಿಂದಲೇ ತಿಳಿಸಲಾಗಿದೆ. ಈ ಮೂರು ಉದಾಹರಣಗಳಲ್ಲೂ ಇರುವ ಭೇದವಿಷ್ಟೇ.

# ೧೧೮. ಐತಿಹ್ಯಾಲಂಕಾರ

ಐತಿಹ್ಯಂ ಯಥಾ—

ಕಲ್ಯಾಣೀ ಬತ ಗಾಥೇಯಂ ಲೌಕಿಕೀ ಪ್ರತಿಭಾತಿ ಮೇ ।
ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ ॥

ಅತ್ರ 'ಲೌಕಿಕೀ ಗಾಥೇಯ'ಮಿತ್ಯನಿರ್ದಿಷ್ಟಪ್ರವಕ್ತೃಕಪ್ರವಾದಪಾರಂಪರ್ಯರೂಪತಾ ದರ್ಶಿತಾ.

ಐತಿಹ್ಯಾಲಂಕಾರವನ್ನು ಉದಾಹರಿಸುತ್ತಾನೆ. ಲೋಕದಲ್ಲಿ ಇದೊಂದು ಒಳ್ಳೆಯ ಗಾದೆಯ ಮಾತು ಹರಡಿರುವುದಾಗಿ ನನಗೆ ತೋರುತ್ತದೆ. "ಬದುಕಿರುವವನಿಗೆ ನೂರು ವರ್ಷಗಳು ಕಳೆದಮೇಲಾದರೂ ಒಮ್ಮೆ ಆನಂದವು ಬಂದೇ ಬರುವುದು" ಇದು ಲೋಕದಲ್ಲಿ ಹರಡಿರುವ ಗಾದೆ ಎಂದು ಹೇಳಿದ್ದರಿಂದ ಇಂತವರೇ ಇದನ್ನು ಹೇಳಿದರು, ಇಂತಹವರೇ ಹರಡಿದರು ಎಂದು ಹೇಳಲಿಕ್ಕೆ ಬರುವಂತಿಲ್ಲ. ಹೀಗೆ ಜನರು ಆಡಿಕೊಳ್ಳುತ್ತಿರುವ ಮಾತು ಒಬ್ಬರಿಂದೊಬ್ಬರಿಗೆ ವ್ಯಾಪಿಸಿ ಈವರಿವಿಗೂ ಕಂಡುಬಂದಿದೆ ಎಂಬುದನ್ನು ಇಲ್ಲಿ ತಿಳಿಸಿರುವುದರಿಂದ ಇದು ಐತಿಹ್ಯಾಲಂಕಾರವೆನಿಸಿದೆ.

ಅಥೈತೇಷಾಂ ಅಲಂಕಾರಾಣಾಂ ಯಥಾಸಂಭವಂ ಕ್ವಚಿನ್ಮೇಲನೇ ಲೌಕಿಕಾಲಂಕಾರಾಣಾಂ ಮೇಲನ ಇವ ಚಾರುತಾತಿಶಯೋಪಲಂಭಾತ್ ನರಸಿಂಹನ್ಯಾಯೇನ ಪೃಥಗಲಂಕಾರಾವಸ್ಥಿತೌ, ತನ್ನಿರ್ಣಯಃ ಕ್ರಿಯತೇ. ತತ್ರ ತಿಲತುಂಡುಲನ್ಯಾಯೇನ ಸ್ಫುಟಾವಗಮ್ಯಭೇದಾಲಂಕಾರಮೇಲನೇ ಸಂಸೃಷ್ಟಿಃ. ನೀರಕ್ಷೀರನ್ಯಾಯೇನ ಅಸ್ಫುಟಭೇದಾಲಂಕಾರಮೇಲನೇ ಸಂಕರಃ. ಸ ಚ ಅಂಗಾಂಗಿಭಾವೇನ, ಸಮಪ್ರಾಧಾನ್ಯೇನ, ಸಂದೇಹೇನ, ಏಕವಾಚಕಾನುಪ್ರವೇಶೇನ ಚತುರ್ವಿಧಃ. ಏವಂ ನೃಸಿಂಹಾಕಾರಾಃ ಪಂಚಾಲಂಕಾರಾಃ.

ಹೀಗೆ ನೂರ ಹದಿನೆಂಟು ಅಲಂಕಾರಗಳನ್ನು ತಿಳಿಸಿ ಇವು ಒಂದಕ್ಕೊಂದು ಸೇರಿದರೂ ಒಂದು ಬಗೆಯ ಸೌಂದರ್ಯವು ಕಂಡುಬರುವ ಪ್ರಯುಕ್ತ ಅವು ಸೇರುವ ಬಗೆಗಳನ್ನು ಈಗ ತಿಳಿಸುತ್ತಾನೆ. ಲೋಕದ ಜನರು ಉಪಯೋಗಿಸುವ ಒಡವೆಗಳು ಒಂದು ಸ್ಥಾನದಲ್ಲಿ ಒಂದು ಇದ್ದರೆ ಬೇರೆ ಕಡೆಗೆ ಮತ್ತೊಂದನ್ನು ಸೇರಿಸಿ ಹೀಗೆ ಹಲವಾರು ಒಡವೆಗಳು ಬೆರೆಯುವುದರಿಂದ ಒಂದು ಬಗೆಯ ಸೌಂದರ್ಯವು ಹುಟ್ಟುವಂತೆ ಅಲಂಕಾರಗಳು ಒಂದೊಂದೇ ಇದ್ದರೆ ಹೇಗೋ ಹಾಗೆಯೇ ಪರಸ್ಪರ ಸೇರಿದರೂ ಸೌಂದರ್ಯವಿರುವ ಪ್ರಯುಕ್ತ ಅವನ್ನು ಸೇರಿಸುವ ಬಗೆಯನ್ನು ತಿಳಿಸು

ತ್ತಾನೆ. ಕರಿ ಎಳ್ಳು ಬಿಳಿಯ ಅಕ್ಕಿಗಳನ್ನು ಸೇರಿಸಿದಂತೆ ಪರಸ್ಪರಭಿನ್ನವಾದ ಅಲಂಕಾರಗಳನ್ನು ಸೇರಿಸುವುದು ಸಂಸೃಷ್ಟಿ ಎನಿಸುವುದು. ಹಾಲೂ ನೀರು ಬೆರೆತಂತೆ ಪರಸ್ಪರಭೇದವು ಸ್ಪಷ್ಟವಾಗಿ ಕಾಣದಿರುವ ಅಲಂಕಾರಗಳನ್ನು ಸೇರಿಸಿದರೆ ಅದು ಸಂಕರವೆನಿಸಿವುದು. ಹೀಗೆ ಸೇರಿಸುವುದರಿಂದ ನೃಸಿಂಹನಂತೆ ಸಿಂಹ ಮತ್ತು ಮನುಷ್ಯ ಇಬ್ಬರ ಆಕಾರಗಳೂ ಕಾಣುವ ಪ್ರಯುಕ್ತ ನೃಸಿಂಹಮೂರ್ತಿಯು ವಿಚಿತ್ರವಾಗಿರುವಂತೆ ಅಲಂಕಾರಗಳ ಸಾಂಕರ್ಯವು ರಮಣೀಯವಾಗಿರುತ್ತದೆ. ಇದರಲ್ಲಿ ಅಂಗಾಂಗಿಭಾವ, ಸಮಪ್ರಧಾನ್ಯ, ಸಂದೇಹ, ಏಕಾನುಪ್ರವೇಶ ಎಂದು ನಾಲ್ಕು ಬಗೆಗಳಿವೆ. ಇವು ಸಂಸೃಷ್ಟಿಯೊಡನೆ ಸೇರಿ ನೃಸಿಂಹಾಕಾರದ ಐದು ಅಲಂಕಾರಗಳಾಗುತ್ತವೆ.

## ೧೮೯. ಅಲಂಕಾರಸಂಸೃಷ್ಟಿ

ತತ್ರ ಅಲಂಕಾರಸಂಸೃಷ್ಟಿರ್ಯಥಾ—

ಕುಸುಮಸೌರಭಲೋಭಪರಿಭ್ರಮದ್ಭ್ರಮರಸಂಭ್ರಮಸಂಭೃತಶೋಭಯಾ ।
ಚಲಿತಯಾ ವಿದಧೇ ಕಲಮೇಖಲಾಕಲಕಲೋಽಲಕಲೋಲದೃಶಾನ್ಯಯಾ ॥

ಅತ್ರ ಶಬ್ದಾಲಂಕಾರಯೋರನುಪ್ರಾಸಯಮಕಯೋಃ ಸಂಸೃಷ್ಟಿಃ ।—

ಲಿಂಪತೀವ ತಮೋಽಂಗಾನಿ ವರ್ಷತೀವಾಂಜನಂ ನಭಃ ।
ಅಸತ್ಪುರುಷಸೇವೇವ ದೃಷ್ಟಿರ್ವಿಫಲತಾಂ ಗತಾ ॥

ಅತ್ರೋತ್ಪ್ರೇಕ್ಷಯೋರುಪಮಾಯಾಶ್ಚೇತ್ಯರ್ಥಾಲಂಕಾರಾಣಾಂ ಸಂಸೃಷ್ಟಿಃ.

ಆನಂದಮಂಥರಪುರಪುರಂದರಮುಕ್ತಮಾಲ್ಯಂ
ಮೌಲೌ ಹಠೇನ ನಿಹಿತಂ ಮಹಿಷಾಸುರಸ್ಯ ।
ಪಾದಾಂಬುಜಂ ಭವತು ಮೇ ವಿಜಯಾಯ ಮಂಜು-
ಮಂಜೀರಸಿಂಜಿತಮನೋಹರಮಂಬಿಕಾಯಾಃ ॥

ಅತ್ರ ಶಬ್ದಾರ್ಥಾಲಂಕಾರಯೋರನುಪ್ರಾಸೋಪಮಯೋಃ ಸಂಸೃಷ್ಟಿಃ ॥

ಪರಸ್ಪರವಾಗಿ ಭಿನ್ನವೆಂದು ತಿಳಿದುಬರುವ ಅಲಂಕಾರಗಳು ತಿಲತಂಡುಲಗಳಂತೆ ಒಂದೆಡೆಗೆ ಸೇರುವುದೇ ಸಂಸೃಷ್ಟಿ ಎನಿಸುವುದು. ಇದಕ್ಕೆ ಉದಾಹರಣಗಳನ್ನು ಕೊಡುತ್ತಾನೆ. ಮೊದಲನೆಯ ಪದ್ಯವು ಮಾಘದಲ್ಲಿ ಋತುವರ್ಣನದಲ್ಲಿ ಬರುತ್ತದೆ. "ಮತ್ತೊಬ್ಬ ಸ್ತ್ರೀಯು ಒಂದೆಡೆಯಿಂದ ಮತ್ತೊಂದೆಡೆಗೆ ಚಲಿಸುತ್ತಿರುವಾಗ ಆಕೆಯ ಸೊಂಟದಲ್ಲಿದ್ದ ಡಾಬಿನ ಅವ್ಯಕ್ತಮಧುರವಾದ ಕಲಕಲಧ್ವನಿಯು ಆರಂಭವಾಯಿತು. ಹೂವಿನಲ್ಲಿರುವ ಮಕರಂದವನ್ನು ಕುಡಿಯಲಿಚ್ಛಿಯಿಂದ ಆಕೆಯ ಮುಖದ ಹತ್ತಿರ ಸಂಚರಿಸುವ ದುಂಬಿಗಳ ಸಂಭ್ರಮದಿಂದ ತುಂಬಿದ ಶೋಭೆ

ಆಕೆಯಲ್ಲಿತ್ತು. ಮುಂಗುರುಳುಗಳು ಚಂಚಲವಾಗಿಯೂ, ಕಣ್ಣುಗಳು ಮನೋಹರವಾಗಿಯೂ ಇದ್ದುವು.'' ಇಲ್ಲಿ ಶಬ್ದಾಲಂಕಾರಗಳೆನಿಸಿದ ಅನುಪ್ರಾಸ ಯಮಕಗಳು ಸೇರಿರುವುದರಿಂದ ಇದು ಸಂಸೃಷ್ಟಿ ಎನಿಸಿದೆ. ಸ್ವರಗಳಲ್ಲಿ ವೈಷಮ್ಯವಿದ್ದರೂ ಒಂದೇ ಬಗೆಯಾದ ವ್ಯಂಜನವರ್ಣಗಳನ್ನು ಪ್ರಯೋಗಿಸುವುದೇ ಅನುಪ್ರಾಸವೆನಿಸುವುದು. ಸಾರ್ಥಕವೋ ಅಥವಾ ನಿರರ್ಥಕವೋ ಆದ ಶಬ್ದಗಳನ್ನು ಒಂದಾದೊಡನೆ ಮತ್ತೊಂದರಂತೆ ಪ್ರಯೋಗಿಸುವುದೇ ಯಮಕವೆನಿಸುವುದು. ಅದರಲ್ಲಿ ಸ್ವರವ್ಯಂಜನಗಳೆರಡೂ ಸೇರಿರುತ್ತವೆ. ದವೋ ಮೋದ ಎಂಬುದು ಇದಕ್ಕೆ ಉದಾಹರಣ. ಈ ಪದ್ಯದಲ್ಲಿ ಕಲಕಲೋಲ್ಲಲಕಲೋಲ ಎಂಬಲ್ಲಿ ಯಮಕಾಲಂಕಾರವಿದೆ. ಸೌರಭ ಲೋಭ ಎಂಬಲ್ಲಿ ಭ ಎಂಬ ವ್ಯಂಜನವನ್ನು ಎರಡು ವೇಳೆ ಪ್ರಯೋಗಿಸಿರುವುದರಿಂದ ಅನುಪ್ರಾಸವಿದೆ. ಹೀಗೆ ಇವೆರಡು ಅಲಂಕಾರಗಳು ಇಲ್ಲಿ ಸೇರಿದ್ದರಿಂದ ಇದು ಸಂಸೃಷ್ಟಿ ಎನಿಸಿದೆ. "ಕತ್ತಲೆಯು ಅವಯವಗಳನ್ನು ಕಬಳಿಸುತ್ತದೆಯೋ ಏನೋ! ಆಕಾಶವು ಅಂಜನವನ್ನು ಸುರಿಸುತ್ತಿದೆಯೋ ಏನೋ! ನೀಚರ ಸೇವೆಯಂತೆ ದೃಷ್ಟಿ ನಿಷ್ಫಲವೆನಿಸಿತು.'' ಪೂರ್ವಾರ್ಧದಲ್ಲಿ ಉತ್ಪ್ರೇಕ್ಷೆಯೂ, ಉತ್ತರಾರ್ಧದಲ್ಲಿ ಉಪಮೆಯೂ ಸೇರಿರುವುದರಿಂದ ಇದು ಸಂಸೃಷ್ಟಿ ಎನಿಸಿದೆ, ''ಆನಂದದಿಂದ ಮಹೋತ್ಸವನಾಗಿ ಇಂದ್ರನು ತನ್ನ ಕೈಯಲ್ಲಿದ್ದ ಪುಷ್ಪಮಾಲಿಕೆಯನ್ನು ಹೊರಗೆ ಬಿಸಾಡಿದನು. ಅದು ಪಾರ್ವತಿಗೆ ವಾಹನವೆನಿಸಿದ ಮಹಿಷಾಸುರನ ಶಿರಸ್ಸಿನಲ್ಲಿ ಬಿದ್ದು ಸಿಕ್ಕಿಕೊಂಡಿತು. ಅದರ ಮನೋಹರವಾದ ವಾಸನೆಗಾಗಿ ದುಂಬಿಗಳು ಅಲ್ಲಿ ಮುತ್ತಿಕೊಂಡು ಮನೋಹರವಾಗಿ ಶಬ್ದಮಾಡುತ್ತಿದ್ದುವು. ಇದರಿಂದ ಮನೋಹರವಾಗಿದ್ದ ಪಾರ್ವತಿಯ ಪಾದಕಮಲವು ನನಗೆ ವಿಜಯವನ್ನು ದೊರಕಿಸಲಿ'' ಇಲ್ಲಿ ಮಂಜೀರಸಿಂಜಿತ ಎಂಬಲ್ಲಿ ವ್ಯಂಜನವರ್ಣಗಳನ್ನು ಮತ್ತೆ ಮತ್ತೆ ಪ್ರಯೋಗಿಸಿರುವುದರಿಂದ ಅನುಪ್ರಾಸವಿದೆ. ಪಾದಾಂಬುಜಂ ಎಂಬಲ್ಲಿ ಅಂಬುಜದಂತೆ ಪಾದವೆಂದು ಉಪಮಿತಸಮಾಸವನ್ನು ಹೇಳುವುದರಿಂದ ಉಪಮಾಲಂಕಾರವಿದೆ. ಇವೆರಡೂ ಸೇರಿದ್ದರಿಂದ ಇದು ಸಂಸೃಷ್ಟಿ ಎನಿಸಿದೆ. ಇವೆರಡು ಅಲಂಕಾರಗಳೂ ಪರಸ್ಪರ ಭಿನ್ನವಾಗಿಯೇ ಸ್ಪಷ್ಟವಾಗಿ ತಿಳಿದು ಬರುವ ಪ್ರಯುಕ್ತ ಇದು ಸಂಸೃಷ್ಟಿ ಎನಿಸಿದೆ.

## ೧೨೦. ಅಂಗಾಂಗಿಭಾವಸಂಕರಾಲಂಕಾರ

ಅಂಗಾಂಗಿಭಾವಸಂಕರೋ ಯಥಾ—

ತಲೇಷ್ವವೇಪಂತ ಮಹೀರುಹಾಣಾಂ
ಛಾಯಾಸ್ತದಾ ಮಾರುತಕಂಪಿತಾನಾಮ್ ।
ಶಶಾಂಕಸಿಂಹೇನ ತಮೋಗಜಾನಾಂ
ಲೂನಾಃ ಕೃತೀನಾಮಿವ ಗಾತ್ರಖಂಡಾಃ ॥

ಅತ್ರ ಶಶಾಂಕಸಿಂಹೇನೇತಿ ತಮೋಗಜಾನಾಮಿತಿ ಚ ರೂಪಕಮ್. ಯದ್ಯಪ್ಯತ್ರ ಶಶಾಂಕ ಇವ ಸಿಂಹಸ್ತಮಾಂಸ್ಯೇವ ಗಜಾಃ ಇತಿ ಮಯೂರ-ವ್ಯಂಸಕಾದಿಸಮಾಸಾಶ್ರಯಣೇನ ರೂಪಕವತ್, ಶಶಾಂಕಃ ಸಿಂಹ ಇವ, ತಮಾಂಸಿ ಗಜಾ ಇವ ಇತ್ಯುಪಮಿತಸಮಾಶ್ರಯಣೇನ ಉಪಮಾಪಿ ವಕ್ತುಂ ಶಕ್ಯಾ, ತಥಾಪಿ ಲೂನಾಕೃತೀನಾಂ ಇತಿವಿಶೇಷಣಾನುಗುಣ್ಯಾತ್ ರೂಪಕಸಿದ್ಧಿಃ ತಸ್ಯ ವಿಶೇಷಣಸ್ಯ ಪ್ರಧಾನೇನ ಸಹ ಅನ್ವಯೇನ ಭಾವ್ಯಂ ನ ತು ಗುಣೇನ. "ಗುಣಾನಾಂ ಚ ಪರಾರ್ಥತ್ವಾತ್ ಅಸಂಬಂಧಃ ಸಮತ್ವಾತ್ ಸ್ಯಾತ್" ಇತಿ ನ್ಯಾಯಾತ್ ಉಪಮಿತಸಮಾಸಾಶ್ರಯಣೇನ ತಸ್ಯ ಪೂರ್ವಪದಾರ್ಥಪ್ರಧಾನತ್ವಾತ್ ಶಶಾಂಕಸ್ಯ ತಮಸಾಂ ಚ ಪ್ರಾಧಾನ್ಯಂ ಭವೇತ್. ತತ್ರ ಚ ನ ವಿಶೇಷೇಣ ಮುಖ್ಯಾರ್ಥಾನ್ವಯಸ್ವಾರಸ್ಯಮಸ್ತಿ. ಸ್ವರೂಪನಾಶರೂಪೋಪಚರಿತಾಕೃತಿಲವನ-ಕರ್ತೃತ್ವಕರ್ಮತ್ವಾನ್ವಯಸಂಭವೇಽಪಿ ಮುಖ್ಯಾರ್ಥಾನ್ವಯಸ್ವಾರಸ್ಯಮೇವ ಆದರಣೀ-ಯಮ್. ಅತಃ ಸ್ವರೂಪನಾಶಕ್ರೋಡೀಕರಣಪ್ರವೃತ್ತಯಾ ಲಕ್ಷಣಾಮೂಲಾತಿ-ಶಯೋಕ್ತ್ಯಾ ರೂಪಕಸಿದ್ಧಿಃ. ತಚ್ಚ ರೂಪಕಂ ಉತ್ಪ್ರೇಕ್ಷಾಯಾಃ ಅಂಗಂ ತದುತ್ಥಾಪಕತ್ವಾತ್. ರೂಪಕಾಭಾವೇ ಹಿ ಛಾಯಾ ಲೂನಗಾತ್ರಖಂಡಾ ಇವ ಅವೇಪಂತ ಇತ್ಯೇತಾವದುಕ್ತೌ ಉಪಮೈವ ಸಿದ್ಧ್ಯೇತ್. ವೇಪನಾದಿ-ಸಾಧರ್ಮ್ಯಾತ್ ನ ಛಾಯಾನಾಂ ಸದ್ಯಃ ಕೃತಗಾತ್ರಖಂಡತಾದಾತ್ಮ್ಯಸಂಭಾವ-ನಾರೂಪೋತ್ಪ್ರೇಕ್ಷಾ. ನನು ಶಶಾಂಕೇನ ಲೂನಾಕೃತೀನಾಂ ತಮಸಾಂ ಗಾತ್ರ ಖಂಡಾ ಇವ ಅವೇಪಂತ ಇತ್ಯೇತಾವದುಕ್ತಾವಪಿ ಸಿದ್ಧ್ಯತ್ಯುತ್ಪ್ರೇಕ್ಷಾ, ತಾದಾತ್ಮ್ಯ-ಸಂಭಾವನೋಪಯುಕ್ತಲೂನಾಕೃತಿತ್ವರೂಪಾಧಿಕವಿಶೇಷಣೋಪಾದಾನಾತ್. ಸತ್ಯಮ್ ತಥೋಕ್ತೌ ಆಕೃತಿಲವನಾದಿಧರ್ಮರೂಪಕಾರ್ಯಸಮಾರೋಪನಿರ್ಮಿತಾ ಶಶಾಂಕತ-ಮಸೋರ್ಹಂತೃಹಂತವ್ಯಚೇತನವೃತ್ತಾಂತಸಮಾರೋಪರೂಪಾ ಸಮಾಸೋಕ್ತಿರ-ಪ್ರೇಕ್ಷಣೀಯಾ. ಏವಮುಕ್ತೌ ರೂಪಕಮಿತಿ ವಿಶೇಷಃ. ಏವಮತ್ರ ಅತಿಶ-ಯೋಕ್ತಿರೂಪಕೋತ್ಪ್ರೇಕ್ಷಾಣಾಂ ಅಂಗಾಂಗಿಭಾವೇನ ಸಂಕರಃ.

ಪರಸ್ಪರವಾಗಿ ಭೇದವು ಕಾಣದಂತೆ ಹೊಂದಿಕೊಳ್ಳುವ ಅಲಂಕಾರಗಳು ಒಂದೆಡೆಗೆ ಸೇರುವುದೇ ಸಂಕರವೆನಿಸುವುದು. ಹಾಲು ನೀರು ಬೆರೆತರೆ ಎರಡಕ್ಕೂ ಭೇದವು ಕಾಣದಿರುವಂತೆ ಸಂಕರದಲ್ಲಿ ಅಲಂಕಾರಗಳ ಭೇದವು ಕಾಣುವುದಿಲ್ಲ. ಇದು ನಾಲ್ಕು ಬಗೆಯಾಗಿದೆ. ಅವುಗಳಲ್ಲಿ ಮೊದಲನೆಯದು ಅಂಗಾಂಗಿಭಾವಸಂಕರ. ಇದರಲ್ಲಿ ಒಂದು ಅಲಂಕಾರವು ಅಂಗಿ ಅಂದರೆ ಆಶ್ರಯವೂ ಮತ್ತೊಂದು ಅದರ ಅಂಗವೂ ಆಗಿರುತ್ತವೆ. ಇದನ್ನು ಇಲ್ಲಿ ಉದಾಹರಿಸಲಾಗಿದೆ. "ಆಗ ಗಾಳಿಯಿಂದ ಅಲ್ಲಾಡಿದ ಮರಗಳ ಕೆಳಭಾಗದಲ್ಲಿ ನೆರಳು ಅಲ್ಲಾಡುತ್ತಿತ್ತು. (ಅಲ್ಲಿ ಉತ್ಪ್ರೇಕ್ಷಿಸು

ತ್ಮಾನೆ) ಚಂದ್ರನೆಂಬ ಸಿಂಹದಿಂದ ಕತ್ತರಿಸಲ್ಪಟ್ಟ ಕತ್ತಲೆ ಎಂಬ ಆನೆಗಳ ಶರೀರದ ಭಾಗಗಳೋ ಏನೋ ಎಂಬಂತೆ ಆ ನೆರಳು ಕಾಣುತ್ತಿತ್ತು." ಇಲ್ಲಿ ಶಶಾಂಕಸಿಂಹೇನ-ತಮೋ ಗಜಾನಾಂ ಎಂಬ ಎರಡು ಕಡೆಗಳಲ್ಲೂ ರೂಪಕವಿದೆ. "ಇಲ್ಲಿ ಶಶಾಂಕವೆಂಬ ಸಿಂಹ" "ಕತ್ತಲೆಗಳೆಂಬ ಆನೆಗಳು" ಎಂದು ವಿಶೇಷಣಪೂರ್ವಪದಕರ್ಮಧಾರಯ-ಸಮಾಸದಿಂದ ರೂಪಕವನ್ನು ಮಾಡಬಹುದು. "ಶಶಾಂಕವು ಸಿಂಹದಂತೆಯೂ, ಕತ್ತಲೆಗಳು ಆನೆಗಳಂತೆಯೂ ಇವೆ" ಎಂದು ಉಪಮಿತಸಮಾಸದಿಂದ ಉಪಮೆಯನ್ನು ಹೇಳಲಿಕ್ಕೂ ಸಾಧ್ಯವಿದೆ. ಆದರೆ ಲೂನಾಕೃತೀನಾಂ ಎಂಬ ವಿಶೇಷಣವನ್ನು ಉಪಯೋಗಿಸಿರುವುದರಿಂದ ಅದಕ್ಕೆ ಅನುಗುಣವಾಗಿ ರೂಪಕವೇ ಇಲ್ಲಿ ಸಿದ್ಧಿಸುತ್ತದೆ. ಈ ವಿಶೇಷಣಕ್ಕೆ ಪ್ರಧಾನವಾದ ವಿಶೇಷ್ಯದೊಡನೆ ಅನ್ವಯವು ಬರುವುದೇ ಹೊರತು ಮತ್ತೊಂದು ವಿಶೇಷಣದೊಡನೆ ಅನ್ವಯವು ಬರುವುದಿಲ್ಲ. "ವಿಶೇಷಣವೆನಿಸಿದ ಪದಾರ್ಥಗಳೆರಡು ಬೇರೊಂದು ಮುಖ್ಯವಾದ ಪದಾರ್ಥದಲ್ಲಿಯೇ ಅನ್ವಯಿಸುವುದರಿಂದ ಅವಕ್ಕೆ ಪರಸ್ಪರ ಸಂಬಂಧವಿರುವುದಿಲ್ಲ. ಅವೆರಡೂ ಸಹ ಪ್ರಧಾನವಲ್ಲವೆಂಬುದು ಅವಕ್ಕೆ ಸಮಾನವೆನಿಸಿರುವುದರಿಂದ ಅವು ಬೇರೊಂದರಲ್ಲಿ ಅನ್ವಯಿಸಬೇಕೇ ಹೊರತು ತಮ್ಮಲ್ಲಿಯೇ ಅನ್ವಯಿಸಲಾರವು." ಈ ನ್ಯಾಯದಿಂದ ಉಪಮಿತಸಮಾಸವನ್ನು ಆಶ್ರಯಿಸಿದರೆ ಆಗ ಪೂರ್ವಪದಕ್ಕೆ ಪ್ರಾಧಾನ್ಯವು ಬರುವ ಪ್ರಯುಕ್ತ ಶಶಾಂಕತಮಸ್ಸು ಇವು ಪ್ರಧಾನವೆನಿಸುತ್ತವೆ, ಅಲ್ಲಿ 'ಲೂನಾಕೃತೀನಾಂ' ಎಂಬ ವಿಶೇಷಣವನ್ನು ಅನ್ವಯಿಸಲಿಕ್ಕೆ ಸಾಧ್ಯವಿದ್ದರೂ ಚಂದ್ರನು ಆನೆಗಳ ಶರೀರಗಳನ್ನು ಕತ್ತರಿಸಿದನು ಎಂದು ಹೇಳಿದ್ದರಿಂದ ಯಾವ ಸ್ವಾರಸ್ಯವೂ ಕಾಣುವುದಿಲ್ಲ. ಆಕೃತಿಲವನ ಎಂಬಲ್ಲಿ ಆನೆಗಳಿಗೆ ಸ್ವರೂಪನಾಶ ಅಂದರೆ ಮರಣವು ಬಂದು ಶರೀರದ ಅವಯವಗಳನ್ನು ಕತ್ತರಿಸಬೇಕಾದರೆ ಚಂದ್ರನಿಗೆ ಸಾಧ್ಯವಲ್ಲದ್ದರಿಂದ ಈ ವಿಶೇಷಣವು ಉತ್ತರಪದಾರ್ಥವೆನಿಸಿದ ಸಿಂಹದಲ್ಲಿಯೇ ಅನ್ವಯಿಸುವುದು ಯುಕ್ತವೂ ಉಚಿತವೂ ಎನಿಸುತ್ತದೆ. ಆದ್ದರಿಂದ ಇಲ್ಲಿ ಉಪಮಿತಸಮಾಸವನ್ನೇ ಆಶ್ರಯಿಸಿ ಉತ್ತರಪದಾರ್ಥಕ್ಕೆ ಪ್ರಾಧಾನ್ಯವನ್ನು ಹೇಳಬೇಕಾಗಿದೆ. ಹೀಗೆ ಲಕ್ಷ್ಯಾರ್ಥವನ್ನು ಶಶಾಂಕನಲ್ಲಿ ಅನ್ವಯಿಸಲು ಸಾಧ್ಯವಿರುವಾಗ ಮುಖ್ಯಾರ್ಥದ ಅನ್ವಯವನ್ನೇ ಅನುಸರಿಸಬೇಕು ಎಂಬಲ್ಲಿ ಪ್ರಮಾಣವೇನು? ಅಂದರೆ ಇಲ್ಲಿ ಮೊದಲು ತೋರುವ ಮುಖ್ಯಾರ್ಥದ ಅನ್ವಯವನ್ನು ಗಮನಿಸುವುದು ಯುಕ್ತವೇ ಹೊರತು ಲಕ್ಷ್ಯಾರ್ಥದ ಅನ್ವಯವನ್ನು ಗಮನಿಸುವುದು ಯುಕ್ತವಲ್ಲ. ಆದ್ದರಿಂದಲೇ ಲೂನಾಕೃತಿ ಎಂಬಲ್ಲಿ ಆನೆಗಳಿಗೆ ಸ್ವರೂಪನಾಶವಾಗುವ ಪ್ರಯುಕ್ತ ಲಕ್ಷಣಾಮೂಲಾತಿಶಯೋಕ್ತಿಯಿಂದ ರೂಪಕವು ಸಿದ್ಧಿಸುತ್ತವೆ. ಈ ರೂಪಕವು ಉತ್ಪ್ರೇಕ್ಷೆಯಿಂದಲೇ ಪಟ್ಟಿರುವುದರಿಂದ ಅದಕ್ಕೆ ಅಂಗವೆನಿಸಿದೆ. ಇಲ್ಲಿ ರೂಪಕವನ್ನು ಹೇಳದ ಇನ್ನು ಪಕ್ಷದಲ್ಲಿ ನೆರಳು ಆನೆಗಳ ಶರೀರದ ಭಾಗಗಳಂತೆ ಸಡಗಿತು ಎಂದು ಹೇಳುವುದಾದರೆ ಉಪಮೆಯೇ ಸಿದ್ಧಿಸುತ್ತದೆ. ಹಾಗೆ ಉಪಮೆಯನ್ನು ಹೇಳಿದರೆ ನೆರಳಿಗೆ ವೇಪನದ ಸಾದೃಶ್ಯವಿರುವುದರಿಂದ

ಆದರಲ್ಲಿ ಶರೀರದ ಭಾಗಗಳ ತಾರತಮ್ಯವನ್ನು ಊಹಿಸಲಿಕ್ಕೆ ಆಗದ ಪ್ರಯುಕ್ತ ಅಲ್ಲಿ ಉತ್ಪ್ರೇಕ್ಷೆ ಹೊಂದುವುದಿಲ್ಲ. "ಚಂದ್ರನಿಂದ ನಾಶಮಾಡಲ್ಪಟ್ಟ ಕತ್ತಲೆಗಳ ಚೂರುಗಳಂತೆ ನೆರಳು ನಡುಗಿತು ಎಂದು ಹೀಗೆ ಹೇಳುವುದಾದರೆ ಆಗ ಉತ್ಪ್ರೇಕ್ಷೆಯು ಸಿದ್ಧಿಸುತ್ತದೆ. ನೆರಳಿನಲ್ಲಿ ಲೂನಾಕೃತಿಗಳ ತಾದಾತ್ಮ್ಯವನ್ನು ಊಹಿಸಲಿಕ್ಕೆ ಅನುಕೂಲವಾದ ವಿಶೇಷವನ್ನು ಇಲ್ಲಿ ಕೊಟ್ಟಿರುವುದರಿಂದ ಇಲ್ಲಿ ಉತ್ಪ್ರೇಕ್ಷೆಯೇ ಸಿದ್ಧಿಸುತ್ತದೆ" ಎಂದು ಹೇಳುವುದಾದರೆ ಗಾತ್ರಗಳನ್ನು ಕತ್ತರಿಸುವಿಕೆ ಎಂಬ ಧರ್ಮವನ್ನು ಆರೋಪಿಸುವುದರಿಂದ ಇಲ್ಲಿ ಸಮಾಸೋಕ್ತಿಯನ್ನೂ ಹೇಳಬೇಕಾಗಿ ಬರುತ್ತದೆ ಚಂದ್ರನು ಕತ್ತಲೆಯನ್ನು ತೊಲಗಿಸಿದ್ದರಿಂದ ಕೊಲ್ಲುವವನು ಕೊಲ್ಲಿಸಿಕೊಳ್ಳುವವನು ಹೀಗೆ ಚೇತನರಿಬ್ಬರ ವೃತ್ತಾಂತವನ್ನು ಇಲ್ಲಿ ಆರೋಪಿಸಲಿಕ್ಕೆ ಸಾಧ್ಯವಿರುವಪ್ರಯುಕ್ತ ಸಮಾಸೋಕ್ತಿಯನ್ನು ಹೇಳಬೇಕಾದೀತು. ಆದರೆ ಚೇತನರ ವೃತ್ತಾಂತವನ್ನು ಆರೋಪಿಸುವುದು ಇಲ್ಲಿ ಹೊಂದುವುದಿಲ್ಲವಾದ್ದರಿಂದ ಸಮಾಸೋಕ್ತಿಗೆ ಪ್ರಸಕ್ತಿಯಿಲ್ಲ. ಆದ್ದರಿಂದ ತಮೋಗಜಾನಾಂ ಎಂಬಲ್ಲಿ ರೂಪಕವು ಉತ್ಪ್ರೇಕ್ಷೆಯ ಅಂಗವೆನಿಸಲು ಯಾವ ಅಡ್ಡಿಯೂ ಇಲ್ಲ. ಹೀಗೆ ಇಲ್ಲಿ ರಕ್ಷಣಾಮೂಲ ಅಭೇದಾಧ್ಯವಸಾಯವೆನಿಸಿದ ಅತಿಶಯೋಕ್ತಿ ಮತ್ತು ರೂಪಕ, ಉತ್ಪ್ರೇಕ್ಷೆ ಇವು ಮೂರಕ್ಕೆ ಅಂಗಾಂಗಿಭಾವದಿಂದ ಸಾಂಕರ್ಯವಿದೆ.

## ೧೨೧ ಸಮಪ್ರಾಧಾನ್ಯಸಂಕರಾಲಂಕಾರ

ಸಮಪ್ರಾಧಾನ್ಯಸಂಕರೋ ಯಥಾ__.

ಅವತು ನಃ ಸವಿತುಸ್ತುರಗಾವಳೀ ಸಮತಿಲಂಘಿತತುರಂಗಪಯೋಧರಾ ।
ಸ್ಫುರಿತಮಧ್ಯಗತಾರುಣನಾಯಕಾ ಮರಕತೈಕಲತೇವ ನಭಃಶ್ರಿಯಃ ॥

ಅತ್ರ ಪಯೋಧರಾದಿಶಬ್ದಶ್ಲೇಷಮೂಲಾತಿಶಯೋಕ್ತ್ಯಾ ಅಂಗಭೂತಯಾ ಉತ್ಥಾಪ್ಯಮಾನೈವ ಸವಿತೃತುರಗಾವಳ್ಯಾಂ ಮರಕತೈಕಾವಳೀತಾದಾತ್ಮ್ಯೋತ್ಪ್ರೇಕ್ಷಾ. ನಭೋಲಕ್ಷ್ಮ್ಯಾಂ ನಾಯಿಕಾವ್ಯವಹಾರಸಮಾರೋಪಸಮಾಸೋಕ್ತಿಗರ್ಭೈವಉತ್ಥಾಪ್ಯತೇ ಪಯೋಧರಶ್ಲೇಷಸ್ಯ ಉಭಯೋಪಕಾರಕತ್ವಾತ್. ತತ ಉತ್ಪ್ರೇಕ್ಷಾಸಮಾಸೋಕ್ತ್ಯೋರೇಕಃ ಕಾಕ್ಷಃ ಪರಸ್ಪರಾಪೇಕ್ಷಯಾ ಚಾರುತ್ವಸಮುನ್ಮೇಷಶ್ಚ ಉಭಯೋಸ್ತುಲ್ಯ, ಇತಿ ವಿನಿಗಮನಾವಿರಹಾತ್ಸಮಪ್ರಾಧಾನ್ಯಮ್. ಯಥಾ—

ಅಂಗುಲೀಭಿರಿವ ಕೇಶಸಂಚಯಂ ಸನ್ನಿಕೃಷ್ಯ ತಿಮಿರಂ ಮರೀಚಿಭಿಃ ।
ಕುಡ್ಮಲೀಕೃತಸರೋಜಲೋಚನಂ ಚುಂಬತೀವ ರಜನೀಮುಖಂ ಶಶೀ ॥

ಅತ್ರ ಅಂಗುಲೀಭಿರಿತಿ ವಾಕ್ಯೋಕ್ತ್ಯೋಪಮಯಾ ತತ್ಪ್ರಯಪಾತಾತ್ ಮುಖ್ಯ ಕುಡ್ಮಲೀಕರಣಲಿಂಗಾನುಗುಣ್ಯಾಚ್ಚ ಉಪಮಿತಸಮಾಸಾಶ್ರಯಣೇನ ಲಬ್ಧಯಾ ಸರೋಜಲೋಚನಮಿತಿ ಸಮಾಸೋಕ್ತ್ಯೋಪಮಯಾ ಅಂಗಭೂತಯಾ ಉತ್ಥಾಪ್ಯಮಾನೈವ ಶಶಿಕರ್ತೃಕನಿಶಾಮುಖಚುಂಬನೋತ್ಪ್ರೇಕ್ಷಾ ನಿಶಾಶಶಿನೋರ್ದಾಂಪತ್ಯವ್ಯವಹಾರಸಮಾರೋಪರೂಪಸಮಾಸೋಕ್ತಿಗರ್ಭೈವೋತ್ಥಾಪ್ಯತೇ. ಉಪಮಯೋರುಭಯತ್ರ ಉತ್ಥಾಪಕತ್ವಾವಿಶೇಷಾತ್ ಸಮಾಸೋಕ್ತಿಗರ್ಭತಾಂ ವಿನಾ ಚುಂಬನೋತ್ಪ್ರೇಕ್ಷಾಯಾಃ ನಿರಾಲಂಬನತ್ವಾಚ್ಚ. ತತಶ್ಚ ಅತ್ರಾಪಿ ಉತ್ಪ್ರೇಕ್ಷಾಸಮಾಸೋಕ್ತ್ಯೋರೇಕಕಾಲಯೋಃ ಸಮಪ್ರಾಧಾನ್ಯಮ್. ಯದ್ಯಪ್ಯತ್ರ ಉಪಮಾಭ್ಯಾಂ ಶಶಿನಿಶಾಗತಾವೇವ ಧರ್ಮೌ ಸಮರ್ಪ್ಯೇತೇ ನ ತು ಶಶಿನಾಯಕಯೋಃ ನಿಶಾನಾಯಿಕಯೋಶ್ಚ ಸಾಧಾರಣಧರ್ಮೌ. ಸಾಧಾರಣಧರ್ಮಸಮರ್ಪಣಂ ಚ ಉತ್ಪ್ರೇಕ್ಷಾಸಮಾಸೋಕ್ತ್ಯೋರಪೇಕ್ಷಿತಮ್. ಉತ್ಪ್ರೇಕ್ಷಾಯಾಃ ಪ್ರಕೃತಾಪ್ರಕೃತಸಾಧಾರಣಗುಣಕ್ರಿಯಾನಿಮಿತ್ತಸಾಪೇಕ್ಷತ್ವಾತ್ ಸಮಾಸೋಕ್ತೇಃ ವಿಶೇಷಣಸಾಮ್ಯಮೂಲಕತ್ವಾಚ್ಚ. ತಥಾಪಿ ವಾಕ್ಯೋಕ್ತ್ಯೋಪಮಾಯಾಂ ಇವಕಾರಸ್ಯ ಮರೀಚಿಭಿರಿವ ಇತ್ಯನ್ವಯಾಂತರಮಭ್ಯುಪಗಮ್ಯ ಅನ್ವಯಭೇದಲಬ್ಧಪ್ರಕೃತಯೋರೇಕೈಕವಿಷಯಸ್ಯ ಅರ್ಥದ್ವಯಸ್ಯ ಸಮಾಸೋಕ್ತ್ಯೋಮಾಯಾಂ ಸರೋಜಸದೃಶಂ ಲೋಚನಂ ಇತಿ ಸಮಾಸಾಂತರಮಭ್ಯುಪಗಮ್ಯ ಸಮಾಸಭೇದಲಬ್ಧಾರ್ಥನ್ವಯಸ್ಯ ಚ ಅಭೇದಾಧ್ಯವಸಾನೇನ ಸಾಧಾರಣ್ಯಂ ಸಂಪಾದ್ಯ ತಯೋರುತ್ಪ್ರೇಕ್ಷಾಸಮಾಸೋಕ್ತ್ಯೋರಂಗತಾ ಕಥಂಚಿತ್ ನಿರ್ವಾಹ್ಯಾ.

ಪರಸ್ಪರವಾಗಿ ಹೊಂದುವಂತಹ ಅಲಂಕಾರಗಳಲ್ಲಿ ಒಂದು ಪ್ರಧಾನವೆನಿಸಿ ಮತ್ತೊಂದು ಅಂಗವಾಗಿದ್ದರೆ ಆ ಬಗೆಯ ಮೇಲನವು ಅಂಗಾಂಗಿಭಾವಸಂಕರವೆನಿಸುವುದನ್ನು ಹಿಂದೆ ತಿಳಿಸಿ ಈಗ ಪರಸ್ಪರವಾಗಿ ಸೇರಲಿರುವ ಅಲಂಕಾರಗಳು ಸಮವಾಗಿ ಪ್ರಧಾನವೆನಿಸುತ್ತಿರುವುದನ್ನು ತಿಳಿಸುತ್ತಾನೆ. ಹೀಗೆ ಪ್ರಾಧಾನ್ಯವು ಸಮವಾಗಿ ಇದ್ದಲ್ಲಿ ಆ ಬಗೆಯ ಸಂಘಟನೆಯು ಸಮಪ್ರಧಾನಸಂಕರವೆನಿಸುವುದು. ಇದು ಸಂಕರಜಾತಿಯಲ್ಲಿ ಎರಡನೆಯ ಬಗೆ. ಇದನ್ನು ಇಲ್ಲಿ ಉದಾಹರಿಸುತ್ತಾನೆ : "ಸೂರ್ಯನ ಕುದುರೆಗಳ ಗುಂಪು ನಮ್ಮನ್ನು ಕಾಪಾಡಲಿ. ಇದು ಆಕಾಶವೆಂಬ ಲಕ್ಷ್ಮಿಯ ಮರಕತಮಣಿಗಳ ಏಕಾವಳಿಯೋ ಏನೋ ಎಂಬಂತಿದೆ. (ಸೂರ್ಯನ ಆ ಕುದುರೆಗಳೂ ಅದೇ ಬಣ್ಣದಲ್ಲಿರುತ್ತವೆಯಾದ್ದರಿಂದ ಹೀಗೆ ಉತ್ಪ್ರೇಕ್ಷಿಸಿದೆ) ಎತ್ತರವಾದ ಮೇಘಗಳನ್ನೂ ಸಹ ಕುದುರೆಗಳು ದಾಟಿದ್ದವು. ಏಕಾವಳಿಯೂ ಸಹ ಎತ್ತರವಾದ ಸ್ತನಗಳ ಮೇಲೆ ವ್ಯಾಪಿಸಿತ್ತು. ಆ ಕುದುರೆಗಳನ್ನು ಕಟ್ಟಿದ್ದ ರಥದ ಮಧ್ಯದಲ್ಲಿ ಅರುಣವೆಂಬ ಸಾರಥಿಯು ಶೋಭಿಸುತ್ತಿದ್ದನು. ಏಕಾವಳಿಯ ಮಧ್ಯದಲ್ಲಿ ಒಂದು ಕೆಂಪು ಮಣಿಯು ಶೋಭಿಸುತ್ತಿತ್ತು." ಇಲ್ಲಿ ಮೇಘಗಳನ್ನು

ಸ್ತನಗಳೆಂದು ನಿಶ್ಚಯಿಸಿರುವ ಪ್ರಯುಕ್ತ ಅತಿಶಯೋಕ್ತಿಯಿದೆ. ಪಯೋಧರ ಎಂಬಲ್ಲಿ ಶಬ್ದಶ್ಲೇಷದಿಂದ ಇದು ತೋರುತ್ತದೆ. ಇದರಿಂದ ಉತ್ಪ್ರೇಕ್ಷೆಯು ತೋರುತ್ತದೆ. ಸೂರ್ಯನ ಕುದುರೆಗಳ ಸಾಲಿನಲ್ಲಿ ಮರಕತಮಣಿಗಳ ಏಕಾವಳಿಯು ತಾದಾತ್ಮ್ಯ ವನ್ನು ಉತ್ಪ್ರೇಕ್ಷಿಸಲಾಗಿದೆ. ಆದರೆ ಇದರೊಳಗೆ ಸಮಾಸೋಕ್ತಿಯೂ ಸೇರಿ ಕೊಂಡಿದೆ. ನಭೋಲಕ್ಷ್ಮಿಯಲ್ಲಿ ನಾಯಿಕಾವ್ಯವಹಾರವನ್ನು ಆರೋಪಿಸುವುದೇ ಇಲ್ಲಿ ಸಮಾಸೋಕ್ತಿ. ಪಯೋಧರವೆಂಬ ಪದದಲ್ಲಿ ಶ್ಲೇಷವು ನಾಯಿಕೆ ಮತ್ತು ನಭೋಲಕ್ಷ್ಮಿ ಇಬ್ಬರಿಗೂ ಸಮಾನವಾಗಿ ಅನ್ವಯಿಸುತ್ತದೆ. ಆದ್ದರಿಂದ ಉತ್ಪ್ರೇಕ್ಷೆ ಸಮಾಸೋಕ್ತಿ ಇವೆರಡೂ ಒಂದೆಡೆಗೆ ಸೇರಿ ಒಂದರಿಂದ ಒಂದಕ್ಕೆ ಸೌಂದರ್ಯವು ತೋರುತ್ತಿರುವುದರಿಂದ ಪ್ರಾಧಾನ್ಯವು ಎರಡರಲ್ಲೂ ಸಮಾನವೆನಿಸಿದೆ. ಇವುಗಳಲ್ಲಿ ಇಂತಹದೊಂದೇ ಪ್ರಧಾನವೆಂದು ನಿರ್ಣಯಿಸಲಿಕ್ಕೆ ಆಗದ ಪ್ರಯುಕ್ತ ಇಲ್ಲಿ ಸಮ ಪ್ರಾಧಾನ್ಯವನ್ನು ಒಪ್ಪಲೇಬೇಕು.

ಸಮಪ್ರಾಧಾನ್ಯಕ್ಕೆ ಈಗ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಚಂದ್ರನು ಬೆರಳುಗಳಂತಿರುವ ಕಿರಣಗಳಿಂದ ಕೂದಲಿನ ರಾಶಿಯಂತಿರುವ ಕತ್ತಲೆ ಯನ್ನು ಹಿಡಿದುಕೊಂಡು ಕಣ್ಣಿನಂತಿರುವ ಕಮಲವನ್ನು ಮೊಗ್ಗಾಗಿ ಮಾಡಿಕೊಂಡು ರಾತ್ರಿಯ ಮುಖಕ್ಕೆ ಮುತ್ತಿಡುತ್ತಿರುವನು." ಇಲ್ಲಿ ಅಂಗುಲೀಭಿರಿವ ಎಂಬಲ್ಲಿ ವಾಕ್ಯಾರ್ಥದ ಮೂಲಕ ಉಪಮಾಲಂಕಾರವು ತೋರುವುದು. ಅದಕ್ಕೆ ಅನುಗುಣ ವಾಗಿ ಕುಡ್ಮಲೀಕೃತಸರೋಜಲೋಚನಂ ಎಂಬ ಸಮಾಸದಲ್ಲೂ ಕುಡ್ಮಲಪದದ ಮುಖ್ಯಾರ್ಥದಲ್ಲಿ ಸರೋಜಪದಕ್ಕೆ ಅನ್ವಯವಾಗಲು ಯೋಗ್ಯತೆ ಇರುವುದ ರಿಂದಲೂ, ಅದನ್ನು ಲೋಚನಪದದಲ್ಲಿ ಅನ್ವಯಿಸುವುದರಲ್ಲಿ ಸ್ವಾರಸ್ಯವಿಲ್ಲದ್ದರಿಂದಲೂ ಉಪಮೆಯನ್ನೇ ಹೇಳಬೇಕು. ಇದು ಸಮಾಸಾರ್ಥದ ಮೂಲಕ ತೋರುವುದು, ಈ ಎರಡು ಉಪಮೆಗಳಿಗೂ ಅಂಗಾಂಗಿಭಾವವಿದೆ. ಇವೆರಡು ಉಪಮೆಗಳ ಮೂಲಕ ಇಲ್ಲಿ ಉತ್ಪ್ರೇಕ್ಷೆಯು ತೋರುತ್ತದೆ. ಚಂದ್ರನು ನಿಶಾಮುಖವನ್ನು ಚುಂಬಿಸಿದನೆಂಬುದೇ ಇಲ್ಲಿ ತೋರುವ ಉತ್ಪ್ರೇಕ್ಷೆ. ಇದರೊಳಗೆ ಸಮಾಸೋಕ್ತಿಯೂ ಸೇರಿಕೊಂಡಿದೆ. ನಿಶೆಯಲ್ಲೂ ಚಂದ್ರನಲ್ಲೂ ದಾಂಪತ್ಯವ್ಯವಹಾರವನ್ನೂ ಆರೋಪಿ ಸಲಿಕ್ಕೆ ಸಾಧ್ಯವಿರುವುದರಿಂದ ಇಲ್ಲಿ ಸಮಾಸೋಕ್ತಿಯು ತೋರುವುದು. ಇಲ್ಲಿ ಎರಡು ಉಪಮೆಗಳೂ ಸೇರಿ ಅವುಮೂಲಕವಾಗಿಯೇ ಎರಡು ಕಡೆಗಳಲ್ಲೂ ಉತ್ಪ್ರೇಕ್ಷೆ ಸಮಾಸೋಕ್ತಿಗಳನ್ನು ಹುಟ್ಟಿಸುವುದರಿಂದ ಸಮಾಸೋಕ್ತಿಯು ಸೇರದೇ ಇದ್ದರೆ ಚಂದ್ರನಲ್ಲಿ ನಿಶಾಮುಖಚುಂಬನವನ್ನು ಉತ್ಪ್ರೇಕ್ಷಿಸಲಿಕ್ಕೆ ಆಶ್ರಯವೇ ಇಲ್ಲದಂತಾ ಗುವುದು. ಆದ್ದರಿಂದ ಇಲ್ಲಿ ಒಂದೇ ಕಾಲದಲ್ಲಿ ಉತ್ಪ್ರೇಕ್ಷಾಸಮಾಸೋಕ್ತಿಗಳು ತೋರುವುದರಿಂದ ಅವಕ್ಕೆ ಸಮಪ್ರಾಧಾನ್ಯವಿದೆ.

ಇಲ್ಲಿ ವಾಕ್ಯಾರ್ಥದಿಂದಲೂ ಸಮಾಸಾರ್ಥದಿಂದಲೂ ತೋರುವ ಉಪಮೆಗಳೆರಡರಿಂದ ಉತ್ಪ್ರೇಕ್ಷೆ ಸಮಾಸೋಕ್ತಿಗಳೆರಡೂ ತೋರಲಾರವು. ಹಾಗೆ ತೋರಲಿಕ್ಕೆ ಸಾಧಾರಣಧರ್ಮದ ಸಂಬಂಧವು ಯಾವುದೂ ಇಲ್ಲ. ಇಲ್ಲಿ ಉಪಮೆಗಳು ಪ್ರಕೃತ ಮತ್ತು ಅಪ್ರಕೃತವ್ಯವಹಾರಗಳೆರಡಕ್ಕೂ ಸಾಧಾರಣವೆನಿಸಿಲ್ಲ. ಆದ್ದರಿಂದ ಉತ್ಪ್ರೇಕ್ಷೆ ಸಮಾಸೋಕ್ತಿಗಳು ಉಪಮೆಗಳಿಂದ ತೋರಲಾರವೆಂದು ಆಕ್ಷೇಪಿಸುತ್ತಾನೆ. ಇಲ್ಲಿ ಉಪಮೆಗಳು ಚಂದ್ರರಾತ್ರಿ ಇವರಲ್ಲಿರುವ ಧರ್ಮಗಳನ್ನು ಮಾತ್ರವೇ ಸಮರ್ಥಿಸುತ್ತವೆ, ಆದರೆ ಚಂದ್ರನಾಯಕರಿಗೂ ರಾತ್ರಿನಾಯಿಕೆಯರಿಗೂ ಅನ್ವಯಿಸುವ ಸಾಧಾರಣಧರ್ಮಗಳನ್ನು ಸಮರ್ಥಿಸುವುದಿಲ್ಲ. ಸಾಧಾರಣಧರ್ಮವು ಅನ್ವಯಿಸಬೇಕಾದರೂ ಉತ್ಪ್ರೇಕ್ಷೆ ಮತ್ತು ಸಮಾಸೋಕ್ತಿಗಳಿಗೆ ಅನ್ವಯಿಸುವಂತೆ ಇರಬೇಕು. ಹಾಗೆ ಇಲ್ಲವೇ ಇದ್ದರೆ ಅಂತಹ ಧರ್ಮದಿಂದ ಯಾವ ಫಲಸಾಧನೆಯೂ ಆಗಲಾರದು. ಉತ್ಪ್ರೇಕ್ಷೆಯು ಪ್ರಕೃತ ಮತ್ತು ಅಪ್ರಕೃತವಸ್ತುಗಳಿಗೆ ಸಮಾನವಾಗಿ ಅನ್ವಯಿಸುವ ಗುಣ ಅಥವಾ ಕ್ರಿಯೆಯನ್ನು ನಿಮಿತ್ತವಾಗಿಟ್ಟುಕೊಂಡೇ ಪ್ರವರ್ತಿಸುವುದು. ಸಮಾಸೋಕ್ತಿಯು ವಿಶೇಷಣಗಳಿಗೆ ಇರುವ ಸಾಮ್ಯವನ್ನು ಅವಲಂಬಿಸಿಕೊಂಡೇ ಬರುವಂತಹದು. ಇಂತಹ ಸಾಧಾರಣಧರ್ಮವು ಉಪಮೆಗಳಿಂದ ಇಲ್ಲಿ ದೊರಕುವಂತಿಲ್ಲ. ಆದರೂ ಇಲ್ಲಿ ಬಹಳ ಕ್ಲೇಶದಿಂದ ಸಾಧಾರಣ್ಯವನ್ನು ಸಂಪಾದಿಸಿ ಕಾರ್ಯವನ್ನು ನಿರ್ವಹಿಸಬೇಕಾಗಿದೆ. ಅಂಗುಲೀಭಿರಿವ ಎಂಬ ಕಡೆ ವಾಕ್ಯಾರ್ಥದ ಮೂಲಕ ತೋರುವ ಉಪಮೆಯಲ್ಲಿ ಇವ ಪದಕ್ಕೆ 'ಮರೀಚಿಭೀರಿವ' ಎಂಬಲ್ಲಿ ಬೇರೊಂದು ಕಡೆ ಅನ್ವಯವುಂಟೆಂದು ಒಪ್ಪಿಕೊಂಡು ಹೀಗೆ ಬೇರೆ ಬೇರೆಯಾಗಿ ಅನ್ವಯಿಸುವುದರಿಂದ ತೋರುವ ಪ್ರಕೃತ ಮತ್ತು ಅಪ್ರಕೃತವೆನಿಸಿದ ವಸ್ತುಗಳೆರಡಕ್ಕೂ ಹಾಗೆಯೇ 'ಕುಡ್ಮಲೀಕೃತಸರೋಜಲೋಚನಂ' ಎಂಬ ಕಡೆ ಸಮಾಸಾರ್ಥದಲ್ಲಿ ತೋರುವ ಉಪಮೆಯಲ್ಲಿ 'ಲೋಚನವು ಸರೋಜಕ್ಕೆ ಸದೃಶವಾದುದು' ಎಂದು ಬೇರೆ ಬಗೆಯಲ್ಲಿ ಸಮಾಸವನ್ನು ಮಾಡಿಕೊಂಡು ಹೀಗೆ ಎರಡು ಸಮಾಸಗಳಿಂದ ತೋರುವ ಎರಡು ಅರ್ಥಗಳಿಗೂ ಅಭೇದವನ್ನು ಇಟ್ಟುಕೊಂಡು ಇಲ್ಲಿ ಸಾಧಾರಣಧರ್ಮವನ್ನು ಸಾಧಿಸಿಕೊಳ್ಳಬೇಕಾಗಿದೆ. ಹೀಗೆ ಸಾಧಿಸಿಕೊಳ್ಳದಿದ್ದರೆ ಉತ್ಪ್ರೇಕ್ಷೆ ಸಮಾಸೋಕ್ತಿಗಳೇ ತೋರುವಂತಿಲ್ಲ. ಈ ರೀತಿಯಲ್ಲಿ ಉಪಮೆಗಳೆರಡೂ ಉತ್ಪ್ರೇಕ್ಷೆ ಸಮಾಸೋಕ್ತಿಗಳಿಗೆ ಇಲ್ಲಿ ಆಶ್ರಯವೆನಿಸುತ್ತವೆ.

ಯದ್ವಾ ಇಹ ಪ್ರಕೃತಿಕೋಟಿಗತಾನಾಂ ಮರೀಚಿತಿಮಿರಸರೋಜಾನಾಂ ಚ ತದೀ- ಅಪ್ರಕೃತಕೋಟಿಗತಾನಾಂ ಚ ಅಂಗುಲೀಕೇಶಸಂಚಯಲೋಚನಾನಾಂ ಚ ತದೀ- ಘಾವರಣತ್ವನೀಲನೀರಂಧ್ರತ್ವಕಾಂತಿಮತ್ತ್ವಾದಿನಾ ಸದೃಶಾನಾಂ ಪ್ರಾತಿಸ್ವಿಕರೂಪೇಣ ಭೇದವದನುಗತಸಾದೃಶ್ಯಪ್ರಯೋಜಕರೂಪೇಣ ಅಭೇದೋಽಪ್ಯಸ್ತಿ ಸ ಚಾತ್ರ ವಿವಕ್ಷಿತ

ಏವ ಭೇದಾಭೇದೋಭಯಪ್ರಧಾನೋಪಮೇತ್ಯಾಲಂಕಾರಿಕಸಿದ್ಧಾಂತಾತ್. ತತ್ರ ಚ ಪ್ರಯೋಜಕಾಂಶನಿಷ್ಕರ್ಷನ್ಯಾಯೇನ ಅಭೇದಗರ್ಭತಾಂಶೋಪಜೀವನೇನ ಸಾಧಾರಣ್ಯಂ ಸಂಪಾದ್ಯ ಪ್ರಧಾನಭೂತೋತ್ಪ್ರೇಕ್ಷಾ ಸಮಾಸೋಕ್ತ್ಯಂಗತಾ ನಿರ್ವಾಹ್ಯಾ. ನ ಹಿ ಪ್ರಕಾಶ ಶೀತಾಪನಯನಶಕ್ತಿಮತಃ ಸೌರತೇಜಸಃ ಶೀತಾಪನಯನಶಕ್ತಿಮಾತ್ರೇಣ ಶೀತಾಲೂಪಯೋಗಿತಾ ನ ದೃಷ್ಟಾ- ಏವಮನಭ್ಯುಪಗಮೇ ಚ-

ಪಾಂಡ್ಯೋಽಯಮಂಸಾರ್ಪಿತಲಂಬಹಾರಃ
ಕ್ಲಪ್ತಾಂಗರಾಗೋ ಹರಿಚಂದನೇನ ।
ಆಭಾತಿ ಬಾಲಾತಪರಕ್ತಸಾನುಃ ಸ
ನಿರ್ಝರೋದ್ಗಾರ ಇವಾದ್ರಿರಾಜಃ ॥

ಇತ್ಯಾದ್ಯುಪಮಾಪಿ ನ ನಿರ್ವಹೇತ್. ನ ಹ್ಯತ್ರ ಅದ್ರಿರಾಜಪಾಂಡ್ಯಯೋಃ ಉಪಮಾನೋಪಮೇಯಯೋಃ ಅನುಗತಃ ಸಾಧಾರಣಧರ್ಮೋನಿರ್ದಿಷ್ಟಃ. ಏಕತ್ರ ಬಾಲಾತಪನಿರ್ಝರೌ ಅನ್ಯತ್ರ ಹರಿಚಂದನಹಾರೌ ಇತಿ ಧರ್ಮಭೇದಾತ್. ತಸ್ಮಾತ್ತತ್ರ ಆತಪಹರಿಚಂದನಯೋಃ ನಿರ್ಝರಹಾರಯೋಶ್ಚ ಸದೃಶಯೋರಭೇದಾಂಶೋಪಜೀವನಮೇವ ಗತಿಃ.

ಪಿನಷ್ಟೀವ ತರಂಗಾಗ್ರೈಃ ಸಮುದ್ರಃ ಫೇನಚಂದನಮ್ ।
ತದಾದಾಯ ಕರೈರಿಂದುರ್ಲಿಂಪತೀವ ದಿಗಂಗನಾಃ ॥

ಇತ್ಯತ್ರೋತ್ಪ್ರೇಕ್ಷಯೋಃ ಕಾಲಭೇದೇಽಪಿ ಸಮಪ್ರಾಧಾನ್ಯಮ್ ಅನ್ಯೋನ್ಯನಿರಪೇಕ್ಷವಾಕ್ಯದ್ವಯೋಪಾತ್ತತ್ವಾತ್. ತದಾದಾಯೇತಿ ಫೇನಚಂದನರೂಪಕಮಾತ್ರೋಪಜೀವನೇನ ಪೂರ್ವೋತ್ಪ್ರೇಕ್ಷಾನಪೇಕ್ಷಣಾತ್. ನ ಚೈವಂ ಲಿಂಪತೀವ ತಮೋಽಂಗಾನೀತಿವತ್ ಉತ್ಪ್ರೇಕ್ಷಾದ್ವಯಸ್ಯ ಸಂಸೃಷ್ಟಿರೇವೇಯಮಿತಿ ವಾಚ್ಯಮ್. ಲೌಕಿಕಸಿದ್ಧಪೇಷಣಲೇಪನಪೌರ್ವಾಪರ್ಯಘಟನಾಕಾಂಕ್ಷಾ ಉತ್ಪ್ರೇಕ್ಷಾದ್ವಯಪೌರ್ವಾಪರ್ಯೇಣ ಚಾರುತಾತಿಶಯಸಮುನ್ಮೇಷತಃ ಸಂಸೃಷ್ಟಿವೈಷಮ್ಯಾತ್. ತಸ್ಮಾದ್ದರ್ಶಾದಿವತ್ ಏಕಫಲಸಾಧನತಯಾ ಸಮಪ್ರಧಾನಮಿದಮುತ್ಪ್ರೇಕ್ಷಾದ್ವಯಂ. ಏವಂ ಸಮಪ್ರಧಾನಸಂಕರೋಽಪಿ ವ್ಯಾಖ್ಯಾತಃ.

ಇಲ್ಲಿ ವಿಶೇಷಣಪೂರ್ವಪದಕರ್ಮಧಾರಯಸಮಾಸ ಮತ್ತು ಉಪಮಿತ ಸಮಾಸ ಇವೆರಡರ ಮೂಲಕ ದೊರೆಯುವ ಅರ್ಥಗಳೆರಡಕ್ಕೂ ಅಭೇದವನ್ನು ನಿಶ್ಚಯಿಸಿಕೊಂಡು ಆ ಮೂಲಕ ಸಾಧಾರಣಧರ್ಮವುಂಟೆಂದು ಭಾವಿಸಿ ಅಲ್ಲಿ ತೋರುವ ಉಪಮೆಗಳಿಂದಲೇ ಉತ್ಪ್ರೇಕ್ಷೆ ಮತ್ತು ಸಮಾಸೋಕ್ತಿಗಳೆರಡೂ ಸಂಭವಿ

ಸುತ್ತವೆ ಎಂದು ಹಿಂದೆ ನಿರ್ಣಯಿಸಿದ್ದು ಹೊಂದುವುದಿಲ್ಲವೆಂದು ಆಕ್ಷೇಪಿಸುತ್ತಾನೆ. ಈ ರೀತಿಯಲ್ಲಿ ಸಮಾಸೋಕ್ತಿಯು ಸಂಭವಿಸುವುದಿಲ್ಲವೆಂದು ಸಮಾಸೋಕ್ತಿಪ್ರಕರಣ ದಲ್ಲಿ ವ್ಯವಸ್ಥೆ ಮಾಡಲಾಗಿದೆ. ಇಲ್ಲಿ ಪದಗಳನ್ನು ಹೇಗೆ ಪ್ರಯೋಗಿಸಿದೆಯೋ ಹಾಗೆಯೇ ಅನ್ವಯಿಸಿ ಸಮಾಸವನ್ನು ಮಾಡಿದರೂ ಪ್ರಕೃತಾಂಶಕ್ಕೆ ಸಂಬಂಧಿಸಿದ ಮರೀಚಿ, ತಿಮಿರ, ಸರೋಜ ಇವುಗಳಿಗೂ ಅಪ್ರಕೃತಾಂಶಕ್ಕೆ ಸೇರಿದ ಅಂಗುಲಿ, ಕೇಶಸಂಚಯ, ಲೋಚನ ಇವುಗಳಿಗೂ ಒಂದೊಂದರಲ್ಲೂ ಇರುವ ಅಸಾಧಾರಣ ರೂಪದಿಂದ ಭೇದವಿದ್ದರೂ ಅವೆಲ್ಲದರಲ್ಲೂ ಅನುಸರಿಸಿಕೊಂಡಿರುವ ಕಾಂತಿಮತ್ತ್ವ ಮೊದಲಾದ ಧರ್ಮದಿಂದ ಅಭೇದವೂ ಉಂಟೆಂಬುದರಲ್ಲಿ ಯಾರಿಗೂ ಯಾವ ವಿವಾದವೂ ಇಲ್ಲ. ಇದನ್ನು ಎಲ್ಲರೂ ಒಪ್ಪಿರುವುದರಿಂದ ಆ ಬಗೆಯ ಸಾಧಾರ ಣಾಂಶವನ್ನು ಇಟ್ಟುಕೊಂಡು ಅದನ್ನು ಆ ವಿಶೇಷಣಗಳೆಲ್ಲಕ್ಕೂ ಸಾಧಾರಣವೆಂದು ಭಾವಿಸಿ ಆ ಮೂಲಕ ಉತ್ಪ್ರೇಕ್ಷೆ ಮತ್ತು ಸಮಾಸೋಕ್ತಿಗಳೆರಡೂ ಸಂಭವಿಸುವುದ ರಲ್ಲಿ ಅಡ್ಡಿಯಿಲ್ಲ. ಹೀಗೆ ವಿಶೇಷಣಗಳಿಗೆ ಭೇದವಿದ್ದರೂ ಅವುಗಳೊಳಗಿನ ಸಾಧಾ ರಣಧರ್ಮದ ಮೂಲಕ ಅಭೇದವನ್ನು ಒಪ್ಪಿಕೊಳ್ಳುವುದೇ ಇಲ್ಲಿ ಹೇಳಬೇಕಾಗಿರುವ ಅಂಶ. ಅದೇ ಇಲ್ಲಿ ವಿವಕ್ಷಿತವೆನಿಸಿದೆ. ಇದನ್ನೇ ಆಲಂಕಾರಿಕರು ಭೇದಾಭೇದ ಪ್ರಧಾನೋಪಮೆ ಎಂದು ಕರೆದಿರುವರು, ಭೇದಪ್ರಧಾನ, ಅಭೇದಪ್ರಧಾನ, ಭೇದಾ ಭೇದಪ್ರಧಾನ ಹೀಗೆ ಸಾಧರ್ಮ್ಯವು ಮೂರು ಬಗೆಯಾಗಿದೆ ಎಂದು ಆರಂಭಿಸಿ ವಿದ್ಯಾನಾಥನು ಉಪಮೆ, ಅನನ್ವಯ, ಉಪಮೇಯೋಪಮೆ, ಸ್ಮರಣ ಈ ಆಲಂಕಾರ ಗಳು ಭೇದಾಭೇದಪ್ರಧಾನವಾದ ಸಾಧರ್ಮ್ಯವನ್ನು ಅವಲಂಭಿಸಿರುವುದಾಗಿ ತಿಳಿಸಿ ದ್ದಾನೆ. ಭೇದ ಅಭೇದ ಇವೆರಡನ್ನೂ ಒಳಗೊಂಡ ಉಪಮೆಯಲ್ಲಿ ಭೇದಾಂಶಕ್ಕೆ ಪ್ರಯೋಜನವಿಲ್ಲದ್ದರಿಂದ ಅಂತಹ ಉಪಮೆಯಿಂದ ಹೇಗೆ ಉತ್ಪ್ರೇಕ್ಷೆ ಸಮಾಸೋಕ್ತಿ ಮೊದಲಾದ ಆಲಂಕಾರಗಳು ಸಂಭವಿಸುತ್ತವೆ ಎಂದು ಆಶಂಕಿಸಿ ಪರಿಹರಿಸುತ್ತಾನೆ. ಇವೆರಡರಲ್ಲಿ ಯಾವ ಅಂಶದಿಂದ ಪ್ರಕೃತಕಾರ್ಯಕ್ಕೆ ಪ್ರಯೋಜನವಾಗುವುದೋ ಅದನ್ನು ಇಟ್ಟುಕೊಂಡು ವ್ಯವಹರಿಸುವ ಪದ್ಧತಿಯು ರೂಢಿಯಲ್ಲಿರುವುದರಿಂದ ಅಭೇದಾಂಶವನ್ನು ಆಶ್ರಯಿಸಿ ಸಾಧರ್ಮ್ಯವನ್ನು ಸಂಪಾದಿಸುವುದರಲ್ಲಿ ತಪ್ಪೇನೂ ಕಾಣುವುದಿಲ್ಲ. ಆ ಮೂಲಕ ಪ್ರಧಾನವಾಗಿ ಉತ್ಪ್ರೇಕ್ಷೆಯೇ ತೋರಿ ಅದರಿಂದ ಸಮಾಸೋಕ್ತಿಯು ಸಂಭವಿಸುತ್ತದೆ ಎಂದು ಒಪ್ಪಬಹುದು. ಭೇದ ಅಭೇದ ಇವೆರಡೂ ಇರುವ ಉಪಮೆಯಲ್ಲಿ ಭೇದಾಂಶದಿಂದ ಯಾವ ಪ್ರಯೋಜನವೂ ಇಲ್ಲದ್ದರಿಂದ ಅಂತಹ ಉಪಮೆಯನ್ನೇ ಉತ್ಪ್ರೇಕ್ಷೆ ಮೊದಲಾದ ಅಲಂಕಾರಗಳಿಗೆ ಹೇಗೆ ಉಪಯೋಗಿಸಿಕೊಳ್ಳಬಹುದೆಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ಈಗ ತಿಳಿಸುತ್ತಾನೆ. ಸೂರ್ಯನ ತೇಜಸ್ಸಿಗೆ ವಸ್ತುಗಳನ್ನು ಪ್ರಕಾಶಗೊಳಿಸುವ ಶಕ್ತಿಯಿರುವಂತೆಯೇ ಶೀತವನ್ನು ಪರಿಹರಿಸುವ ಶಕ್ತಿಯೂ ಇದೆ. ಶೀತದಿಂದ ನರಳುತ್ತಿರುವವನು ತನ್ನ ಶೀತವನ್ನು ತೊಲಗಿಸಲಿಕ್ಕಾಗಿ ಮಾತ್ರವೇ ಸೂರ್ಯನ

ಪ್ರಕಾಶವನ್ನು ಉಪಯೋಗಿಸಿಕೊಳ್ಳುತ್ತಾನೆ. ಅವನಿಗೆ ಆಗ ಸೂರ್ಯನಲ್ಲಿರುವ ವಸ್ತುಪ್ರಕಾಶನಸಾಮರ್ಥ್ಯವು ಬೇಕಾಗಿಲ್ಲ. ಅವನು ಉಪಯೋಗಿಸದಿದ್ದರೂ ಸೂರ್ಯನ ತೇಜಸ್ಸಿನಲ್ಲಿ ಅದು ಇದ್ದೇ ಇರುತ್ತದೆ. ಹಾಗೆ ಉಪಮೆಯಲ್ಲಿ ಭೇದ ಮತ್ತು ಅಭೇದಗಳೆರಡು ಇದ್ದರೂ ಸಹ ಅಭೇದಾಂಶವನ್ನು ಮಾತ್ರ ಪರಿಗ್ರಹಿಸಿ ಆ ಮೂಲಕ ಉತ್ಪ್ರೇಕ್ಷಾದ್ಯಾಲಂಕಾರಗಳು ಸಂಭವಿಸುವುದರಲ್ಲಿ ಯಾವ ಆಕ್ಷೇಪವೂ ಬರುವಂತಿಲ್ಲ.

ಹೀಗೆ ನೀವು ಒಪ್ಪದೇ ಹೋದರೆ ಈ ಮುಂದಿನ ಪದ್ಯದಲ್ಲಿ ಉಪಮಾಲಂಕಾರವೇ ತಪ್ಪಿಹೋಗುತ್ತದೆ. "ಈ ಪಾಂಡ್ಯರಾಜನು ಭುಜಗಳೆರಡಲ್ಲೂ ಉದ್ದವಾದ ಮುಕ್ತಾಹಾರಗಳನ್ನು ಹಾಕಿಕೊಂಡು ರಕ್ತಚಂದನವನ್ನು ಮೈಗೆಲ್ಲಾ ಹಚ್ಚಿಕೊಂಡು ಬಾಲಸೂರ್ಯನ ಸಂಪರ್ಕದಿಂದ ತಪ್ಪಲುಪ್ರದೇಶಗಳಲ್ಲೆಲ್ಲಾ ಕೆಂಪಾಗಿರುವ ನೀರಿನ ಪ್ರವಾಹದೊಡಗೂಡಿದ ಹಿಮಾಲಯದಂತೆ ಶೋಭಿಸುತ್ತಾನೆ." ಇಲ್ಲಿ ಅವಶ್ಯವಾಗಿ ಉಪಮಾಲಂಕಾರವನ್ನು ಹೇಳಲೇಬೇಕು.'' ಇದು ಭೇದಾಭೇದಮೂಲವಾದ ಸಾದೃಶ್ಯವನ್ನು ಅವಲಂಬಿಸಿದೆ. ಇಲ್ಲಿ ಅಭೇದಾಂಶವಷ್ಟನ್ನೇ ಗ್ರಹಿಸಲಾಗುವುದಿಲ್ಲ ; ಭೇದಾಂಶವನ್ನೂ ಗ್ರಹಿಸಲೇಬೇಕು" ಎಂದು ಹೇಳುವುದಾದರೆ ಉಪಮೆಯನ್ನು ಹೇಳಲಿಕ್ಕೆ ಆಗದೇ ಹೋಗುತ್ತದೆ. ಇಲ್ಲಿ ಉಪಮಾನವೆನಿಸಿದ ಅದ್ರಿರಾಜ, ಉಪಮೇಯವೆನಿಸಿದ ಪಾಂಡ್ಯ ಇವರಿಬ್ಬರಿಗೂ ಅನ್ವಯಿಸುವ ಒಂದು ಸಾಧಾರಣ ಧರ್ಮವನ್ನೇ ಹೇಳಿಲ್ಲ. ಒಂದು ಕಡೆ ಬಾಲಸೂರ್ಯನ ಕಿರಣ ಮತ್ತುಪ್ರವಾಹಗಳನ್ನೂ ಮತ್ತೊಂದು ಕಡೆ ಹರಿಚಂದನಮುಕ್ತಾಹಾರಗಳನ್ನೂ ಹೇಳಿರುವುದರಿಂದ ಧರ್ಮಗಳು ಬೇರೆ ಬೇರೆಯೇ ಆಗಿವೆ. ಆದರೂ ಬಾಲಸೂರ್ಯನ ಕಿರಣ ಮತ್ತು ಹರಿಚಂದನ ಇವೆರಡಕ್ಕೂ ಪ್ರವಾಹ ಮತ್ತು ಮುಕ್ತಾಹಾರ ಇವೆರಡಕ್ಕೂ ಸಾದೃಶ್ಯಮೂಲವಾದ ಅಭೇದವನ್ನು ಇಟ್ಟುಕೊಂಡು ಇಲ್ಲಿ ಉಪಮೆಯನ್ನು ಹೇಳಲಾಗಿದೆ. ಹೀಗೆ ಭೇದ ವಿದ್ದರೂ ಅದರೊಳಗೆ ನೆಲಸಿರುವ ಅಭೇದಾಂಶವನ್ನಾಶ್ರಯಿಸುವುದೊಂದೇ ಇಲ್ಲಿ ಉಳಿದಿರುವ ಮಾರ್ಗ. ಹಾಗೆಯೇ 'ಅಂಗುಲೀಭಿರಿವ' ಎಂಬ ಪದ್ಯದಲ್ಲಿ ಭೇದ ಮತ್ತು ಅಭೇದಗಳೆರಡಕ್ಕೂ ಸಮಪ್ರಾಧಾನ್ಯವಿದ್ದರೂ ಅಭೇದಾಂಶವನ್ನು ಇಟ್ಟುಕೊಂಡು ಸಾಮರ್ಥ್ಯವನ್ನು ಸಾಧಿಸಿ ಆ ಮೂಲಕ ಉತ್ಪ್ರೇಕ್ಷಸಮಾಸೋಕ್ತಿಗಳು ಸಂಭವಿಸುವುದರಲ್ಲಿ ಯಾವ ಆಕ್ಷೇಪವೂ ನಿಲ್ಲುವಂತಿಲ್ಲ.

ತನ್ನ ನಿಲುವನ್ನು ಸಮರ್ಥಿಸಲು ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಸಮುದ್ರವು ಅಲೆಗಳ ತುದಿಗಳಿಂದ ನೊರೆ ಎಂಬ ಶ್ರೀಗಂಧವನ್ನು ಅರೆಯುತ್ತಿದೆಯೋ ಏನೋ ಎಂಬಂತಿದೆ. ಅದನ್ನು ತೆಗೆದುಕೊಂಡು ಚಂದ್ರನು ದಿಕ್ಕುಗಳೆಂಬ ಅಂಗನೆಯರಿಗೆ ಒಳಿಯುತ್ತಿರುವನೋ ಏನೊ ಎಂಬಂತಿದೆ." ಇಲ್ಲಿ

ಎರಡು ಉತ್ಪ್ರೇಕ್ಷೆಗಳನ್ನು ತಿಳಿಸಿದೆ. ಇವೆರಡೂ ಏಕಕಾಲದಲ್ಲಿ ಸಂಭವಿಸುವುದಿಲ್ಲ. ಮೊದಲು ಸಮುದ್ರವು ಗಂಧವನ್ನು ಅರೆಯುತ್ತದೆ, ಆಮೇಲೆ ಆ ಗಂಧವನ್ನು ಚಂದ್ರನು ದಿಗಂಗನೆಯರಿಗೆ ಬಳಿಯುತ್ತಾನೆ. ಹೀಗೆ ಇಲ್ಲಿ ಕಾಲಭೇದವಿದ್ದರೂ ಪ್ರಾಧಾನ್ಯವು ಮಾತ್ರ ಎರಡು ಕ್ರಿಯೆಗಳಿಗೂ ಸಮವಾಗಿ ನೆಲಸಿದೆ. ಇವೆರಡೂ ಸಹ ಬೇರೆ ಬೇರೆ (ಒಂದನ್ನೊಂದು ಅಪೇಕ್ಷಿಸದೆ ಇರುವ) ವಾಕ್ಯಗಳಿಂದಲೇ ನಿರ್ದಿಷ್ಟ ವಾಗಿವೆ. ತದಾದಾಯ ' ಆ ಗಂಧವನ್ನು ತೆಗೆದುಕೊಂಡು ' ಎಂದು ಹೇಳಿರುವುದ ರಿಂದ ನೊರೆಯಲ್ಲಿ ಗಂಧವನ್ನು ಆರೋಪಿಸಿರುವ ಪ್ರಯುಕ್ತ ಅದನ್ನಾಶ್ರಯಿಸಿಕೊಂಡು ಹಿಂದಿನ ಉತ್ಪ್ರೇಕ್ಷೆಯನ್ನು ಅಪೇಕ್ಷಿಸದೆಯೇ ಎರಡನೆಯ ಉತ್ಪ್ರೇಕ್ಷೆಯು ತೋರಲ ಬಹುದು. ಇಲ್ಲಿ ಹೀಗೆ ಭೇದವಿದ್ದರೂ ಚಮತ್ಕಾರವು ಎರಡರಲ್ಲೂ ಸಮಾನ ವಾಗಿರುವುದರಿಂದ ಭೇದವನ್ನು ಯಾರೂ ಗಮನಿಸುವುದಿಲ್ಲ. ಎರಡು ಉತ್ಪ್ರೇಕ್ಷೆ ಗಳಿಗೂ ಸಂಸೃಷ್ಟಿಯನ್ನು ಹೇಳದೆ ಸಾಂಕರ್ಯವನ್ನೇ ಹೇಳುವುದು ಉಚಿತವನಿಸಿದೆ. ಹೀಗೆ ಕಾಲಭೇದವಿದ್ದರೂ ಇಲ್ಲಿ ಸಮಪ್ರಾಧಾನ್ಯವಿರುವಂತೆ ಅಂಗುಲೀಭಿಪರಿ ಎಂಬಲ್ಲಿಯೂ ಭೇದಾಭೇದಮೂಲವಾದ ಉಪಮೆಯ ಮೂಲಕ ತೋರುವ ಉತ್ಪ್ರೇಕ್ಷೆಗೂ ಸಮಾಸೋಕ್ತಿಗೂ ಸಮಪ್ರಾಧಾನ್ಯವನ್ನು ಹೇಳುವುದರಲ್ಲಿ ಅಡ್ಡಿ ಇಲ್ಲ' ಹೀಗೆ ಇಲ್ಲಿ ಸಮಪ್ರಾಧಾನ್ಯವನ್ನು ಹೇಳುವುದಾದರೆ 'ಲಿಂಪತೀವ ತಮೋಽಙ್ಗಾನಿ. ಎಂಬಂತೆ ಇಲ್ಲಿ ತೋರುವ ಉತ್ಪ್ರೇಕ್ಷೆಗಳೆರಡಕ್ಕೂ ಸಂಸೃಷ್ಟಿಯನ್ನೇ ಹೇಳೋಣವೆಂದು ಆಕ್ಷೇಪಿಸುವುದೂ ಯುಕ್ತವಾಗಿ ಕಾಣುವುದಿಲ್ಲ. ಅಲ್ಲಿ ತಮೋಲೇಪನ, ನಭೋ ವರ್ಷಣ ಇವೆರಡರ ಮೇಲನವು ಸಂಸೃಷ್ಟಿ ಎನಿಸಬಹುದು. ಆದರೆ 'ಪಿನಷ್ಟೀವ' ಎಂಬ ಪದ್ಯದಲ್ಲಿ ಸಮುದ್ರದ ಪೇಷಣ, ಚಂದ್ರನ ಲೇಪನ ಇವೆರಡೂ ಬೇರೆ ಬೇರೆ. ಕಾಲಗಳಲ್ಲಿ ನಡೆಯುವ ಪ್ರಯುಕ್ತ ಇಲ್ಲಿ ತೋರುವ ಉತ್ಪ್ರೇಕ್ಷೆಗಳೆರಡಕ್ಕೂ ಕಾಲ ಭೇದದಿಂದಲೇ ಹೆಚ್ಚಿನ ಸೌಂದರ್ಯವು ಕಾಣುತ್ತಿರುವುದರಿಂದ ಇದನ್ನು ಸಂಸೃಷ್ಟಿ ಎಂದು ಹೇಳುವುದು ಯುಕ್ತವಲ್ಲ. ದರ್ಶಪೂರ್ಣಮಾಸವೆಂಬ ಒಂದೇ ಯಾಗವನ್ನು ಅಮಾವಾಸ್ಯೆ ಮತ್ತು ಪೂರ್ಣಿಮೆಗಳಲ್ಲಿ ಮಾಡಬೇಕಾಗಿರುವುದರಿಂದ ಅವೆರಡ ರಿಂದಲೂ ದೊರಕುವ ಸ್ವರ್ಗವೆಂಬ ಫಲವು ಒಂದೇ ಬಗೆಯಾದ್ದರಿಂದ ಅವೆರಡಕ್ಕೂ ಸಮಪ್ರಾಧಾನ್ಯವನ್ನು ಒಪ್ಪಲಾಗಿದೆ. ಅಮಾವಾಸ್ಯೆಯಲ್ಲಿ ಅದನ್ನು ಮಾಡಿದವನು ಪೂರ್ಣಿಮೆಯಲ್ಲೂ ಮಾಡಬೇಬೇಕಾದ್ದರಿಂದ ಬೇರೆ ಬೇರೆ ಕಾಲಗಳಲ್ಲಿ ಅದನ್ನು ಆಚರಿಸಿದ ಮಾತ್ರದಿಂದಲೇ ಅದಕ್ಕೆ ಸಮಪ್ರಾಧಾನ್ಯವು ತಪ್ಪುವುದಿಲ್ಲ. ಹಾಗೆ ಪಿನಷ್ಟೀವ ಎಂಬಲ್ಲಿ ಬೇರೆ ಬೇರೆ ಕಾಲಗಳಲ್ಲಿ ತೋರುವ ಉತ್ಪ್ರೇಕ್ಷೆಗಳಲ್ಲೂ ಒಂದೊಂದು ಬಗೆಯ ಚಮತ್ಕಾರವು ಕಂಡುಬರುವುದರಿಂದ ಸಮಪ್ರಾಧಾನ್ಯಕ್ಕೆ ಯಾವ ತಡೆಯೂ ಬರುವಂತಿಲ್ಲ. ಹೀಗೆ ಸಮಪ್ರಧಾನಸಂಕರವನ್ನು ತಿಳಿಸಿ ಯಾಯಿತು.

## ೧೨೨. ಸಂದೇಹಸಂಕರಾಲಂಕಾರ

ಸಂದೇಹಸಂಕರೋ ಯಥಾ—

ಶಶಿನಮುಪಗತೇಯಂ ಕೌಮುದೀ ಮೇಘಮುಕ್ತಂ
ಜಲನಿಧಿಮನುರೂಪಂ ಜಹ್ನುಕನ್ಯಾವತೀರ್ಣಾ ।
ಇತಿ ಸಮಗುಣಯೋಗಪ್ರೀತಯಸ್ತತ್ರ ಪೌರಾಃ
ಶ್ರವಣಕಟು ನೃಪಾಣಾಮೇಕವಾಕ್ಯಂ ವಿವವ್ರುಃ ॥

ಅತ್ರ ಇಯಮಿತಿ ಸರ್ವನಾಮ್ನಾ ಯದ್ಯಜಂ ವೃತವತೀ ಇಂದುಮತೀ ವಿಶಿಷ್ಟ-ರೂಪೇಣನಿರ್ದಿಶ್ಯತೇ ತದಾ ಬಿಂಬಪ್ರತಿಬಿಂಬಭಾವಾಪನ್ನ ವಿಶಿಷ್ಟಯೋಃ ಸದೃಶಯೋಃ ಐಕ್ಯಾರೋಪರೂಪಾ ನಿದರ್ಶನಾ. ಯದಿ ತೇನ ಸಾ ಸ್ವರೂಪೇಣೈವ ನಿರ್ದಿಶ್ಯತೇ ಬಿಂಬಭೂತೋ ಧರ್ಮಸ್ತು ಪೂರ್ವಪ್ರಸ್ತಾವಾತ್ ಸಮಗುಣಯೋಗಪ್ರೀತಯ ಇತಿ ಪೌರವಿಶೇಷಣಾಚ್ಚ ಅವಗಮ್ಯತೇ ತತ್ರ ಪ್ರಸ್ತುತೇ ಧರ್ಮಿಣಿ ತದ್ವೃತ್ತಾಂತಪ್ರತಿ-ಬಿಂಬಭೂತಾಪ್ರಸ್ತುತವೃತ್ತಾಂತಾರೋಪರೂಪಂ ಲಲಿತಮಿತ್ಯನಧ್ಯವಸಾಯಾತ್ಸಂ-ದೇಹಃ.

ವಿಲೀಯೇಂದುಃ ಸಾಕ್ಷಾದಮೃತರಸವಾಪೀ ಯದಿ ಭವೇತ್
ಕಲಂಕಸ್ತತ್ರತ್ಯೋ ಯದಿ ನ ವಿಕಚೇರಾದೀವರವನಮ್ ।
ತತಃ ಸ್ನಾನಕ್ರೀಡಾಜನಿತಜಡಭಾವೈರವಯವೈಃ
ಕದಾಚಿನ್ಮುಂಚೇಯಂ ಮದನಶಿಖಿಪೀಡಾಪರಿಭವಮ್ ॥

ಅತ್ರ ಯದ್ಯೇತಾವತ್ಸಾಧನಂ ಸಂಪದ್ಯೇತ ತದಾ ತಾಪಃ ಶಾಮ್ಯತೀತ್ಯರ್ಥೇ ಕವಿಸಂರಂಭಶ್ಚೇತ್ತದುಪಾತ್ತಸಿದ್ಧ್ಯರ್ಥಮೂಹ ಇತಿ ಸಂಭಾವನಾಲಂಕಾರಃ. ಏತಾ-ವತ್ಸಾಧನಂ ಕದಾಪಿ ನ ಸಂಭವತ್ಯೇವಾತಸ್ತಾಪಶಾಂತಿರಪಿ ಗಗನಕುಸುಮಕಲ್ಪೇತ್ಯರ್ಥೇ ಕವಿಸಂರಂಭಶ್ಚೇತ್ತದುಪಾತ್ತಮಿಥ್ಯಾತ್ವಸಿದ್ಧ್ಯರ್ಥಮಿಥ್ಯಾರ್ಥಾಂತರಕಲ್ಪನಾರೂಪಾ ಮಿಥ್ಯಾಧ್ಯವಸಿತಿರಿತ್ಯುಭಯಥಾ ಸಂಭವಾತ್ಸಂದೇಹಃ.

ಸಿಕ್ತಂ ಸ್ಫಟಿಕಕುಂಭಾಂತಃಸ್ಥಿತಿಶ್ವೇತೀಕೃತೈರ್ಜಲೈಃ ।
ಮೌಕ್ತಿಕಂ ಚೇಲ್ಲತಾಂ ಸೂತೇ ತತ್ಪುಷ್ಪೈಸ್ತೇ ಸಮಂ ಯಶಃ ॥

ಇತ್ಯಾದಿಷ್ವಪಿ ಸಂಭಾವನಾಮಿಥ್ಯಾಧ್ಯವಸಿತಿಸಂದೇಹಸಂಕರೋ ದ್ರಷ್ಟವ್ಯಃ.

ಸಂದೇಹಸಂಕಾರಾಲಂಕಾರವನ್ನು ಇಲ್ಲಿ ವಿವರಿಸುತ್ತಾನೆ. ಅಜನಿಗೆ ಇಂದುಮತಿ ಯೊಡನೆ ಸ್ವಯಂವರಮಹೋತ್ಸವವು ನಡೆದಾಗ ಸಮಾನವಾದ ಗುಣವುಳ್ಳ ಅಜ ಮತ್ತು ಇಂದುಮತಿ ಇವರ ಯೋಗದಿಂದ ಸಂತೋಷಗೊಂಡ ನಗರದ ಜನರು ಅಲ್ಲಿ ಸೇರಿದ್ದ ಬೇರೆ ರಾಜರ ಕಿವಿಗಳಿಗೆ ಕಠಿಣವಾಗುವಂತೆ ಒಂದೇ ವಾಕ್ಯವನ್ನು ಉಚ್ಚರಿಸಿದರು "ಬೆಳದಿಂಗಳೆನಿಸಿದ ಈಕೆಯು ಮೇಘದಿಂದ ಬಿಡುಗಡೆಯಾಗಿರುವ ಚಂದ್ರನೆನಿಸಿದ ಅಜನನ್ನು ಸೇರಿದಳೆಂದೂ ತನಗನುಗುಣವಾದ ಸಮುದ್ರವೆನಿಸಿದ ಅಜ ನನ್ನು ಪ್ರವೇಶಿಸಿದ ಗಂಗೆಯೇ ಈ ಇಂದುಮತಿ ಎಂದೂ ಜನರು ಏಕವಾಕ್ಯವನ್ನು ಪ್ರಯೋಗಿಸಿದರು." ಇಲ್ಲಿ ಇಯಂ ಎಂಬ ಸರ್ವನಾಮದಿಂದ ಈ ಇಂದುಮತಿಯು ಅಜನನ್ನು ವರಿಸಿದಳೆಂದು ವಿಶಿಷ್ಟರೂಪದಿಂದ ತಿಳಿಸುವುದಾದರೆ ಆಗ ಬಿಂಬಪ್ರತಿಬಿಂಬ ಭಾವವೆನಿಸಿದ ಧರ್ಮಗಳಿಂದ ಕೂಡಿದ ಇಬ್ಬರಿಗೂ ಐಕ್ಯವನ್ನು ಆರೋಪಿಸುವ ನಿದರ್ಶನವನ್ನೇ ಇಲ್ಲಿ ಹೇಳಬೇಕು. "ಆ ಸರ್ವನಾಮವು ಇಂದುಮತಿಯನ್ನು ಸ್ವರೂಪದಿಂದಲೇ ತಿಳಿಸುತ್ತದೆ. ಆಗ ಬಿಂಬವೆನಿಸಿದ ಧರ್ಮವು ಪೌರರಿಗೆ ವಿಶೇಷಣವಾಗಿ ಕೊಟ್ಟಿರುವ "ಸಮಗುಣಯೋಗಪ್ರೀತಯಃ" ಎಂಬುದರಿಂದಲೂ ತಿಳಿದು ಬರುತ್ತದೆ" ಎಂದು ಹೇಳುವ ಪಕ್ಷದಲ್ಲಿ ಆಗ ಪ್ರಕೃತಧರ್ಮಿಯಲ್ಲಿ ಆ ವೃತ್ತಾಂತಕ್ಕೆ ಪ್ರತಿಬಿಂಬವೆನಿಸಿದ ಅಪ್ರಕೃತವೃತ್ತಾಂತವನ್ನು ಆರೋಪಿಸುವ ಮೂಲಕ ಲಲಿತಾಲಂಕಾರವೂ ಸಂಭವಿಸುತ್ತದೆ. ಇವೆರಡೂ ಇಲ್ಲಿ ಸೇರಿದ್ದು ಇವುಗಳಲ್ಲಿ ಯಾವುದನ್ನು ಸ್ವೀಕರಿಸಬೇಕೆಂಬ ನಿಶ್ಚಯವಿಲ್ಲದ್ದರಿಂದ ಇದು ಸಂದೇಹಸಂಕರವೆನಿ ಸಿದೆ. "ಚಂದ್ರನು ಅಗ್ನಿಸಂಯೋಗದಿಂದ ಕರಗುವ ತುಪ್ಪದಂತೆ ಯಾವುದಾದ ರೊಂದು ಕಾರಣದೊಡನೆ ಸೇರಿಕೊಂಡು ಅಮೃತಸರದ ಬಾವಿಯಾಗುವುದಾದರೆ ಅವನಲ್ಲಿರುವ ಕಳಂಕವು ವಿಕಸಿತವಾದ ಕನ್ನೈದಲೆಗಳ ಉದ್ಯಾನವಾಗುವುದಾದರೆ ಆಗ ಕಾಮಾಗ್ನಿಯ ಪೀಡೆಯಿಂದುಂಟಾಗಿರುವ ಅವಮಾನವನ್ನು ಸ್ನಾನಕ್ರೀಡೆಯಿಂದ ಶೈತ್ಯವನ್ನು ಹೊಂದಿದ ಅವಯವಗಳಿಂದ ಒಂದು ವೇಳೆ ತೊರೆಯಬಹುದು." ಇಲ್ಲಿ ಪೂರ್ವಾರ್ಧದಲ್ಲಿ ಹೇಳಿರುವಂತೆ " ಚಂದ್ರನು ಕರಗಿ ಅಮೃತದ ಬಾವಿಯಾಗುವ ಪಕ್ಷದಲ್ಲೂ ಅವನೊಳಗೆ ಇರುವ ಕಳಂಕವು ಕನ್ನೈದಿಲೆಗಳ ಉದ್ಯಾನವಾಗುವ ಪಕ್ಷ ದಲ್ಲೂ'' ಎಂಬ ಈ ಎರಡು ಸಾಧನಗಳು ಒದಗುವುದಾದರೆ ಆಗ ನನ್ನ ಸಂತಾಪವು ಶಮನವಾಗುತ್ತದೆ ಎಂಬುದೇ ಕವಿಗೆ ತಾತ್ಪರ್ಯವೆನಿಸಿದರೆ ಆಗ ಇಲ್ಲಿ ಹೇಳಿರುವ ಕಾರ್ಯವು ಸಿದ್ಧಿಸುವುದೆಂದು ಊಹಿಸಬಹುದಾದ ಪ್ರಯುಕ್ತ ಇದು ಸಂಭಾವನಾ ಲಂಕಾರವೆನಿಸುತ್ತದೆ. ಇಂತಹ ಸಾಧನವು ಎಂದಿಗೂ ಸಂಭವಿಸುವುದೇ ಇಲ್ಲ. ಆದ್ದರಿಂದ ತಾಪಶಾಂತಿಯೂ ಸಹ ಆಕಾಶಪುಷ್ಪದಂತೆ ಅಸಂಭವ, ಈ ಅರ್ಥವನ್ನು ತಿಳಿಸುವುದೇ ಕವಿಗೆ ಇಷ್ಟವಾದರೆ ಇಲ್ಲಿ ಹೇಳಿರುವುದನ್ನು ಸುಳ್ಳೆನಿಸುವುದಕ್ಕಾಗಿ ಬೇರೊಂದು ಸುಳ್ಳಿನ ಸಮಾಚಾರವನ್ನು ಕಲ್ಪಿಸಬೇಕೆಂದು ತಿಳಿಸುವ ಮಿಥ್ಯಾಧ್ಯವಸಿತಿ ಎಂಬ ಅಲಂಕಾರವನ್ನೇ ಹೇಳಬೇಕಾಗುತ್ತದೆ. ಇಲ್ಲಿ ಎರಡೂ ಸಂಭವಿಸುವುದರಿಂದ

ಯಾವುದನ್ನು ಅಂಗೀಕರಿಸಬೇಕೆಂಬ ಬಗ್ಗೆ ಆಧಾರವಿಲ್ಲದ್ದರಿಂದ ಸಂದೇಹವು ನೆಲೆಗೊಂಡಿದೆ. ಇವೆರಡು ಉದಾಹರಣೆಗಳ ಜೊತೆಗೆ ಸಂದೇಹಸಂಕರಕ್ಕೆ ಬೇರೊಂದು ಉದಾಹರಣವನ್ನು ಕೊಡುತ್ತಾನೆ. "ಸ್ಫಟಿಕಮಣಿಯಿಂದ ಕೆತ್ತಿರುವ ಗಡಿಗೆಯ ಒಳಗಡೆಯಲ್ಲಿ ಇದ್ದುದರಿಂದ ಬೆಳ್ಳಗಿರುವ ನೀರಿನಿಂದ ಸೆಸೆದ ಮುತ್ತು ಲತೆಯನ್ನು ಹಡೆಯುವುದಾದರೆ ಆದರ ಪುಷ್ಪಗಳೊಡನೆ ನಿನ್ನ ಯಶಸ್ಸು ಸಮವೆನಿಸುತ್ತದೆ.'' ಇಲ್ಲಿಯೂ ಸಂಭಾವನೆ ಮತ್ತು ಮಿಥ್ಯಾಧ್ಯವಸತಿ ಇವೆರಡೂ ಸೇರಿದ್ದರಿಂದ ಇವುಗಳಲ್ಲಿ ಯಾವುದನ್ನು ಇಟ್ಟುಕೊಳ್ಳಬೇಕೆಂಬ ಸಂದೇಹವಿರುವುದರಿಂದ ಇದೂ ಸಂದೇಹಸಂಕರವೆನಿಸಿದೆ.

## ೧೨೩. ಏಕವಚನಾನುಪ್ರವೇಶಸಂಕರ

ಮುಖೇನ ಗರಳಂ ಮುಂಚನ್ನುರ್ಮೋ ವಸತಿ ಚೇತ್ಫಣೀ ।
ಫಲಸಂದೋಹಗುರುಣಾ ತರುಣಾ ಕಿಂ ಪ್ರಯೋಜನಮ್ ? ॥

ಅತ್ರ ಮಹೋರಗವೃತ್ತಾಂತೇ ವರ್ಣ್ಯಮಾನೇ ರಾಜದ್ವಾರರೂಢಖಲವೃತ್ತಾಂತೋಽಪಿ ಪ್ರತೀಯತೇ. ತತ್ರ ಕಿಂ ವಸ್ತುತಸ್ತಥಾಭೂತೋರಗವೃತ್ತಾಂತ ಏವ ಪ್ರಸ್ತುತೇಽಪ್ರಸ್ತುತಃ ಖಲವೃತ್ತಾಂತಃ ತತಃ ಪ್ರತೀಯತ ಇತಿ ಸಮಾಸೋಕ್ತಿಃ ಯದ್ವಾ ಪ್ರಸ್ತುತಖಲವೃತ್ತಾಂತಪ್ರತ್ಯಾಯನಾಯ ಅಪ್ರಸ್ತುತಪ್ರಶಂಸಾ ? ಯದ್ವಾ ವರ್ಣ್ಯಮಾನಮಹೋರಗವೃತ್ತಾಂತಕೀರ್ತನೇನ ಸವಿಶಾಪಸ್ಥಿತಖಲಮರ್ಮೋದ್ಘಾಟನಂ ಕ್ರಿಯತ ಇತಿ ಉಭಯಸ್ಯಾಪಿ ಪ್ರಸ್ತುತತ್ವಾತ್ ಪ್ರಸ್ತುತಾಂಕುರ ಇತಿ ಸಂದೇಹಃ. ಏಕವಚನಾನುಪ್ರವೇಶಸಂಕರಸ್ತು ಶಬ್ದಾರ್ಥಾಲಂಕಾರಯೋರೇವೇತಿ ಲಕ್ಷಯಿತ್ವಾ ಕಾವ್ಯಪ್ರಕಾಶಕಾರ ಉದಾಜಹಾರ.

ಸ್ಪಷ್ಟೋಚ್ಛ್ವಸತ್ಕಿರಣಕೇಸರಸೂರ್ಯಬಿಂಬ
ವಿಸ್ತೀರ್ಣಕರ್ಣಿಕಮಥೋ ದಿವಸಾರವಿಂದಮ್ ।
ಶ್ಲಿಷ್ಟಾಷ್ಟದಿಗ್ದಲಕಲಾಪಮುಖಾವತಾರ
ಬದ್ಧಾಂಧಕಾರಮಧುಪಾವಲಿ ಸಂಚುಕೋಚ ॥

ಅತ್ರೈಕಪದಾನುಪ್ರವಿಷ್ಟೌ ರೂಪಕಾನುಪ್ರಾಸೌ ಯತ್ರೈಕಸ್ಮಿನ್ ಶ್ಲೋಕೇ ಪದಭೇದೇನ ಶಬ್ದಾರ್ಥಾಲಂಕಾರಯೋಃ ಸ್ಥಿತಿಃ ತತ್ರ ತಯೋಃ ಸಂಸೃಷ್ಟಿರಿಹ ತು ಸಂಕರಃ ಇತಿ. ಅಲಂಕಾರಸರ್ವಸ್ವಕಾರಸ್ತು ಏಕಸ್ಮಿನ್ವಾಚಕೇಽನುಪ್ರವೇಶೋ ವಾಚ್ಯಯೋರೇವಾಲಂಕಾರಯೋಃ ಸ್ವಾರಸಿಕಃ, ವಾಚ್ಯಪ್ರತಿಯೋಗಿಕತ್ವಾತ್ ವಾಚ-

ಕಸ್ಯೇತಿ - ಮತ್ತ್ಯಾರ್ಥಾಲಂಕಾರಯೋರಪ್ಯೇಕವಾಚಕಾನುಪ್ರವೇಶಸಂಕರಮುದಾಜಹಾರ.

ಸತ್ಪುಷ್ಕರದ್ಯೋತಿತರಂಗಶೋಭಿ-
ನ್ಯಮಂದಮಾರಬ್ಧಮೃದಂಗವಾದ್ಯೆ ।
ಉದ್ಯಾನವಾಪೀಪಯಸೀವ ಯಸ್ಯಾಂ
ಏಣೀದೃಶೋ ನಾಟ್ಯಗೃಹೇ ರಮಂತೇ ॥

ಅತ್ರ ನಾಟ್ಯಗೃಹವಾಪೀಪಯಸೋಃ ಸತ್ಪುಷ್ಕರೇತ್ಯಾದಿವಿಶೇಷಣಂ ಶಬ್ದಸಾಮ್ಯಂ ಶ್ಲೇಷಃ, ಅಮಂದಮಾರಬ್ಧೇತ್ಯಾದಿವಿಶೇಷಣೇಽರ್ಥಸಾಮ್ಯಮುಪಮಾ, ತದುಭಯಮೇಕಸ್ಮಿನ್ನಿವಶಬ್ದೇಽನುಪ್ರವಿಷ್ಟಮಿತಿ ತದಪಿ ನ ಮನ್ಯಾಮಹೇ. ಸತ್ಪುಷ್ಕರೇತ್ಯಾದಿವಿಶೇಷಣೇಽಪಿ ಶ್ಲೇಷಭಿತ್ತಿಕಾಭೇದಾಧ್ಯವಸಾಯರೂಪಾತಿಶಯೋಕ್ತಿಲಭ್ಯಸ್ಯ ಧರ್ಮಸಾಮ್ಯಸ್ಯೈವ ತತ್ರ ಇವಶಬ್ದಪ್ರತಿಪಾದ್ಯತಯಾ ಶಬ್ದಸಾಮ್ಯಸ್ಯ ತದಪ್ರತಿಪಾದ್ಯತ್ವಾತ್. ಶ್ಲೇಷಭಿತ್ತಿಕಾಭೇದಾಧ್ಯವಸಾಯೇನ ಧರ್ಮಸಾಮ್ಯಮತಾನಂಗೀಕಾರೇ 'ಅಹೋ ರಾಗವತೀ ಸಂಧ್ಯಾ ಜಹಾತಿ ಸ್ವಯಮಂಬರಮ್' ಇತ್ಯಾದಿಶ್ಲೇಷವಿಶೇಷಣಸಮಾಸೋಕ್ತ್ಯುದಾಹರಣೇ ವಿಶೇಷಣಸಾಮ್ಯಾಭಾವೇನ ಸಮಾಸೋಕ್ತ್ಯಭಾವಪ್ರಸಂಗಾತ್. ಶಬ್ದಸಾಮ್ಯಸ್ಯ ಇವಶಬ್ದಪ್ರತಿಪಾದ್ಯತ್ವೇಽಪಿ ಕನ್ಯೋಪಮಾವಾಚಕತ್ವಸ್ಯೈವ ಪ್ರಾಪ್ತ್ಯಾ ಶ್ಲೇಷವಾಚಕತ್ವಾಭಾವಾಚ್ಚ. ಶಬ್ದತೋಽರ್ಥತೋ ವಾ ಕವಿಸಮ್ಮತಸಾಮ್ಯಪ್ರತಿಪಾದನೇ ಸರ್ವವಿಧೇಽಪಿ ಉಪಮಾಲಂಕಾರಸ್ವೀಕಾರಾತ್.

"ಬಾಯಿಂದ ವಿಷವನ್ನು ಸುರಿಸುತ್ತ ಸರ್ಪವು ಮರದ ಬುಡದಲ್ಲಿಯೇ ನೆಲಸಿದ್ದರೆ ಅಂತಹ ಮರದಲ್ಲಿ ಹೆಚ್ಚು ಹಣ್ಣುಗಳು ಬಿಟ್ಟಿದ್ದರೂ ಅದರಿಂದ ಯಾರಿಗೆ ಏನು ಪ್ರಯೋಜನವಾದೀತು ?" ಇಲ್ಲಿ ಸರ್ಪದ ವೃತ್ತಾಂತವೇ ಪ್ರಕೃತ ವರ್ಣಿಸಬೇಕಾದ ಅಂಶ, ಇದನ್ನು ತಿಳಿಸುವಾಗ ಅರಮನೆಯ ಬಾಗಿಲಲ್ಲಿ ನಿಂತಿರುವ ನೀಚರ ವೃತ್ತಾಂತವೂ ಸಹ ತೋರುತ್ತದೆ. ಇಲ್ಲಿ ವಾಸ್ತವವಾಗಿ ಸರ್ಪದ ವೃತ್ತಾಂತವೇ ಪ್ರಕೃತವೆನಿಸಿರುವಾಗ ಅಪ್ರಕೃತವಾದ ನೀಚನ ವೃತ್ತಾಂತವು ಆಮೇಲೆ ತೋರುತ್ತದೆಯಾದ್ದರಿಂದ ಇಲ್ಲಿ ಸಮಾಸೋಕ್ತಿಯನ್ನು ಹೇಳಬೇಕೋ ಅಥವಾ ಪ್ರಕೃತವೆನಿಸಿದ ನೀಚವೃತ್ತಾಂತವನ್ನು ತಿಳಿಸಿಕೊಡಲಿಕ್ಕಾಗಿ ಅಪ್ರಕೃತವಾದ ಸರ್ಪದ ವೃತ್ತಾಂತವನ್ನು ತಿಳಿಸಿರುವುದರಿಂದ ಇಲ್ಲಿ ಅಪ್ರಸ್ತುತಪ್ರಶಂಸೆಯನ್ನು ಹೇಳಬೇಕೋ ಅಥವಾ ವರ್ಣಿಸಬೇಕಾಗಿರುವ ಸರ್ಪದ ವೃತ್ತಾಂತವನ್ನು ಇಲ್ಲಿ ಹೇಳಿದ್ದರಿಂದ ಸಮೀಪದಲ್ಲಿರುವ

ನೀಚನೊಬ್ಬನ ಮರ್ಮವನ್ನು ಭೇದಿಸಿದಂತಾಗುವ ಪ್ರಯುಕ್ತ ಸರ್ಪ ಮತ್ತು ನೀಚ ಇವರಿಬ್ಬರೂ ಪ್ರಕೃತಸಂದರ್ಭಕ್ಕೆ ಸಂಬಂಧಿಸಿದಂತೆಯೇ ಆಗಲು, ಅವರಿಬ್ಬರ ಸಮಾಚಾರವನ್ನು ಇಲ್ಲಿ ತಿಳಿಸಿರುವುದರಿಂದ ಇಲ್ಲಿ ಪ್ರಸ್ತುತಾಂಕುರವನ್ನು ಹೇಳಬೇಕೋ ? ಹೀಗೆ ಇಲ್ಲಿ ಯಾವುದನ್ನು ಒಪ್ಪಿಕೊಳ್ಳಬೇಕೆಂಬ ಬಗ್ಗೆ ಸಂದೇಹ ಉಂಟಾಗಿದೆ. ಒಂದೇ ಪದದಲ್ಲಿ ಎರಡು ಅಲಂಕಾರಗಳು ಸೇರಬೇಕಾದರೆ ಅವುಗಳಲ್ಲಿ ಶಬ್ದಾಲಂಕಾರವೂ, ಮತ್ತೊಂದು ಅರ್ಥಾಲಂಕಾರವೂ ಆಗಿರಬೇಕೆಂದು ಕಾವ್ಯ ಪ್ರಕಾಶಕಾರನು ತಿಳಿಸಿ ಅದಕ್ಕಾಗಿ ಈ ಪದ್ಯವನ್ನು ಉದಾಹರಿಸಿದ್ದಾನೆ. 'ಅನಂತರ ದಿವಸವೆಂಬ ಕಮಲವು ಸಂಕೋಚಸ್ಥಿತಿಯನ್ನು ಹೊಂದಿತು. ಸ್ಪಷ್ಟವಾಗಿ ವ್ಯಾಪಿಸಿದ್ದ ಕಿರಣಗಳೆಂಬ ದಳಗಳುಳ್ಳ ಸೂರ್ಯನ ಬಿಂಬವೆನಿಸಿದ ವಿಸ್ತೀರ್ಣವೆಂಬ ಹಿಡಿಯೂ, ಪ್ರಕಾಶವಿಲ್ಲದ್ದರಿಂದ ಪರಸ್ಪರವಾಗಿ ಸೇರಿಕೊಂಡ ಎಂಟು ದಿಕ್ಕುಗಳೆಂಬ ದಳಗಳ ಸಮೂಹದಿಂದ ಹೊರಟ ಗಾಢಾಂಧಕಾರವೆಂಬ ದುಂಬಿಗಳ ಸಮೂಹವೂ ಅದರಲ್ಲಿ ಕಾಣುತ್ತಿದ್ದುವು. ಇಂತಹ ಕಮಲವು ಮೊಗ್ಗಾಯಿತು." ಇಲ್ಲಿ ಒಂದೇ ಪದದಲ್ಲಿ ರೂಪಕಾಲಂಕಾರವೂ ಅನುಪ್ರಾಸವೂ ಸೇರಿಕೊಂಡಿವೆ.'' ಒಂದು ಶ್ಲೋಕದಲ್ಲಿ ಬೇರೆ ಬೇರೆ ಪದಗಳಲ್ಲಿ ಶಬ್ದಾರ್ಥಾಲಂಕಾರಗಳು ಸೇರಿದ್ದರೆ ಅದಕ್ಕೆ ಸಂಸೃಷ್ಟಿಯೆಂದೂ ಒಂದೇ ಪದದಲ್ಲಿ ಅಂತಹ ಎರಡು ಅಲಂಕಾರಗಳು ಸೇರಿದ್ದರೆ ಅದಕ್ಕೆ ಸಂಕರವೆಂದೂ, ಕರೆಯಲಾಗಿದೆ' ಹೀಗೆ ಕಾವ್ಯಪ್ರಕಾಶಕಾರನು ಹೇಳಿದ್ದಾನೆ, ಅಲಂಕಾರಸರ್ವಸ್ವಕಾರನಾದರೋ " ಒಂದೇ ಪದದಲ್ಲಿ ಎರಡು ಅರ್ಥಾಲಂಕಾರಗಳು ಸೇರುವುದೇ ಸ್ವಾರಸ್ಯವಾಗಿರುವುದೆಂದೂ ಆ ಪದವು ಅವರ ಅರ್ಥದೊಡನೆಯೇ ಸಂಬಂಧಿಸಿರಬೇಕೆಂದೂ'' ಭಾವಿಸಿ ಅರ್ಥಾಲಂಕಾರಗಳೆರಡಕ್ಕೆ ಒಂದೇ ಪದದಲ್ಲಿ ಸೇರುವ ಸನ್ನಿವೇಶವನ್ನು ಉದಾಹರಿಸಿದ್ದಾನೆ " ಯಾವ ನಗರಿಯಲ್ಲಿ ಸ್ತ್ರೀಯರು ಉದ್ಯಾನಗಳಲ್ಲಿರುವ ಬಾವಿಯ ನೀರಿನಂತೆ ನಾಟ್ಯಗೃಹದಲ್ಲಿ ಕ್ರೀಡಿಸುತ್ತಾರೆಯೋ ಅಲ್ಲಿ ಚೆನ್ನಾಗಿ ಅರಳಿದ ಕಮಲಗಳಿಂದ ಕೂಡಿದ ಅಲೆಗಳ ಶೋಭೆಯು ಕಾಣಿಸುತ್ತಿತ್ತು, ಸಮೀಚೀನವಾದ ವಾದ್ಯಗಳಿಂದ ಕೂಡಿದ ರಂಗಸ್ಥಳದಿಂದ ನಾಟ್ಯಗೃಹವು ಶೋಭಿಸುತ್ತಿತ್ತು. ಅಲ್ಲಿಯೇ ಮೃದಂಗ ವಾದ್ಯವನ್ನು ವಿಶೇಷವಾಗಿ ಆರಂಭಿಸಲಾಗಿತ್ತು. ನೀರನ್ನು ಕೈಯಿಂದ ಬಡಿಯುತ್ತಿದ್ದುದರಿಂದ ಅಲ್ಲಿಯೂ ಮೃದಂಗದಂತೆ ಶಬ್ದವು ಕೇಳಿಸುತ್ತಿತ್ತು." ಇಲ್ಲಿ ನಾಟ್ಯಗೃಹ ಮತ್ತು ಬಾವಿಯ ನೀರು ಇವೆರಡಕ್ಕೂ ಸತ್ಪುಷ್ಕರ ಮೊದಲಾದ ವಿಶೇಷಣಗಳ ಮೂಲಕ ತೋರುವ ಶಬ್ದಸಾಮ್ಯವೇ ಶ್ಲೇಷಾಲಂಕಾರವೆನಿಸಿದೆ, 'ಅಮಂದಮಾರಬ್ಧ' ಈ ಬಗೆಯ ವಿಶೇಷಣಗಳಲ್ಲಿ ತೋರುವ ಅರ್ಥಸಾಮ್ಯವು ಉಪಮೆ ಎನಿಸಿದೆ. ಇವೆರಡೂ ಸಹ ಇಲ್ಲಿ ಇವ ಎಂಬ ಒಂದೇ ಶಬ್ದದಲ್ಲಿ ಸೇರಿಕೊಂಡಿವೆ ಎಂದು ಅವನು ಹೇಳಿದ್ದಾನೆ. ಇದನ್ನು ಒಪ್ಪಲಿಕಾಗುವುದಿಲ್ಲ. ಸತ್ಪುಷ್ಕರ ಮೊದಲಾದ ವಿಶೇಷಣಗಳಲ್ಲಿ ಶ್ಲೇಷದ ಮೂಲಕ ತೋರುವ ಅಭೇದಾಧ್ಯವಸಾಯವೆಂಬ ಅತಿಶಯೋಕ್ತಿಯಿಂದ ತೋರುವ ಧರ್ಮಸಾಮ್ಯವನ್ನೇ ಇಲ್ಲಿ ಇವ ಶಬ್ದವು ಪ್ರತಿಪಾದಿಸುವುದರಿಂದ

ಶಬ್ದಸಾಮ್ಯವು ಆ ಪದದಿಂದ ತೋರಿಬರುವುದೇ ಇಲ್ಲ. ಶ್ಲೇಷದ ಮೂಲಕ ತೋರುವ ಅಭೇದಾಧ್ಯವಸಾಯದಿಂದ ಧರ್ಮಸಾಮ್ಯವು ತಿಳಿದುಬರುವುದೆಂಬದನ್ನು ಒಪ್ಪದೇ ಹೋದರೆ "ಅಹೋ ರಾಗವತೀ ಸಂಧ್ಯಾ ಜಹಾತಿ ಸ್ವಯಮಂಬರಮ್" (ಅನುರಾಗವೂ, ಕೆಂಪು ಬಣ್ಣವೂ ಇರುವ ಸಂಧ್ಯೆಯು ತಾನಾಗಿಯೇ ಆಕಾಶವನ್ನು ತೊರೆಯುತ್ತದೆ) ಇಂತಹ ಶ್ಲಿಷ್ಟವಿಶೇಷಣಗಳಿಂದ ತೋರುವ ಸಮಾಸೋಕ್ತಿಯೂ ತೋರದೇ ಹೋಗಬೇಕಾದೀತು. ಇಲ್ಲಿ ವಿಶೇಷಣಗಳ ಸಾಮ್ಯದಿಂದ ಸಮಾಸೋಕ್ತಿ ಯುಂಟೆಂಬುದು ಎಲ್ಲಾ ಆಲಂಕಾರಿಕರಿಗೂ ಸಮ್ಮತವೆನಿಸಿದೆ. ಆದ್ದರಿಂದ ಸತ್ಪುಷ್ಕರ ' ಎಂಬ ಪದ್ಯದಲ್ಲಿ ಇವ ಎಂಬ ಶಬ್ದದಿಂದ ಧರ್ಮಸಾಮ್ಯವನ್ನು ಒಪ್ಪ ಬೇಕೇ ಹೊರತು ಶಬ್ದಸಾಮ್ಯವನ್ನು ಒಪ್ಪುವುದು ಯುಕ್ತವಲ್ಲ. ಶಬ್ದಸಾಮ್ಯವೂ ಇವ ಶಬ್ದದಿಂದಲೇ ತೋರುವುದಾದರೆ ಆಗ ಅದು ಉಪಮೆಯನ್ನು ತಿಳಿಸುವ ಪದವೇ ಆಗುವುದರಿಂದ ಶ್ಲೇಷವನ್ನು ತಿಳಿಸುವ ಪದವಾಗದೇ ಹೋಗುತ್ತದೆ. ಶಬ್ದ ದಿಂದಾಗಲೀ ಅರ್ಥದಿಂದಾಗಲೀ ಕವಿಗೆ ಸಮ್ಮತವೆನಿಸಿದ ಸಾಮ್ಯವನ್ನು ತಿಳಿಸುವುದೇ ಅದರ ಕೆಲಸವೆಂದು ಹೇಳುವುದಾದರೆ ಈ ಎರಡು ಬಗೆಗಳಿಂದಲೂ ಅಲ್ಲಿ ಉಪಮಾಲಂಕಾರವನ್ನೇ ಸ್ವೀಕರಿಸಬೇಕಾಗುತ್ತದೆ.

ಅನ್ಯಥಾ—

ಯಥಾ ಪ್ರಹ್ಲಾದನಾಚ್ಚಂದ್ರಃ ಪ್ರತಾಪಾತ್ತಪನೋ ಯಥಾ ।
ತಥೈವ ಸೋಽಭೂದನ್ವರ್ಥೋ ರಾಜಾ ಪ್ರಕೃತಿರಂಜನಾತ್ ॥

ಇತ್ಯತ್ರ ಉಪಮಾ ನ ಸ್ಯಾತ್. ನ ಹ್ಯತ್ರ ಅನ್ವರ್ಥನಾಮರೂಪಶಬ್ದಸಾಮ್ಯಂ ವಿನಾ ಕಿಂಚಿದರ್ಥಸಾಮ್ಯಂ ಕವಿವಿವಕ್ಷಿತಮಸ್ತಿ. ತಸ್ಮಾದ್ಯತ್ರ ಏಕಸ್ಮಿನ್ನರ್ಥೇ ಪ್ರತಿಪಾದ್ಯಮಾನೇ ಅಲಂಕಾರದ್ವಯಪ್ರತೀತಿಃ ತತ್ರ ತಯೋರಲಂಕಾರಯೋಃ ಏಕ-ವಾಚಕಾನುಪ್ರವೇಶಃ.

ವಿಧುಕರಪರಿರಂಭಾದಾತ್ತನಿಷ್ಯಂದಪೂರ್ಣೈಃ
ಶಶಿದೃಷದುಪಕ್ಲೃಪ್ತೈರಾಲವಾಲೈಸ್ತರೂಣಾಮ್ ।
ವಿಫಲಿತಜಲಸೇಕಪ್ರಕ್ರಿಯಾಗೌರವೇಣ
ವ್ಯರಚಿ ಸ ಹೃತಚಿತ್ತಸ್ತತ್ರ ಭೈಮೀವನೇನ ॥

ಅತ್ರ ಹಿ ಪ್ರತಿಪಾದ್ಯಮಾನೋಽರ್ಥಃ ಸಮೃದ್ಧಿಮದ್ವಸ್ತುವರ್ಣನಮುದಾತ್ತ-ಮಿತಿ ಲಕ್ಷಣಾನುಸಾರಾದುದಾತ್ತಾಲಂಕಾರರೂಪಃ. ಅಸಂಬಂಧೇ ಸಂಬಂಧಕಥನ-ಮತಿಶಯೋಕ್ತಿರಿತಿ ಲಕ್ಷಣಾದತಿಶಯೋಕ್ತಿಶ್ಚ. ನ ಚ ಸರ್ವತ್ರ ಉದಾತ್ತಸ್ಯ

ಅಸಂಬಂಧೇ ಸಂಬಂಧವಾಚನರೂಪಂ ನಿರ್ಣೀತಮಿತಿ ನ ವಿವಿಕ್ತಾಲಂಕಾರದ್ವ-ಯಲಕ್ಷಣಸಮಾವೇಶೋಸ್ತೀತಿ ವಾಚ್ಯಮ್. ದಿವ್ಯಲೋಕಗತಸಂಪತ್ಸಮೃದ್ಧಿವ ರ್ಣನಾದಿಷ್ವತಿಶಯಾಸ್ಪೃಷ್ಟಸ್ಯೋದಾತ್ತಸ್ಯಶೌರ್ಯದಾರಿದ್ರ್ಯಾದಿವಿಷಯವರ್ಣನೇಷು ಉದಾತ್ತಾಸ್ಪೃಷ್ಟಾಯಾ ಅತಿಶಯೋಕ್ತೇಶ್ಚ ಪರಸ್ಪರವಿವಿಕ್ತತಯಾ ವಿಶ್ರಾಂತೇಃ-ತಯೋಶ್ಚ ಇಹ ಅರ್ಥವಶಸಂಪನ್ನಸಮಾವೇಶಯೋರ್ನಾಂಗಾಂಗಿಭಾವಃ ಏಕೇನ ಅಪರಸ್ಯ ಅನುತ್ಥಾಪನಾತ್ ಸ್ವಾತಂತ್ರ್ಯಪಾರತಂತ್ರ್ಯವಿಶೇಷಾದರ್ಶನಾಚ್ಚ ನಾಪಿ ಸಮಪ್ರಾಧಾನ್ಯಂ ಯೈಃ ಶಬ್ದೈರಿಹ ಸಂಬಂಧಿ ವಸ್ತು ಪ್ರತಿಪಾದ್ಯತೇ ತೈರೇವ ತಸ್ಯೈವ ವಸ್ತುನೋಽಸಂಬಂಧೇ ಸಂಬಂಧರೂಪಸ್ಯ ಪ್ರತಿಪಾದ್ಯಮಾನತಯಾ ಭಿನ್ನಪ್ರತಿಪಾದ-ಕಶಬ್ದವ್ಯವಸ್ಥಿತಾರ್ಥಭೇದಾಭಾವಾತ್. ನಾಪಿ ಸಂದೇಹಸಂಕರಃ ಏಕಾಲಂಕಾರ-ಕೋಟ್ಯಾಂ ತದನ್ಯಾಲಂಕಾರಕೋಟಿಪ್ರತಿಕ್ಷೇಪಾಭಾವಾತ್. ತಸ್ಮಾದಿಹ ಉದಾತ್ತಾ-ತಿಶಯೋಕ್ತ್ಯೋ ಏಕವಾಚಕಾನುಪ್ರವೇಶಲಕ್ಷಣಃ ಸಂಕರಃ.

ಹಾಗೆ ಶಬ್ದದಿಂದಾಗಲೀ ಅರ್ಥದಿಂದಾಗಲೀ ಸಾಮ್ಯವು ತೋರುವುದರಿಂದಲೇ ಉಪಮಾಲಂಕಾರವು ಸಂಭವಿಸಬಹುದೆಂಬುದನ್ನು ಒಪ್ಪದೇ ಹೋದರೆ ಆಗ ಈ ಕೆಳಗಿನ ಪದ್ಯದಲ್ಲಿ ಉಪಮಾಲಂಕಾರವೇ ತಪ್ಪಿಹೋದೀತು. “ಆ ರಾಜನಂ ಸಂತೋಷ ಪಡಿಸುವುದರಿಂದ ಚಂದ್ರನೂ, ಸಂತಾಪಗೊಳಿಸುವುದರಿಂದ ಸೂರ್ಯನೂ ಆಗಿದ್ದಂತೆಯೇ ಪ್ರಜೆಗಳನ್ನು ಪ್ರೀತಿಸುವುದರಿಂದ ತನ್ನ ಹೆಸರನ್ನು ಸಾರ್ಥಕಗೊಳಿಸಿ ಕೊಂಡು ಇದ್ದನು’’. ಇಲ್ಲಿ ಉಪಮೆ ಇರುವುದೆಂದು ಎಲ್ಲರೂ ಒಪ್ಪಿರುವಾಗ ಇದು ಉಪಮಾಲಂಕಾರವೇ ಆಗದೇ ಹೋಗಬೇಕಾದೀತು. ಇಲ್ಲಿ ರಾಜನೆಂಬ ಹೆಸರು ಅನ್ವರ್ಥವೆನಿಸಿತ್ತು. ಪ್ರಹ್ಲಾದನದಲ್ಲೂ ಸಂತಾಪನದಲ್ಲೂ ಅನ್ವರ್ಥವೆನಿಸಿದ್ದಂತೆ ರಂಜನದಲ್ಲೂ ಆ ಹೆಸರು ಅನ್ವರ್ಥವೆನಿಸಿತ್ತು. ಹಾಗೆ ಶಬ್ದಸಾಮ್ಯವನ್ನು ಬಿಟ್ಟು ಬೇರೆ ಯಾವ ಅರ್ಥಸಾಮ್ಯವೂ ಇಲ್ಲಿ ಕವಿಗೆ ವಿವಕ್ಷಿತವಾಗಿಲ್ಲ. ಆದ್ದರಿಂದ ಎಲ್ಲಿ ಒಂದೇ ಅರ್ಥವನ್ನು ತಿಳಿಸಬೇಕಾಗಿದೆಯೋ ಅಲ್ಲಿ ಅಲಂಕಾರಗಳೆರಡು ತೋರುವು ದಾದರೆ ಆಗ ಆ ಅಲಂಕಾರಗಳೆರಡಕ್ಕೆ ಏಕವಾಚಕಸಾಂಕರ್ಯವನ್ನು ಒಪ್ಪುವುದೇ ಯುಕ್ತವೆನಿಸುತ್ತದೆ, “ಆ ಹಂಸವು ದಮಯಂತಿಯ ಉದ್ಯಾನವನವನ್ನು ನೋಡಿ ಬಹಳ ಸಂತೋಷಗೊಂಡಿತು. ಅಲ್ಲಿ ಚಂದ್ರನ ಕಿರಣಗಳ ಸಂಪರ್ಕದಿಂದ ಚಂದ್ರ ಕಾಂತಮಣಿಗಳಿಂದ ಸುಯಿಸುಯಿಪ ತುಂತುರುಗಳು ಮರದ ಬುಡದಲ್ಲಿ ವಿಶೇಷವಾಗಿ ಬೀಳುತ್ತಿದ್ದವು. ಅಲ್ಲಿಂದ ಚಂದ್ರಕಾಂತಮಣಿಗಳು ಕರಗಿ ನೀರಾಗಿ ಹರಿಯು ದ್ದವು. ಇದರಿಂದ ಸೇವಕರಿಗೆ ಅಲ್ಲಿಯ ಗಿಡಗಳಿಗೆ ನೀರನ್ನು ಒದಗಿಸುವ ಅವಶ್ಯ ಕತೆಯೇ ಇರಲಿಲ್ಲ.” ಇಂತಹ ಸುಂದರವಾದ ಉದ್ಯಾನವನ್ನು ಹಂಸಪಕ್ಷಿಯು ನೋಡಿ ಸಂತೋಶಗೊಂಡಿತು. ಹೀಗೆ ಸಮೃದ್ಧಿಯುಳ್ಳ ವಸ್ತುವಿನ ವರ್ಣನವೇ ಇಲ್ಲಿ

ತಿಳಿಸಬೇಕಾಗಿರುವ ಅರ್ಥ. ಉದ್ಯಾನವನದ ವೈಭವವನ್ನು ಪ್ರತಿಪಾದಿಸುವುದೇ ಕವಿಗೆ ಇಷ್ಟವಾದ ಅರ್ಥ. ಆದ್ದರಿಂದ ಇಲ್ಲಿ ಉದಾತ್ತಾಲಂಕಾರವು ಸ್ಪಷ್ಟವಾಗಿ ಅನ್ವಯಿಸುತ್ತದೆ. ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಕಲ್ಪಿಸುವುದು ಅತಿಶಯೋಕ್ತಿ ಎಂದು ಹೇಳಿದ್ದರಿಂದ ಇಲ್ಲಿ ಚಂದ್ರಕಾಂತವೆಂಬ ಮಣಿಗಳು ದ್ರವಿಸಿದರೂ ನೀರಾಗಿ ಹರಿಯುವಷ್ಟು ವಿಶೇಷವಾಗಿ ದ್ರವಿಸಿದ್ದವೆಂಬ ಸಂಬಂಧವನ್ನು ಕಲ್ಪಿಸಿರುವುದರಿಂದ ಇಲ್ಲಿ ಅತಿಶಯೋಕ್ತಿಯನ್ನು ಹೇಳಬಹುದು. ಉದ್ಯಾತವಸ್ತುವಿನ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ತಿಳಿಸುವುದೇ ಅತಿಶಯೋಕ್ತಿ ಎಂದು ನಿರ್ಣಯಿಸಿದ್ದರಿಂದ ಎಲ್ಲಾ ಕಡೆಗಳಲ್ಲೂ ಬೇರೆ ಬೇರೆ ಎನಿಸಿರುವ ಎರಡು ಅಲಂಕಾರಗಳ ಲಕ್ಷಣಗಳೂ ಇಲ್ಲಿ ಸೇರುತ್ತವೆ ಎಂದು ಹೇಳಲಿಕ್ಕೆ ಬರುವಂತಿಲ್ಲ ದಿವ್ಯಲೋಕಕ್ಕೆ ಸಂಬಂಧಿಸಿದ ಸಂಪತ್ಸಮೃದ್ಧಿಯನ್ನು ವರ್ಣಿಸುವುದರಲ್ಲಿ ಅತಿಶಯದ ಸಂಪರ್ಕವೇ ಇಲ್ಲದ್ದರಿಂದ ಉದಾತ್ತಾಲಂಕಾರಕ್ಕೂ, ಶೌರ್ಯ ಔದಾರ್ಯ ಮೊದಲಾದ ವಿಷಯಗಳನ್ನು ವರ್ಣಿಸುವಾಗ ಉದಾತ್ತಾಲಂಕಾರದ ಸಂಪರ್ಕವೇ ಇಲ್ಲದಿರುವ ಅತಿಶಯೋಕ್ತಿಗೂ ಯಾವ ಪರಸ್ಪರ ಸಂಬಂಧವೂ ಇಲ್ಲದೇ ಅವು ಬೇರೆಬೇರೆಯಾಗಿಯೇ ಇರುತ್ತವೆ ಎಂಬುದು ವ್ಯವಸ್ಥಿತವಾಗಿದೆ ಒಂದರಲ್ಲಿ ಇನ್ನೊಂದು ಸೇರಲೇಬೇಕೆಂಬ ನಿಯಮವೇನೂ ಕಾಣುವುದಿಲ್ಲ. ಅವು ಎರಡೂ ಸಹ ಇಲ್ಲಿ ಅರ್ಥಕ್ಕೆ ಅನುಗುಣವಾಗಿ ಸಮಾವೇಶಗೊಂಡಿವೆ ; ಆದರೆ ಒಂದು ಇದ್ದ ಕಡೆಯಲ್ಲಿ ಇನ್ನೊಂದು ಇರಲೇಬೇಕೆಂಬ ನಿಯಮದಿಂದ ಇಲ್ಲಿ ಅವು ಸೇರಿಕೊಂಡಿಲ್ಲ. ಆದರೆ ಅಲ್ಲಿ ವರ್ಣಿಸಬೇಕಾದ ವಿಷಯಕ್ಕೆ ಅನುಗುಣವಾಗಿ ಅವು ಸ್ವತಂತ್ರವಾಗಿಯೇ ಸೇರಿಕೊಂಡಿವೆ. ಆದರೆ ಒಂದರಿಂದ ಮತ್ತೊಂದು ಅಲಂಕಾರವು ಹುಟ್ಟಿಲ್ಲ. ಹಾಗೆಯೇ ಒಂದು ಸ್ವತಂತ್ರ, ಮತ್ತೊಂದು ಪರಾಧೀನ ಎಂಬ ಭೇದವೂ ಇಲ್ಲಿ ಕಾಣುವುದಿಲ್ಲ. ಆದ್ದರಿಂದ ಇಲ್ಲಿ ಅವೆರಡಕ್ಕೆ ಅಂಗಾಂಗಿಭಾವಸಾಂಕರ್ಯವನ್ನು ಹೇಳಲಿಕ್ಕಾಗುವುದಿಲ್ಲ. ಹಾಗಾದರೆ ಸಮಪ್ರಾಧಾನ್ಯಸಾಂಕರ್ಯವನ್ನು ಹೇಳೋಣವೆಂದರೆ ಅದೂ ಹೊಂದುವುದಿಲ್ಲ, ಯಾವ ಶಬ್ದಗಳಿಂದ ಸಂಬಂಧಪಟ್ಟ ವಸ್ತುವನ್ನು ತಿಳಿಸಲಾಗಿದೆಯೋ ಅವುಗಳಿಂದಲೇ ಆ ವಸ್ತುವಿಗೆ ಮಾತ್ರವೇ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಇಲ್ಲಿ ಕಲ್ಪಿಸಲಾಗಿದೆ. ಬೇರೆಬೇರೆ ಶಬ್ದಗಳಿಂದ ಬೇರೆಬೇರೆ ಅರ್ಥಗಳನ್ನು ಆ ಎರಡು ಅಲಂಕಾರಗಳಿಗೆ ಅನ್ವಯಿಸುವಂತೆ ತಿಳಿಸಿಲ್ಲ ಹಾಗೆ ಅರ್ಥಭೇದವಿದ್ದಿದ್ದರೆ ಎರಡು ಅಲಂಕಾರಗಳಿಗೂ ಸಮಪ್ರಾಧಾನ್ಯವನ್ನು ಹೇಳಬಹುದಾಗಿತ್ತು. ಇವೆರಡು ಅಲಂಕಾರಗಳೂ ಸೇರಿ ಒಂದೇ ಅರ್ಥವನ್ನು ಇಲ್ಲಿ ತಿಳಿಸುವುದರಿಂದ ಎರಡೂ ಬೇರೆಬೇರೆ ಇದ್ದು ಅವಕ್ಕೆ ಸಮವಾದ ಪ್ರಾಧಾನ್ಯವಿದೆ ಎಂದು ಹೇಳಲಿಕ್ಕೆ ಬರುವಂತಿಲ್ಲ. ಹಾಗಾದರೆ ಸಂದೇಹಸಂಕರವನ್ನು ಹೇಳೋಣವೆಂದರೆ ಅದೂ ಹೊಂದುವುದಿಲ್ಲ ಒಂದು ಅಲಂಕಾರವಿರುವ ಕಡೆ ಬೇರೊಂದು ಅಲಂಕಾರವು ವಿರುದ್ಧವಾಗಿ ಪ್ರವೇಶಿಸುವುದಾದರೆ ಆಗ ಸಂದೇಹಸಂಕರವನ್ನು ಹೇಳಬಹುದು. ಇಲ್ಲಿ ಉದಾತ್ತಾಲಂಕಾರಕ್ಕೂ ಅತಿಶಯೋಕ್ತಿಗೂ

ಅಂತಹ ವಿರೋಧವು ಕಾಣಬರುವುದಿಲ್ಲ. ಆದ್ದರಿಂದ ಇಲ್ಲಿ ಸಂದೇಹಸಂಕರವನ್ನೂ ಹೇಳಲಿಕ್ಕಾಗುವುದಿಲ್ಲ, ಇದರಿಂದ ಇಲ್ಲಿ ಉದಾತ್ತ ಮತ್ತು ಅತಿಶಯೋಕ್ತಿ ಇವೆರಡು ಅಲಂಕಾರಗಳಿಗೂ ಏಕವಾಚಕಾನುಪ್ರವೇಶವೆಂಬ ಸಾಂಕರ್ಯವನ್ನು ಹೇಳುವುದೇ ಯುಕ್ತವೆನಿಸುತ್ತದೆ.

## ೧೨೪. ಸಂಕರಸಂಕರಾಲಂಕಾರ

ಕ್ವಚಿತ್ಸಂಕರಾಣಾಮಪಿ ಸಂಕರೋ ದೃಶ್ಯತೇ. ಯಥಾ—

ಮುಕ್ತಾಃ ಕೇಲಿವಿಸೂತ್ರಹಾರಗಲಿತಾಃ ಸಂಮಾರ್ಜನೀಭಿರ್ಹೃತಾಃ
ಪ್ರಾತಃ ಪ್ರಾಂಗಣಸೀಮ್ನಿ ಮಂಥರಚಲದ್ಬಾಲಾಂಘ್ರಿಲಾಕ್ಷಾರುಣಾಃ ।
ದೂರಾದ್ದಾಡಿಮಬೀಜಶಂಕಿತಧಿಯಃ ಕರ್ಷಂತಿ ಕೇಲೀಶುಕಾಃ
ತ್ವದ್ವಿದ್ವದ್ಭವನೇಷು ಭೋಜನೃಪತೇಸ್ತತ್ತ್ಯಾಗಲೀಲಾಯಿತಮ್ ॥

ಅತ್ರ ತಾವದ್ವಿದುಷಾಂ ಸಂಪತ್ಸಮೃದ್ಧಿವರ್ಣನಮುದಾತ್ತಾಲಂಕಾರಃ ತನ್ಮೂಲಕೋ 'ಬಾಲಾಂಘ್ರಿಲಾಕ್ಷಾರುಣಾ' ಇತ್ಯತ್ರ ತದ್ಗುಣಾಲಂಕಾರಃ ತತ್ರೈವ ವಕ್ಷ್ಯಮಾಣಭ್ರಾಂತ್ಯುತ್ಪಾದಕಃ ಪದಾರ್ಥಹೇತುಕಕಾವ್ಯಲಿಂಗಾಲಂಕಾರಶ್ಚೇತಿ ತಯೋರೇಕವಾಚಕಾನುಪ್ರವೇಶಸಂಕರಃ. ತನ್ಮೂಲಃ, 'ಶಂಕಿತಧಿಯ' ಇತ್ಯತ್ರ ಭ್ರಾಂತಿಮದಲಂಕಾರಸ್ತಾಭ್ಯಾಂ ಚ ಉದಾತ್ತಾಲಂಕಾರಃ ಚಾರುತಾಂ ನೀತ ಇತಿ ತಯೋಶ್ಚ ತಸ್ಯ ಚ ಅಂಗಾಂಗಿಭಾವಸಂಕರಃ. ಏವಂ ವಿದ್ವದ್ಗೇಹವೈಭವಸ್ಯ ಹೇತುಮತ್ತೋ ರಾಜ್ಞೋ ವಿತರಣವಿಲಾಸಸ್ಯ ಹೇತ್ವೋಕ್ಷ್ಯ ಅಭೇದಕಥನಂ ಹೇತ್ವಾಲಂಕಾರಃ ಸ ಚ ರಾಜ್ಞೋ ವಿತರಣವಿಲಾಸಸ್ಯ ನಿರತಿಶಯೋತ್ಕರ್ಷಾಭಿವ್ಯಕ್ತಿಪರ್ಯವಸಾಯೀ. ಏತಾವನ್ಮಾತ್ರೇ ಕವಿಸಂರಂಭಶ್ಚೇದುಕ್ತರೂಪೋದಾತ್ತಾಲಂಕಾರಪರಿಷ್ಕೃತೇ ಹೇತ್ವಲಂಕಾರೇ ವಿಶ್ರಾಂತಿಃ. ಕೀದೃಶೀ ಸಂಪದಿತಿ ಪ್ರಶ್ನೋತ್ತರತಯಾ ನಿರತಿಶಯೈಶ್ವರ್ಯವಿತರಣರೂಪಾಪ್ರಸ್ತುತಕಾರ್ಯಮುಖೇನ ತದೀಯಸಂಪದುತ್ಕರ್ಷಪ್ರಶಂಸನೇ ಕವಿಸಂರಂಭಶ್ಚೇತ್ ಕಾರ್ಯನಿಬಂಧನಾಪ್ರಸ್ತುತಪ್ರಶಂಸಾಲಂಕಾರೇ ವಿಶ್ರಾಂತಿಃ. ಕಾರ್ಯಸ್ಯಾಪಿ ವರ್ಣನೀಯತ್ವೇನ ಪ್ರಸ್ತುತತ್ವಾಭಿಪ್ರಾಯೇ ತು ಪ್ರಸ್ತುತಾಂಕುರೇ ವಿಶ್ರಾಂತಿಃ. ಅತ್ರ ವಿಶೇಷಾನಧ್ಯವಸಾಯಾತ್ ಸಂದೇಹಸಂಕರಃ. ಕಿಂ ಚ ವಿದ್ವದ್ಗೃಹವೈಭವವರ್ಣನಸ್ಯ ಅಸಂಬಂಧಕಥನರೂಪತಯಾ ಅತಿಶಯೋಕ್ತಿರುದಾತ್ತಾಲಂಕಾರೇಣ ಸಹೈಕವಾಚಕಾನುಪ್ರವೇಶಸಂಕರಃ. ನಿರತಿಶಯವಿತರಣೋತ್ಕರ್ಷಪರ್ಯವಸಾಯಿನೋ ಹೇತ್ವಲಂಕಾರಸ್ಯ ಅತ್ಯದ್ಭುತಾತಥ್ಯೌದಾರ್ಯವರ್ಣನಾತ್ಮಿಕಯಾ ಅತ್ಯುಕ್ತ್ಯಾ ಸಹ ಏಕವಾಚಕಾನುಪ್ರವೇಶಸಂಕರಃ. ತನ್ಮೂಲಕಸ್ಯ ಅಪ್ರಸ್ತುತಪ್ರಶಂಸಾಲಂಕಾರಸ್ಯ ಪ್ರಸ್ತುತಾಂಕುರಸ್ಯ ವಾ ರಾಜಸಂಪತ್ಸಮೃದ್ಧಿವರ್ಣನಾತ್ಮಕೋದಾತ್ತಾಲಂಕಾರೇಣ ಸಹ ಏಕವಾಚಕಾನುಪ್ರವೇಶಸಂಕರಃ. ವಾಚಕಶಬ್ದಸ್ಯ

ಪ್ರತಿಪಾದಕಮಾತ್ರಪರತಯಾ ವ್ಯಂಜಕಸಾಧಾರಣ್ಯಾತ್ ಏಷಾಂ ಚ ತ್ರಯಾಣಾಂ ಏಕವಾಚಕಾನುಪ್ರವೇಶಸಂಕರಾಣಾಂ ಸಮಪ್ರಾಧಾನ್ಯಸಂಕರಃ ನ ಹೇತ್ವೇಷಾಂ ಪರಸ್ಪರಂ ಅನ್ಯತ್ವಾಂಗತ್ವಮಸ್ತಿ. ಉದಾತ್ತಾದಿಮಾತ್ರಸ್ಯೈವ ಹೇತ್ವಲಂಕಾರಾದಿಬಾಧಿತಾ- ಪಾದಕತ್ವೇನ ಅತಿಶಯೋಕ್ತಿಸಂಕರಸ್ಯ ಅಂಗತವಯಾ ಅನಪೇಕ್ಷೇಣಾತಾ ಏವಮತ್ರ ಶ್ಲೋಕೇ ಚತುರ್ಣಾಮಪಿ ಸಂಕರಾಣಾಂ ಯಥಾಯೋಗ್ಯಂ ಸಂಕರಃ. ಏವಮನ್ಯ- ತ್ರಾಪ್ಯುದಾಹರಣಾಂತರಾಣಿ ಊಹ್ಯಾನಿ.

ಕೆಲವು ಕಡೆಗಳಲ್ಲಿ ಸಂಕರಗಳಿಗೂ ಸಂಕರವು ಸಂಭವಿಸುತ್ತದೆ. ಎರಡು ಮೂರು ಅಲಂಕಾರಗಳು ಸಮರಸವಾಗಿ ಬೆರೆಯುವುದೇ ಸಂಕರವೆನಿಸಿದರೆ, ಹಾಗೆ ಬೆರೆತಿರುವ ಅಲಂಕಾರಗಳ ಗುಂಪು ಒಂದಕ್ಕೊಂದು ಮತ್ತೆ ಸೇರುವ ಸಂಭವವುಂಟು. ಹಾಗೆ ಸೇರುವುದರಲ್ಲೂ ಒಂದು ಚಮತ್ಕಾರವಿರುವುದರಿಂದ ಅದನ್ನು ಸಂಕರ ಸಂಕರಾಲಂಕಾರವೆಂದು ಕರೆಯಲಾಗಿದೆ. ಅವನ್ನು ಈಗ ಉದಾಹರಿಸುತ್ತಾನೆ. "ವಿದ್ವಾಂಸರ ಮನೆಗಳಲ್ಲಿ ದಂಪತಿಗಳ ಸುರತಕ್ರೀಡೆಯ ಕಾಲದಲ್ಲಿ ದರವು ಕಿತ್ತು ಹೋಗಿದ್ದುದರಿಂದ ಕೆಳಗೆ ಬಿದ್ದು ಪರಕೆಗಳಿಂದ ಗುಡಿಸಿದಾಗ ಹೊರಗೆ ಬಿದ್ದು ಪ್ರಾತಃಕಾಲದಲ್ಲಿ ಅಂಗಣದ ಹೊರಗಿನ ಭಾಗದಲ್ಲಿ ಸಂಚರಿಸಿದ ಹುಡುಗರ ಕಾಲಿನ ಲಾಕ್ಷಾರಸದಿಂದ ತೊಯ್ದು ಕೆಂಪಗೆ ಕಾಣುತ್ತಿದ್ದ ಮುತ್ತುಗಳನ್ನು ಅಲ್ಲಿಯೇ ಆಟ ವಾಡುತ್ತಿದ್ದ ಗಿಳಿಗಳು ದೂರದಿಂದ ನೋಡಿ ದಾಳಿಂಬವ ಬೀಜಗಳೆಂದು ತಪ್ಪಾಗಿ ತಿಳಿದುಕೊಂಡು ಮೇಲಕ್ಕೆ ಎತ್ತಿಕೊಳ್ಳುತಿದ್ದವು. ಇದೆಲ್ಲವೂ ಭೋಜರಾಜನು ಲೀಲೆಯಿಂದ ಮಾಡುತ್ತಿದ್ದ ದಾನವಲ್ಲದೆ ಬೇರೆಯಲ್ಲ." ಇಲ್ಲಿ ವಿದ್ವಾಂಸರ ಸಂಪತ್ಸಮೃದ್ಧಿಯನ್ನು ವರ್ಣಿಸುವುದರಿಂದ ಇದು ಉದಾತ್ತಾಲಂಕಾರವೆನಿಸಿದೆ. ಅದರಿಂದ ಮುಂದೆ ಮುತ್ತುಗಳು ಬಾಲಕರ ಪಾದಗಳ ಲಾಕ್ಷಾರಸದಿಂದ ತೊಯ್ದು ಕೆಂಪಗೆ ಕಾಣುತ್ತಿದ್ದುವೆಂದು ಹೇಳಿರುವುದರಿಂದ ಲಾಕ್ಷಾರಸದ ಕೆಂಪು ಬಣ್ಣವು ಮುತ್ತುಗಳಲ್ಲಿ ಅಂಟಿಕೊಂಡಿರುವ ಪ್ರಯುಕ್ತ ತದ್ಗುಣಾಲಂಕಾರವಿದೆ. ಅವನ್ನು ನೋಡಿ ಗಿಳಿಗಳಿಗೆ ದಾಳಿಂಬದ ಬೀಜಗಳೆಂಬ ಭ್ರಾಂತಿಯುಂಟಾದ್ದರಿಂದ ಅದನ್ನು ಪ್ರತಿ ಪಾದಿಸುವ ಪದಾರ್ಥ ಹೇತುಕಕಾವ್ಯಲಿಂಗಾಲಂಕಾರವೂ ಸಹ ಸೇರಿದೆ. ಹೀಗೆ ತದ್ಗುಣ ಕಾವ್ಯಲಿಂಗಗಳು ಒಂದೇ ಪದದಲ್ಲಿ ಸೇರಿಕೊಂಡಿರುವುದರಿಂದ ಅವಕ್ಕೆ ಇಲ್ಲಿ ಏಕವಾಚ ಕಾನುಪ್ರವೇಶಸಂಕರವಿದೆ. ಇದರ ಮೂಲಕ ಶಂಕಿತಧಿಯಃ ಎಂಬಲ್ಲಿ ಭ್ರಾಂತಿಮದ ಲಂಕಾರವೂ ಇದೆ. ಈ ಸಂಕರ ಮತ್ತು ಭ್ರಾಂತಿಮದಲಂಕಾರಗಳಿಂದ ಉದಾತ್ತಾಲಂಕಾ ರದ ಸೌಂದರ್ಯವು ಹೆಚ್ಚುತ್ತದೆ. ಹೀಗೆ ಸಂಕರ ಮತ್ತು ಭ್ರಾಂತಿಮದಲಂಕಾರ ಗಳಿಗೂ ಹಾಗೆಯೇ ಉದಾತ್ತಾಲಂಕಾರಕ್ಕೂ ಅಂಗಾಂಗಿಭಾವವನ್ನವಲಂಬಿಸಿದ ಸಾಂಕರ್ಯವಿದೆ. ಹೀಗೆಯೇ ವಿದ್ವಾಂಸರ ಮನೆಯ ವೈಭವಕ್ಕೂ ಅದಕ್ಕೆ ಕಾರಣ ವೆನಿಸಿದ ರಾಜನ ದಾನಲೀಲೆಗೂ ಅಭೇದವನ್ನು ಹೇಳುವುದರಿಂದ ಇಲ್ಲಿ ಹೇತ್ವ

ಲಂಕಾರವಿದೆ. ಅದೂಸಹ ರಾಜನ ದಾನವೈಭವವನ್ನು ತಿಳಿಸುವುದರಲ್ಲಿ ಕೊನೆಯಾಗುತ್ತದೆ. ಇಷ್ಟರಲ್ಲಿಯೇ ಕವಿಯು ಇಷ್ಟವಿದ್ದರೆ ಇಲ್ಲಿ ಹೇಳಿರುವ ಉದಾತ್ತಾಲಂಕಾರದೊಡನೆ ಸೇರಿರುವ ಹೇತ್ವಲಂಕಾರವನ್ನು ಇಲ್ಲಿ ಒಪ್ಪಬೇಕಾಗುತ್ತದೆ. ಅವರಲ್ಲಿ ಸಂಪತ್ತು ಎಷ್ಟೊಂದಿತ್ತು ಎಂಬ ಪ್ರಶ್ನೆಗೆ ಉತ್ತರರೂಪದಲ್ಲಿ ಹೆಚ್ಚಿನ ಐಶ್ವರ್ಯವನ್ನು ರಾಜನು ವಿದ್ವಾಂಸರಿಗೆ ಕೊಡುತ್ತಿದ್ದನೆಂಬುದು ತಿಳಿದುಬರುವುದರಿಂದ ಪ್ರಕೃತಕಾರ್ಯದ ಮೂಲಕ ಅವನ ಸಂಪತ್ತಿನ ಉತ್ಕರ್ಷವನ್ನು ಪ್ರಶಂಸಿಸುವುದೇ ಕವಿಗೆ ಇಷ್ಟವಾಗಿದ್ದರೆ ಆ ಕಾರ್ಯಕ್ಕೆ ಸಂಬಂಧಿಸಿದಂತೆ ಅಪ್ರಸ್ತುತಪ್ರಶಂಸಾಲಂಕಾರವನ್ನೇ ಇಲ್ಲಿ ಒಪ್ಪಬೇಕಾಗುವುದು. ಇಲ್ಲಿ ಕಾರ್ಯವೂ ವರ್ಣಿಸಬೇಕಾದ ವಿಷಯವೇ ಆಗಿರುವುದರಿಂದ ಪ್ರಕೃತವೆನಿಸಿದೆ ಎಂಬುದು ಕವಿಗೆ ಅಭಿಪ್ರಾಯವಾಗಿದ್ದರೆ ಆಗ ಇಲ್ಲಿ ಪ್ರಸ್ತುತಾಂಕುರಾಲಂಕಾರವನ್ನೇ ಹೇಳಬೇಕಾಗುತ್ತದೆ. ಇಲ್ಲಿ ಯಾವುದನ್ನು ಇಟ್ಟುಕೊಳ್ಳಬೇಕು ಯಾವುದನ್ನು ಬಿಡಬೇಕು ಎಂಬುದು ತಿಳಿಯದೇ ಇರುವುದರಿಂದ ಇದು ಸಂದೇಹ ಸಂಕರವೆನಿಸಿದೆ. ಇಲ್ಲಿ ವಿದ್ವಾಂಸರ ಮನೆಯಲ್ಲಿ ಅಷ್ಟೊಂದು ವೈಭವವಿತ್ತೆಂದು ಸಂಬಂಧವಿಲ್ಲದ ಕಡೆ ಸಂಬಂಧವನ್ನು ಕಲ್ಪಿಸಿರುವುದರಿಂದ ಅತಿಶಯೋಕ್ತಿಯೂ ಇರುವ ಪ್ರಯುಕ್ತ ಅದು ಉದಾತ್ತಾಲಂಕಾರದೊಡನೆ ಸೇರಿದೆ. ಹೀಗೆ ಅವೆರಡೂ ಸೇರಿರುವುದರಿಂದ ಸಹರಾಲಂಕಾರವೆನಿಸಿದೆ. ರಾಜನು ಹೆಚ್ಚು ದಾನವನ್ನು ಮಾಡುತ್ತಿದ್ದನೆಂದು ಅವನ ಉತ್ಕರ್ಷದಲ್ಲಿ ಕೊನೆಯಾಗುವ ಹೇತ್ವಲಂಕಾರವನ್ನೂ, ಅತ್ಯದ್ಭುತವಾದರೂ ಯಥಾರ್ಥವಲ್ಲದ ಔದಾರ್ಯವನ್ನು ವರ್ಣಿಸಿರುವ ಅತ್ಯುಕ್ತಿಯೊಡನೆ ಒಂದೇ ಪದದಲ್ಲಿ ಸೇರಿಸಿರುವುದರಿಂದ ಏಕವಾಚಕಾನುಪ್ರವೇಶಸಂಕರವೂ ಇದೆ. ಅದರ ಆಧಾರದ ಮೇಲೆ ತೋರುವ ಅಪ್ರಸ್ತುತಪ್ರಶಂಸಾಲಂಕಾರಕ್ಕೂ ಪ್ರಸ್ತುತಾಲಂಕಾರಕ್ಕೂ ರಾಜನ ಸಂಪತ್ಸಮೃದ್ಧಿಯನ್ನು ವರ್ಣಿಸುವ ಉದಾತ್ತಾಲಂಕಾರದೊಡನೆ ಏಕವಾಚಕಾನುಪ್ರವೇಶಸಂಕರವಿದೆ. ಇಲ್ಲಿ ವಾಚಕ ಎಂಬ ಪದವು 'ತಿಳಿಸುವುದೆ'ಂಬ ಅರ್ಥವನ್ನು ಬೋಧಿಸುವುದರಿಂದ ವ್ಯಂಗ್ಯವಾಗಿ ತೋರುವ ಅರ್ಥಕ್ಕೂ ಇದು ಅನ್ವಯಿಸುತ್ತದೆ. ಹಾಗೆ ಇಲ್ಲಿ ಉದಾತ್ತ ಅತಿಶಯೋಕ್ತಿಗಳಿಗೊಮ್ಮೆ, ಹೇತು ಅತ್ಯುಕ್ತಿಗಳಿಗೊಮ್ಮೆ, ವ್ಯಂಗ್ಯವಾಗಿ ತೋರುವ ಉದಾತ್ತಲಂಕಾರಕ್ಕೂ ಮತ್ತು ಅಪ್ರಸ್ತುತಪ್ರಶಂಸೆ ಹಾಗೂ ಪ್ರಸ್ತುತಾಲಂಕಾರಗಳಿಗೂ ಪರಸ್ಪರವಾಗಿ ಸಮಪ್ರಾಧಾನ್ಯವಿರುವ ಪ್ರಯುಕ್ತ ಸಮಪ್ರಧಾನಸಂಕರವನ್ನು ಹೇಳಬೇಕು. ಇವು ಪರಸ್ಪರವಾ, ಒಂದರಿಂದ ಒಂದಕ್ಕೆ ಅಂಗವೆನಿಸಿಲ್ಲವಾದ್ದರಿಂದ ಸಮಪ್ರಾಧಾನ್ಯವನ್ನೇ ಹೇಳಬೇಕಾಗಿ ಉದಾತ್ತಾಲಂಕಾರವಷ್ಟೇ ಹೇತ್ವಲಂಕಾರಕ್ಕೆ ಸೌಂದರ್ಯವನ್ನುಂಟುಮಾಡುವುದರಿಂದ ಅತಿಶಯೋಕ್ತಿಯಿಂದ ಕೂಡಿದ ಸಂಕರಕ್ಕೆ ಅದು ಅಂಗವೆನಿಸಲಾರದು. ಹೀಗೆ ಈ ಒಂದು ಶ್ಲೋಕದಲ್ಲಿಯೇ ನಾಲ್ಕು ಸಂಕರಗಳಿಗೂ ಪರಸ್ಪರಸಾಂಕರ್ಯವನ್ನು ಕಾಣಬಹುದು, ಹೀಗೆಯೇ ಬೇರೆ ಉದಾಹರಣಗಳನ್ನು ಊಹಿಸಿಕೊಳ್ಳುವುದು.